# ಸಮಗ್ರ ಕನ್ನಡ ಗ್ರಂಥಸೂಚಿಗಳು : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕರು

**ಅಮರೇಶ ಕುಂಬಾರ**

ಗ್ರಂಥಪಾಲಕರು,

ವಿ.ಸಿ.ಬಿ. ಕಾಲೇಜು, ಲಿಂಗಸೂಗೂರು - ೫೮೪ ೧೨೨

ಮಾರ್ಗದರ್ಶಕರು

**ಡಾ. ಸಿ. ಆರ್. ಕರಿಸಿದ್ದಪ್ಪ**

ಮುಖ್ಯಸ್ಥರು

ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ,

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩.



ವಿಜ್ಞಾನ ನಿಕಾಯ

ವಿಜ್ಞಾನಗಳ ಇತಿಹಾಸ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬




೨೦೦೨

# ಸಮಗ್ರ ಕನ್ನಡ ಗ್ರಂಥಸೂಚಿಗಳು :

## ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಪಿ.ಎಚ್.ಡಿ. ಮಹಾಪ್ರಬಂಧ

ಸಂಶೋಧಕ
**ಅಮರೇಶ ಕುಂಬಾರ**
ಗ್ರಂಥಪಾಲಕ, ವಿ.ಸಿ.ಬಿ. ಕಾಲೇಜು
ಲಿಂಗಸೂಗೂರು - ೫೮೪ ೧೨೨
ರಾಯಚೂರು ಜಿಲ್ಲೆ



ಮಾರ್ಗದರ್ಶಕರು
**ಡಾ. ಸಿ. ಆರ್. ಕರಿಸಿದ್ದಪ್ಪ**

ಮುಖ್ಯಸ್ಥರು
ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩

ವಿಶ್ವವಿದ್ಯಾಲಯ ಗ್ರಂಥಪಾಲಕರು
ಪ್ರೊ. ಶಿ. ಶಿ. ಬಸವನಾಳ ಗ್ರಂಥಾಲಯ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩





**ವಿಜ್ಞಾನನಿಕಾಯ**
ವಿಜ್ಞಾನಗಳ ಇತಿಹಾಸ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ದೃಢೀಕರಣ ಪತ್ರ

ಶ್ರೀ ಅಮರೇಶ ಕುಂಬಾರ ಇವರು ಸಮಗ್ರ ಕನ್ನಡ ಗ್ರಂಥಸೂಚಿಗಳು : ಒಂದು ಅಧ್ಯಯನ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ವಿಜ್ಞಾನಗಳ ಇತಿಹಾಸ ವಿಭಾಗದಲ್ಲಿ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೯-೦೮-೨೦೦೨

ಸ್ಥಳ : ಧಾರವಾಡ

ಡಾ. ಸಿ. ಆರ್. ಕರಿಸಿದ್ದಪ್ಪ

ಮಾರ್ಗದರ್ಶಕರು

# ಪ್ರಮಾಣ ಪತ್ರ

ಸಮಗ್ರ ಕನ್ನಡ ಗ್ರಂಥಸೂಚಿಗಳು : ಒಂದು ಅಧ್ಯಯನ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಸಿ. ಆರ್. ಕರಿಸಿದ್ದಪ್ಪ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ವಿಜ್ಞಾನದ ಇತಿಹಾಸ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇಡಿಯಾಗಿ ಅಥವಾ ಬಿಡಿಯಾಗಿ ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೯-೦೮-೨೦೦೨

ಸ್ಥಳ : ಧಾರವಾಡ

ಅಮರೇಶ ಕುಂಬಾರ

ಸಂಶೋಧಕ

# ಕೃತಜ್ಞತೆಗಳು

ಈ ಸಂಶೋಧನಾ ಕಾರ್ಯವನ್ನು ಪೂರ್ಣಗೊಳಿಸಲು ಹೆಚ್ಚಿನ ಅವಧಿ ನೀಡಿ ಆದಷ್ಟು ತೀವ್ರ ಸಂಪ್ರಬಂಧ ಮಂಡಿಸಲು ಆದೇಶಿಸಿದ ಪ್ರಸ್ತುತ ಕುಲಪತಿಗಳಾದ ಡಾ. ಎಚ್. ಜೆ. ಲಕ್ಕಪ್ಪಗೌಡ ಅವರಿಗೆ ನನ್ನ ಕೃತಜ್ಞತೆಗಳು. ಅವರ ಸಲಹೆ - ಸೂಚನೆಗಳಿಗೆ ನಾನು ಋಣಿಯಾಗಿರುವೆ. ಈಗಿನ ಕುಲಸಚಿವರಾದ ಡಾ. ಕೆ. ವಿ. ನಾರಾಯಣ ಅವರು ಸಂಶೋಧನಾ ಸಂಪ್ರಬಂಧ ರಚನೆಗೆ ಹೆಚ್ಚಿನ ಅವಧಿ ನೀಡುವುದರ ಮೂಲಕ ಸಂಪ್ರಬಂಧ ರಚನೆಗೆ ಅವಕಾಶ ಮಾಡಿಕೊಟ್ಟಿದ್ದಾರೆ. ಅವರ ಸಕಾಲಿಕ ನೆರವು ಮತ್ತು ಸಲಹೆ - ಸೂಚನೆಗಳಿಗೆ ನನ್ನ ಕೃತಜ್ಞತೆಗಳು.

ನಾನು ಕನ್ನಡ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ಅಧ್ಯಯನ ನಡೆಸಲು ಅನುವು ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ. ಎಂ. ಎಂ. ಕಲಬುರ್ಗಿ ಅವರನ್ನು ನೆನೆಯುವುದು ಆದ್ಯ ಕರ್ತವ್ಯ. ಮಾರ್ಗದರ್ಶಕರು ಮತ್ತು ವಿಷಯದ ಆಯ್ಕೆಯಲ್ಲಿ ಅವರಿತ್ತ ಸಲಹೆ ಸೂಚನೆಗಳು ನನಗೆ ಸ್ಮರಣೀಯ ಅಂಶಗಳಾಗಿವೆ.

ಈಗಿನ ಅಧ್ಯಯನಾಂಗ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರು ಅಧ್ಯಯನಕ್ಕೆ ಸಹಕರಿಸಿ ತಮ್ಮ ಸಲಹೆ - ಸೂಚನೆಗಳನ್ನು ನೀಡಿ ಸಹಕರಿಸಿದ್ದಾರೆ. ಅವರ ಸಕಾಲಿಕ ನೆರವು ಪ್ರೀತಿ - ವಿಶ್ವಾಸಗಳನ್ನು ನೆನೆಯುವುದು ನನ್ನ ಆದ್ಯ ಕರ್ತವ್ಯ. ಅವರಿಗೆ ಹೃದಯಪೂರ್ವಕ ನಮನಗಳು.

ಹಿಂದಿನ ಅಧ್ಯಯನಾಂಗ ನಿರ್ದೇಶಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರು ಕನ್ನಡ ವಿಶ್ವವಿದ್ಯಾಲಯದಲ್ಲಿ ನಾನು ಪಿಎಚ್.ಡಿ. ಅಧ್ಯಯನ ನಡೆಸಲು ಅವಕಾಶ ನೀಡಿ ಪ್ರೋತ್ಸಾಹಿಸಿದ್ದಾರೆ. ಆಗಾಗ ಅಧ್ಯಯನದ ಬಗ್ಗೆ ವಿಚಾರಿಸಿ ಮುಂದುವರಿಸಲು ಅಧ್ಯಯನದುದ್ದಕ್ಕೂ ನನಗೆ ಸಲಹೆ ಸೂಚನೆಗಳನ್ನು ನೀಡುತ್ತ ಕೊನೆಯವರೆಗೂ ಈ ಸಂಪ್ರಬಂಧ ರಚನೆಯಲ್ಲಿ ಆಸಕ್ತಿ ತೋರಿಸಿದ್ದಾರೆ. ಅವರನ್ನು ನೆನೆಯುವುದೆಂದರೆ ಉಪಚಾರದ ಮಾತಲ್ಲ. ಅವರಿಗೆ ನನ್ನ ಆದರಪೂರ್ವಕ ಕೃತಜ್ಞತೆಗಳು.

ವಿಜ್ಞಾನ ಇತಿಹಾಸಗಳ ವಿಭಾಗ ಮುಖ್ಯಸ್ಥರಾದ ಕೆ. ಪುಟ್ಟಸ್ವಾಮಿ ಮತ್ತು ಅಧ್ಯಯನಾಂಗ ಸಿಬ್ಬಂದಿ ವರ್ಗಕ್ಕೆ ಕೃತಜ್ಞತೆಗಳು.

ಆಯಾ ವ್ಯಕ್ತಿಗಳಲ್ಲಿನ ಪ್ರತಿಭೆಯನ್ನು ಗುರುತಿಸಿ ಅವರನ್ನು ಆಗಾಗ ಕೆಣಕಿ ಕ್ರಿಯಾಶೀಲರನ್ನಾಗಿ ಮಾಡುವುದೇ ವಿಶೇಷ ಗುಣವಾಗಿರುವ ನನ್ನ ವಿದ್ಯಾಗುರುಗಳಾದ ಡಾ. ಸಿ. ಆರ್. ಕರಿಸಿದ್ದಪ್ಪ ಅವರು ನನ್ನ ಮಾರ್ಗದರ್ಶಕರು. ದಣಿವರಿಯದ ಸಂಶೋಧಕರು. ಅವರ ಮಾರ್ಗದರ್ಶನದಲ್ಲಿ ಸಂಶೋಧನ ಕಾರ್ಯ ಕೈಗೊಳ್ಳುವುದೂ ಒಂದು ವಿಶೇಷ ಅನುಭವ. ಸತತ ಅಭ್ಯಾಸ, ಅವಿರತ ಚಿಂತನೆಯ ಗಾಳಿಯನ್ನೇ ಉಸಿರಾಡಿಸುವ ಅದೇ ಪ್ರಾಣವಾಯುವನ್ನು ನನ್ನಲ್ಲಿ ತುಂಬಿ, ಸಂಶೋಧನಾ ಕಾರ್ಯದುದ್ದಕ್ಕೂ ಅಡಿಗಡಿಗೆ ನಿಂತು ಮಾರ್ಗದರ್ಶನ ನೀಡಿದ್ದಾರೆ. ಅವರ ಸಲಹೆಗಳು, ಪ್ರೀತಿ ವಿಶ್ವಾಸಗಳನ್ನು ನನ್ನ ವಿಷಯದಲ್ಲಿ ಸಂಶೋಧನೆಯುದ್ದಕ್ಕೂ ಧಾರೆಯೆರೆದಿದ್ದಾರೆ. ಅವರಿಗೆ ನನ್ನ ಆದರಪೂರ್ವಕ ನಮನಗಳು.

ಇನ್ನೊಬ್ಬ ಗುರುಗಳಾದ ಡಾ. ಬಿ. ಡಿ. ಕುಂಬಾರ ಅಧ್ಯಯನದುದ್ದಕ್ಕೂ ನಿಗಾ ವಹಿಸಿ ಆದಷ್ಟು ಬೇಗ ಮುಗಿಸಲು ಒತ್ತಾಯಿಸುತ್ತಿದ್ದ ಅವರ ಪ್ರೀತಿ ವಿಶ್ವಾಸಕ್ಕೆ ನಾನು ನೆನಕೆಗಳನ್ನು ಸಲ್ಲಿಸುತ್ತಿದ್ದೇನೆ. ಡಾ. ಎಸ್. ಎಲ್. ಸಂಗಮ ನಾನು ಭೆಟ್ಟಿಯಾದಾಗೊಮ್ಮೆ ಅಧ್ಯಯನದ ಬಗ್ಗೆ ವಿಚಾರಿಸುತ್ತ ತಮ್ಮಲ್ಲಿದ್ದ ಪುಸ್ತಕಗಳನ್ನು, ಪತ್ರಿಕೆಗಳನ್ನು ಕೊಟ್ಟು ಪ್ರಬಂಧ ಬರವಣಿಗೆಯಲ್ಲಿ ಸಹಕರಿಸಿದ್ದಾರೆ. ಅವರನ್ನು ಈ ದಿಶೆಯಲ್ಲಿ ನೆನೆಯುತ್ತೇನೆ.

ನನ್ನ ವಿದ್ಯಾರ್ಥಿ ಮಿತ್ರರಾದ ಅಮರೇಶ ಯತಗಲ್, ಖಾಜಾವಲಿ ಈಚನಾಳ, ಪತ್ನಿ ಶಕುಂತಲಾ, ನನ್ನ ಮಾವನವರಾದ ಡಾ. ಬಸವರಾಜ ಕುಂಬಾರ, ನನ್ನ ಬರವಣಿಗೆ ಸಂದರ್ಭದಲ್ಲಿ ನನಗೆ ಬೇಕಾದ ಪುಸ್ತಕಗಳನ್ನು ಪತ್ರಿಕೆಗಳನ್ನು ನೀಡಿ ಸಹಕರಿಸಿದ ಪ್ರೊ. ಶಿ. ಶಿ. ಬಸವನಾಳ ಗ್ರಂಥಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಗ್ರಂಥಾಲಯದ ಸಿಬ್ಬಂದಿಯ ನೆರವು ನನಗೆ ಇಮ್ಮಡಿ ಉತ್ಸಾಹವನ್ನು ನೀಡಿದೆ. ಈ ಪ್ರಬಂಧವನ್ನು ಕಂಪ್ಯೂಟರಿನಲ್ಲಿ ಸುಂದರವಾಗಿ ಛಾಯಾಕ್ಷರಿಸಿದ ಹಾಗೂ ಸಮಯಕ್ಕೆ ಸರಿಯಾಗಿ ಸಹಕರಿಸಿ ಕಾರ್ಯನಿರ್ವಹಿಸಿದ ಧಾರವಾಡದ ಹಳ್ಯಾಳ ರೋಡಿನ ವಿಜಯನಗರದಲ್ಲಿರುವ ಬಿಜಿ ಗ್ರಾಫಿಕ್ಸ್, ಮೃತ್ಯುಂಜಯ ಝೆರಾಕ್ಸ್ ಮತ್ತು ಬೈಂಡಿಂಗ್ ಕಾರ್ಯ ಮಾಡಿಕೊಟ್ಟ ಬಂಧುಗಳಾದ ಧರ್ಮಣ್ಣ ಕುಂಬಾರ ಅವರಿಗೆ ನೆನಕೆಗಳು. ನನ್ನ ಕಾಲೇಜಿನ ಪ್ರಾಚಾರ್ಯರು, ಪ್ರಾಧ್ಯಾಪಕರು ಮತ್ತು ಸಿಬ್ಬಂದಿ ವರ್ಗ ನನ್ನ ಅಧ್ಯಯನ ಮತ್ತು ಬರವಣಿಗೆ ಬಗ್ಗೆ ಅಭಿಮಾನ ತಾಳಿ ನನಗೆ ನೆರವು ನೀಡಿದ್ದಾರೆ. ಇವರೆಲ್ಲರನ್ನೂ ಕೃತಜ್ಞತೆಯಿಂದ ನೆನೆಯುವದು ನನ್ನ ಆದ್ಯ ಕರ್ತವ್ಯ.

ಅಮರೇಶ ಕುಂಬಾರ

ಸಂಶೋಧಕ

ಲಿಂಗಸುಗೂರು

ದಿನಾಂಕ : ೨೯.೦೮.೨೦೦೨.

# ಪರಿವಿಡಿ

‘ ಕರೆ, ಓಗೊಡುತ್ತದೆ;
ಹುಡುಕು, ಸಿಗುತ್ತದೆ;
ತಟ್ಟು, ಬಾಗಿಲು ತೆರೆಯುತ್ತದೆ ’
ಇದು ಸಂಶೋಧಕ ನಿತ್ಯ ಜಪಿಸಬೇಕಾದ ಮಂತ್ರ. ಸಂಶೋಧನೆ ಮಾಡುವಾಗ ಸುಮ್ಮನೆ ಇದ್ದರೆ ಸಂಶೋಧಕ ಈ ದಡದಲ್ಲಿ, ಸಮಸ್ಯೆ ಆ ದಡದಲ್ಲಿ - ಮಧ್ಯೆ ಅಪಾರವಾದ ಅಜ್ಞಾನದ ಕತ್ತಲೆಯ ಕಂದರ.

— ಡಾ. ಎಂ. ಚಿದಾನಂದಮೂರ್ತಿ
(‘ ಹೊಸತು ಹೊಸತು ’ ಗ್ರಂಥ. ಪುಟ ೪೧೧)

# ಪ್ರಸ್ತಾವನೆ

# ಸಮಗ್ರ ಕನ್ನಡ ಗ್ರಂಥಸೂಚಿಗಳು : ಒಂದು ಅಧ್ಯಯನ

೧ : ಪ್ರವೇಶ
೨ : ಆವಶ್ಯಕತೆ
೩ : ಸಿಂಹಾವಲೋಕನ
೪ : ಉದ್ದೇಶಗಳು
೫ : ನಿರೂಪಣಾ ವಿಧಾನ
೬ : ಮಿತಿಗಳು
೭ : ಅಧ್ಯಯನಗಳು
೮ : ಲಿಪ್ಯಂತರ
೯ : ಉಪಸಂಹಾರ

# ಪ್ರಸ್ತಾವನೆ

# ಸಮಗ್ರ ಕನ್ನಡ ಗ್ರಂಥಸೂಚಿಗಳು : ಒಂದು ಅಧ್ಯಯನ

## ೧. ಪ್ರವೇಶ

ಪುಸ್ತಕ ಎಂದರೆ ಜ್ಞಾನದ ಕಣಜ. ವಿಚಾರ ಮುಖಿ (knowledge is power) ಅಂತಾ ಕರೆಯುತ್ತಾರಲ್ಲ ಅದರ ಹೆಗ್ಗಳಿಕೆಗೆ ಮೂಲವಾದದ್ದು. ಹೀಗೆ ಗ್ರಂಥ ಪ್ರಯೋಜನಗಳನ್ನು ಸಾರ್ಥಕಗೊಳಿಸುವ ಸಲುವಾಗಿ ಮಠಮಾನ್ಯರುಗಳು, ವಿದ್ಯಾಪೀಠಗಳು, ವಿಶ್ವವಿದ್ಯಾಲಯಗಳು, ಸಂಘ-ಸಂಸ್ಥೆಗಳು ಗ್ರಂಥಾಲಯಗಳನ್ನು ಪ್ರಾರಂಭಿಸಿದವು. ಗ್ರಂಥ ಪ್ರಯೋಜನಗಳು ಓದುವವರಿಗೂ, ಸಂಶೋಧಕರಿಗೂ ಜ್ಞಾನದ ಜಿಜ್ಞಾಸೆಯನ್ನು ಪ್ರೇರೇಪಿಸುವ, ಉದ್ದೀಪಿಸುವ ದೃಷ್ಟಿಯಿಂದ ವಿದ್ವಾಂಸರು ತಾತ್ವಿಕ ಮತ್ತು ಅನ್ವಯಿಕ ನೆಲೆಗಳಲ್ಲಿ ಅನೇಕ ಪ್ರಯೋಗ, ಪ್ರಯತ್ನಗಳನ್ನು ಮಾಡುತ್ತ ಬಂದ ಕಾರಣ **ಗ್ರಂಥಾಲಯ** ಮತ್ತು **ಮಾಹಿತಿ** ವಿಜ್ಞಾನ ಎಂಬ ಹೆಸರಿನ ಹೊಸ ಜ್ಞಾನಶಾಖೆ ಅಸ್ತಿತ್ವಕ್ಕೆ ಬಂದಿತು. ಇದು ಸಾಲದೆಂಬಂತೆ ಹೊಸ ಹೊಸ ಆಯಾಮಗಳನ್ನು ಅಳವಡಿಸಿಕೊಂಡು ಬೆಳೆಯುತ್ತಲಿದೆ.

ಒಂದು ಗ್ರಂಥದ ಸರ್ವ ಸಮಗ್ರ ಪರಿಚಯವನ್ನು ವಿವರಿಸುವುದು ಸೂಚೀಕರಣ ಈ ವಿವರಗಳನ್ನೊಳಗೊಂಡುದೇ ಸೂಚಿ ಯಂತ್ರ ಪ್ರತಿ (printed matter) ಯ ಒಂದು ಕ್ರಮಬದ್ಧ ಗ್ರಂಥದ ಅನೇಕ ವಿಷಯಗಳನ್ನು ತಿಳಿಸುವುದು ಇದರ ಮುಖ್ಯ ಉದ್ದೇಶ. ಇನ್ನೊಂದು ವಾಙ್ಮಯ ವೃತ್ತಾಂತ (Bibliography) ವು ವ್ಯಕ್ತಿಯೊಬ್ಬರ ಸಮಗ್ರ ಸಾಹಿತ್ಯ ಸಾರ ಸಂಗ್ರಹವನ್ನು ಸಂಗ್ರಹಿಸಿ ಅದನ್ನು ಚರಿತ್ರೆಕಾರರಿಗೆ, ವಿದ್ವಾಂಸರಿಗೆ, ಸಂಶೋಧಕರಿಗೆ ಅನುಕೂಲಕರವಾಗಲೆಂಬ ದೃಷ್ಟಿಯಿಂದ ಮುಖ್ಯವಾಗಿ ಎದ್ದು ಕಾಣುವಂತಹದು.

ಜ್ಞಾನದ ಬೆಳವಣಿಗೆಗಾಗಿ ಗ್ರಂಥಗಳು ಹೆಚ್ಚು ಹೆಚ್ಚಾಗಿ ಪ್ರಕಟವಾಗಬೇಕು. ಯಾವುದೇ ಭಾಷೆ ಅಥವಾ ಸಾಹಿತ್ಯದ ಅಭಿವೃದ್ಧಿಗೆ ಪುಸ್ತಕಗಳ ಹೆಚ್ಚಳ ಅನಿವಾರ್ಯ ಆಗುತ್ತದೆ. ಹೀಗೆ ಪ್ರಕಟಗೊಂಡ ಪುಸ್ತಕ, ನಿಯತಕಾಲಿಕ, ಮತ್ತು ವಾಚನ ಸಾಮಗ್ರಿಗಳನ್ನು ಒಂದೆಡೆ ಸಂಗ್ರಹಿಸಬೇಕು, ಜೊತೆಗೆ ಅವುಗಳ ವ್ಯವಸ್ಥಿತ ಪರಿಚಯವನ್ನು ಓದುಗರಿಗೆ ಮಾಡಿಕೊಡಬೇಕು. ಈ ಪರಿಚಯ ಕಾರ್ಯವನ್ನು ಶಾಸ್ತ್ರೀಯವಾಗಿ ನಿರೂಪಿಸುವುದನ್ನು ಸೂಚೀಕರಣವೆಂದು ಕರೆಯಲಾಗುತ್ತದೆ.

ಈ ನಿರೂಪಣೆಯನ್ನು ಕೆಳಕಂಡಂತೆ ವಿವರಿಸಬಹುದು.

ಲೇಖಕರ ಹೆಸರು : ..............................................................................................................

ಜನನ ಹಾಗೂ ಮರಣದ ವರ್ಷ : ..............................................................................

ಶೀರ್ಷಿಕೆ : ..............................................................................

ಆವೃತ್ತಿ : ..............................................................................

ಸಂಪುಟ : ..............................................................................

ಪ್ರಕಾಶಕರ ಹೆಸರು ಮತ್ತು ಊರು : ..............................................................................

ಪ್ರಕಟಣೆಯ ವರ್ಷ, ಪುಟಸಂಖ್ಯೆ, ಗಾತ್ರ, ರಟ್ಟಿನ ಬಗೆಗೆ ಮಾಹಿತಿ : ..................................................

ಗ್ರಂಥಮಾಲೆ ಅಥವಾ ಸರಣಿಯ ಹೆಸರು, ಅದರ ಸಂಖ್ಯೆ ಮತ್ತು ಸಂಪಾದಕರ ಹೆಸರುಗಳು ಅಡಕವಾಗಿರುತ್ತವೆ. ಕಳೆದ ದಶಕದಿಂದೀಚೆಗೆ, ಇಂಟರ್‌ನ್ಯಾಶನಲ್ ಸ್ಟ್ಯಾಂಡರ್ಡ್ ನಂಬರ್ ಉಪಯೋಗಿಸುತ್ತಿದ್ದಾರೆ. ಗ್ರಂಥಪಾಲಕರು ಗ್ರಂಥ ಮಾಹಿತಿ ನಿರ್ವಹಣೆಗೆ ಹಾಗೂ ನಿಯಂತ್ರಣಕ್ಕೆ ಹಲವಾರು ಶತಮಾನಗಳಿಂದ ಸಾಕಷ್ಟು ಹೆಣಗುತ್ತಿದ್ದಾರೆ. ಕಾರಣವೇನೆಂದರೆ ಮಾಹಿತಿ ವಿವರಣೆಗೆ ನೆರವಾಗುವ ಮೂಲ ಆಕರವೇ ಗ್ರಂಥಸೂಚಿ. ಗ್ರಂಥಗಳ ಶಾಸ್ತ್ರೀಯ ವಿವರಣೆಯೇ ಗ್ರಂಥಸೂಚಿ. ಗ್ರಂಥಸೂಚಿಯು ಒಂದು ವಿಷಯಕ್ಕೆ ಸಂಬಂಧಿಸಿದ್ದಾಗಿರಬಹುದು, ಇಲ್ಲವೇ ಕೆಲವು ವಿಷಯಗಳಿಗೆ ಒಂದು ಪ್ರದೇಶ ಅಥವಾ ರಾಷ್ಟ್ರದಲ್ಲಿ ಪ್ರಕಟಿತ ಕೃತಿಗಳ ಸೂಚಿಯೂ ಇಲ್ಲವೇ ಗ್ರಂಥಸ್ವರೂಪವಲ್ಲದ ಇತರ ದಾಖಲೆಗಳ (ಉದಾ : ಹಸ್ತಪ್ರತಿಗಳು, ಬ್ರೈಲ್ ಲಿಪಿಯಲ್ಲಿ ಮುದ್ರಿತ ಪುಸ್ತಕಗಳು ಇತ್ಯಾದಿ) ಸೂಚಿಯಾಗಿರಬಹುದು. ಇಂದಿನ ಜಗತ್ತಿನಲ್ಲಿರುವ ಗ್ರಂಥಸೂಚಿಗಳ ಸಂಖ್ಯೆ ಎಷ್ಟು ಬೆಳೆಯಿತೆಂದರೆ ಗ್ರಂಥಸೂಚಿಗಳ "ಗ್ರಂಥಸೂಚಿ" ಮತ್ತೊಂದು ಆಕರವನ್ನು ಥಿಯೋಡೋರ ಬೆಸ್ಟರಮನ್ ಎಂಬುವನು ಸಿದ್ಧಪಡಿಸಬೇಕಾಯಿತು.

ಗ್ರಂಥಸೂಚಿಗಳನ್ನು ಎರಡು ಬಗೆಯಾಗಿ ವಿಂಗಡಿಸಲಾಗುತ್ತಿದೆ. ಒಂದು ಪ್ರಚಲಿತ ಸೂಚಿ, ಇನ್ನೊಂದು ಪೂರ್ವಾನ್ವಯಿತ ಸೂಚಿ. ಇವುಗಳನ್ನು ಒಂದನ್ನೊಂದು ಭಾಷೆ, ವಿಷಯ, ಕಾಲ, ಭೌಗೋಳಿಕ ಎಲ್ಲೆ, ಹಸ್ತಪ್ರತಿ, ಪುಸ್ತಕ, ನಿಯತಕಾಲಿಕ ಮೊದಲಾದ ಕಟ್ಟುಪಾಡುಗಳಿಗೆ ಒಳಪಡಿಸಿ ರಚಿಸಲಾಗುತ್ತದೆ.

## ೨. ಆವಶ್ಯಕತೆ :

ಗ್ರಂಥಸೂಚಿಯ ಆವಶ್ಯಕತೆಯನ್ನು ಯಾರೂ, ಎಂದೂ, ಅಲ್ಲಗಳೆದಿಲ್ಲ, ವಿದ್ವಾಂಸರು, ಸಂಶೋಧಕರು, ಅಧ್ಯಾಪಕರು, ಗ್ರಂಥಪಾಲರು ಎಲ್ಲರಿಗೂ ಒಂದಲ್ಲ ಒಂದು ಸಂದರ್ಭದಲ್ಲಿ ಗ್ರಂಥಸೂಚಿ ಅನಿವಾರ್ಯ; ಆಕರ ಗ್ರಂಥವಾಗಿ ಪರಿಣಮಿಸುತ್ತದೆ. ದುರ್ದೈವದ ಸಂಗತಿಯೆಂದರೆ ನಮ್ಮ ಭಾಷೆಯಲ್ಲಿ ವಿವಿಧ ಬಗೆಯ ಗ್ರಂಥಸೂಚಿಗಳ ರಚನೆಗೆ ದೃಢ ಹಾಗೂ ನಿರಂತರ ಪ್ರಯತ್ನಗಳು ಇತ್ತೀಚಿನವರೆಗೆ ನಡೆದಿಲ್ಲವೆಂದಲ್ಲ, ನಡೆದರೂ ಅದು ಸಾಹಿತ್ಯಾಭಿಮಾನಿಗಳ, ಹವ್ಯಾಸಿಗಳ, ಆಸಕ್ತರೂ ಅಲ್ಲೊಂದು, ಇಲ್ಲೊಂದು ಬಿಡಿ ಪ್ರಯತ್ನಗಳನ್ನು ಮಾಡಿದ್ದಾರೆಯೇ ಹೊರತು ಹೇಳಿಕೊಳ್ಳುವ ಕೆಲಸ ಮಾತ್ರ ಆಗಿಲ್ಲ. ಅದು ಅವರವರ ಆಸಕ್ತಿಯ ಪರಿಣಾಮವಾಗಿ ವಾಙ್ಮಯ ಸೂಚಿಗಳು, ಗ್ರಂಥಸೂಚಿಗಳು ವಿರಳವಾಗಿ ಪ್ರಕಟವಾಗಿವೆ.

" ಸರಿಯಾದ ಗ್ರಂಥ, ಸರಿಯಾದ ಓದುಗನಿಗೆ, ಸರಿಯಾದ ಸಮಯದಲ್ಲಿ " ಎಂಬುದೇ ಅದರ ಮುಖ್ಯ ಉದ್ದೇಶ. ಗ್ರಂಥಸೂಚೀ ಕರ್ತರ ಬಗ್ಗೆ ಸಾಹಿತ್ಯವಾಚಕರಿಗೆ ಸಾಮಾನ್ಯವಾಗಿ ಆಸಕ್ತಿ. ಇದು ಕೂಡ ಸಂಶೋಧನೆಯಷ್ಟೇ ಆಳವಾಗಿ ತೊಡಗಿಸಿಕೊಳ್ಳುವ, ಅದೊಂದು ಗೌರವದ ಕೆಲಸವೆಂದೂ ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಗ್ರಂಥಸೂಚಿ ಕರ್ತರ ಬಗ್ಗೆ ವಿದ್ವಾಂಸರಿಗೆ ಪ್ರಾಧ್ಯಾಪಕರಿಗೆ, ಸಂಶೋಧಕರಿಗೆ, ಸಿಗುವಷ್ಟೇ ಗೌರವವು ಇಲ್ಲದಾದುದಾಗಿದೆ. ಹಾಗಲ್ಲವಾದರೂ ಅದೊಂದು ಗೌರವದ, ಈ ಬಗೆಯ ಉಪಯುಕ್ತವಾದ ಜೊತೆಗೆ ಪ್ರಾಮಾಣ್ಯವೆನಿಸುವ, ವಾಙ್ಮಯ ಸೂಚಿಯನ್ನು ತಯಾರಿಸುವುದಕ್ಕೆ ಸೂಕ್ಷ್ಮ ಗಮನ ಬೇಕು. ಇದರಷ್ಟು ಪರಿಶ್ರಮವನ್ನು ಬೇಡುವ ಸಾಹಿತ್ಯೋದ್ಯಮ ಬೇರೊಂದಿಲ್ಲವೇನೋ ? ಪ್ರಾಯಶಃ ಪಿಎಚ್.ಡಿ. ಸಂಶೋಧನೆಗೆ ಬೇಕಾಗುವಷ್ಟು ಅಷ್ಟೇಕೆ ಪರಿಪೂರ್ಣ ವಾಙ್ಮಯ ಸೂಚಿಯು ಪಿಎಚ್.ಡಿ. ಪದವಿಗೆ ಅರ್ಹವೂ ಆಗಬಲ್ಲದು. ಕನ್ನಡದ ಶ್ರೇಷ್ಠ ಸಾಹಿತ್ಯ ವಿಮರ್ಶಕರಾದ ಎಚ್. ಬಿ. ಕುಲಕರ್ಣಿಯವರೂ ತಮ್ಮ ಪಿಎಚ್.ಡಿ. ಪ್ರಬಂಧಕ್ಕೆ ಆಯ್ದುಕೊಂಡದ್ದು ಹಿರಿಯ ಅಮೆರಿಕನ್ ಕವಿಯ ' ಸ್ಟಿಫನ್ ಸ್ಪೆಂಡರ್ ' ನ ವಾಙ್ಮಯ ಸೂಚಿಯನ್ನು, ಅದನ್ನು ನೋಡಿದ ಮೇಲೆ ಸ್ಪೆಂಡರ್ " ನನ್ನ ಸೃಜನಶೀಲತೆಯ ಎಷ್ಟೋ ಅಂಶಗಳು ನನಗೆ ಗೊತ್ತಿರಲಿಲ್ಲ " ಎಂದು ಉದ್ಗಾರವೆತ್ತಿದನಂತೆ. ಅಷ್ಟೇ ಪರಿಶ್ರಮವನ್ನೂ ತಾಳ್ಮೆಯನ್ನು ಶ್ರದ್ಧೆಯನ್ನು ಅಚ್ಚುಕಟ್ಟುತನವನ್ನು ನಿರೀಕ್ಷಿಸುವ, ಪರೀಕ್ಷಿಸುವ, ಅವಲೋಕಿಸುವ, ಸಾಹಿತ್ಯೋದ್ಯಮ ಬೇರೊಂದಿಲ್ಲವೆಂದು ಹೇಳಿದ್ದಕ್ಕೆ ಈ ಮೇಲಿನ ಕಾರಣಗಳು ಸ್ಪಷ್ಟತೆಯನ್ನು ನೀಡುತ್ತವೆ.

ವಿಷಾದದ ಸಂಗತಿಯೆಂದರೆ ನಮ್ಮ ಭಾಷೆಯಲ್ಲಿ ವಿವಿಧ ಬಗೆಯ ಗ್ರಂಥಸೂಚಿಗಳ ರಚನೆಗೆ ದೃಢ ಹಾಗೂ ನಿರಂತರ ಪ್ರಯತ್ನಗಳು ಇತ್ತೀಚಿನವರೆಗೂ ನಡೆದಿರಲಿಲ್ಲ. ಮೈಸೂರು ವಿಶ್ವವಿದ್ಯಾಲಯದ " ಕನ್ನಡ ಗ್ರಂಥಸೂಚಿ " ಆರ್. ಎಲ್. ಅನಂತರಾಮಯ್ಯನವರ ಗ್ರಂಥಲೋಕಗಳು ಬೆಂಗಳೂರು ವಿಶ್ವವಿದ್ಯಾಲಯದ " ಸಾಹಿತ್ಯ ವಾರ್ಷಿಕಗಳು " ಗ್ರಂಥಗಳ ಬೆಳವಣಿಗೆಗೆ ಮತ್ತು ಸೂಚಿ ಸಾಹಿತ್ಯಕ್ಕೆ ಮುನ್ನೋಟವನ್ನು ನೀಡಿವೆ.

೨.೨ : ಕಲ್ಕತ್ತಾದ ರಾಷ್ಟ್ರೀಯ ಗ್ರಂಥಾಲಯದ ರಾಷ್ಟ್ರೀಯ ಗ್ರಂಥಸೂಚಿಯನ್ನಂತು ನಂಬುವಂತಿಲ್ಲ. ಶೇಕಡಾ ೩೦ ರಷ್ಟು ಪ್ರಕಟಣೆಗಳು, ಅದರಲ್ಲಿ ದೊರಕುವುದಿಲ್ಲ. ಅಂದರೆ ಕನ್ನಡ ಪುಸ್ತಕ ಮಾಹಿತಿ ನಿಯಂತ್ರಣವೂ, ಸಮಗ್ರವೂ ಪರಿಣಾಮಕಾರಿ ಆಗಿಲ್ಲ. ಈ ಬಗ್ಗೆ ನಾವೆಲ್ಲ ಗಂಭೀರವಾಗಿ ಚಿಂತಿಸಿ ಪರಿಹಾರವನ್ನು ಕಂಡುಕೊಳ್ಳಬೇಕಾಗಿದೆ. ಗ್ರಂಥಾವಲೋಕನದ ಕೊರತೆಯನ್ನು ಅಷ್ಟೇ ಸಮರ್ಥವಾಗಿ ತುಂಬಿ ಕೊಡಬಲ್ಲ ಪುಸ್ತಕ ಮಾಹಿತಿ, ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಈಗ ಪ್ರಕಟವಾಗುತ್ತಿರುವುದು ಅಭಿಮಾನದ, ಸಂತೋಷದ ವಿಷಯವಾಗಿದೆ.

ಸಮಾನ ರೀತಿಯಲ್ಲಿಯೇ ರವಿವಾರದಂದೂ ಪ್ರಕಟವಾಗುವ ದಿನಪತ್ರಿಕೆಯಲ್ಲಿ ಸಾಪ್ತಾಹಿಕ ಪುರವಣಿಯಲ್ಲಿ ಪ್ರಕಟಿಸುವ " ಸಾದರ ಸ್ವೀಕಾರ ", " ಪುಸ್ತಕ ಸ್ವೀಕಾರ ", ವಿಮರ್ಶಾ ಬರಹಗಳು ತಮ್ಮ ವಿಶೇಷವನ್ನು ಹೆಚ್ಚಿಸಿಕೊಂಡಿವೆ. ಇನ್ನೊಂದು ಬಗೆಯಲ್ಲಿ ಜನಪ್ರಿಯ ಮಾಸಿಕ, ಉದಾಹರಣೆಗೆ ತುಷಾರದ ' ಪುಸ್ತಕ ಪರಿಚಯ ', ತರಂಗ, ಸುಧಾ, ವಾರಪತ್ರಿಕೆಗಳೂ ಕೂಡ ಈ ಬಗೆಯ ವಿಮರ್ಶಾ ಬರಹಗಳನ್ನು ಚಿಕ್ಕ ಚಿಕ್ಕ ಪ್ಯಾರಾಗಳೊಂದಿಗೆ ಓದುಗರಿಗೆ ನೀಡುತ್ತಿರುವುದು ಕಂಡುಬರುತ್ತಿದೆ.

ಸಾಹಿತ್ಯಿಕ ಪತ್ರಿಕೆಗಳಾದ ಸಂಕ್ರಮಣ, ರುಜುವಾತು, ಸಂವಾದ, ಅನ್ವೇಷಣೆ, ಶೂದ್ರಗಳು ಕೂಡ ಪುಸ್ತಕಗಳನ್ನು ಕುರಿತು ವಿಮರ್ಶಾ ಬರಹಗಳಿಗೆ ಪ್ರಸಿದ್ಧವಾಗಿವೆ. ಒಮ್ಮೊಮ್ಮೆ ಬಿಸಿ ಬಿಸಿ ಚರ್ಚೆಗಳು ಕೂಡಾ ನಡೆದು ವಾಗ್ವಾದಕ್ಕೆ ಕಾರಣವಾಗಿವೆ ಎಂದರೆ, ಅತಿಶಯೋಕ್ತಿಯಲ್ಲ. ಏನೇ ಆದರೂ ಕೂಡ ಒಂದು ಆರೋಗ್ಯಯುತ ಚರ್ಚೆ ಕನ್ನಡ ಸಾಹಿತ್ಯ ಬೆಳವಣಿಗೆಯಲ್ಲಿ ನಡೆದೇ ಇರುತ್ತದೆ. ಏನೇ ಆದರೂ ಒಂದು ಆರೋಗ್ಯಯುತ ಸಮಾಜಕ್ಕೆ ನೀರೆರೆಯುವ ಪ್ರಯತ್ನ ಇಲ್ಲಿ ಸಾಧ್ಯವಾಗುತ್ತದೆ. ಇದೆಲ್ಲ ಸಹಜವಾದರೂ ಗುಂಪುಗಾರಿಕೆ, ಸಾಹಿತ್ಯ ಮಿತಿಗಳು, ಪಂಥಗಳು, ಇದಕ್ಕೆಲ್ಲ ಕಾರಣವಾಗಬಹುದಾದರೂ ಒಂದಂತೂ ಖಂಡಿತ ಸಾಧ್ಯವಾಗಬಹುದು. ಅದು ಸಾಹಿತ್ಯದ ಬೆಳವಣಿಗೆಯ ದೃಷ್ಟಿ. ಒಂದು ಮಹತ್ವದ ವಿಷಯ ಕೂಡಾ. ಯಾಕೆಂದರೆ ಇದನ್ನು ಸ್ಪರ್ಧಾಮನೋಭಾವದಿಂದ (sportively) ಸ್ವೀಕರಿಸಿದಾಗ ಸಾಹಿತ್ಯ ಚಲಿಸುವ ದಿಕ್ಕೂ ಕೂಡಾ ನಿರಂತರ ಬದಲಾವಣೆಗೊಳಪಡಬೇಕು. ಅದು ಬೆಳವಣಿಗೆಯ ಹಂತಗಳಲ್ಲೊಂದು ಎಂದು, ಜಿ. ಎಸ್. ಶಿವರುದ್ರಪ್ಪ ಗುರುತಿಸುತ್ತಾರೆ.

೨.೩ : ' ಕಸ್ತೂರಿ ' ಕನ್ನಡ ಡೈಜೆಸ್ಟ್ ಎಂದು ಸುಪ್ರಸಿದ್ಧವಾಗಿರುವಂತೆ, ಪ್ರತಿ ತಿಂಗಳಿಗೊಂದು ಪುಸ್ತಕದ ಸಾರಸಂಗ್ರಹವನ್ನು ಅರ್ಧವಾರ್ಷಿಕ; ವಾರ್ಷಿಕವಾಗಿ, ಗ್ರಂಥಸೂಚಿಯನ್ನು ಪ್ರಕಟಿಸುತ್ತಿರುವುದು ಸಂತೋಷದ ವಿಷಯ. ಬಹಳಷ್ಟು ಪತ್ರಿಕೆಗಳು ವರ್ಷಕ್ಕೊಮ್ಮೆಯಾದರೂ ಇಂಥ ಲೇಖಕರ ಸೂಚಿಯನ್ನು ಹೊರತಂದರೆ ಸಂಶೋಧಕರಿಗೆ, ವಿದ್ವಾಂಸರಿಗೆ, ಮಹದುಪಕಾರ ಮಾಡಿದಂತಾಗುತ್ತದೆ. ಇಲ್ಲಿ ಲೇಖಕರಿಗೆ ವಿದ್ವಾಂಸರಿಗೆ ಬರವಿಲ್ಲ. ಆದಾಗ್ಯೂ

ಕೂಡ ವಿಶ್ವವಿದ್ಯಾಲಯಗಳಿಂದ ಪ್ರಕಟವಾಗುತ್ತಿರುವ ಕರ್ನಾಟಕ ಭಾರತಿ, ವಿದ್ಯಾರ್ಥಿ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಬುದ್ಧ ಕರ್ನಾಟಕ, ವಿಜ್ಞಾನ ಕರ್ನಾಟಕ, ಮಾನವಿಕ ಕರ್ನಾಟಕ, ಮೈಸೂರು ವಿಶ್ವವಿದ್ಯಾಲಯದಿಂದ; ಬೆಂಗಳೂರು ವಿಶ್ವವಿದ್ಯಾಲಯದ ಸಾಧನೆ ಮುಂತಾದ ಪತ್ರಿಕೆಗಳು ವಿದ್ವತ್ ಬರಹಗಳಿಗೆ, ಸಂಶೋಧನೆಗೆ ಹೆಸರಾದವುಗಳೇ. ಅಲ್ಲಿ ಬರುವ ಬರಹಗಳನ್ನು, ವಿಮರ್ಶೆಗಳನ್ನು ಆಸಕ್ತರು ವಿದ್ಯಾರ್ಥಿಗಳು, ಅಧ್ಯಾಪಕರು, ಸಂಶೋಧಕರು, ತುದಿಗಾಲ ಮೇಲೆ ನಿಂತು ಕಾಯುತ್ತಿದ್ದರು. ನಿರೀಕ್ಷಿಸುತ್ತಿದ್ದರು. ಆದರೆ ಅವುಗಳ ಪ್ರಕಟಣೆಯಲ್ಲೂ ಎಲ್ಲಿಲ್ಲದ ವಿಳಂಬ ಕಾಣುತ್ತದೆ. ಕಾರಣ ವಿದ್ವಾಂಸರ ಆಲಸ್ಯತನವೋ, ಲೇಖನಗಳ ಕೊರತೆಯೋ ಹೇಳುವುದು ಕಷ್ಟ. ಹೇಳಿದರೆ ಧರ್ಮಸಂಕಟ. ಗಂಡನ ಹೆಸರು ಬಾಯಲ್ಲಿದೆ ಹೇಳಾಕ ಬರ್ಧಂಗಿಲ್ಲ ಅನ್ನುವಂತೆ, ಉಗುಳುವುದು ಕಷ್ಟ, ನುಂಗುವುದು ಕಷ್ಟ ಎನ್ನುವಂತಾಗಿದೆ.

ಒಮ್ಮೊಮ್ಮೆ ಮೇಲಿನ ಕಾರಣಗಳು ಹೌದೆಂದಾದರೆ ಹೌದೆಂದು, ಅಲ್ಲವೆಂದರೆ ಅಲ್ಲವೆಂದು ಹೇಳಬಹುದು. ಇವೆರಡು ಕಾರಣಗಳಿದ್ದರೂ ಆಡಳಿತಾತ್ಮಕ, ಆರ್ಥಿಕ ಕಾರಣಗಳು ಒಮ್ಮೊಮ್ಮೆ ಇಂತಹ ಕೆಲಸಕ್ಕೂ ಅಡ್ಡಿಯನ್ನೊದಗಿಸುತ್ತವೆ ಎಂಬ ಗುಸು ಗುಸು ಕೇಳಿ ಬರುತ್ತವೆ.

ಸಂತೋಷದ ವಿಷಯವೆಂದರೆ, ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಈ ಎಲ್ಲ ಕೊರತೆಗಳನ್ನು ತುಂಬಿಕೊಡುತ್ತದೆ ಎನ್ನುವ ಭರವಸೆ ಇದೆ. ಇಲ್ಲಿಂದ ಪ್ರಕಟವಾಗುವ ಕನ್ನಡ ವಾರ್ಷಿಕ, ಕನ್ನಡ ಅಧ್ಯಯನ, ಪುಸ್ತಕ ಮಾಹಿತಿ ಪತ್ರಿಕೆಗಳಿಗೂ ವಿಳಂಬ ನೀಡಿಕೆಯ ರೋಗದಿಂದ ಮುಕ್ತಿ ಇಲ್ಲದಿದ್ದರೂ ನಿರಂತರವಾಗಿ ನಿಯಮಿತವಾಗಿ ಪ್ರಕಟವಾಗುತ್ತಿರುವುದು (ತಡವಾಗಿಯಾದರೂ) ಸಂತೋಷದ ಸಂಗತಿಯೇ ಸರಿ.

ಹೈದ್ರಾಬಾದ್ ಕರ್ನಾಟಕ ಭಾಗದಿಂದ ಪ್ರಕಟವಾಗುವ ಸಾಹಿತ್ಯಿ ಪತ್ರಿಕೆಗಳಾದ ಕವಿಮಾರ್ಗ, ಹೊಸದಿಕ್ಕುಗಳು ಈ ಭಾಗಗಳಲ್ಲಿ ಹೊಸ ಭರವಸೆಗಳನ್ನು ಪ್ರಕಟಿಸುವ ಯುವ ಲೇಖಕರನ್ನು ಬೆಳಕಿಗೆ ತರುವ ವಿಮರ್ಶೆಗಳನ್ನು ಹೊಸ ಓದುಗರನ್ನು ಬೆಳೆಸುವ ನಿಟ್ಟಿನಲ್ಲಿ ಭರವಸೆದಾಯಕ ಕೆಲಸ ಮಾಡಿ ಈಗ ಪತ್ರಿಕೆಗಳು ಕಣ್ಮುಚ್ಚಿ ಹೋದವು. ಅದೇ ರೀತಿ ' ಸಂಶೋಧನಾಮಾರ್ಗ ' ವೆಂಬ ಏಕೈಕ ಪತ್ರಿಕೆಯೂ ಈ ಭಾಗದಿಂದಲೇ ಪ್ರಕಟವಾಗುತ್ತಿದೆ. ಇದೇ ನಿಟ್ಟಿನಲ್ಲಿ ' ಸಾಹಿತ್ಯ ಸಂಘರ್ಷ ' ವೆಂಬ ಸಾಹಿತ್ಯಿಕ ಪತ್ರಿಕೆ, ಅನ್ವೇಷಣೆಗಳು ಕೂಡಾ ಯಾವಾಗ ಪ್ರಕಟಗೊಳ್ಳುತ್ತವೆ, ಯಾವಾಗ ಕಣ್ಣು ಮುಚ್ಚುತ್ತವೆ ಹೇಳುವುದು ಕಷ್ಟಸಾಧ್ಯ.

ಇದೇ ರೀತಿ ಸರಕಾರಗಳ ಅನುದಾನದಲ್ಲಿ ನಡೆಯುವ ಕರ್ನಾಟಕ ಸಾಹಿತ್ಯ ಅಕಾಡಮಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಪುಸ್ತಕ ಪ್ರಾಧಿಕಾರ, ಇತ್ತೀಚೆಗೆ ಅನುದಾನಕ್ಕೊಳಪಟ್ಟ ಕನ್ನಡ ಸಾಹಿತ್ಯ ಪರಿಷತ್ತುಗಳು, ಮಾಸಿಕಗಳನ್ನು, ಸಾಹಿತ್ಯ ವಾರ್ಷಿಕಗಳನ್ನು ಹೊರತರುತ್ತಿವೆ. ಎಲ್ಲವೂ ಒಂದೇ ರೀತಿಯ ಕೆಲಸಗಳನ್ನು ಮಾಡುತ್ತಿದ್ದರೂ ಪುಸ್ತಕ ಪ್ರಾಧಿಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳಿಂದ ಯಾವ ಪತ್ರಿಕೆಗಳು ಪ್ರಕಟಗೊಳ್ಳುವುದಿಲ್ಲ.

ಪುಸ್ತಕಗಳನ್ನು ಪ್ರಕಟಿಸುವದಕ್ಕೆ ಸಭೆ, ಸಮಾರಂಭಗಳನ್ನು ನಡೆಸುವುದಕ್ಕೆ ಪುಸ್ತಕ ಪ್ರಕಟಣೆಗಳಿಗೆ ಮೀಸಲಾಗಿ ಕೆಲಸ ಮಾಡುತ್ತವೆ ಎನಿಸುತ್ತದೆ.

ಇಲ್ಲೂ ಕೂಡ ಕರಾರುವಕ್ಕಾದ ಕೆಲಸಗಳು ಆಗುತ್ತಿಲ್ಲ. ಆದರೂ ಕೂಡಾ ಕಾಟಾಚಾರಕೆಂಬಂತೆ ಕೆಲಸಗಳು ನಡೆಯುತ್ತವೆ. ಕೊಟ್ಟ ಅನುದಾನಕ್ಕೆ ಸಮನಾದ ಕೆಲಸಗಳು ನಡೆಯುವುದು ಕಷ್ಟ ಆದಾಗ್ಯೂ ವಿಶ್ವವಿದ್ಯಾಲಯಗಳ ಮಟ್ಟಕ್ಕೆ ಹೋಲಿಸಿದರೆ ಇಲ್ಲಿಯ ಕೆಲಸದ ಗುಣಮಟ್ಟ ತೃಪ್ತಿದಾಯಕವೆನಿಸದೆ ಇರದು. ಕರ್ನಾಟಕ ಅಕಾಡೆಮಿ, ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾಗುವ ಭಾಷಾಂತರ ಪತ್ರಿಕೆಗಳನ್ನು ಇಲ್ಲಿ ಗಮನಿಸುವುದು ಅವಶ್ಯವೆನಿಸುತ್ತದೆ. ಏಕೆಂದರೆ ಬೇರೆ ಭಾಷೆಯ ಬೆಳವಣಿಗೆಗಳನ್ನು ಲಕ್ಷಿಸುವುದು ತೀರಾ ಅವಶ್ಯ.

ಕನ್ನಡ ಗ್ರಂಥಸೂಚಿಯು ಇನ್ನು ಮುಂದೆಯೂ ಆಯಾ ಹಿಂದಿನ ವರ್ಷದ ಪ್ರಕಟಣೆಗಳನ್ನೆಲ್ಲಾ ಸೂಚೀಕರಿಸುವ ಆಶಯವಿದೆ. ಆದರೆ ಇದು ಸಮಗ್ರವಿರುತ್ತದೆ ಎಂದು ಹೇಳುವುದು ಕಷ್ಟ. ಏಕೆಂದರೆ ಪ್ರಕಟವಾದ ಎಲ್ಲಾ ಪುಸ್ತಕಗಳ ಪ್ರತಿಗಳು ವಿಶ್ವವಿದ್ಯಾಲಯದ ಗ್ರಂಥದಲ್ಲಾಗಲಿ, ನಮ್ಮ ಕನ್ನಡ ಅಧ್ಯಯನ ಸಂಸ್ಥೆಗಳಲ್ಲಾಗಲಿ, ರಾಜ್ಯದ ಗ್ರಂಥಾಲಯಗಳಲ್ಲಾಗಲಿ, ಜಿಲ್ಲಾ ಕೇಂದ್ರ ಗ್ರಂಥಾಲಯಗಳಲ್ಲಾಗಲಿ, ರಾಷ್ಟ್ರೀಯ ಗ್ರಂಥಾಲಯಗಳಲ್ಲಾಗಲಿ, ರಾಜಾರಾಂ ಮೋಹನರಾಯ ಗ್ರಂಥಾಲಯ ನಿಧಿಗಳಲ್ಲಿಯ ಸಂಗ್ರಹದಲ್ಲಿ ಸಿಗುವಂತೆ ಕಟ್ಟುನಿಟ್ಟಿನ ಕ್ರಮವನ್ನು ಕೈಗೊಳ್ಳಬೇಕು. ಏಕೆಂದರೆ ಅನೇಕ ಪುಸ್ತಕಗಳು ಸೂಚೀಕರಣಗೊಳ್ಳದೆ ಹೋಗುವ ಸಂಭವವುಂಟು. ಕನ್ನಡ ಗ್ರಂಥಸೂಚಿಯು ಸಮಗ್ರವೂ, ಸಕಾಲಿಕವೂ ಆಗಲಾರದು. ಪ್ರಸ್ತುತ ಸಂದರ್ಭದಲ್ಲಿ ಅಂತಹ ಸಹಕಾರವನ್ನು ನಾವು ನಿರೀಕ್ಷಿಸುವಂತಿಲ್ಲ. ಉಳಿದಿರುವ ಏಕೈಕ ಮಾರ್ಗವೆಂದರೆ ಪ್ರಕಟವಾದ ಎಲ್ಲಾ ಪುಸ್ತಕಗಳ ಒಂದೊಂದು ಪ್ರತಿಯನ್ನು ತಪ್ಪದೇ ಖರೀದಿಸಿ ಸಂಗ್ರಹಿಸುವುದು, ಹಾಗೆ ಸಂಗ್ರಹಿಸಿದ ಪುಸ್ತಕಗಳನ್ನು ಸೂಚೀಕರಿಸುವುದು. ಈ ಬಗೆಯ ಸಲಹೆಗಳನ್ನು ಸರ್. ಎ. ಗ್ರ್ಯಾಂಟ್ ಎಂಬುವರು ೧೮೬೫ ರಲ್ಲಿ ಮಾಡಿದ್ದರು. ೧೩೭ ವರ್ಷಗಳ ನಂತರವೂ ಆತನ ಸಲಹೆ ಕಾರ್ಯರೂಪಕ್ಕಿಲ್ಲ. ಹಾಗೇನಾದರೂ ಆಗಿದ್ದರೆ ಇಂದು ನಮ್ಮ ಸೂಚಿಗಳು ಸಾಕಷ್ಟು ಪರಿಪೂರ್ಣವಾಗಿರುತ್ತಿದ್ದವು.

ಈ ಕೆಲಸ ಮಾಡಲು ಮೇಲೆ ಹೇಳಿದ ಒಂದು ಸಂಸ್ಥೆಗಾದರೂ ಸಾಧ್ಯವಿಲ್ಲವೇ ಅದಕ್ಕೆ ತಗಲುವ ವೆಚ್ಚವಾದರೂ ಎಷ್ಟು ? ಅದನ್ನು ಕಂಡು ಹಿಡಿಯುವುದು ಅಸಾಧ್ಯವೇನಲ್ಲ.

ಯಾವುದೋ ಒಂದು ಸಂಸ್ಥೆ ಪುಸ್ತಕಗಳನ್ನು ಕೊಳ್ಳುವದಾದರೆ ಪ್ರಕಾಶಕರಾಗಲೀ, ಲೇಖಕರಾಗಲೀ, ಅದರ ಪ್ರತಿಯನ್ನು ಖಂಡಿತ ಕೊಳ್ಳುತ್ತಾರೆ. ಉಚಿತವಾಗಿ ಪೂರೈಸಲು ಬಹಳ ಜನ ಮುಂದೆ ಬರುವುದಿಲ್ಲ. ಬುಕ್ ಡೆಲಿವರ್ ಆ್ಯಕ್ಟ್‌ನಂತಹ ಶಾಸನವಿದ್ದರೂ ಅದರಿಂದ ನುಣುಚಿಕೊಳ್ಳುವವರ ಸಂಖ್ಯೆ ಗಣನೀಯವಾಗಿದೆ.

ಪುಸ್ತಕವಿಲ್ಲದಿದ್ದರೆ ಹೋಗಲಿ ಅದರ ವಿವರಗಳನ್ನಾದರೂ ತಿಳಿಸುವ ಸೌಜನ್ಯತೆಯನ್ನು ಆ ಪ್ರಕಾಶಕರು ಅಥವಾ ಲೇಖಕರು ತೋರುತ್ತಿಲ್ಲ. ಆದ್ದರಿಂದ ಮೇಲೆ ಹೇಳಿದ ಯಾವುದಾದರೊಂದು ಸಂಸ್ಥೆಯು ಕನ್ನಡ ಪುಸ್ತಕಗಳ ಒಂದೊಂದು ಪ್ರತಿಯನ್ನು ಅವು ಪ್ರಕಟಗೊಂಡ ಕೂಡಲೇ ಖರೀದಿಸಿ ಸೂಚೀಕರಿಸಬೇಕು. ಆಗ ಮಾತ್ರ ಕನ್ನಡದ ಪುಸ್ತಕ ಸೂಚೀಕರಣ ಸಮಗ್ರವಾಗಬಲ್ಲದು.

ಕಾಗದ ರಹಿತ ಜಗತ್ತನ್ನು ಕಾಣುವ ಆತುರದಲ್ಲಿರುವ ಗಣಕಯಂತ್ರ (computers) ಗಳನ್ನು ವೈಯಕ್ತಿಕ ಗಣಕ (personal computers) ಗಳನ್ನು ಹೊಂದಿರುವವರಾದ ನಾವು ಸಿ.ಡಿ. ರೋಮ್‌ಗಳು ಅಗ್ಗವಾಗುತ್ತಿರುವ ಇಂದಿನ ಜನ - ಮನದ ಜಗತ್ತಿನಲ್ಲಿ ಈ ರೀತಿ ಆಗುತ್ತಿರುವುದು ಶೋಚನೀಯ, ವಿಷಾದನೀಯ.

ಇಲ್ಲದಿದ್ದರೆ ಕನ್ನಡ ಪುಸ್ತಕ ಮಾಹಿತಿ ಅಪೂರ್ಣವಾಗಿಯೇ ಇರಬೇಕಾಗುತ್ತದೆ. ಹೀಗೆಯೇ ಇರುತ್ತದೆ ಅಲ್ಲವೇ ? ಮುಂದಿನ ದಿನಗಳು ಆಶಾದಾಯಕವಾಗಬಹುದು ಎಂದು ಆಶಿಸೋಣ.

## ೩. ಸಿಂಹಾವಲೋಕನ

### ೩.೧ : ಪ್ರಕಟಿತ ಕನ್ನಡ ಪುಸ್ತಕಗಳ ಸಂಖ್ಯೆ :

ಕನ್ನಡದಲ್ಲಿ ಮೊದಲು ಅಚ್ಚಾಗಿರುವ ವಿಲಿಯಂ ಕೇರಿ ಅವರ ' ಎ ಗ್ರಾಮರ್ ಆಫ್ ದಿ ಕರ್ನಾಟಕಾ ಲ್ಯಾಂಗ್ವೇಜ್ ' ಎಂಬುದು ಇದು ಕಲಕತ್ತೆಯ ಸೆರಾಂಪೂರದಲ್ಲಿ ಅಚ್ಚಾಗಿದೆ. ಅಂದಿನಿಂದ ಇಂದಿನವರೆಗೆ ೧೮೦ ವರ್ಷಗಳ ಅವಧಿಯಲ್ಲಿ ಪ್ರಕಟವಾಗಿರುವ ಎಲ್ಲ ಕನ್ನಡ ಪುಸ್ತಕಗಳ ನಿಖರ ಹಾಗೂ ಅಧಿಕೃತ ಸಂಖ್ಯೆಯು ನಮಗೆ ಎಲ್ಲಿಯೂ ಸಿಕ್ಕುತ್ತಿಲ್ಲ. ಅಲ್ಲಲ್ಲಿ ದೊರಕುವ ಕೆಲವು ಅಂಕಿ-ಸಂಖ್ಯೆಗಳು ವಿದ್ವಾಂಸರ ಅಂದಾಜುಗಳು ಮಾತ್ರ. ಉದಾಹರಣೆಗೆ ಹೇಳುವುದಾದರೆ ೧೯೭೧ ರಲ್ಲಿ ಪ್ರಕಟವಾದ ' ಕನ್ನಡ ಗ್ರಂಥಸೂಚಿ ' ಯ ಮೊದಲು ಸಂಪುಟದ ಮುನ್ನುಡಿಯಲ್ಲಿ ಅದರ ಸಂಪಾದಕರಾದ ಡಾ. ಪ್ರಭುಶಂಕರ ಅವರು ಇದುವರೆಗೆ ಕನ್ನಡದಲ್ಲಿ ಕೊನೆಯ ಪಕ್ಷ ೪೦,೦೦೦ ಕೃತಿಗಳು ಪ್ರಕಟವಾಗಿವೆ ಎಂದಿದ್ದಾರೆ.

ಅದೇ ಸಂಪುಟದಲ್ಲಿ ದೇ. ಜವರೇಗೌಡರು ಈಗಾಗಲೇ ಕನ್ನಡದಲ್ಲಿ ಅಚ್ಚಾಗಿರುವ ಗ್ರಂಥಗಳ ಸಂಖ್ಯೆ ಸುಮಾರು ನಲವತ್ತು ಅಥವಾ ನೈವತ್ತೈದು ಸಾವಿರ ಆಗಬಹುದೆಂದು ಅಂದಾಜು ಮಾಡಲಾಗಿದೆ ಎಂದು ಹೇಳಿದ್ದಾರೆ. ಅಲ್ಲಿಂದೀಚಿನ ಅವಧಿ (೧೯೭೧ - ೨೦೦೨) ಯಲ್ಲಿ ಎಷ್ಟು ಕನ್ನಡ ಪುಸ್ತಕಗಳು ಪ್ರಕಟಗೊಂಡಿವೆ ಎಂಬ ಅಂದಾಜನ್ನು ನಾವು ಹೀಗೆ ಮಾಡಬಹುದು. ಕಳೆದ ಮೂರು ದಶಕಗಳಲ್ಲಿ ವರ್ಷಕ್ಕೆ ಸುಮಾರು ೧೪,೦೦೦ ಕನ್ನಡ ಪುಸ್ತಕಗಳು ಉತ್ಪಾದನೆಯಾಗುತ್ತಿವೆ. ಈ ಮೂರು ದಶಕಗಳ ಅವಧಿಯಲ್ಲಿ ೪೨,೦೦೦ ಪುಸ್ತಕಗಳು ಪ್ರಕಟಗೊಂಡಿರಬಹುದು.

ಇದಕ್ಕೆ ೧೯೭೧ ಕ್ಕೆ ಮೊದಲು ಪ್ರಕಟಗೊಂಡ ಪುಸ್ತಕಗಳ ಸಂಖ್ಯೆಗೆ ನಂತರದ ಅವಧಿಯಲ್ಲಿ ಹೊರಬಂದ ಪುಸ್ತಕಗಳ ಸಂಖ್ಯೆಯನ್ನು ಸೇರಿಸಿದರೆ ಕನ್ನಡ ಪುಸ್ತಕಗಳ ಒಟ್ಟು ಸಂಖ್ಯೆ ಸುಮಾರು ೮೨,೦೦೦ ಎಂದು ಹೇಳಬಹುದು.

## ೩.೨ : ಪ್ರಾರಂಭಿಕ ಪ್ರಯತ್ನಗಳು :

೧೮೬೪ ನೇ ಡಿಶೆಂಬರದ ವರೆಗೆ ಮುಂಬಯಿ ಪ್ರಾಂತದಲ್ಲಿ ಪ್ರಕಟವಾಗಿರುವ 'ದೇಶೀಯ ಪ್ರಕಟಣೆಗಳು' ಎಂಬ ಪುಸ್ತಕ ಪಟ್ಟಿಯನ್ನು ಸರ್. ಎ. ಗ್ರ್ಯಾಂಟ್ ಎಂಬುವರು ೧೮೬೫ ರಲ್ಲಿ ತಯಾರಿಸಿ ಪ್ರಕಟಿಸಿದರು. ಇದರಲ್ಲಿ ೮೯೮ ನಮೂದುಗಳಲ್ಲಿ ಕೆಲವು ಕನ್ನಡ ಪುಸ್ತಕಗಳಿಗೆ ಸಂಬಂಧಿಸಿದ ನಮೂದುಗಳಿದ್ದವು. ಇದು ಕನ್ನಡ ಗ್ರಂಥಸೂಚಿಯ ಮೊದಲ ಪ್ರಯತ್ನ. ಈತನ ಸೂಚನೆಯ ಮೇರೆಗೆ ಅಂದಿನ ಸರಕಾರವು ೧೮೬೭ ರಲ್ಲಿ ಒಂದು ಕಾನೂನನ್ನು ರಚಿಸಿತು. ಆದರ ಪ್ರಕಾರ ಬ್ರಿಟಿಷ್ ಮ್ಯೂಜಿಯಂದಲ್ಲಿ ಸಂಗ್ರಹಗೊಂಡು ಕನ್ನಡ ಪುಸ್ತಕಗಳ ಪಟ್ಟಿಯನ್ನು 'ಎ ಕ್ಯಾಟಲಾಗ್ ಆಫ್ ದಿ ಕನ್ನಡ ಬಡಗ ಆ್ಯಂಡ್ ಕೂರ್ಗ ಬುಕ್ಸ್ ಇನ್ ದಿ ಲೈಬ್ರರಿ ಆಫ್ ದಿ ಬ್ರಿಟಿಷ್ ಮ್ಯೂಜಿಯಂ' ಎಂಬ ಆಕರ ಗ್ರಂಥವನ್ನು ಎಲ್. ಡಿ. ಬಾರ್ನೆಟ್ ೧೯೧೦ ರಲ್ಲಿ ಪ್ರಕಟಿಸಿದನು. ಈ ಕಾರ್ಯದಲ್ಲಿ ಅವರಿಗೆ ನರಸಿಂಹಚಾರ್ಯ ಮತ್ತು ಜೆ. ಎಫ್. ಫ್ಲೀಟ್ ಎಂಬ ವಿದ್ವಾಂಸರು ನೆರವು ನೀಡಿದವರಂತೆ ಕನ್ನಡದ ಉನ್ನತ ಕಾರ್ಯದಲ್ಲಿ ಆಸಕ್ತರಾದವರಿಗೆಲ್ಲಾ ಇದು ಬಹಳ ಉಪಯುಕ್ತ ಆಕರ ಗ್ರಂಥ. ಅದರ ಹೆಸರು 'ಸಪ್ಲಿಮೆಂಟರಿ ಕ್ಯಾಟಲಾಗ್ ಆಫ್ ದಿ ಕನ್ನಡ ಬುಕ್ಸ್ ಇನ್ ದಿ ಬ್ರಿಟಿಷ್ ಲೈಬ್ರರಿ' ಇದನ್ನು ಡಾ. ಶ್ರೀಮತಿ ಅಲಬರ್ಬನ್ ಗೌರ್ ತಯಾರಿಸಿದ್ದಾರೆ. ಲಂಡನ್ನಿನ ಬ್ರಿಟಿಷ್ ಲೈಬ್ರರಿಯವರು ಇದನ್ನು ೧೯೮೫ ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ೧೯೧೦ - ೧೯೮೦ ರವರೆಗೆ ಬ್ರಿಟಿಷ್ ಮ್ಯೂಜಿಯಂ ಮತ್ತು ಇಂಡಿಯ ಆಫೀಸ್ ಲೈಬ್ರರಿಗಳಲ್ಲಿ ಸಂಗ್ರಹಗೊಂಡ ಗ್ರಂಥಗಳನ್ನು ಪಟ್ಟಿ ಮಾಡಿದ್ದಾರೆ. ಇದರ ತಯಾರಿಕೆಯಲ್ಲಿ ಗೌರ್ ಅವರಿಗೆ ಡಾ. ಶ್ರೀನಿವಾಸ ಹಾವನೂರ ಬಹಳ ಸಹಾಯ ಮಾಡಿದರಂತೆ. ಈಗ ಗ್ರಂಥಸೂಚಿಯ ಪ್ರಕಟಣೆಯಿಂದ ಇಂಗ್ಲಂಡಿನಲ್ಲಿರುವ ಕನ್ನಡ ಪುಸ್ತಕಗಳ ಎರಡು ದೊಡ್ಡ ಸಂಗ್ರಹಗಳನ್ನು ಕನ್ನಡಿಗರಿಗೆ ಪರಿಚಯಿಸಿದಂತಾಗಿದೆ.

ಈಗಿನ ಭಾರತ ಸರಕಾರದ ೧೮೬೭ ರ ಶಾಸನದ ಪ್ರಕಾರ ಇಂಡಿಯಾ ಆಫೀಸ್ ಲೈಬ್ರರಿಗೆ ತಲುಪಿದ ಭಾರತೀಯ ಪ್ರಕಟಣೆಗಳ ತ್ರೈಮಾಸಿಕ ಪಟ್ಟಿಗಳು ಪ್ರಕಟಗೊಂಡವು. ಇವುಗಳಲ್ಲಿ ಕನ್ನಡ ಗ್ರಂಥಗಳ ಸೂಚಿಗಳು ಇವೆ. ಕನ್ನಡದಲ್ಲಿ ಮೊದಮೊದಲು ಪ್ರಕಟವಾದ ಗ್ರಂಥಗಳ ಬಗೆಗೆ ತಿಳಿಯಬೇಕಾದರೆ ಇವನ್ನು ಅಲಕ್ಷಿಸುವಂತೆಯೇ ಇಲ್ಲ.

### ೩.೩ : ಭಾರತೀಯ ಸಾಹಿತ್ಯದ ರಾಷ್ಟ್ರೀಯ ಸೂಚಿ :

ನವದೆಹಲಿಯಲ್ಲಿರುವ ಭಾರತೀಯ ಸಾಹಿತ್ಯ ಅಕಾಡೆಮಿಯವರು ನ್ಯಾಷನಲ್ ಬಿಬ್ಲಿಯೋಗ್ರಫಿ ಆಫ್ ಇಂಡಿಯನ್ ಲಿಟರೇಚರ್ ೧೯೦೧ - ೧೯೫೩ ಎಂಬ ಬೃಹತ್ ಸಂಕಲನವನ್ನು ಹಮ್ಮಿಕೊಂಡು ಎರಡನೆಯ ಸಂಪುಟದಲ್ಲಿ

೫೩ ವರ್ಷಗಳ ಅವಧಿಯಲ್ಲಿ ಪ್ರಕಟವಾದ ಕನ್ನಡ ಪುಸ್ತಕಗಳ ಸೂಚಿಯನ್ನು ಒದಗಿಸಿದ್ದಾರೆ. ಇದರಲ್ಲಿ ೨೩೫೮ ಕನ್ನಡ ಶೀರ್ಷಿಕೆಗಳು ಸೇರಿವೆ. ಬಿ. ಎಸ್. ಕೇಶವನ್ ಮತ್ತು ಮುಳೆಯವರು (ವೈ. ಎಂ.) ಈ ಸಂಪುಟಗಳ ಪ್ರಧಾನ ಸಂಪಾದಕರು.

## ೩.೪ : ಕವಿ, ಭಾಷಾ ಮತ್ತು ಸಾಹಿತ್ಯ ಚರಿತ್ರೆಗಳು :

ಆರ್. ನರಸಿಂಹಾಚಾರ್ಯರ ಕರ್ನಾಟಕ ಕವಿ ಚರಿತೆಯ ಮೂರು ಸಂಪುಟಗಳು ಕವಿಯ ಕಾಲ, ದೇಶಾದಿ ವಿವರ, ಓಲೆಗರಿ, ಅಥವಾ ಕಾಗದ ಪ್ರತಿಯಲ್ಲಿ ಕವಿಗಳ ಗ್ರಂಥಗಳ ಮತ್ತು ರಾಜರು, ಮಂತ್ರಿಗಳು ಮುಂತಾದವರ ಅಂಕಿತ ನಾಮಗಳು ಇತ್ಯಾದಿ ಅಕಾರಾದಿ ಪಟ್ಟಿಗಳನ್ನು ಅನುಬಂಧಗಳನ್ನಾಗಿ ಕೊಟ್ಟಿದ್ದಾರೆ.

ರಂ. ಶ್ರೀ ಮುಗಳಿ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾಲಯ ಸಾಹಿತ್ಯ ಸಂಪುಟಗಳು ಈ ದಿಶೆಯಲ್ಲಿ ನಡೆದ ಇತರ ಪ್ರಯತ್ನಗಳು. ಇವಲ್ಲದೆ ೧೯೮೫ ರಲ್ಲಿ ಗುಂಜಾಳ ಅವರ ಗುಲಬರ್ಗಾ ವಿಭಾಗದ ಬರಹಗಾರರು, ಮುಖ್ಯವಾದವು. ಶಾಸ್ತ್ರೀಯವಾಗಿ ಗ್ರಂಥಸೂಚಿಗಳಲ್ಲದಿದ್ದರೂ ಗ್ರಂಥಗಳ ಪರಿಚಯ ಮಾಡಿಕೊಡುವ ಬೇರೆ ರೀತಿಯ ಪ್ರಯತ್ನಗಳು ನಡೆದಿವೆ.

## ೩.೫ : ಏಕ ವಿಷಯ ಸೂಚಿ :

ಏಕ ವಿಷಯ ಸೂಚಿಗಳು ಕನ್ನಡದಲ್ಲಿ ಬಂದಿವೆ ಇವುಗಳಲ್ಲಿ ಈ ಕೆಳಗಿನವು ಮುಖ್ಯವಾಗಿವೆ. ಹಾ. ಮಾ. ನಾಯಕ ಕನ್ನಡ ಜಾನಪದ ಗ್ರಂಥಸೂಚಿ ಇದರಲ್ಲಿ ೧೯೭೪ ರ ವರೆಗೆ ಪ್ರಕಟವಾಗಿರುವ ೩೫೨ ಭಾಷಾಂತರ, ರೂಪಾಂತರ ಗಾದೆ, ಒಗಟು, ನಾಟಕ, ರಂಗಭೂಮಿ, ವಿಚಾರ, ವಿಮರ್ಶೆ, ಸಂಶೋದನೆ ಮತ್ತು ಸಂಕೀರ್ಣ ಎಂಬುದಾಗಿದೆ. ಪ್ರತಿ ಭಾಗದಲ್ಲಿಯೂ ಅಕಾರಾದಿಗಳನ್ನು ಉಲ್ಲೇಖಿತ ಕೃತಿಗಳ ಕೃತಿಕಾರರ ಸೂಚಿಯನ್ನು ಪ್ರತ್ಯೇಕವಾಗಿ ಕೊಟ್ಟಿದ್ದಾರೆ. ಪ್ರತಿಯೊಂದು ಪುಸ್ತಕದ ವಿವರವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

## ೩.೬ : ಏಕ ವ್ಯಕ್ತಿಯ ಸಾಹಿತ್ಯ ಸೂಚಿ :

ಈ ಬಗೆಯ ಸೂಚಿಗಳಲ್ಲಿ ಡಾ. ಎಸ್. ಆರ್. ಗುಂಜಾಳರ 'ಬಸವ ಸಾಹಿತ್ಯ ದರ್ಪಣ' ಉಲ್ಲೇಖನೀಯ ಕೃತಿ. ಇದರಲ್ಲಿ ಕನ್ನಡ, ತೆಲಗು, ತಮಿಳು, ಸಂಸ್ಕೃತ, ಹಿಂದಿ ಭಾಗ - ೧, ಇಂಗ್ಲೀಷ್, ಮರಾಠಿ, ಉರ್ದು, ಫ್ರೆಂಚ್

ಭಾಷೆಗಳಲ್ಲಿ ಬಸವಣ್ಣನವರನ್ನು ಕುರಿತು ರಚಿತವಾದ ೪೧೫ ಗ್ರಂಥಗಳ ವಿವರಣಾತ್ಮಕ ಸೂಚಿಗಳಿವೆ. ಪ್ರತಿಯೊಂದು ಗ್ರಂಥದ ದೇಶ, ಶೀರ್ಷಿಕೆ, ಪ್ರಬೇಧ, ಕರ್ತೃವಿನ ಹೆಸರು ಮತ್ತು ಕಾಲ, ಅನುವಾದಕ, ಸಂಪಾದಕ, ವಿಮರ್ಶಕನ ಹೆಸರು ಮತ್ತು ಕಾಲ ಗ್ರಂಥದ ಶಾರೀರಿಕ ಸಾಮಗ್ರಿ, ಅಳತೆ, ಪ್ರಕಾಶಕರ ಹೆಸರು, ಮತ್ತು ವಿಳಾಸ, ಪುಸ್ತಕದ ಬೆಲೆ ಪ್ರಕಟಿಸಿದ ವರ್ಷ ಮತ್ತು ಸಾರಾಂಶಗಳನ್ನು ಒದಗಿಸಿದ್ದಾರೆ.

ಪ್ರಬುದ್ಧ ಕರ್ನಾಟಕ ೫೧ ನೇ ಸಂಪುಟದ ನಾಲ್ಕನೇ ಸಂಚಿಕೆ, ಗಾಂಧಿ ಸಂಚಿಕೆಯಾಗಿ ಹೊರಬಂದಿದೆ. ಅದರಲ್ಲಿ ಗಾಂಧೀಜಿಯವರ ಹಾಗೂ ಅವರನ್ನು ಕುರಿತಾಗಿ ಬಂದ ಗ್ರಂಥಗಳ ಕೋಶವೊಂದನ್ನು ಟಿ. ವಿ. ಸುಬ್ರಹ್ಮಣ್ಯ ಮತ್ತು ಲೀಲಾ ಸುಬ್ರಹ್ಮಣ್ಯರವರು ರಚಿಸಿದ್ದಾರೆ.

ಪ್ರೊ. ಏ. ಕೆ. ಪಾಟೀಲ ಅವರ ಕನ್ನಡ ಅಭಿನಂದನಾ ಗ್ರಂಥಗಳ ಲೇಖನ ಸೂಚಿ ಇದರಲ್ಲಿ ೪೫ ಸಂಭಾವನಾ ಗ್ರಂಥಗಳ ಬಗ್ಗೆ ವಿವರಗಳಿವೆ. (೧೯೭೨) ಜೊತೆಗೆ ಗ್ರಂಥಗಳಲ್ಲಿನ ಲೇಖನ ಪೂರ್ಣ ಮಾಹಿತಿಯ ಪಟ್ಟಿಯನ್ನು ಕಾಣಬಹುದು. ಆರ್. ಎಲ್. ಅನಂತರಾಮಯ್ಯನವರು ಪ್ರಕಟಿಸುತ್ತಿದ್ದ ಗ್ರಂಥಲೋಕದ ೧೨ ಮಾಸಿಕಗಳ ಸೂಚಿಗಳ ಆಧಾರದಿಂದ ' ವಾರ್ಷಿಕ ' ಗ್ರಂಥಾವಳಿ ಎಂಬ ಹೆಸರಿನ ಸಂಚಯಿತ ಸೂಚಿಗಳು ೧೯೮೦ - ೮೧ ರಲ್ಲಿ ಪ್ರಕಟಗೊಂಡವು. ದುರದೃಷ್ಟವೆಂದರೆ ಗ್ರಂಥಲೋಕ ಮಾಸಿಕವು ನಿಂತು ಹೋಯಿತು. ೧೯೭೭ ರಿಂದ ಜೂನ್ ೧೯೬೨ ರ ವರೆಗೆ ಗ್ರಂಥಲೋಕದಲ್ಲಿ ಸೂಚೀಕರಣಗೊಂಡ ಪುಸ್ತಕಗಳ ಸಂಖ್ಯೆಯು ೧೭,೦೦೦ ದಾಟುತ್ತದೆ. ಗ್ರಂಥಲೋಕವು ಭಾರತದ ರಾಷ್ಟ್ರೀಯ ಗ್ರಂಥಸೂಚಿಗಿಂತ ಸುಮಾರು ೫೦೦ ಕ್ಕೂ ಹೆಚ್ಚುವರಿ ಪುಸ್ತಕಗಳ ಸೂಚಿಗಳನ್ನು ಪ್ರತಿವರ್ಷವೂ ನೀಡುತ್ತಿತ್ತು ಎಂದರೆ ಆಶ್ಚರ್ಯದ ಸಂಗತಿ.

ಈ ಪ್ರಮುಖ ಯೋಜನೆಗಳನ್ನು ಹೊರತುಪಡಿಸಿಯು ಅಲ್ಲಲ್ಲಿ ಬಿಡಿ ಪ್ರಯತ್ನಗಳು ನಡೆದಿವೆ. ಡಾ. ಸಿ. ಆರ್. ಕರಿಸಿದ್ದಪ್ಪ ಅವರ ಸಂಕ್ರಮಣ ಶತಕದಲ್ಲಿ ಸುಮಾರು ನೂರು ಸಂಚಿಕೆಗಳಲ್ಲಿ ಬಂದ ಲೇಖನಗಳ ಸೂಚಿಯನ್ನು ಇಲ್ಲಿ ಕಾಣಬಹುದಾಗಿದೆ. ಮುಖ್ಯವಾಗಿ ಸಾಹಿತ್ಯಿಕ ಬರಹಗಳು, ವಿಮರ್ಶೆಗಳು, ಕವಿತೆಗಳು, ಪ್ರಬಂಧಗಳ ಲೇಖನಗಳ ಸೂಚಿ ಇದಾಗಿದೆ.

ಡಾ. ಶ್ರೀನಿವಾಸ ಹಾವನೂರ ಹಾಗೂ ಮ. ವಿ. ನಾಯಕ ಅವರ ' ಗೋವಿಂದ ಪೈ ವಾಙ್ಮಯ ದರ್ಶಕ, ಟಿ. ವಿ. ಸಬ್ರುಹ್ಮಣ್ಯ ಅವರ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಲೇಖನಗಳ ಸೂಚಿ, ಶಾಸ್ತ್ರಿಗಳ ಸಾಹಿತ್ಯ, ಎ. ಆರ್. ಕೃಷ್ಣಶಾಸ್ತ್ರೀ, ಎಂ. ಆರ್. ಸಣ್ಣರಾಮೇಗೌಡರ ಲೇಖಕರ ಸೂಚಿ, (ಜೀವನ, ಜಯಕರ್ನಾಟಕ, ಶಿವಾನುಭವ, ನಿಯತಕಾಲಿಕೆಗಳಲ್ಲಿ ಪ್ರಕಟವಾದ ಲೇಖನಗಳ, ಲೇಖಕರ ವರ್ಣಾನುಕ್ರಮ ಸೂಚಿ).

ಡಾ. ಶ್ರೀನಿವಾಸ ಹಾವನೂರರ ಒಂದು ಸಾವಿರ ಕನ್ನಡ ಪುಸ್ತಕಗಳು, ಪ್ರೊ. ಕೆ. ಎಸ್. ದೇಶಪಾಂಡೆ ಅವರ ಕನ್ನಡ ಸಾಹಿತ್ಯದರ್ಶನ ಕೇಂದ್ರಸಾಹಿತ್ಯ ಅಕಾಡೆಮಿಗಾಗಿ ಸಿದ್ಧಪಡಿಸಿದ ೩೦೦ ಪುಸ್ತಕಗಳ ಸೂಚಿ ಎಸ್. ಶಿವಣ್ಣನವರ ವೀರಶೈವ ಅಪ್ರಕಟಿತ ಗ್ರಂಥಸೂಚಿ, ಡಾ. ರಂ. ಶ್ರೀ ಮುಗಳಿಯವರ ಕರ್ನಾಟಕ ಕವಿ ಚರಿತ್ರೆಯ ಅನುಕ್ತ ಕೃತಿಸೂಚಿ (ಕನ್ನಡ ಸಾಹಿತ್ಯ ಚರಿತ್ರೆ) ಗೆ ಅವರೇ ಸಿದ್ಧಪಡಿಸಿ ಲಗತ್ತಿಸಿದ ಸೂಚಿ; ಅನಿಲ ಧಾರವಾಡಕರ ಜಯಂತಿ ಲೇಖಕರ ಸೂಚಿ, ಎಸ್. ಅನಂತರಂಗಾಚಾರ್ ಅವರ ಪ್ರಬುದ್ಧ ಕರ್ನಾಟಕದ ಆಕಾರಾದಿ ಕವಿ ಕಾವ್ಯ ಸೂಚಿ; ಡಾ. ಹಾ. ಮಾ. ನಾಯಕರ ' ಗೋಕಾಕ ಗ್ರಂಥಾವಳಿ ', ' ಮಾಸ್ತಿ ಸಾಹಿತ್ಯ ', ' ಕನ್ನಡ ಜಾನಪದ ಗ್ರಂಥಸೂಚಿ ', ಆರ್. ಎಲ್. ಅನಂತರಾಮಯ್ಯನವರ ' ರಂಗಸೌರಭ ', ' ವಾರ್ಷಿಕ ಗ್ರಂಥಾವಳಿ ', ದಾಸ ಸಾಹಿತ್ಯ (ಸಮ್ಮೇತನ ಹಳ್ಳಿ ರಾಮರಾಯರ ಗ್ರಂಥಗಳ ಸ್ಥಳ ಪರಿಚಯ) ಸಿ. ಪಿ. ಕೆ. ನೂರು, ಟಿ. ವಿ. ವೆಂಕಟರಮಣಯ್ಯನವರ ' ಕನ್ನಡ ಭಾಷಾ ಲೇಖನ ಸೂಚಿ (೧೯೭೩) ಬೆಂಗಳೂರು, ವಿಶ್ವವಿದ್ಯಾನಿಲಯದ ಪ್ರಕಟಣೆ ' ಪತ್ರಿಕೋದ್ಯಮ ' ವಾಙ್ಮಯ ಸೂಚಿ, ೧೯೮೮ ರಲ್ಲಿ ಕರ್ನಾಟಕ ಪತ್ರಿಕಾ ಅಕಾಡೆಮಿಯಿಂದ ಪ್ರಕಟಿತ ' ಕನ್ನಡ ಭಾಷಾ ಸಾಹಿತ್ಯ ಲೇಖನ ಸೂಚಿಗಳು, ಐ. ಬಿ. ಎಚ್. ಗ್ರಂಥಾವಳಿ (೧೯೬೭ - ೧೯೮೮ ರ ಅವಧಿ) ವಿಶೇಷವಾದವು. ವೆಂಕಟರಮಣಯ್ಯನವರು ಈ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದಾರೆ.

ಸಾಂಗಲಿ ವೆಂಕಟೇಶ ಅವರ ' ಸಿರಿಗನ್ನಡ ಗ್ರಂಥಕರ್ತರ ಕೋಶ ಸಂಪುಟ - ೧, ಟಿ. ಚಂದ್ರರಾಜ ಶೆಟ್ಟಿ ಅವರ ಬರಹಗಾರರ ಬಳಗದ ಎರಡು ಸಂಪುಟಗಳು, ಬಿ. ಮಾಲಿನಿ ಮಲ್ಯರವರ ಶಿವರಾಂ ಕಾರಂತ ವಾಙ್ಮಯ ವೃತ್ತಾಂತ, (ಸಾರ ಸಂಗ್ರಹದೊಂದಿಗೆ) ಇವಲ್ಲದೆ (ಕಸ್ತೂರಿ ಲೇಖನ ಸೂಚಿ) ಭಾರತೀಯ ವಿದ್ಯಾಭವನದ ಗಾಂಧಿ ಸಾಹಿತ್ಯ ಸೂಚಿ ಸಾರ ಸಂಗ್ರಹ ಸಮಗ್ರ), ಇತ್ತೀಚೆಗೆ ಕನ್ನಡ ಪುಸ್ತಕ ಪ್ರಾಧಿಕಾರದ ಕನ್ನಡ ಜಾನಪದ ಕೈಪಿಡಿ, ಅಶೋಕ ಹೇರೂರ ಅವರ ರಾಯಚೂರು ಜಿಲ್ಲೆಯ ಬರಹಗಾರರುಗಳನ್ನು ಇಲ್ಲಿ ನೆನೆಯಬಹುದು. ಡಾ. ಎಚ್. ಎಸ್. ಸುಜಾತಾ ಅವರ ಹಾ. ಮಾ. ನಾ. ಹೊತ್ತಿಗೆಗಳು ಕೂಡಾ ದಾಖಲಿಸಬಹುದಾದ ಅತ್ಯುತ್ತಮ ಕೃತಿಗಳಲ್ಲಿ ಒಂದು ಎಂಬುದು ವಿದ್ವಾಂಸರ ಅನಿಸಿಕೆ.

## ೪. ಉದ್ದೇಶಗಳು (Objectives) :

ಗ್ರಂಥಸೂಚಿಯೆಂದೊಡನೆ ಅದೊಂದು ಕ್ಯಾಟಲಾಗ್, ಅದರಲ್ಲೇನು ಮಹಾ ಎಂಬ ಅವಜ್ಞೆಯ ಭಾವನೆಯು ಅನೇಕ ವಿದ್ವಾಂಸರಲ್ಲಿ ಇದೆ. ಅದರ ಮಹತ್ವ ಉಪಯುಕ್ತತೆಗಳನ್ನು, ಅದನ್ನು ಸಿದ್ಧಪಡಿಸುವಲ್ಲಿ ಇರುವ ತೊಂದರೆ ಪರಿಕ್ರಮಗಳನ್ನು ಗಮನಿಸಬೇಕು.

೧. ಮುಂದೆ ಸಾಗುವುದಕ್ಕೆ ಹಿಂದಿನ ಕಾರ್ಯಸಾಧನೆಯನ್ನು ತಿಳಿರಬೇಕು.

೨. ನಿರ್ದಿಷ್ಟ ವಿಷಯದ ಮೇಲೆ ವಾಚನ ಸಾಮಗ್ರಿ ಗುರುತಿಸುವಿಕೆಯಿಂದ ಮುಂದಿನ ಕೆಲಸದ ಸುಲಭತೆಗೆ ಅನುಕೂಲ ಅಣಿಗೊಳಿಸಿಕೊಳ್ಳುವುದು.

೩. ಅಧ್ಯಯನ, ಸಂಶೋಧನೆ ಕಾರ್ಯಗಳಿಗೆ ಇದುವೆ ತಳಹದಿ.

೪. ವಾಙ್ಮಯ ದರ್ಶಿಕೆ (Bibliographics) ಗಳನ್ನು ಪ್ರಕಟಣೆಗೆ ಸಿದ್ಧಪಡಿಸಬೇಕು.

೫. ಪ್ರಕಟಿತವಲ್ಲದ ಕೃತಿಗಳ ಬಗ್ಗೆ ಮಾಹಿತಿ ತಯಾರಿಸುವುದು.

೬. ಸಾಮಾನ್ಯವಾಗಿ ವೇಳೆಯ ಅಪವ್ಯಯ ಇನ್ನೊಬ್ಬನು ಅದೇ ಕಾರ್ಯ ಮಾಡುವುದನ್ನು (Duplication) ತಪ್ಪಿಸುವುದು.

೭. ಪುಸ್ತಕಗಳ ಸಾರಸಂಗ್ರಹ (Summary; Abstracting) ತಯಾರಿಸಿ ಓದುಗರಿಗೆ ನೀಡುವುದು.

೮. ವಿಷಯಗಳ ಶಬ್ದಸಂಪತ್ತು ಮತ್ತು ನಿರೂಪಣೆ ವಿಧಾನಗಳನ್ನು ಲಭ್ಯವಾಗಿಸುವುದು.

೯. ಗ್ರಂಥಗಳ ವಿವರಗಳನ್ನು ಕಲೆಹಾಕಿ ವ್ಯವಸ್ಥಿತವಾಗಿ ಹೊಂದಿಸಿ, ಓದುಗರಿಗೆ ಅಣಿಗೊಳಿಸಿ ನೀಡುವುದು.

೧೦. ಪುಸ್ತಕ : ಯಂತ್ರಪ್ರತಿಗಳನ್ನು ಒಂದೆಡೆ ಸಂಗ್ರಹಣೆ ಮಾಡಿ ವಿಂಗಡಿಸುವುದು.

ಲಭ್ಯವಿರತಕ್ಕ ಮಾಹಿತಿಗಳನ್ನು ತಕ್ಷಣವೇ ನೀಡಿ ಓದುಗರನ್ನು ಖುಷಿಗೊಳಿಸಬೇಕು. ಏಕೆಂದರೆ ಓದುಗರಿಗೆ ಮಾಹಿತಿಯು ಎಲ್ಲಿ ಸಿಗುತ್ತದೆ. ಹೇಗೆ ಪಡೆಯಬೇಕೆಂಬುದನ್ನು ತಿಳಿಸುವುದು ಮುಖ್ಯವಾಗಿದೆ. ಏಕೆಂದರೆ ಮಾಹಿತಿಯು ತುಂಬಾ ದುಬಾರಿಯಾದ ಕೆಲಸ. ಅದರ ಸುಲಭ ಕೆಲಸವೆಂದರೆ ಇಂತಹ ಕೆಲಸಗಳಿಂದ ಸರಳೀಕರಣಗೊಳ್ಳುತ್ತವೆ ಎಂದು ಹೇಳದೇ ವಿಧಿಯಿಲ್ಲ. ಸಮಯವನ್ನು ವ್ಯಯಿಸದೆ ಅತ್ಯಲ್ಪ ಸಮಯದಲ್ಲಿ ಓದುಗ, ಸಂಶೋಧಕ, ವಿದ್ವಾಂಸರಿಗೆ ತಕ್ಷಣವೇ ಮಾಹಿತಿ ಸಿಕ್ಕರೆ ಓದುಗರಿಗೆ ಅಂಗೈಯಲ್ಲಿ ಆಕಾಶವನ್ನು ತೋರಿಸಿದಂತಾಗುತ್ತದೆ. ಯಾರಿಗೆ ಅದರ ಆವಶ್ಯಕತೆ ಜರೂರು ಇರುತ್ತದೆಯೋ ಅಂತಹವರು ಈ ಮಾಹಿತಿಯಿಂದ ಸಂಶೋಧನಾ ಕಾರ್ಯಕ್ಕೆ ನೆರವಾದ ಗ್ರಂಥಪಾಲಕರು : ಸಿಬ್ಬಂದಿಗಳಿಂದಾಗಬಹುದು. ಹೀಗೆ ಆಧುನಿಕ ಗ್ರಂಥಾಲಯದ ವಾಙ್ಮಯ ದರ್ಶಿಕೆಗಳು ಉಪಯೋಗದ ದೃಷ್ಟಿಯಿಂದ ಅತ್ಯುತ್ತಮ ಮಾಹಿತಿಯನ್ನು ಅದರ ಸ್ಥಳ ಸರಿಯಾದ ಓದುಗರಿಗೆ ಸರಿಯಾದ ಸ್ಥಳವಲ್ಲಿ ಕ್ಷಣದಲ್ಲಿ ಓದುಗರಿಗೆ ನೀಡುವ ಉದ್ದೇಶಗಳು ಮುಖ್ಯವಾದವುಗಳು.

**೫. ನಿರೂಪಣಾ ವಿಧಾನ :**

ಇದು ಸಾಮಗ್ರಿಮುಖಿ ಸಂಶೋಧನೆಯ ನಂತರದ ವರ್ಣಾನುಮುಖಿ ಅಥವಾ ವಿವರಣಾಮುಖಿ ಸಂಶೋಧನೆಯಾಗಿರುತ್ತದೆ. ಸಾಮಗ್ರಿಮುಖಿ ಸಂಶೋಧನೆಯಲ್ಲಿ ಕೇವಲ ದೊರೆತ ಸಾಮಗ್ರಿಗಳನ್ನು ವ್ಯವಸ್ಥಿತವಾಗಿ

ಜೋಡಿಸಿ ಅವನ್ನು ಇದ್ದಕ್ಕಿದ್ದ ಹಾಗೆ ಪ್ರಕಟಗೊಳಿಸಲಾಗುವುದು. ಇದನ್ನು ಆಕರನಿಷ್ಠ, ಸಂಖ್ಯಾನಿಷ್ಠ ಸಂಶೋಧನೆಯೆಂದೂ ಕರೆಯಲಾಗುತ್ತದೆ. ಸಂಶೋಧನೆಯಲ್ಲಿ ಸಾಮಗ್ರಿಗಳಿಗೆ ಪ್ರಾಮುಖ್ಯತೆಯಿದೆಯಾದರೂ ಕೇವಲ ಸಾಮಗ್ರಿ ಸಂಗ್ರಹಣೆಯೇ ಸಂಶೋಧನೆಯೆನ್ನಿಸಲಾರದು. ಸಂಗ್ರಹಿಸಿದ ಸಾಮಗ್ರಿಯನ್ನು ವ್ಯವಸ್ಥಿತವಾಗಿ ವಿಂಗಡಿಸಿ ಅದನ್ನು ಸರಿಯಾಗಿ ವಿವರಿಸಿದಾಗಲೇ ಅದಕ್ಕೊಂದು ಬೆಲೆ. ಇದನ್ನು “ It is a fact finding approach mainly to the persent and abstracting generalisations through the cross section study of the present situation ” ಎಂದು ವಿವರಿಸಲಾಗಿದೆ. ಈ ಮಾರ್ಗದಲ್ಲಿ ಸಾಗಬೇಕಾದರೆ ದೊರೆತಿರುವ ಸಾಮಗ್ರಿಗಳು ಸರಿಯಾಗಿರಬೇಕು, ಸಾಕಷ್ಟಿರಬೇಕು ಮತ್ತು ವಸ್ತುನಿಷ್ಠ (objective) ವಾಗಿರಬೇಕು. ಆಯ್ಕೆ ಮಾಡಿಕೊಂಡ ಸಾಮಗ್ರಿಗಳ ಬಗ್ಗೆ ತೃಪ್ತಿ ಮತ್ತು ನಂಬುಗೆಯಿಂದ ವಿಷಯಗಳು ದಾಖಲಾಗಬೇಕು. ಸಂಬಂಧಿಸಿದ ಗ್ರಂಥಗಳ ಮತ್ತು ಸಾಮಗ್ರಿ ಸಂಗ್ರಹಣೆ ಮತ್ತು ವಿವರಣೆಯಲ್ಲಿ ಮೂಲ ಆಕರಗಳನ್ನು ಬಳಸಿಕೊಂಡು ಉಲ್ಲೇಖಿಸಲಾಗಿದೆ. ಇದು ವರ್ಣನಾತ್ಮಕ ಸಂಶೋಧನಾ ವಿಧಾನವನ್ನು ಅನುಸರಿಸಿ ದಾಖಲಿಸಿದ್ದೇವೆ. ಆಕರಗಳನ್ನು ಎದುರಿಗಿಟ್ಟುಕೊಂಡು ಅವುಗಳಿಂದ ಪಡೆದ ಸಾಮಗ್ರಿಯಿಂದ ವಿಷಯವನ್ನು ಗ್ರಹಿಸಿ ದಾಖಲಿಸಲಾಗಿದೆ. ಇಲ್ಲದಿದ್ದರೆ ಇದೊಂದು ಕಾಟಾಚಾರದ ಕಾರ್ಯವಾಗುತ್ತದೆ ಎಂಬುದು ಗೊತ್ತೇ ಇದೆ. ಅಂತಹ ಅಲಭ್ಯ ಕೃತಿಗಳ ಬಗ್ಗೆ ನಿರೂಪಣೆ ಇಲ್ಲ. ಹೀಗೆ ಅನೇಕ ಗ್ರಂಥಗಳಿಂದ ಅನವಶ್ಯಕವೆನಿಸುವಷ್ಟು ಅವತರಣಿಕೆಗಳನ್ನು ಉದ್ಧರಿಸಿ ಅವುಗಳ ಸಂದರ್ಭಗಳನ್ನು ದಾಖಲಿಸಿದ್ದೇನೆ. ಮೂಲ ವಿಷಯಗಳನ್ನು ಅವತರಣಿಕೆಯಲ್ಲಿ ಇದ್ದಂತೆ ಕಾಣಿಸಿದ್ದೇನೆ. ಹೀಗೆ ಒಂದು ಪರಿಸರದ, ಒಂದು ಭಾಷೆಯ, ಒಂದು ಕಾಲದ (ಒಂದು ಅವಸ್ಥೆ = stage) ಅಥವಾ ಒಂದು ಕಾಲಘಟ್ಟದಲ್ಲಿಯ ಪರಿಸರದ ವ್ಯವಸ್ಥೆಯನ್ನು ಇದ್ದಕ್ಕಿದ್ದಂತೆಯೇ ವಿವರಿಸುವ ಕಾರ್ಯವನ್ನಿಲ್ಲಿ ಮಾಡಲಾಗಿದೆ. ಹೀಗೆ ಇದೊಂದು ವಿಶ್ಲೇಷಣಾಮುಖಿ ಅಥವಾ ವ್ಯಾಖ್ಯಾಮುಖಿ ಸಂಶೋಧನೆಯ ದಾಖಲೆಗಳನ್ನು ನಿರೂಪಿಸಿ, ನಿರ್ವಹಿಸಿ ಸಾಕಷ್ಟು ಮಾಹಿತಿಗಳನ್ನು ಬಳಸಿಕೊಂಡು ಕನ್ನಡ ಸಾಹಿತ್ಯ ಸಂದರ್ಭಕ್ಕೆ ಆವಶ್ಯಕ ದಾಖಲೆಯಾಗಬೇಕೆಂಬ ದೃಷ್ಟಿಯಿಂದ ಈ ಸಂಪ್ರಬಂಧದಲ್ಲಿ ಸಂದರ್ಭ ಸಾಹಿತ್ಯದ ಸಾಕಷ್ಟು ಆಕರಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಡಾ. ಎಂ. ಎಂ. ಕಲಬುರ್ಗಿ ಹೇಳುವಂತೆ “ ಸಂಶೋಧನೆಯೆನ್ನುವುದು ವಿರಾಮದಿಂದ ಅಲ್ಪವಿರಾಮದ ವರೆಗೆ, ಅಲ್ಪ ವಿರಾಮದಿಂದ ಪೂರ್ಣ ವಿರಾಮದ ವರೆಗೆ ದಾರಿ ಮಾಡಿಕೊಂಡು ಪೂರ್ಣತ್ವ ಕಾಣುವ ವರೆಗೆ ನಡೆಯುವ ಮಾರ್ಗ ” ಎಂದಿದ್ದಾರೆ. ಅಂದರೆ ಕಲಬುರ್ಗಿಯವರ ಹೇಳಿಕೆಗಳನ್ನು ಗ್ರಹಿಸುವುದಾದರೆ, ಪಥ (ರಸ್ತೆ), ರಾಜ್ಯ ಹೆದ್ದಾರಿ, ರಾಷ್ಟ್ರೀಯ ಹೆದ್ದಾರಿಗಳ ಹಾಗೆ ನಿರ್ಮಾಣದ ಹಾದಿ ಸಾಗಬೇಕೆನ್ನುವದು ಒಪ್ಪತಕ್ಕ ಮಾತೇ ಸರಿ, ಅಂದರೆ ಅವರದು ಯಾವಾಗಲೂ ಕಾಣಲಾಗದ್ದನ್ನು ಅಮೂರ್ತತೆಯನ್ನು ಪಡೆಯುವದಾಗಿರುತ್ತದೆ. ಉನ್ನತ ಆದರ್ಶ ಮಾರ್ಗ (super highway) ಗಳನ್ನು ಇಟ್ಟುಕೊಂಡು ಸಂಶೋಧನೆ ನಡೆಸಬೇಕೆನ್ನುವದಾಗಿದೆ. ಈ ಆದರ್ಶ ಎಷ್ಟು ಮುಂದಿಗೆ ಸಾಧ್ಯ ? ಹಾಗಾದಾಗ ಸಂಶೋಧನೆಗೆ ಇನ್ನೂ ಹೆಚ್ಚಿನ ಮಹತ್ವ ಸಿಕ್ಕೀತು.

## ೬. ಮಿತಿಗಳು :

ಗ್ರಂಥಸೂಚಿಯು ಜ್ಞಾನಭಂಡಾರದ ಬೀಗದ ಕೈ ಇದ್ದಂತೆ. ವಿದೇಶಗಳಲ್ಲಿ ಪ್ರತಿಯೊಂದು ವಿಷಯದ ಮೇಲೆ ದೊರೆಯುವ ಪುಸ್ತಕ, ಪತ್ರಿಕೆಗಳ ಲೇಖನಗಳು, ಅವುಗಳ ವಿವರಗಳನ್ನು ವಿಶೇಷ ದಕ್ಷತೆಯಿಂದ ಸಂಗ್ರಹಿಸಿ ವಾಙ್ಮಯ ದರ್ಶಿಕೆಗಳನ್ನು ಪ್ರಕಟಿಸುತ್ತಾರೆ. ನಮ್ಮ ದೇಶದಲ್ಲಿ ಕೆಲವೇ ಜ್ಞಾನಕ್ಷೇತ್ರಗಳನ್ನು ಆಯ್ದುಕೊಂಡು ಈ ರೀತಿ ಪ್ರಕಟಿಸುವ ರೂಢಿ ಇದೆ. ಇದು ಜ್ಞಾನದ ಎಲ್ಲಾ ಶಾಖೆಗಳಿಗೂ ಅನ್ವಯಿಸುವುದಿಲ್ಲ. ವಿಜ್ಞಾನ ಕ್ಷೇತ್ರದಲ್ಲಿ ವಿಶೇಷವಾಗಿ ಈ ಎಲ್ಲ ಕೆಲಸಗಳೂ ನಡೆದಿವೆ. ಉಳಿದ ಜ್ಞಾನ ಶಾಖೆಗಳಿಗೂ ಇದನ್ನು ವಿಸ್ತರಿಸಬೇಕು. ಇದಕ್ಕೆ ವಿಶೇಷವಾಗಿ ಪರಿಣಿತರು ಆಸ್ಥೆಯಿಂದ ಮಾಡಬೇಕಾದ ಕೆಲಸ ಇದು.

ಒಂದು ವಿಷಯದ ಮೇಲೆ ಪ್ರಕಟವಾದ ಎಲ್ಲ ಕೃತಿಗಳನ್ನು ಪ್ರಸ್ತುತ ಗ್ರಂಥಸೂಚಿಯಿಂದ ಅರಿತುಕೊಳ್ಳಬಹುದು. ಇದು ಪುಸ್ತಕದ ಅಂಗಡಿಗಳಲ್ಲಿ ದೊರೆಯುವುದು ಎನ್ನುವಿರಾ ? ಇಲ್ಲ, ಅಂಗಡಿಕಾರನು ತನ್ನಲ್ಲಿದ್ದ ಪುಸ್ತಕಗಳನ್ನು ಮಾತ್ರ ಒದಗಿಸುತ್ತಾನೆ. ಆ ವಿಷಯಕ್ಕೆ ಸಂಬಂಧಿಸಿದ ಎಲ್ಲಾ ವಿವರಗಳನ್ನು ತಿಳಿಯಲು ವಾಙ್ಮಯ ಸೂಚಿಗಳೇ ನಮಗೆ ಆಧಾರ. ಇನ್ನೊಬ್ಬರು ಬರೆದ ಕೃತಿಗಳ ಪರಿಚಯವಿಲ್ಲದ ಕಾರಣದಿಂದಾಗಿಯೇ ಕಳೆದ ಶತಮಾನದಲ್ಲಿ ಕಾಳಿದಾಸ ಮೊದಲಾದವರ ನಾಟಕಗಳ ಎರಡು ಮೂರು ಅನುವಾದಗಳು ಸಿದ್ಧವಾದವು.

೬.೧ : ಕನ್ನಡ ವಿಜ್ಞಾನ ಕ್ಷೇತ್ರದಲ್ಲಿ ಎದ್ದುಕಾಣುವ ಕೊರತೆ ಎಂದರೆ ವಿಜ್ಞಾನ ವಿಷಯದಲ್ಲಿ ಇಂಗ್ಲಿಷ್ ಕನ್ನಡ ಶಬ್ದಕೋಶವಿಲ್ಲದುದು. ಆದರೆ ಸಮಸ್ತ ವಿಜ್ಞಾನ ಪಾರಿಭಾಷಿಕ ಪದಗಳಿಗಾಗಿ ವ್ಯಾಪಕವೂ, ಪ್ರಾಮುಖ್ಯವೂ ಆದ ಒಂದು ಕೋಶದ ರಚನೆ ಆಗಬೇಕಾದುದು ಶಬ್ದಗಳನ್ನು ಏಕರೂಪತೆ ಒಂದು ಕೋಶದ ರಚನೆ ಆಗಬೇಕಾದುದು ಶಬ್ದಗಳನ್ನು ಸಾಧಿಸುವದಕ್ಕೂ, ಭಾಷೆಯನ್ನು ಸಾಮಾನ್ಯವಾಗಿ ಎಲ್ಲರಿಗೂ ತಿಳಿಯುವ ರೀತಿಯಲ್ಲಿ ಬಳಸುವುದು ಆವಶ್ಯಕವಾಗಬೇಕಾಗಿದೆ. ಈಗಾಗಲೇ ಆಗಿರುವ ಬೆಳವಣಿಗೆಗಳಲ್ಲಿ ಪ್ರಾಮಾಣಿಕವಾದ ಅನುಕ್ರಮಣಿಕೆ ಇಲ್ಲದಿರುವುದು.

೬.೨ : ಪಠ್ಯಗಳು ಎಲ್ಲ ವಿಷಯಗಳಲ್ಲಿಯೂ ಬರುವಂತಹವು. ಇವೂ ಕೂಡ ಒಂದು ಕ್ರಮದಲ್ಲಿ ಬರೆಯಲು ಸಾಧ್ಯವಾಗಿಲ್ಲ. ಇಲ್ಲಿರುವ ಹಲವು ಪ್ರತಿಗಳ ಪ್ರತಿಸಹ ಪಠ್ಯ-ಪುಸ್ತಕಗಳನ್ನು ಕೊಡುತ್ತವೆಯಾದರೂ ಆ ಶೀರ್ಷಿಕೆಯಡಿಯಲ್ಲಿ ಸಮಾವೇಶವಾಗಿಲ್ಲ. ಹೀಗೆ ಮಾಡುವುದರಿಂದ ಸೂಚೀಕಾರರಿಗೆ ಪ್ರತಿಗಳ ಉಳಿತಾಯವೂ ಅವರ ಶ್ರಮವೂ ವೇಳೆಯೂ ಕೂಡ ಕಡಿಮೆಗೊಳಿಸಿಕೊಳ್ಳಬಹುದಾಗಿದ್ದು ಹಲವು ಪ್ರತಿಗಳನ್ನು ಆಕ್ರಮಿಸಿಕೊಳ್ಳುವ ಸಂಭವವುಂಟು. ಹೀಗಾಗಿ ನಮಗೆ ಬೇಕಾದ ನಿರ್ದಿಷ್ಟ ವಿಷಯದ ಮಾಹಿತಿ ಪೂರ್ಣತಃ ದೊರೆಯುವುದಿಲ್ಲ. ಪುನರುಕ್ತಿಯ ಕೆಲಸವಾಗಿದೆ.

೬.೩ : ಒಂದೇ ಪುಸ್ತಕದ ಅನ್ಯ ಆವೃತ್ತಿಗಳು ಇದ್ದರೆ ಒಂದನ್ನೂ ಕೊಟ್ಟು ಬೇರೆ ಆವೃತ್ತಿಗಳನ್ನು ಅದರಲ್ಲಿಯೇ ಬೇಕಾದರೆ ಕಾಣಿಸಬಹುದು. ಇಂಥವುಗಳನ್ನು ಕೈ ಬಿಟ್ಟಿದ್ದಾದರೆ ಇನ್ನೂ ಅನುಕೂಲ.

೬.೪ : ಲೇಖಕರ ಹೆಸರಿನ ಮುಂದೆ ಶಕ್ಯವಿದ್ದಲ್ಲಿ ಅವರ ಜನನ (ಮರಣ) ದ ಹಾಗೆಯೇ ಕಾವ್ಯನಾಮ (ಗುಪ್ತನಾಮ) ಮುಂತಾದವುಗಳನ್ನು ಕೊಡದೇ ಇರುವುದು.

೬.೫ : ಕೆಲವು ಸೂಚಿಗಳಲ್ಲಿ ಪುಸ್ತಕದ ರಟ್ಟು, ಆಕಾರ, ಗಾತ್ರ, ಪುಸ್ತಕಗಳ ಸಂಖ್ಯೆ, ಪ್ರಕಟವಾದ ವರ್ಷ, ಮುದ್ರಣ ಸಂಖ್ಯೆ, ಇತ್ಯಾದಿಗಳನ್ನು ನಮೂದಿಸದೇ ಇರುವುದು ಕಂಡುಬರುತ್ತದೆ.

೬.೬ : ಗ್ರಂಥಸೂಚಿಗಳಲ್ಲಿ ವಿಷಯ ಸಾರವೂ, ಸ್ಪಷ್ಟವೂ, ನಿರ್ದಿಷ್ಟವೂ ಆಗಿರುವುದಿಲ್ಲ. ಒಮ್ಮೊಮ್ಮೆ ವಿಷಯಕ್ಕಿಂತ ಹೊಗಳಿಕೆ, ತೆಗಳಿಕೆ ಹೆಚ್ಚು ಮೀಸಲಿರಿಸುವುದು ಆವಶ್ಯಕವೆನಿಸುತ್ತದೆ. ಸಾರವು ಸಂಕ್ಷೇಪವೂ ಎಲ್ಲರಿಗೂ ತಿಳಿಯುವಂತೆಯೂ ಇರುವುದು ಅವಶ್ಯ. ಉದ್ದವಾಗಿರಕೂಡದು.

೬.೭ : ಅನವಶ್ಯಕ ಶಬ್ದಗಳಿರಕೂಡದು. ಉದಾಹರಣೆಗೆ : ಇತ್ಯಾದಿ..... ಅದು, ಇದು, ಅನವಶ್ಯಕ ಶಬ್ದಗಳ ಬಳಸುವಿಕೆ ಆಗಬಾರದು.

೬.೮ : ಪ್ರತಿ ಪುಟದ ಮೇಲ್ಗಡೆ ಪುಟದ ಸಂಖ್ಯೆ ಇದೆ. ಅದರ ಜೊತೆಗೆ ಆ ಪುಟದಲ್ಲಿ ಬಂದಿರುವ ನಮೂದುಗಳು, ಸಂಖ್ಯೆ ಮುಖ್ಯ ವಿಷಯಗಳನ್ನು ಸೇರಿಸದೇ ಇರುವುದು. ಹೀಗಿದ್ದರೆ ಸಂಪುಟದ ಉಪಯುಕ್ತತೆ ಹೆಚ್ಚುತ್ತದೆ.

೬.೯ : ಅನುಬಂಧಗಳು, ಗ್ರಂಥಕರ್ತಸೂಚಿ, ಕೃತಿನಾಮ, ಸೂಚಿ, ಪ್ರಕಾಶಕರು, ಗ್ರಂಥಮಾಲೆ (series) ಇವು ಇದರಲ್ಲಿ ಸಮಾವೇಶವಾಗಿವೆ. ಮೊದಲಿನ ಎರಡು ಆಕಾರಾದಿ ಸೂಚಿಗಳು ಮುಖ್ಯ ಗ್ರಂಥಸೂಚಿಯಷ್ಟೇ ಮಹತ್ವವೆನ್ನಲಡ್ಡಿಯಿಲ್ಲ. ಗ್ರಂಥಕರ್ತರ ಸೂಚಿಯನ್ನಂತೂ ಮೇಲಿಂದ ಮೇಲೆ ನೋಡಬೇಕಾಗುತ್ತದೆ. ಕನ್ನಡ ಗ್ರಂಥಕರ್ತರನ್ನೂ ಆಕಾರಾದಿಯಲ್ಲಿ ನಮೂದಿಸುವಾಗ ಬರುವ ತೊಂದರೆ ಬಂದರೆ ಅವರ ಮುಖ್ಯ ಹೆಸರುಗಳು ಅವು ತಿರುವು - ಮುರುವು ಆಗುವ ಸಂಭಾವ್ಯತೆಗಳು ಬಸವರಾಜ ಕಟ್ಟೀಮನಿ : ಕಟ್ಟೀಮನಿ ಬಸವರಾಜ, ಕೆ. ವಿ. ಪುಟ್ಟಪ್ಪ : ಕುವೆಂಪು / ಪುಟ್ಟಪ್ಪ ಕೆ. ವಿ., ದ. ರಾ. ಬೇಂದ್ರೆ : ಅಂಬಿಕಾತನಯ ದತ್ತ, ಇಂಥವುಗಳನ್ನು ಆದಷ್ಟು ಸಾಮಾನ್ಯ ಕರೆಸಿಕೊಳ್ಳುವುದು ಅವಶ್ಯವೆನಿಸುತ್ತದೆ. ಸಾಮಾನ್ಯವಾಗಿ ಪ್ರಚಲಿತವಿರುವ ಹೆಸರನ್ನು ಬಳಸುವುದು ಉಚಿತವೆನಿಸುತ್ತದೆ.

೬.೧೦ : ಗ್ರಂಥದಲ್ಲಿ ಲೇಖಕನ ಹೆಸರಿಲ್ಲದಿದ್ದರೆ ಶೀರ್ಷಿಕೆಯ ಮೊದಲ ಶಬ್ದವನ್ನು ಕೊಡುವ ರೂಢಿಯನ್ನು ಬಿಟ್ಟು ವ್ಯಕ್ತಿಗಳನ್ನು ಮತ್ತು ಸಂಸ್ಥೆಗಳನ್ನಷ್ಟೇ ಗ್ರಂಥಕರ್ತ ಎಂದು ಪರಿಗಣಿಸಬೇಕೆಂಬುದು ನನ್ನ ಅಭಿಪ್ರಾಯ. ಪ್ರಾದೇಶಿಕ ಮೂಲ ಭೇದಗಳು, ಉದಾ : ಬೆಳಗಾಂ - ಬೆಳಗಾವಿ, ಧಾರವಾಡ - ಧಾರವಾರ, ಇತ್ಯಾದಿಗಳನ್ನು ಸಾಮಾನ್ಯವಾಗಿ ರೂಢಿಯಲ್ಲಿರುವಂತೆ ಬಳಸುವುದು ಅನಿವಾರ್ಯ.

೬.೧೧ : ಅನುಬಂಧದಲ್ಲಿ ನಮೂದುಗಳು ಒಂದೆಡೆ ಸಂಗ್ರಹವಾಗಿಲ್ಲ.

೬.೧೨ : ಊಹಾತ್ಮಕ ಬರೆವಣಿಗೆ ಹಾಗೂ ನಿಖರವಾದ ದಾಖಲೀಕರಣ ಕಾರ್ಯದ ಅಭಾವ.

ನಮ್ಮೊಡನೆ ಇದ್ದು ಇಂಥ ಅದ್ಭುತವಾದ ಕಾರ್ಯವನ್ನು ಮಾಡಿದ ಮಹಾ ವಿದ್ವಾಂಸರು ಕುರಿತು ಅನುಕ್ರಮವಾದ ದಾಖಲೆಗಳು ಇಲ್ಲದಿರುವುದರಿಂದ ಅವರ ಮರಣದೊಂದಿಗೆ ಮಣ್ಣುಗೂಡಿ ಹೋಗಿವೆ ಎಂಬುದನ್ನು ವಿಷಾದದಿಂದ ಇಲ್ಲಿ ದಾಖಲಿಸಬೇಕಾಗುತ್ತದೆ. ಅಸಮರ್ಪಕ ಸಂಗ್ರಹ ಕಾರ್ಯ, ಪರಿಷ್ಕರಣೆ, ಸಂಪಾದನೆಗಳು ಇಲ್ಲದೇ ಇರುವುದು ಗ್ರಂಥಸೂಚಿಗೆ ಅಡ್ಡಿ-ಆತಂಕಗಳಾಗಬಹುದು. ಬೇರೆ ಬೇರೆ ಅವಧಿಯಲ್ಲಿ ಅಭ್ಯಾಸ ಮಾಡುವುದರಿಂದ ಈ ಏಕೈಕ ವಿಷಯ (ಗ್ರಂಥಸೂಚಿ) ದ ಬಗ್ಗೆ ವಿದ್ವಾಂಸರ ಗಮನ ಅಷ್ಟಾಗಿ ಗಮನಿಸದಿರುವುದು ಎದ್ದುಕಾಣಿಸುತ್ತದೆ. ಸಂಶೋಧನಾ ದೃಷ್ಟಿಯಿಂದ ಉಪಯುಕ್ತವಾಗಬಹುದಾದ ಗ್ರಂಥಸೂಚಿ ಕಾರ್ಯ, ಪ್ರಕಟಿಸುವುದು ಆಗಬೇಕಾದುದು ಬಹಳಷ್ಟು ಇದೆ ಎಂದು ವಿಷಾದದಿಂದ ಹೇಳಬೇಕಾಗಿದೆ.

ಈಗಾಗಲೇ ಆದ ಕೆಲಸದಲ್ಲಿ ಹೀಗೆ ಹೇಳಿದರೆ, ಹಾರುವ ಹಕ್ಕಿಗಳ ರೆಕ್ಕೆಗಳನ್ನಷ್ಟೇ ಎಣಿಸುವುದು ಉಚಿತವಲ್ಲವಾದರೂ ಸ್ತುತ್ಯಾರ್ಹವಾದ ಕೆಲಸವನ್ನು ಕೆಲವರಾದರೂ ಮಾಡಿದ್ದಾರೆನ್ನುವುದು ಸಂತೋಷಕರ, ಹೆಮ್ಮೆಯ ಕೆಲಸವೇ ಸರಿ.

ಸಂಘ-ಸಂಸ್ಥೆಗಳು, ಪ್ರಕಾಶಕರು, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳು, ಸಾಹಿತ್ಯ ಪರಿಷತ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ವಿಶ್ವವಿದ್ಯಾಲಯಗಳು ಇಂತಹ ಕೆಲಸಗಳನ್ನು ಹಮ್ಮಿಕೊಳ್ಳುವುದರಿಂದ ಭವಿಷ್ಯವನ್ನು ರೂಪಿಸಿಕೊಳ್ಳಬೇಕಾಗಿದೆ. ಈಗಾಗಲೇ ಅತ್ಯಲ್ಪ ಕೆಲಸವನ್ನೇ ಮಾರ್ಗದರ್ಶಿಯನ್ನಾಗಿ ಬೆಳೆಸಿಕೊಂಡು ಹೋಗುವುದು ನಮ್ಮ ವಿದ್ವಾಂಸರು, ಸಂಶೋಧಕರು ಮಾಡಬೇಕಾದ ಕೆಲಸದ ಮಾರ್ಗ ಇನ್ನೂ ಬಾಕಿ ಇದೆ. ಏನೇ ಹೇಳಿದರೂ ತುರ್ತಾಗಿ ಆಗಬೇಕಾದ ಕೆಲಸ. ಈ ಎಲ್ಲ ಸೂಚಿಗಳು ಒಂದು ಕಾಲಾವಧಿಗೆ ಮಾತ್ರ ಸೀಮಿತಗೊಂಡಿರುವುದರಿಂದ ಕನ್ನಡದಲ್ಲಿ ಪ್ರಕಟಗೊಂಡಿರುವ ಎಲ್ಲ ಗ್ರಂಥಗಳ ಬಗ್ಗೆ ಸಮಗ್ರವಾದ ವಿವರಗಳನ್ನು ಹೊಂದಿದ ಒಂದೇ ಒಂದು ಸೂಚಿಯ ಅಗತ್ಯವನ್ನು ನಾವೆಲ್ಲ ಗಮನಿಸಬೇಕಾಗಿದೆ.

## ೭. ಅಧ್ಯಯನಗಳು :

ಈ ಸಂಶೋಧನಾ ಸಂಪ್ರಬಂಧ " ಸಮಗ್ರ ಕನ್ನಡ ಗ್ರಂಥಸೂಚಿಗಳು : ಒಂದು ಅಧ್ಯಯನ " ಜೊತೆಗೆ ಪ್ರಸ್ತಾವನೆ ಮತ್ತು ಸಮಾರೋಪವು ಒಳಗೊಂಡಿರುತ್ತದೆ.

ಅಧ್ಯಾಯ : ಒಂದು

## ಪರಿಚಯ ಮತ್ತು ಪ್ರವೇಶ :



ಅಧ್ಯಾಯ : ಎರಡು

## ಇತಿಹಾಸ ಮತ್ತು ಬೆಳವಣಿಗೆ :

ಅಧ್ಯಾಯ : ಮೂರು

## ಗ್ರಂಥಸೂಚಿಯ ರಚನೆಗಳು :

ಹೀಗೆ ಪುರಾತನ, ಪ್ರಾಚೀನದಿಂದ ಆಧುನಿಕ ಕಾಲದ ಬೆಳವಣಿಗೆಗಳು ಮತ್ತು ಭವಿಷ್ಯತ್ತಿನ ಬೆಳವಣಿಗೆಯನ್ನು ನಿರ್ಧರಿಸಲಾಗದಿದ್ದರೂ ಒಳನೋಟಗಳನ್ನು, ಪರಿಣಾಮಗಳನ್ನು ಈ ಸಂಪ್ರಬಂಧದಲ್ಲಿ ಮಂಡಿಸಲಾಗಿದೆ.

## ೮. ಲಿಪ್ಯಂತರ (Transliteration) :

ಒಂದು ಗ್ರಂಥಸೂಚಿಯಲ್ಲಿ ದೊರೆಯುವ, ಒಂದು ಭಾಷೆಯಲ್ಲಿಯೂ ಭಿನ್ನ ಭಿನ್ನ ಭೇದಗಳು, ವಿವರಗಳು ಕಾಣಿಸುತ್ತವೆ. ಇದು ಒಂದು ಪ್ರದೇಶದ ಜನರಾಡುವ ಉಸಿರಾಡುವ ನೆಲದ ಭಾಷೆ, ಆ ಭಾಷೆಗೆ ನಾವು ಗ್ರಾಂಥಿಕ ರೂಪ ಕೊಡುವುದು ಮುಖ್ಯವಾಗಿರುತ್ತದೆ. ಪ್ರಾದೇಶಿಕತೆಯಿಂದ ಅದನ್ನು ವಿರೂಪಗೊಳಿಸಿದಾಗ ಲಿಪ್ಯಂತರ ಆವಶ್ಯಕವಾಗುತ್ತದೆ.

ಹೀಗೆ ಬೇರೆ ಬೇರೆ ಭಾಷೆಗಳನ್ನಾಡುವ ಜನರಿಗೆ ದೊರಕಿಸುವ ಸಲುವಾಗಿ ಒಂದು ಭಾಷೆಯಲ್ಲಿರುವ ವಿವರಗಳನ್ನು ಇನ್ನಿತರ ಭಾಷೆಗಳಲ್ಲಿ ಗ್ರಂಥರೂಪಕ್ಕೆ ರೂಪಾಂತರ, ಲಿಪ್ಯಂತರ ಮಾಡುವ ಪದ್ಧತಿಯು ಅನೇಕ ಗ್ರಂಥಾಲಯಗಳಲ್ಲಿದೆ. ಯಾಕೆಂದರೆ ಒಂದು ಭಾಷೆಯಲ್ಲಿನ ಗ್ರಂಥಸೂಚಿಯನ್ನು ಇನ್ನಿತರ ಭಾಷೆಗಳಲ್ಲಿ ಲಿಪ್ಯಂತರ ಮಾಡುವಾಗ ಒದಗಬಹುದಾದ ಅಡ್ಡಿ ಆತಂಕಗಳನ್ನು ನಿವಾರಿಸಿಕೊಳ್ಳಲು ಕೆಲವು ಸರ್ವಮಾನ್ಯ ಪದ್ಧತಿಗಳನ್ನು ಅನುಸರಿಸಲಾಗುತ್ತದೆ. ಪೌರಸ್ತ್ಯಲಿಪಿ ಜರ್ಮನ್ ಪದ್ಧತಿ, ಫ್ರೆಂಚ್ ಪದ್ಧತಿ, ಅಮೆರಿಕಾ ಕಾಂಗ್ರೆಸ್ ಗ್ರಂಥಾಲಯ ಪದ್ಧತಿ, ಹಾಗೂ ಅಂತಾರಾಷ್ಟ್ರೀಯ ಪದ್ಧತಿಗಳಿಗೆ ಅನುಗುಣವಾಗಿ ನಡೆಯುತ್ತದೆ. ಇವು ರಾಷ್ಟ್ರೀಯ ಗ್ರಂಥಸೂಚಿಯಲ್ಲಿ ಇಡೀ ಪದ್ಧತಿಯನ್ನು ಅನುಸರಿಸಲಾಗಿದೆ. ಎಲ್ಲ ಭಾಷೆಗಳ ವರ್ಣಮಾಲೆಯಲ್ಲಿ ಸಮಾನ ಅಂಶಗಳು ಇರುವುದಿಲ್ಲವಾದ ಕಾರಣ ಒಂದು ಲಿಪಿಯಿಂದ ಮತ್ತೊಂದು ಲಿಪಿಗೆ ಬದಲಿಸುವಾಗ ಕೆಲವಾರು ಅಂತಾರಾಷ್ಟ್ರೀಯ ಚಿಹ್ನೆಗಳನ್ನು ಉಪಯೋಗಿಸುತ್ತಾರೆ. ಅದರಂತೆ ಕನ್ನಡಕ್ಕೊಂದು ಮಾದರಿಯನ್ನು, ವಿವರಣೆಗಳೊಂದಿಗೆ ನಿರ್ವಹಿಸಿ ರೂಪಿಸುವುದು ಅವಶ್ಯವಿದೆ.

## ೯ : ಉಪಸಂಹಾರ

ಕನ್ನಡ ಗ್ರಂಥಸೂಚಿಯು ಇನ್ನೂ ಮುಂದೆ ವಾರ್ಷಿಕವಾಗಿ ಆಯಾ ಹಿಂದಿನ ವರ್ಷದ ಪ್ರಕಟಣೆಗಳನ್ನೆಲ್ಲ ಸೂಚೀಕರಿಸುವ ಆಶಯವಿದೆ. ಆದರೆ ಅದು ಸಮಗ್ರವೆಂದು ಹೇಳಲಾಗದು. ಏಕೆಂದರೆ ಪ್ರಕಟವಾದ ಎಲ್ಲಾ ಪುಸ್ತಕಗಳ ಪ್ರತಿಗಳು ನಮ್ಮ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಾಗಲೀ, ನಮ್ಮ ಕನ್ನಡ ಅಧ್ಯಯನ ಸಂಸ್ಥೆಗಳಲ್ಲಾಗಲೀ ಸಂಗ್ರಹಿತವಾಗುತ್ತಿಲ್ಲ. ಅನೇಕ ಪುಸ್ತಕಗಳು ಸಂಗ್ರಹಿತವಾಗುತ್ತಿಲ್ಲ. ಅನೇಕ ಪುಸ್ತಕಗಳು ಸೂಚೀಕರಣಗೊಳ್ಳದೆ ಹೋಗುವ ಸಂಭವವಿದೆ. ಲೇಖಕರ, ಪ್ರಕಾಶಕರ, ಗ್ರಂಥಪಾಲಕರ, ಮತ್ತು ಸೂಚೀಕಾರರ ಕ್ರಿಯಾಶೀಲ ಸಹಕಾರವಿಲ್ಲದೆ ಕನ್ನಡ ಗ್ರಂಥಸೂಚಿಯು ಸಮಗ್ರವೂ, ಸಕಾಲಿಕವೂ ಆಗಲಾರದು. ಪ್ರಸಕ್ತ ಸಂದರ್ಭದಲ್ಲಿ ಅಂತಹ ಸಹಕಾರವನ್ನು ನಾವು ನಿರೀಕ್ಷಿಸುವಂತಿಲ್ಲ. ಉಳಿದಿರುವ ಏಕೈಕ ಮಾರ್ಗವೆಂದರೆ ಪ್ರಕಟವಾದ ಎಲ್ಲಾ ಪುಸ್ತಕಗಳ ಒಂದೊಂದು ಪ್ರತಿಯನ್ನು ತಪ್ಪದೇ ಖರೀದಿಸಿ ಸಂಗ್ರಹಿಸುವುದು, ಹಾಗೆ ಸಂಗ್ರಹಿಸಿದ ಪುಸ್ತಕಗಳನ್ನು ಸೂಚೀಕರಿಸುವುದು.

ಈ ಬಗೆಯ ಸಲಹೆಯನ್ನು ಸರ್ ಎ. ಗ್ರ್ಯಾಂಟ್ ಎಂಬುವರು ೧೮೭೫ ರಲ್ಲಿ ಮಾಡಿದ್ದರು. ನಮ್ಮ ಕೆಲಸಗಳನ್ನು ಪರದೇಶದವರು ಮಾಡಿ ತೋರಿಸಿದಾಗಲೇ ನಮಗೆ ನಮ್ಮ ಅರಿವು ಗೊತ್ತಾಗುವುದು. ಆತನ ಸಲಹೆಯು ಅಷ್ಟು ಸರಳವಾಗಿ ಕಾರ್ಯರೂಪಕ್ಕಿಳಿದಿಲ್ಲ. ಹಾಗೇನಾದರೂ ಆಗಿದ್ದರೆ ಇಂದು ನಮ್ಮ ಸೂಚಿಗಳು ಸಾಕಷ್ಟು ಪರಿಪೂರ್ಣವಾಗಿರುತ್ತಿದ್ದವು. ಕನ್ನಡದಲ್ಲಿ ನಿಖರವಾಗಿ ಪ್ರಕಟಗೊಂಡ ಪುಸ್ತಕಗಳ ಸಂಖ್ಯೆ, ವಿವರಗಳು ಸಿಗುತ್ತಿದ್ದವು.

ಈ ಸಂದಿಗ್ಧ ಸಮಯದಲ್ಲಿರುವ ನಮ್ಮ ಸಾಹಿತ್ಯ ಸಂದರ್ಭ ಗ್ರಂಥಸೂಚಿಯ ಘನಕಾರ್ಯ ನಿರ್ಭೀತಿಯಿಂದ ಆಗುವಂತಾಗಬೇಕು. ಏಕೆಂದರೆ ಗ್ರಂಥಸೂಚಿ ಮೂಲಭೂತ ಆವಶ್ಯಕತೆಗಳಲ್ಲೊಂದು. ವಿದ್ಯಾರ್ಥಿಗಳಿಂದ ಹಿಡಿದು ಅಧ್ಯಾಪಕರು, ಸಂಶೋಧಕರು, ಆಸಕ್ತರಿಗೆ ಅದು ಮಾರ್ಗದರ್ಶಿಯಂತೆ, ಕೈಪಿಡಿಯಂತೆ ದಾರಿದೀಪದಂತೆ, ಮೈಲುಗಲ್ಲಾಗಿ ನಿಲ್ಲಬೇಕಾಗಿದೆ. ಈ ಎಲ್ಲ ಪ್ರಕ್ರಿಯೆಗಳ ಮೂಲ ತಳಹದಿ ಗ್ರಂಥಸೂಚಿ. ಇದರ ಆವಶ್ಯಕತೆ ಯಾರಿಗಿಲ್ಲ; ಇದು ನಮ್ಮ ದೇಹಗಳಲ್ಲಿ ಹರಿದಾಡುವ ರಕ್ತಕಣಗಳಂತೆ ಬೌದ್ಧಿಕ ಜಗತ್ತಿಗೆ ಮೂಲಾಧಾರವಾಗಬಲ್ಲದು. ಇದು ಮೌಲ್ಯಯುತ ಸಾಧನವಾಗಬಲ್ಲದು. ನಮ್ಮ ಸಂದರ್ಭ ಸೇವೆಗೆ ಮುಂಬರುವ ದಿನಗಳಲ್ಲಿ ಅತಿ ಮುಖ್ಯ, ಅತ್ಯವಶ್ಯಕ ಸಂದರ್ಭ ಸೇವೆಗೆ ಅವಶ್ಯವಾಗಬಲ್ಲದು. ಇದರ ವ್ಯಾಪ್ತಿ ವಿಶಾಲ ಅನಂತಾನಂತ.

ಆದುದರಿಂದ ಗ್ರಂಥಸೂಚಿಯು ಸಂಶೋಧಕರಿಗೆ, ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ, ಪ್ರಾಧ್ಯಾಪಕರಿಗೂ ಮಾಹಿತಿ ತಜ್ಞರಿಗೂ ಸಹಾಯವಾಗಬಲ್ಲ ಕೈಹಿಡಿದು ನಡೆಸುವ ಜ್ಞಾನಕ್ಕೆ ಹೆಚ್ಚಿನ ಬೆಳಕನ್ನು ಕೊಡಬಲ್ಲ ಗೆಳೆಯನಾಗಿ, ಸ್ನೇಹಿತನಾಗಿ, ಹಿತೈಷಿಯಾಗಿ, ಗುರುವಾಗಿ, ಶಿಷ್ಯನಿಗೆ ದಾರಿ ತೋರಿಸುವ ರೀತಿಯ ಕೆಲಸವನ್ನು ಮಾಡುತ್ತದೆ ಎಂದು ಹೇಳಿದರೆ ಅತಿಶಯ ಆಗಲಿಕ್ಕಿಲ್ಲ.

ಎಷ್ಟೇ ತೊಡಕುಗಳಿದ್ದಾಗ್ಯೂ ಕೂಡ ರಾಹು - ಕೇತುಗಳು, ಸೂರ್ಯ - ಚಂದ್ರರಿಗೂ ಬಿಟ್ಟಿಲ್ಲ. ರಾಹು ಕೇತು ಇಬ್ಬರಿಂದಲೇ ಅಲ್ಲವೇ ? ಸೂರ್ಯಗ್ರಹಣ, ಚಂದ್ರಗ್ರಹಣ ಹಿಡಿಯುವುದು. ಅದು ಭೂತ ಕಾಲ. ಇಂದು ವಿಜ್ಞಾನ ಬೆಳೆದು ನಂಬಿಕೆಗಳು ದೂರವಾಗಿವೆ. ಆದರೆ ನಮ್ಮ ಪುಸ್ತಕಗಳಿಗೆ ಗ್ರಹಣ ಬಡಿದಿರುವುದು ಒಂದೆರಡು ಕಾರಣಗಳಿಂದ ಅಲ್ಲ. ನಾನಾ ವಿಧಗಳಿಂದ, ನಾನಾ ಕಾರಣಗಳಿಗಾಗಿ ಅವಿದ್ಯಾವಂತರು, ಬಡವರು ಇತ್ಯಾದಿ ಬರೀ ಪ್ರಶ್ನಿಸುವುದಕ್ಕೆ ಮಾತ್ರ ? ಹೋಗಲಿ ಬಿಡಿ ಇರುವ ಪುಸ್ತಕಗಳ ಪಟ್ಟಿಗಳಾದರೂ ಸರಿಯಾಗಿ ವಿತರಣೆ ಆಗುತ್ತಿವೆಯೋ ಇಲ್ಲವೋ ? ಇಲ್ಲವೆಂದರೆ ಎಲ್ಲ ಸಮಸ್ಯೆಯ ಮೂಲ ಯಾರಿಂದ ತೊಡಕುಗಳು ?

ಸಂಘ-ಸಂಸ್ಥೆಗಳು, ಪ್ರಕಾಶಕರು, ಮಾರಾಟಗಾರರು, ಎಲ್ಲರೂ ತೊಡಕಿಗೆ ಕಾರಣ. ಜೊತೆಗೆ ಲೇಖಕ ಪ್ರಕಾಶಕರ ಸಂಬಂಧಗಳು, ವ್ಯವಹಾರಗಳು ಆಗಬಹುದು. ಆದರೆ ಇವೆಲ್ಲವುಗಳ ಸಂಗಮ, ಸಹಕಾರ, ನಿರೀಕ್ಷೆಗಳಿಂದ

ಗೆದ್ದು ಒಂದು ಅಂತರ್ಜಾಲ ನಿರ್ಮಿಸಿಕೊಂಡು ಗ್ರಂಥಸೂಚಿಯನ್ನು ಪ್ರಕಟಿಸಿ ಅಗ್ಗ ದರದಲ್ಲಿ ಗ್ರಂಥಾಲಯಗಳಿಗೆ, ವಿಶ್ವವಿದ್ಯಾಲಯಗಳಿಗೆ, ಸಂಘ-ಸಂಸ್ಥೆಗಳಿಗೆ ಒದಗಿಸಿದ್ದಾದರೆ ಗ್ರಂಥಸೂಚಿಯ ಕಾರ್ಯ ಸುಲಲಿತವಾಗಿಹುದೆಂದು ನನ್ನ ಅನಿಸಿಕೆ.

ಸೂಚಿ ಕ್ಷೇತ್ರದಲ್ಲಿ ಗಮನಿಸಬೇಕಾದ ಅಂಶವೆಂದರೆ, ಗ್ರಂಥಗಳ, ದಾಖಲೆಗಳ ವಿವರಗಳನ್ನು ಮಾತ್ರ ಪಟ್ಟಿ ಮಾಡದೆ, ಅವುಗಳು ವಾಸ್ತವವಾಗಿ ದೊರೆಯುವ ಗ್ರಂಥಾಲಯ ಸಂಸ್ಥೆಗಳ ಬಗ್ಗೆಯೂ ಸೂಚಿಸುವುದು ಮುಖ್ಯವಾದುದು. ಇದು ಒಂದು ಪ್ರದೇಶ, ನಗರ, ರಾಜ್ಯ, ರಾಷ್ಟ್ರ, ಅಂತಾರಾಷ್ಟ್ರೀಯ ಎರವಲು ಸೇವೆಗೆ ಬಹಳ ಉಪಯುಕ್ತವಾಗಿ ಲಭ್ಯವಿರುವ ಸಂಪನ್ಮೂಲಗಳ ಅರ್ಥಪೂರ್ಣ ವಿತರಣೆಗೆ ಸಾಧನವಾಗುತ್ತದೆ.

ಅಧ್ಯಾಯ : ಒಂದು

# ಪ್ರವೇಶ ಮತ್ತು ಪರಿಚಯ

೧.೧ : ಪೀಠಿಕೆ
೧.೨ : ಪೂರ್ವ ಪ್ರಸ್ತಾವನೆ
೧.೩ : ಗ್ರಂಥಸೂಚಿ ಎಂದರೇನು ?
೧.೪ : ಕನ್ನಡ ಸಾಹಿತ್ಯ ಬೆಳವಣಿಗೆಗಳು
೧.೫ : ಕನ್ನಡ ಗ್ರಂಥೋದ್ಯಮ
೧.೬ : ಮೊದ ಮೊದಲು ಪುಸ್ತಕಗಳು
೧.೭ : ಮುದ್ರಣ
೧.೮ : ಸಂಗ್ರಹಣ
೧.೯ : ಅಧ್ಯಯನದ ಕಿರುಪರಿಚಯ
೧.೧೦ : ಅಧ್ಯಯನದ ಆವಶ್ಯಕತೆ
೧.೧೧ : ಅಧ್ಯಯನದ ಉದ್ದೇಶಗಳು
೧.೧೨ : ಅಧ್ಯಯನದ ವ್ಯಾಪ್ತಿ
೧.೧೩ : ಅಧ್ಯಯನದ ಮಿತಿಗಳು
೧.೧೪ : ಅಧ್ಯಯನದ ಪದ್ಧತಿಗಳು
೧.೧೫ : ಸಮಾರೋಪ

ಅಧ್ಯಾಯ : ಒಂದು

# ಪ್ರವೇಶ ಮತ್ತು ಪರಿಚಯ

## ೧.೧ : ಪೀಠಿಕೆ

ವಿಜ್ಞಾನದ ತ್ವರಿತ ಬೆಳವಣಿಗೆ ಹಾಗೂ ಕೈಗಾರಿಕೆಯಲ್ಲಿ ಕ್ರಾಂತಿ ಅತಿ ವೇಗದಿಂದ ಬೆಳೆದು ಜ್ಞಾನದ ದಿಗಂತ ಕ್ಷಣ ಕ್ಷಣಕ್ಕೂ ವಿಸ್ತಾರವಾಗುತ್ತಿದೆ. ಸಿಡಿಮದ್ದನ್ನು ನೆಲದಡಿಯಲ್ಲಿ ಸ್ಫೋಟಿಸಿದಾಗ ಅದು ಅನೇಕ ಟನ್‌ಗಳಷ್ಟು ಮಣ್ಣು-ಕಲ್ಲುಗಳನ್ನು ಮೇಲಕ್ಕೆ ಸಿಡಿಸುತ್ತದೆ. ಅಣುಬಾಂಬನ್ನು ನೆಲದಿಂದ ಹಲವು ಅಡಿಗಳ ಎತ್ತರದಲ್ಲಿ ಸ್ಫೋಟಿಸಿದಾಗ ಅದು ಗಾಳಿಯಲ್ಲಿ ಅತ್ಯಂತ ಪ್ರಬಲ ಒತ್ತಡವನ್ನುಂಟು ಮಾಡಿ ಅದರಿಂದ ಅನೇಕ ಅಂತಸ್ತುಗಳ ಕಟ್ಟಡಗಳನ್ನು ಹೇಳ ಹೆಸರಿಲ್ಲದಂತೆ ನಿರ್ನಾಮ ಮಾಡುವದಲ್ಲದೆ ಜೀವಮಾರಕವಾದ ವಿಕಿರಣ ಶಕ್ತಿಯನ್ನು ಪ್ರಸರಿಸುತ್ತದೆ. ಈ ಶಕ್ತಿ ವಿನಾಶಕಾರಿ ಹೌದು. ಇದೇ ಶಕ್ತಿಯನ್ನು ಮಾನವಕಲ್ಯಾಣಕ್ಕಾಗಿ ಉಪಯೋಗಿಸಬಹುದೆಂಬುದು ಸರ್ವವಿದಿತ. ಅಣುವನ್ನು ವಿಭಜಿಸಿದಾಗ ಅದರಿಂದ ಹೊರಡುವ ಶಕ್ತಿ ಅಪಾರ. ಹಾಗೆಯೇ ಹಲವು ಮೂಲಭೂತ ಹಾಗೂ ಅನ್ವಯಿಕ ಸಂಶೋಧನೆಗಳು ತಮ್ಮ ಕ್ಷೇತ್ರದಲ್ಲಿ ಅಲ್ಲದೆ ಎಲ್ಲಾ ಕ್ಷೇತ್ರಗಳಲ್ಲೂ ವಿಚಾರ ವಿಮರ್ಶೆಯಲ್ಲೂ ಸಹ ಉಂಟು ಮಾಡುವ ಪ್ರಬಲ ಆಂದೋಲನಗಳು. ಇದರಿಂದ ಮಥಿಸಿದ ತತ್ವಗಳು ಜನರ ಸಾಮಾಜಿಕ, ವೈಯಕ್ತಿಕ, ಆರ್ಥಿಕಾಭಿವೃದ್ಧಿಯ ವಿಚಾರಧಾರೆಗಳ ದಿಕ್ಕನ್ನೇ ಬದಲಿಸುತ್ತವೆ. ವಿಜ್ಞಾನ ಹಾಗೂ ಅದರ ಭಾಗಗಳಾದ ಅಣುಶಕ್ತಿ, ವಿದ್ಯುತ್ಕಾಂತ ತರಂಗಗಳು, ಗಣಕಯಂತ್ರ, ಜೀವವಿಜ್ಞಾನ, ಮನಶ್ಯಾಸ್ತ್ರ ಮುಂತಾದುವು. ಹಾಗೂ ವಿಚಾರ ಸ್ವಾತಂತ್ರ್ಯ ನಮ್ಮ ಜೀವನದಲ್ಲಿ ಅನಿರೀಕ್ಷಿತ ಬದಲಾವಣೆಯನ್ನು ತಂದು ಹಲವಾರು ಸಾಮಾಜಿಕ ಸಮಸ್ಯೆಗಳನ್ನು ತಂದೊಡ್ಡಿವೆ.

ಜ್ಞಾನದ ನಾನಾ ಭಾಗಗಳಲ್ಲಿ ವಿಶ್ವದಾದ್ಯಂತ ಅನೇಕ ಭಾಷೆಗಳಲ್ಲಿ ಅಸಂಖ್ಯಾತ ಲೇಖನಗಳು, ಪುಸ್ತಕಗಳು ಪ್ರಕಟವಾಗುತ್ತಿವೆ. ನಾಲ್ಕು ಲಕ್ಷಕ್ಕೂ ಮಿಕ್ಕಿ ಪುಸ್ತಕಗಳು ಒಂದು ಲಕ್ಷಕ್ಕಿಂತಲೂ ಮಿಕ್ಕಿ ನಿಯತಕಾಲಿಕೆಗಳು ವಿಜ್ಞಾನ ಹಾಗೂ ಅನ್ವಯ ವಿಜ್ಞಾನಕ್ಕೆ ಮೀಸಲಾಗಿವೆ. ಇವುಗಳಲ್ಲಿ ಸುಮಾರು ಇಪ್ಪತ್ತೊಂದು ಲಕ್ಷಕ್ಕಿಂತಲೂ ಹೆಚ್ಚು ಲೇಖನಗಳು ಪ್ರಕಟವಾಗುತ್ತಿವೆ. ಅಲ್ಲದೆ ಅಂತರ್‌ರಾಷ್ಟ್ರೀಯ ಸಂಸ್ಥೆಗಳು, ದೇಶ ವಿದೇಶಗಳ ಸರಕಾರಗಳು, ಕೈಗಾರಿಕಾ ಹಾಗೂ ವ್ಯಾಪಾರಿ ಸಂಸ್ಥೆಗಳು ಪ್ರಕಟಿಸುವ ಲೇಖನಗಳು, ವರದಿಗಳು ಹಾಗೂ ಅಸಂಖ್ಯಾತ ಸಮ್ಮೇಳನಗಳ ವರದಿಗಳೂ ಲಕ್ಷಕ್ಕಿಂತಲೂ ಮಿಕ್ಕಿರುತ್ತವೆ.

ಜ್ಞಾನದ ಎಲ್ಲಾ ಕ್ಷೇತ್ರಗಳಲ್ಲೂ ಸಂಶೋಧಕರಿಗೆ ಸಮಾಚಾರ ಸುಲಭವಾಗಿ ತಕ್ಷಣ ಸಿಗುವಂತೆ ಇರಬೇಕು. ಸಂಶೋಧಕನಿಗೆ ಅಷ್ಟೆ ಅಲ್ಲದೆ ಆಡಳಿತ ಅಧಿಕಾರಿಗಳ, ತಾಂತ್ರಿಕ ಹಾಗೂ ಉದ್ಯೋಗಗಳ ಮೇಲಾಧಿಕಾರಿಗಳ ಗಮನಕ್ಕೆ ಇತ್ತೀಚಿನ ವಿಚಾರಗಳ ಬಗ್ಗೆ ಮಾಹಿತಿ ತರುವದು ಅಗತ್ಯ. ಯಾವುದೇ ವಿಷಯದಲ್ಲಿ ಎಲ್ಲಾ ರೀತಿಯ ಬರೆದ ಸಾಮಗ್ರಿಗಳನ್ನು ಕುರಿತು ಮಾಹಿತಿ ಒದಗಿಸುವದೇ ಗ್ರಂಥಸೂಚಿಯ ಮುಖ್ಯ ಕರ್ತವ್ಯ.[೧]

ಪ್ರಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಅಭಿಪ್ರಾಯದಂತೆ : " ಒಂದು ಗ್ರಂಥದ ಸರ್ವ ಸಮಗ್ರ ಪರಿಚಯವನ್ನು ವಿವರಿಸುವದು ಸೂಚಿ. ಈ ವಿವರಗಳನ್ನೊಳಗೊಂಡುದೇ ಸೂಚಿ."[೨] ಯಂತ್ರ ಪ್ರತಿ ಒಂದು ಕ್ರಮಬದ್ಧ ಗ್ರಂಥ. ಹಸ್ತಪ್ರತಿ ಇಷ್ಟರ ಮಟ್ಟಿಗೆ ಕ್ರಮಬದ್ಧ ಗ್ರಂಥವಾಗಿರುವುದಿಲ್ಲ. ಆದುದರಿಂದ ಯಂತ್ರ ಪ್ರತಿಯ ಸೂಚಿಗಿಂತ ಹಸ್ತಪ್ರತಿಯ ಸೂಚಿ ಜಟಿಲವೆಂದೇ ಹೇಳಬೇಕು. ಹಸ್ತಪ್ರತಿಗಳಿಗೆ ಸೂಚಿ ರಚಿಸುವ ಕ್ರಿಯೆ ಭಾರತದಲ್ಲಿ ಸರ್ ವಿಲಿಯಂ ಜೋನ್ಸ್ ಅವರಿಂದ ಪ್ರಾರಂಭವಾಯ್ತು (೧೮೦೭). ಕನ್ನಡಕ್ಕೆ ಬಂದರೆ ೧೮೨೮ ರಲ್ಲಿ ಪ್ರಕಟವಾದ " ಮೆಕೆಂಝಿ ಕಲೆಕ್ಷನ್ : ಎ ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ದಿ ಮನುಸ್ಕ್ರಿಪ್ಟ್ಸ್" ಎಂಬುದು ಪ್ರಥಮ ಸೂಚಿಯಾಗಿದೆ. ಆಮೇಲೆ ಮದ್ರಾಸ್, ಮೈಸೂರು, ಧಾರವಾಡ, ಬೆಂಗಳೂರು - ಹೈದ್ರಾಬಾದ್ ವಿಶ್ವವಿದ್ಯಾಲಯಗಳು ಕರ್ನಾಟಕದ ಒಳ ಹೊರಗಿನ ವೈಯಕ್ತಿಕ ಸಂಸ್ಥೆಗಳು ಹಸ್ತಪ್ರತಿ ಸೂಚಿಗಳನ್ನು ಪ್ರಕಟಿಸಿವೆ. ಇವುಗಳನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು.

೧. ವಿವರಣಾತ್ಮಕ ಸೂಚಿಗ್ರಂಥಗಳು;

೨. ಯಾದಿರೂಪದ ಸೂಚಿಗ್ರಂಥಗಳು ಮತ್ತು

೩. ಲೇಖನರೂಪದ ಸೂಚಿಗಳು.

ಇವುಗಳಲ್ಲಿ ವರ್ಣನಾತ್ಮಕ ಸೂಚಿಗೆ ವಿಶೇಷ ಮಹತ್ವದ ಸ್ಥಾನ ಸಲ್ಲುತ್ತದೆ.

ಮುಂದುವರಿದು ಹೇಳಬೇಕೆಂದರೆ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ವಿವರಣಾತ್ಮಕ ಹಸ್ತಪ್ರತಿ ಸೂಚಿಗಳು ಪ್ರಕಟವಾಗಿದ್ದು, ಅಲ್ಲಿ ಸೇರ್ಪಡೆಯಾದ ವಿವರ (Item) ಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಆದುದರಿಂದ ಒಂದು ಸರ್ವಸಮಗ್ರ " ಸರ್ವಸಮ್ಮತ ಸೂಚಿ "[೩] ನಮೂನೆಯನ್ನು ಇಲ್ಲಿ ಸೂಚಿಸಬಹುದಾಗಿದೆ.

## ೧.೨ : ಪೂರ್ವ ಪ್ರಸ್ತಾವನೆ

ಸ್ಯಾಮುಯಲ್ ಜಾನ್ಸನ್ ಒಂದು ಸಲ ಹೇಳಿದ :

" ಜ್ಞಾನದಲ್ಲಿ ಎರಡು ಬಗೆ ಉಂಟು. ಒಂದು ವಿಷಯವನ್ನು ಸ್ವಂತವಾಗಿ ತಿಳಿದುಕೊಂಡಿರುವದು; ಇನ್ನೊಂದು ವಿಷಯಕ್ಕೆ ಸಂಬಂಧಿಸಿದ ಮಾಹಿತಿಗಳು ಎಲ್ಲಿ ದೊರೆಯುತ್ತವೆಂಬುದನ್ನು ತಿಳಿದುಕೊಂಡಿರುವದು. "

ನಿಜವಾದ ಮಾತೆಂದರೆ ಈ ಆಧುನಿಕ ಕಾಲದಲ್ಲಿ ಎರಡನೆಯದಿಲ್ಲದೆ ಮೊದಲನೆಯದು ಸಾಧ್ಯವಾಗದು. ಮಾಹಿತಿಗಳನ್ನು ದೊರಕಿಸುವ ಸಾಹಿತ್ಯ ಇಂಗ್ಲಿಷ್‌ನಂಥ ಭಾಷೆಗಳಲ್ಲಿ ಹೇರಳವಾಗಿದೆ. ಅರ್ಥಕೋಶಗಳು, ಕೈಪಿಡಿಗಳು, ವಿಶ್ವಕೋಶಗಳು, ಸೂಚನಾಗ್ರಂಥಗಳು, ಸೂಚಿಗಳು, ವಿವರಣಾತ್ಮಕ ಪಟ್ಟಿಗಳು, ಇಂಥವೆಲ್ಲ ಮಾಹಿತಿಯನ್ನು ಬೆರಳ ತುದಿಯಲ್ಲಿಟ್ಟುಕೊಳ್ಳಲು ಸಹಾಯ ಮಾಡುತ್ತವೆ. ಒಂದು ಭಾಷೆಯ ಶ್ರೀಮಂತಿಕೆ ಈ ಬಗೆಯ ಪ್ರಕಟಣೆಗಳಿಂದ ಎದ್ದು ತೋರುತ್ತದೆ. ಇಂಥ ವಿವರಣ ಪಟ್ಟಿಕೆಗಳು ಸೂಚಿಗಳು ಸಾಹಿತ್ಯಕ್ಕೆ ಕೈ ದೀವಿಗೆಯಿದ್ದಂತೆ, ಮಾರ್ಗದರ್ಶಿಯಿದ್ದಂತೆ, ದಿಕ್ಸೂಚಿಗಳಂತೆ, ಮೈಲುಗಲ್ಲುಗಳಂತೆ ಹಾದಿಕೋರರಿಗೆ ಸಂಶೋಧಕರಿಗೆ, ಸಾಹಿತ್ಯಾಭಿಮಾನಿಗಳಿಗೆ ಸಹಾಯ ಮಾಡಬಲ್ಲವು.[೪]

ಜ್ಞಾನಮಾರ್ಗಕ್ಕೆ ಇವು ಕೈಮರಗಳು. ಇವು ತಿಳಿವಳಿಕೆಯ ಕೊಳಗಳು. ಗೆಳೆಯರಂತೆ ಮಾರ್ಗದರ್ಶನ ಮಾಡಬಹುದು. ವ್ಯಷ್ಟಿರೂಪದ ಸಾಹಿತ್ಯಕ್ಕೆ ಈ ಸಮಷ್ಟಿರೂಪದ ಸಾಹಿತ್ಯವೇ ಮೂಲ ಹಾಗೂ ಪ್ರೇರಕ. ಪೂರಕವಾಗಿ (Supplementary) ಯೂ ಕೆಲಸ ನಿರ್ವಹಿಸುತ್ತದೆ.

ದುರ್ದೈವದ ಮಾತೆಂದರೆ ನಮ್ಮ ಕನ್ನಡ ಭಾಷೆಯಲ್ಲಿ ಇಂಥ ಸಾಹಿತ್ಯ ವಿಪುಲವಾಗಿಲ್ಲ. ವಿವಿಧ ವಯಸ್ಸಿನವರಿಗೆ ವಿವಿಧ ಆಸಕ್ತಿಗಳವರಿಗೆ ಬೇಕಾದ ಅರ್ಥಕೋಶ, ವಿವಿಧ ವಿಶ್ವಕೋಶಗಳು ಬಹಳ ಕಡಿಮೆ ಎಂದೇ ಹೇಳಬಹುದು. ಪುಸ್ತಕಾಸಕ್ತಿಯುಳ್ಳವರಿಗೆ ನೆರವಾಗಲು ಗ್ರಂಥಸೂಚಿಗಳು ನಮ್ಮಲ್ಲಿ ತೀರ ಈಚಿನವರೆಗೆ ಇರಲಿಲ್ಲ. ಮೈಸೂರು ವಿಶ್ವವಿದ್ಯಾಲಯವು ದೊಡ್ಡ ಪ್ರಮಾಣದ ಗ್ರಂಥಸೂಚಿಯ ನಿರ್ಮಾಣ ಕಾರ್ಯವನ್ನು ಕೈಗೊಂಡು ತಕ್ಕಷ್ಟು ಯಶಸ್ವಿಯಾಗಿದೆ. ಒಂದು ವಿಷಯದ ಮೇಲೆ ತಯಾರಿಸಿದ ಪಟ್ಟಿ, ಮಾರ್ಗದರ್ಶಿಯಾಗಿ ಸಂಬಂಧಪಟ್ಟ ವಿಷಯಕ್ಕೆ ಕೈಗನ್ನಡಿಯಾಗಿರುತ್ತದೆ.

ಸಂಬಂಧಪಟ್ಟ ಶೀರ್ಷಿಕೆ ಅಥವಾ ಸಂಗ್ರಹಿಸಿದ ವಿಷಯಕ್ಕೆ ಇದು ದಿಕ್ಸೂಚಿಯಾಗಿರುತ್ತದೆ.

ಒಬ್ಬ ಲೇಖಕನ / ಗ್ರಂಥಾಲಯದಲ್ಲಿ ವಿವರಣ ಪಟ್ಟಿಕೆ (Bibliographical details) ಗಳಾಗಿ ಓದುಗರಿಗೆ ವಿಪುಲ ಮಾಹಿತಿ ನೀಡುತ್ತದೆ.[೫]

ಗ್ರಂಥಾಲಯದ ಅರ್ಥಶಾಸ್ತ್ರಕ್ಕನುಗುಣವಾಗಿ ಪುಸ್ತಕ ಆಯ್ಕೆಗೆ ಸಹಾಯ ಮಾಡುವದಲ್ಲದೆ ಗ್ರಂಥಪಾಲಕನಿಗೂ ಅಪಾರ ವೇಳೆ, ಶ್ರಮವನ್ನು ಉಳಿತಾಯ ಮಾಡುತ್ತದೆ.

ಎರಡು ರೀತಿಯ ಸಹಾಯ ನೀಡುತ್ತದೆ– ಒಂದನೆಯದಾಗಿ ಆಯಾ ವಿಷಯದ ಮೇಲಿನ ಸಂದರ್ಭ ಸಾಮಗ್ರಿಗಳನ್ನು ಸಂಗ್ರಹಿಸುವದಕ್ಕೆ, ಎರಡನೆಯದಾಗಿ ಓದುಗರಿಗೆ ಹೊಸ ಗ್ರಂಥಸೂಚಿ ತಯಾರಿಸಲು.

ಈಗಾಗಲೇ ಇದ್ದ ವಿಷಯ ಸಂಗ್ರಹವನ್ನು ಸಂಶೋಧಕರ ಅವಗಾಹನೆಗೆ ತರುವದು ಮುಖ್ಯವಾಗಿದೆ. ತಕ್ಷಣದ ಮಾಹಿತಿಯನ್ನು ಒಳಗೊಂಡಿರುತ್ತದೆ. ವಿದ್ವಾಂಸರಿಗೆ ವಿಷಯವನ್ನು ಎಲ್ಲಿಂದ ಪ್ರಾರಂಭ ಮಾಡಬೇಕು. ಇದರಿಂದ ಅಪಾರ ಸಮಯದ ಉಳಿತಾಯವನ್ನು ಒದಗಿಸುತ್ತದೆ. ಓದುಗರಿಗೆ, ವಿದ್ವಾಂಸರಿಗೆ ಈ ವಿಷಯದ ಪರಿಜ್ಞಾನವಿಲ್ಲದೆ ಇದ್ದರೆ ಅನಾವಶ್ಯಕವಾಗಿ ಸಮಯ ಮತ್ತು ಶ್ರಮವನ್ನು ಹಾಳು ಮಾಡುತ್ತದೆ. ಹೀಗಾಗಿ ವಿದ್ವಾಂಸರು ಗ್ರಂಥಸೂಚಿಗಳ ಪರಿಚಯ ಮಾಡಿಕೊಳ್ಳಲೇಬೇಕೆಂಬುದನ್ನು ತಿಳಿಸುತ್ತದೆ.

ಇದೊಂದು ಅನುಕೂಲಕರವಾದ ಸಂದರ್ಭಸೂಚಿ. ಸಾಮಾನ್ಯ ಓದುಗರು ಕೂಡಾ ಇದರ ಲಾಭ ಪಡೆಯಬಹುದು. ಹೀಗೆ ಇದು ಒಂದು ತರಹದ ವಿಶ್ವವ್ಯಾಪಿ ಗ್ರಂಥಸೂಚಿಯಂತೆ ಕೆಲಸ ನಿರ್ವಹಿಸುತ್ತದೆ.

ಯುನೆಸ್ಕೋ ಗ್ರಂಥಾಲಯ ಕಾಂಗ್ರೆಸ್ ವರದಿ, ೧೯೫೦ ರಲ್ಲಿ ಈ ಕೆಳಗಿನಂತೆ ವರದಿ ನೀಡಿದೆ.[೬]

i) ಸ್ಥಳೀಯ, ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯವಾಗಿ ವಿದ್ವಾಂಸರಾದಿಯಾಗಿ ಜನಸಾಮಾನ್ಯರವರೆಗೂ ಅವರವರ ಆಸಕ್ತಿಯ ವಿಷಯದ ಬೆಳವಣಿಗೆಗಳನ್ನು ಪ್ರಕಾಶನಗಳ ಬೆಳವಣಿಗೆಗಳನ್ನು ಗಮನವಿಟ್ಟು ನೋಡದೆ ಗತ್ಯಂತರವಿಲ್ಲ.

ii) ಸಂಶೋಧನೆಯಲ್ಲಿ ನೈಪುಣ್ಯತೆ ಮತ್ತು ಉನ್ನತಿಕರಣಕ್ಕೆ ಮಹತ್ವ ನೀಡುವದು.

iii) ಕಲಿಯುವಿಕೆಯ ಅಂಕೆಸಂಖ್ಯೆ ಮತ್ತು ಅದರ ಸಂಸ್ಕೃತಿಗಳ ಬೆಳವಣಿಗೆ ಮತ್ತು ಆನಂದ ಪರವಶತೆ.

iv) ಹೊಸ ಬೆಳವಣಿಗೆಗಳನ್ನು ಅವಲೋಕಿಸುವದು ಮತ್ತು ಸಮಾಜದ ಒಳತಿಗಾಗಿ ಉಪಯೋಗಿಸುವದು.

ಬೆಂಗಳೂರು ವಿಶ್ವವಿದ್ಯಾನಿಲಯ 'ಸಾಹಿತ್ಯ ವಾರ್ಷಿಕ' ಎಂಬ ಹೆಸರಿನಲ್ಲಿ ವರ್ಷದ ಸಾಹಿತ್ಯ ಸಮೀಕ್ಷೆಯ ಸಂಕಲನಗಳನ್ನು ೧೯೭೧ ರಿಂದ ೧೯೮೩ ರ ವರೆಗೆ ಪ್ರಕಟಿಸಿದೆ. ಆರ್. ಎಲ್. ಅನಂತರಾಮಯ್ಯನವರು ಸಾಮಾನ್ಯ ವಾಚಕರಿಗೂ ಉಪಯೋಗವಾಗುತ್ತದೆಂಬ ಆಶಯದಿಂದ 'ಗ್ರಂಥಲೋಕ' ವೆಂಬ ನಿಯತಾಲಿಕವನ್ನು ಆರಂಭಿಸಿದ್ದರು. ವಿಶ್ವವಿದ್ಯಾಲಯಗಳ ಮೊದಲ ಎರಡು ದೊಡ್ಡ ಯೋಜನೆಗಳಿಗಿಂತ ತೀರ ಭಿನ್ನವಾದದ್ದು 'ಗ್ರಂಥಲೋಕ'. ಅದು ಪುಸ್ತಕ ಉದ್ಯಮಕ್ಕಾಗಿ ಮೀಸಲಾದ ತಿಂಗಳ ಪತ್ರಿಕೆ. ಆಯಾ ತಿಂಗಳು ಪ್ರಕಟಗೊಳ್ಳುವ ಹೊಸ ಪುಸ್ತಕಗಳನ್ನು ವಾಚಕರ ಗಮನಕ್ಕೆ ತರುವದು ಪತ್ರಿಕೆಯ ಮುಖ್ಯ ಉದ್ದೇಶ. ಅದರಲ್ಲಿ ನಾನಾ ರೀತಿಯ ಚಿಕ್ಕ, ದೊಡ್ಡ ವಿಮರ್ಶೆಗಳು, ಪರಿಚಯಗಳು ಪ್ರಕಟಗೊಳ್ಳುತ್ತವೆ. ಹೊಸ ಪುಸ್ತಕಗಳ ಪಟ್ಟಿಯೊಂದು ಪ್ರತಿ ಸಂಚಿಕೆಯಲ್ಲಿ ಇರುತ್ತಿತ್ತು. ಹೊಸ ಕನ್ನಡ ಪುಸ್ತಕಗಳ ಇಷ್ಟು ದೊಡ್ಡ ಪಟ್ಟಿ ಬೇರೆ ಇನ್ನೊಂದು ಕಡೆ ಪ್ರಕಟವಾಗುವದು ಗಮನಕ್ಕೆ ಬಂದಿಲ್ಲ. ಈ ಪಟ್ಟಿಗಳಿಂದ ಕನ್ನಡ ಪುಸ್ತಕ ಪ್ರೇಮಿಗಳಿಗೆ ಮಹತ್ತರವಾದ ಸೇವೆ ದೊರಕಿದಂತಾಗಿದೆ.

ಇನ್ನೊಂದು ಹೊಸ ಪ್ರಯತ್ನ ' ಪುಸ್ತಕ ಮಾಹಿತಿ ' ಕನ್ನಡ ವಿಶ್ವವಿದ್ಯಾಲಯ, ಹಂಪಿಯಿಂದ ೧೯೯೨ ರಿಂದ ಇಲ್ಲಿಯವರೆಗೂ ವಿಮರ್ಶೆ, ತಿಂಗಳ ಪುಸ್ತಕ, ಪ್ರಾಚೀನ ಕೃತಿಗಳ ವಿಮರ್ಶೆ, ಪುಸ್ತಕ ಬಿಡುಗಡೆ, ಪುಸ್ತಕ ಸುದ್ದಿಗಳು, ಸಾಹಿತ್ಯ ಪ್ರಶಸ್ತಿಗಳು, ಪರಿಚಯಗಳನ್ನು ಪ್ರಕಟಿಸುತ್ತ ಪುಸ್ತಕ ಲೋಕದ ಮಾಹಿತಿಗಳನ್ನು ಸಂಗ್ರಹಿಸಿ ಪ್ರಕಟಿಸುತ್ತಿರುವುದು ಆಶಾದಾಯಕವಾಗಿದೆ. ಇದು ದ್ವೈಮಾಸಿಕವಾಗಿ ಪ್ರಕಟಗೊಳ್ಳುತ್ತಿದೆ. ಪುಸ್ತಕಗಳ ಬಗ್ಗೆ ಇಲ್ಲಿ ವಿವಿಧ ಮಾಹಿತಿಗಳು ದೊರೆಯುತ್ತವೆ. ಇದರಿಂದ ಸಂಶೋಧಕರಿಗೆ, ಓದುಗರಿಗೆ, ಹೆಚ್ಚಿನ ಅನುಕೂಲಗಳು ಲಭಿಸುತ್ತವೆ. ಕನ್ನಡ ವಿಶ್ವವಿದ್ಯಾಲಯ ಹಂಪಿಯು ' ಗ್ರಂಥಲೋಕ ' ದ ನಂತರದ ಯಶಸ್ವಿ ಪ್ರಯತ್ನಗಳಲ್ಲೊಂದು.

ಈಚಿನ ವರ್ಷಗಳಲ್ಲಿ ಗ್ರಂಥಸೂಚಿಗಳ ಅಗತ್ಯ ಪ್ರತಿ ಹಂತದಲ್ಲಿಯೂ ತೀವ್ರವಾಗಿ ತೋರಿದೆ. ದೈನಂದಿನ ಬಳಕೆಯ ದೃಷ್ಟಿಯಿಂದ ವಾಚಕರಿಗೆ, ಪುಸ್ತಕ ವ್ಯಾಪಾರಿಗಳಿಗೆ ಮತ್ತು ಗ್ರಂಥಪಾಲಕರುಗಳಿಗೆ ಗ್ರಂಥಸೂಚಿಗಳು ವಿಶೇಷ ನೆರವಿಗೆ ಬರುತ್ತವೆ. ಪ್ರಪಂಚದ ಯಾವುದೋ ಮೂಲೆಯಲ್ಲಿ ಪ್ರಕಟವಾಗುವ ಇಂಗ್ಲೀಷಿನ ಒಂದು ಪುಸ್ತಕದ ಮಾಹಿತಿಯನ್ನು ನಮ್ಮೂರಿನ ಪುಸ್ತಕ ಭಂಡಾರದಲ್ಲೋ, ಪುಸ್ತಕ ಅಂಗಡಿಯಲ್ಲೋ ಸುಲಭವಾಗಿ ಕೊಂಡುಕೊಳ್ಳಬಹುದು. ಆದರೆ ನಮ್ಮೂರಿನಲ್ಲೆ ಪ್ರಕಟವಾಗುವ ಕನ್ನಡ ಪುಸ್ತಕದ ಮಾಹಿತಿಯು ನಮಗೆ ದೊರಕದೆ ಹೋಗುವ ಸಂದರ್ಭವೇ ಹೆಚ್ಚು. ಇಂಥ ಸಂದರ್ಭದಲ್ಲಿ ' ಗ್ರಂಥಲೋಕ ', ' ಪುಸ್ತಕ ಮಾಹಿತಿ ' ಗಳು ಕನ್ನಡ ಓದುಗರಿಗೆ ಮಹದುಪಕಾರ ಮಾಡುತ್ತಿದೆಯೆಂದೇ ಹೇಳಬೇಕು. ನಮ್ಮ ಗಮನಕ್ಕೆ ಬರದೆ ಹೋಗಬಹುದಾಗಿದ್ದ ಎಷ್ಟೋ ಪುಸ್ತಕಗಳ ವಿಷಯವನ್ನು ಇಂಥ ಪತ್ರಿಕೆಗಳು ನಮ್ಮ ಅರಿವನ್ನು ಹಿಗ್ಗಿಸುತ್ತವೆ.

ಭಾರತೀಯ ಜ್ಞಾನಪೀಠಕ್ಕೆ ಪುಸ್ತಕಗಳನ್ನು ಶಿಫಾರಸ್ಸು ಮಾಡುವಾಗ ಆಯಾ ಕಾಲಾವಧಿಯಲ್ಲಿ ಪ್ರಕಟಗೊಳ್ಳುವ ಬಹುಮುಖ್ಯ ಸೃಜನಶೀಲ ಕೃತಿಗಳ ವಿವರಗಳನ್ನು ತಿಳಿದಿರಬೇಕಾಗುತ್ತದೆ. ಜ್ಞಾನಪೀಠ ಆ ಮಾಹಿತಿಗಳನ್ನು ಕೇಳುತ್ತದೆ. ನ್ಯಾಶನಲ್ ಬುಕ್ ಟ್ರಸ್ಟ್ ತನ್ನ ಪುಸ್ತಕ ಮೇಳಗಳಿಗೆ ಬೇಕಾದ ಪುಸ್ತಕಗಳನ್ನು ಆಯ್ದುಕೊಳ್ಳಬೇಕಾಗುತ್ತದೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಗ್ರಂಥ ಭಂಡಾರ ಪ್ರತಿ ವರ್ಷದ ಮಹತ್ವದ ಪುಸ್ತಕಗಳನ್ನು ಕೊಳ್ಳುತ್ತದೆ. ಭಾರತೀಯ ಭಾಷೆಗಳ ತುಲಸೀ ಭಂಡಾರಕ್ಕೂ ಪುಸ್ತಕಗಳ ಆಯ್ಕೆಯಾಗಬೇಕು. ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನಕ್ಕೆ ಪುಸ್ತಕಗಳನ್ನು ಆರಿಸುವ ನಿಯಮಾವಳಿಗಳಲ್ಲಿಯೇ ತೀವ್ರ ಬದಲಾವಣೆಯಾಗಿದೆ. ಇದುವರೆಗೆ ಐದೂ ಹತ್ತೂ ಪುಸ್ತಕಗಳನ್ನು ಕೊಳ್ಳುತ್ತದೆ / ಪುಸ್ತಕಗಳ ಹೆಸರನ್ನು ಸೂಚಿಸಿ ಎಂದು ಪರಿಣತರನ್ನು ಕೇಳಲಾಗುತ್ತಿತ್ತು. ಇನ್ನುಮುಂದೆ ಸಾಕಷ್ಟು ದೀರ್ಘವಾದ ಮುಖ್ಯ ಪುಸ್ತಕಗಳ ವಾರ್ಷಿಕ ಪಟ್ಟಿಯನ್ನು ಸಿದ್ಧಪಡಿಸಿ ಅದನ್ನು ಪರಿಣತರಿಗೆ ಸಹಾಯಕ ಸಾಹಿತ್ಯವನ್ನಾಗಿ ಒದಗಿಸಿ ಅವರ ಸೂಚನೆಗಳನ್ನು ಪಡೆಯಬೇಕೆಂದು ಈಗ ತೀರ್ಮಾನಿಸಲಾಗಿದೆ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರತಿವರ್ಷ, ವರ್ಷದ ಮಹತ್ವದ ಪುಸ್ತಕಗಳನ್ನು ಹೆಸರಿಸಿ ಎಂದು ನೂರಾರು ಜನರನ್ನು ಕೇಳುತ್ತದೆ. ಈ

ಎಲ್ಲಾ ಯೋಜನೆಗಳಲ್ಲಿ ನಾನಾ ರೀತಿಯಾಗಿ ಪಾಲುದಾರರಾದವರಿಗೆ ಗ್ರಂಥಸೂಚಿಗಳು ಅನಿವಾರ್ಯವಾಗುತ್ತವೆ; ವರವಾಗುತ್ತವೆ. ಮಾತ್ರವಲ್ಲ, ತಮ್ಮ ಕರ್ತವ್ಯವನ್ನು ಯಶಸ್ವಿಯಾಗಿ ಸಮರ್ಪಕವಾಗಿ ನಿರ್ವಹಿಸಲು ಸಾಧ್ಯವಾಗುತ್ತದೆ. ಒಟ್ಟಿನಲ್ಲಿ ಪುಸ್ತಕಗಳ ವ್ಯವಹಾರ, ಆಸಕ್ತಿ ಎಲ್ಲೆಲ್ಲಿವೆಯೊ ಅಲ್ಲೆಲ್ಲ ಗ್ರಂಥಸೂಚಿಗಳ ಅಗತ್ಯವಿದೆ.

ಸಮಗ್ರ ಗ್ರಂಥಸೂಚಿ ತಯಾರಾಗಬೇಕಾದರೆ ಅನೇಕ ಅಡೆತಡೆಗಳು ಇವೆ. ಒಂದು ಈ ಬಗೆಯ ಆಕರಗ್ರಂಥಗಳು ಪರಿಪೂರ್ಣವಾಗುವದು ಸಾಧ್ಯವೂ ಇಲ್ಲ; ಎರಡನೆಯದಾಗಿ ಕನ್ನಡ ಗ್ರಂಥಸೂಚಿ ಪ್ರಕಾಶಕರ ಲೇಖಕರೆಲ್ಲರ ಸಹಕಾರದಿಂದ ಮಾತ್ರ ಯಶಸ್ವಿಯಾಗುವಂತಹದು. ಲೇಖಕರು, ಪ್ರಕಾಶಕರು ತಮ್ಮ ಪ್ರಕಟಣೆಗಳನ್ನು / ತಮ್ಮ ಪುಸ್ತಕಗಳ ಒಂದೊಂದು ಪ್ರತಿಯನ್ನು ಕಳಿಸಿ ಕೊಡುವದು ಇರಲಿ, ಕೊನೆಗೆ ತಾವು ಪ್ರಕಟಪಡಿಸುವ ಪುಸ್ತಕಗಳ ವಿವರಗಳನ್ನಾದರೂ ತಿಳಿಸಬೇಕು. ಪುಸ್ತಕ ಸುದ್ದಿಯೂ ಜಾಹೀರಾತು ಆಗುತ್ತದೆಂದು ಅವರಿಗೆ ತಿಳಿದಿರಲಾರದು ! ವರ್ಷದಲ್ಲಿ ಸುಮಾರು ಸಾವಿರದೈನೂರು ಪುಸ್ತಕಗಳು ಕನ್ನಡದಲ್ಲಿ ಪ್ರಕಟವಾಗುತ್ತವೆಯೆಂದು ಸ್ಥೂಲವಾಗಿ ಲೆಕ್ಕ ಹಾಕಲಾಗಿದೆ.

## ೧.೩ : ಗ್ರಂಥಸೂಚಿ ಎಂದರೇನು ?

" ಯಾವುದೇ ಭಾಷೆಯಲ್ಲಿ ರಚಿತವಾಗಿರುವ ಎಲ್ಲ ಬಗೆಯ ಬರವಣಿಗೆಗಳನ್ನು ಕುರಿತ ಎಲ್ಲ ಅಂಶಗಳ ಶಾಸ್ತ್ರೀಯ ನಿರೂಪಣೆಯೇ ಗ್ರಂಥಸೂಚಿ. "[೭] ಆ ನಿರೂಪಣೆ ಲೇಖನ, ಕೃತಿ, ಕಾಗದ, ಶಾಯಿ, ಅಲಂಕಾರ, ಅಚ್ಚುಮೊಳೆಯ ಮಾದರಿ, ರಟ್ಟಿನ ಬಗೆ ಈ ಯಾವುದನ್ನೇ ಕುರಿತದ್ದಾಗಿರಬಹುದು. ಕೊನೆಗೆ ಮುದ್ರಕರು ಉಪಯೋಗಿಸುವ ಸಂಕೇತಗಳು, ಕಾಗದ ತಯಾರಕರು ಹಾಕುವ ಜಲಚಿಹ್ನೆ (ವಾಟರ್ ಮಾರ್ಕ್) ಕೂಡಾ ಆಗಬಹುದು. ಒಂದು ಕೃತಿಯ ಪ್ರಕಟನೆಯ ವರ್ಷ, ಸ್ಥಳ, ಆವೃತ್ತಿ, ಪುಟಸಂಖ್ಯೆ, ಆಕಾರ ಇತ್ಯಾದಿ ಅಂಶಗಳು ಆಬಹುದು. ಸಂಶೋಧಕನಿಗೆ ಒಂದಲ್ಲ ಒಂದು ರೀತಿಯಲ್ಲಿ ಅಮೂಲ್ಯವೆನಿಸುವ ಈ ಅಂಶಗಳನ್ನು ಸಂಗ್ರಹಿಸಿ, ಶಾಸ್ತ್ರೀಯವಾಗಿ ವಿಭಾಗಿಸಿ, ವ್ಯವಸ್ಥೆಗೊಳಿಸಿ ಪ್ರಕಟಿಸುತ್ತದೆ ಗ್ರಂಥಸೂಚಿ. ಉದ್ದೇಶಕ್ಕೆ ತಕ್ಕಂತೆ ಒಂದೋ ಹಲವು ಅಂಶಗಳನ್ನು ಒಳಗೊಂಡು ಗ್ರಂಥಸೂಚಿಯ ಬೇರೆ ಬೇರೆ ಬಗೆಗಳಾಗುತ್ತವೆ. ಹಾಗೆಯೇ ಅದು ಒಂದು ವಿಷಯಕ್ಕೆ ಮಿತಗೊಂಡು ' ಏಕ ವಿಷಯಸೂಚಿ ' ಯಾಗಬಹುದು. ಒಬ್ಬ ಲೇಖಕನ ಕೃತಿಗಳಿಗೆ ಸೀಮಿತಗೊಂಡು ' ಏಕ ಕರ್ತೃಸೂಚಿ ' ಯಾಗಬಹುದು. ಕೃತಿಯ ಬಾಹ್ಯ ಅಂಶಗಳನ್ನು ಪಟ್ಟಿ ಮಾಡುವದರ ಜೊತೆಗೆ ಅದರ ಸ್ಥೂಲವಾದ ವರ್ಣನೆಗೂ ತೊಡಗಿ ' ವರ್ಣನಾತ್ಮಕ ಸೂಚಿ ' ಯಾಗಬಹುದು. ಹೀಗೆಯೇ ' ವ್ಯವಸ್ಥಾತ್ಮಕ ಸೂಚಿ ' ಯಾಗಬಹುದು. ' ಪಾಠ ನಿರ್ಣಯ ಸೂಚಿ ' ಇತ್ಯಾದಿ ಪ್ರಭೇದಗಳೂ ಇವೆ.

ಗ್ರಂಥಸೂಚಿ ಸಂಶೋಧಕರಿಗೆ ಅತ್ಯಂತ ಆವಶ್ಯಕವಾದ ಆಕರ ಗ್ರಂಥ. ಯಾವುದೇ ವಿಷಯದಲ್ಲಿ ಸಂಶೋಧನೆಗೆ ತೊಡಗುವ ಮೊದಲು ಸಂಶೋಧಕ ಮಾಡುವ ಕೆಲಸ ಆ ವರೆಗೆ ಆ ವಿಷಯವಾಗಿ ಹೊರಬಂದಿರುವ ವಿಷಯಗಳನ್ನು ಸಂಗ್ರಹಿಸುವದು. ಈ ಕೆಲಸಕ್ಕೆ ಸೂಚಿಯಿಂದ ದೊರೆಯುವಂಥ ತಕ್ಷಣ ಸಿದ್ಧ ನೆರವು ಬೇರೆ ಯಾವುದರಿಂದಲೂ ದೊರಕುವುದಿಲ್ಲ. ಅಲ್ಲದೆ ಗ್ರಂಥಸೂಚಿ ಕೊಡುವ ಚಿತ್ರ ಅತ್ಯಂತ ವಿಸ್ತಾರವೂ ವರ್ಣಮಯವೂ ಆದದ್ದು. ಬರವಣಿಗೆ ರೂಪುಗೊಂಡಂದಿನಿಂದಲೂ ಮಾನವ ತತ್ವ, ಕಲೆ, ಸಾಹಿತ್ಯ, ಶಾಸ್ತ್ರ, ವಿಜ್ಞಾನ, ತಂತ್ರ ಮೊದಲಾದ ಅಸಂಖ್ಯ ಕ್ಷೇತ್ರಗಳಲ್ಲಿ ಹೇಗೆ ಚಿಂತನೆ ನಡೆಸಿದ್ದಾನೆ. ಆ ಚಿಂತನೆಗೆ ಹೇಗೆ ಅಭಿವ್ಯಕ್ತಿ ನೀಡಿದ್ದಾನೆ. ಅವನ ಅಭಿರುಚಿಗಳು ಕಾಲದಿಂದ ಕಾಲಕ್ಕೆ ಹೇಗೆ ಬದಲಾಗಿವೆ. ಶೈಲಿ ಹೇಗೆ ರೂಪಾಂತರಗೊಳ್ಳುತ್ತಾ ಹೋಗಿದೆ, ಅವನ ಸಂಸ್ಕೃತಿಯ ಮೇಲೆ ಇದರ ಪರಿಣಾಮ ಏನಾಗಿದೆ ಎಂಬೆಲ್ಲ ವಿಚಾರಗಳನ್ನು ಅಧ್ಯಯನ ಮಾಡಲು ಗ್ರಂಥಸೂಚಿಯೆ ಆಧಾರ.

ಇಂಗ್ಲೀಷ್ ಮುಂತಾದ ಪ್ರೌಢ, ವಿಶ್ವವ್ಯಾಪಿ ಭಾಷೆಗಳಲ್ಲಿ ಬಗೆ ಬಗೆಯ ಗ್ರಂಥಸೂಚಿಗಳು ರಚಿತವಾಗಿವೆ. ಕನ್ನಡದಲ್ಲಿ ಇಂಥದೊಂದು ಗ್ರಂಥಸೂಚಿ ಅತ್ಯಗತ್ಯ. ಸಾವಿರದ ಐದುನೂರು ವರ್ಷಗಳಿಗಿಂತಲೂ ಹೆಚ್ಚು ಇತಿಹಾಸವಿರುವ ಕನ್ನಡ ಭಾಷಾ ಸಾಹಿತ್ಯಗಳ ಹರವನ್ನು ಒಮ್ಮೆ ನೆನೆದರೆ ಈ ಅಗತ್ಯ ಮಹತ್ವಗಳು ಎಷ್ಟು ಎನ್ನುವದು ಮನವರಿಕೆಯಾಗುತ್ತದೆ.

## ೧.೪ : ಕನ್ನಡ ಸಾಹಿತ್ಯ ಬೆಳವಣಿಗೆಗಳು

ಇದು ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿವರವಾಗಿ ನಿರೂಪಿಸುವದಕ್ಕೆ ತಕ್ಕ ಸ್ಥಳವಲ್ಲ. ಆದರೆ ಸಾಹಿತ್ಯವಾಹಿನಿಯ ಒಂದು ವಿಹಂಗಮ ದರ್ಶನ ಮಾಡಿದರೆ ಅದರ ವ್ಯಾಪ್ತಿ ವೈಫಲ್ಯತೆಗಳು ಕಣ್ಣೆದುರು ನಿಲ್ಲುತ್ತವೆ,

ಕ್ರಿ. ಪೂ. ೨೫೦ ರ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿಯೇ ಕನ್ನಡ ಭಾಷೆಯ ಪದ ಗೋಚರಿಸಿರುವದನ್ನು ವಿದ್ವಾಂಸರು ಗುರುತಿಸಿದ್ದಾರೆ. ಶಾಸನ ಸಾಹಿತ್ಯ ಕ್ರಿ. ಶ. ೪೫೦ ರ ಹಲ್ಮಿಡಿ ಶಾಸನದಿಂದ ಮೊದಲುಗೊಂಡು ಹತ್ತು ಹನ್ನೊಂದನೆ ಶತಮಾನಗಳ ವರೆಗೂ ಹರಡಿದೆ. ವಿಪುಲವಾದ ಈ ಸಾಮಗ್ರಿ ಇನ್ನೂ ಪ್ರಕಟವಾಗಿಯೇ ಇಲ್ಲ. ಹತ್ತನೇ ಶತಮಾನ ಕನ್ನಡ ಸಾಹಿತ್ಯಕ್ಕೆ ಉಚ್ಛ್ರಾಯ ಕಾಲ, ರಾಜಾಶ್ರಯ, ಪ್ರೋತ್ಸಾಹಗಳಿಂದ ಅನೇಕ ಕವಿಗಳು ಚಂಪೂ ಕಾವ್ಯಗಳನ್ನು ರಚಿಸಿದರು. ಪಂಪ, ರನ್ನ, ನಾಗವರ್ಮ, ಚಾವುಂಡರಾಯ, ದುರ್ಗಸಿಂಹ ಮುಹತಾದ ಹೆಸರುಗಳು ಕನ್ನಡ ಸಾಹಿತ್ಯದಲ್ಲಿ ಚಿರಸ್ಥಾಯಿಯಾದವು. ಹನ್ನೆರಡನೆಯ ಶತಮಾನದಲ್ಲಿ ಧಾರ್ಮಿಕವಾಗಿ ನಡೆದ ಕ್ರಾಂತಿ ಸಾಹಿತ್ಯದಲ್ಲಿ ಒಂದು ಆಂದೋಲನವನ್ನು ಉಂಟುಮಾಡಿತು. ಸರಳತೆ ಪ್ರಧಾನವಾಗಿ ಸಾಮಾನ್ಯ ಜನರಿಗೂ ಅರ್ಥವಾಗುವಂತೆ ಕಾವ್ಯರಚನೆ ಮಾಡಬೇಕೆಂಬ ಉದ್ದೇಶ ಮುಂದಾಯಿತು. ಬಸವೇಶ್ವರ, ಮಹಾದೇವಿಯಕ್ಕ, ಅಲ್ಲಮಪ್ರಭು ಮೊದಲಾದ ನೂರಾರು ಶರಣರು, ಅನುಭಾವಿಗಳು ಅಸಂಖ್ಯಾತವಾಗಿ ಸುಂದರವಾದ ವಚನಗಳನ್ನು

ರಚಿಸಿದರು. ಹರಿಹರನ ರಗಳೆಗಳು, ರಾಘವಾಂಕನ ಷಟ್ಪದಿ ಕಾವ್ಯಗಳು ಈ ಕಾಲದಲ್ಲಿ ರಚಿತವಾದವು. ಹಾಗೆಯೇ ಹದಿನಾರನೆ ಶತಮಾನದಲ್ಲಿ ಹರಿದಾಸವಾಙ್ಮಯ ಉಕ್ಕಿ ಹರಿಯಿತು. ಭಕ್ತಿ ಪ್ರಧಾನವಾದ ಸಾಹಿತ್ಯ ಕೀರ್ತನೆಗಳ ಮೂಲಕ ಲೆಕ್ಕವಿಲ್ಲದಷ್ಟು ಸಂಖ್ಯೆಯಲ್ಲಿ ರಚಿತವಾಯಿತು. ಪುರಂದರ ಕನಕ ಶ್ರೀಪಾದ ಮುಂತಾದ ಹರಿದಾಸರ ರಚನೆಗಳು ಪ್ರಸಿದ್ಧವಾಗಿವೆ. ಕುಮಾರವ್ಯಾಸ ಬರೆದ ' ಕರ್ನಾಟಕ ಭಾರತ ಕಥಾಮಂಜರಿ ' ಅಥವಾ ' ಗದುಗಿನ ಭಾರತ '. ಲಕ್ಷ್ಮೀಶನ ' ಜೈಮಿನಿಭಾರತ ', ಕುಮಾರ ವಾಲ್ಮೀಕಿಯ ' ತೊರವೆ ರಾಮಾಯಣ ', ಚಾಟು ವಿಠಲನಾಥನ ' ಭಾಗವತ ' –ಇವು ನಾಡಿನ ಮೂಲೆ ಮೂಲೆಗಳಲ್ಲಿ ಹರಡಿ ಜನರ ಮನಸ್ಸಿನಲ್ಲಿ ಭದ್ರವಾದ ನೆಲೆಗಳನ್ನು ಪಡೆದವು. ಹಾಗೆಯೇ ಸರ್ವಜ್ಞನ ನೀತಿ ಬೋಧಕವಾದ ತ್ರಿಪದಿಗಳು ಮನೆಮಾತಾದವು. ಈ ಸಾಂಪ್ರದಾಯಕ ಸಾಹಿತ್ಯದೊಟ್ಟಿಗೆ ಜನಪದ ಸಾಹಿತ್ಯವೂ ಅಪಾರವಾಗಿ ಸೃಷ್ಟಿಯಾಗಿದೆ. ಅದರ ಸಂಗ್ರಹಣೆ, ಪ್ರಕಟಣೆಗಳ ಪ್ರಯತ್ನ ಈಗ ಬಿರುಸಾಗಿ ನಡೆಯುತ್ತಿದೆ. ಮೈಸೂರಿನ ಅರಸರಾದ ಒಡೆಯರ ಕಾಲದಲ್ಲಿಯೂ ಕನ್ನಡ ಸಾಹಿತ್ಯಕ್ಕೆ ತುಂಬ ಪ್ರೋತ್ಸಾಹ ಸಿಕ್ಕಿತು. ಸ್ವತಃ ದೇವರಾಜರೇ ಕವಿಗಳಾಗಿದ್ದರು. ತಿರುಮಲಾರ್ಯ, ಚಿಕ್ಕುಪಧ್ಯಾಯ ಮುಂತಾದ ಕವಿಗಳು ಅನೇಕ ಪುರಾಣಗಳು, ಕಾವ್ಯಗಳು, ಶಾಸ್ತ್ರಗ್ರಂಥಗಳನ್ನು ಬರೆದರು. ಸಂಚಿಯ ಹೊನ್ನಮ್ಮನ ಹದಿಬದಿಯ ಧರ್ಮ ರಚಿತವಾದದ್ದು ಇದೇ ಕಾಲದಲ್ಲಿ. ಕೆಂಪುನಾರಾಯಣ ರಚಿಸಿದ ಮುದ್ರಾ ಮಂಜೂಷ, ಮುದ್ದಣ ಬರೆದ ಶ್ರೀ ರಾಮಾಶ್ವಮೇಧಂ ಈ ಕೃತಿಗಳು ಹೊಸಗನ್ನಡ ಗದ್ಯಕ್ಕೆ ನಾಂದಿ ಹಾಡಿದವು.

ಇಲ್ಲಿ ಹೆಸರನ್ನು ಉಲ್ಲೇಖಿಸದ ಬೇಕಾದಷ್ಟು ಜನ ಕವಿಗಳು ಲೇಖಕರು ಇದ್ದಾರೆ. ಅವರ ಕೃತಿಗಳು ಅಮೂಲ್ಯವಾದುವೇ. ವಡ್ಡಾರಾಧನೆ, ಜಗನ್ನಾಥ ವಿಜಯ, ಕಬ್ಬಿಗರ ಕಾವ, ಕುಮಾರರಾಮ ಸಾಂಗತ್ಯ, ರತ್ನಾಕರ ವರ್ಣಿಯ ಭರತೇಶ ವೈಭವ ಇತ್ಯಾದಿ. ಪಾಶ್ಚಾತ್ಯ ಸಾಹಿತ್ಯ ಪ್ರಭಾವ ಕನ್ನಡದ ಮೇಲೆ ಬಂಗಾಳಿಯ ಮೂಲಕ ಆಯಿತು. ಬಂಕಿಮಚಂದ್ರರ ಕಾದಂಬರಿಗಳನ್ನು ಅನುವಾದಿಸಿ ಪ್ರಕಟಿಸಿದ ಬಿ. ವೆಂಕಟಾಚಾರ್ಯರು, ಚಾರಿತ್ರಿಕ ಕಾದಂಬರಿಗಳನ್ನು ರಚಿಸಿ ಕನ್ನಡಿಗರ ನಾಡಪ್ರೇಮವನ್ನು ಉದ್ರೇಕಿಸಿದ ಗಳಗನಾಥರು, ಸಾಮಾಜಿಕ ಕಾದಂಬರಿಯನ್ನು ಮೊದಲು ರಚಿಸಿದ ಎಂ. ಎಸ್. ಪುಟ್ಟಣ್ಣನವರೂ, ಬೋಳಾರ ಬಾಬುರಾಯರೂ, ಕೆರೂರು ವಾಸುದೇವಾಚಾರ್ಯರು ಇವರೆಲ್ಲ ಕನ್ನಡ ನುಡಿಯ ಏಳಿಗೆಗೆ ಅಪಾರವಾಗಿ ದುಡಿದಿದ್ದಾರೆ. ಸಿಂಗರಾರ್ಯನ ಮಿತ್ರಾವಿಂದಾಗೋವಿಂದ ದೊರೆತಿರುವ ಮೊದಲನೆಯ ನಾಟಕ. ಆಮೇಲೆ ಬಸವಪ್ಪಶಾಸ್ತ್ರಿಗಳು, ಸಂಸ್ಕೃತದಿಂದ ಮಾಡಿದ ಅನುವಾದಗಳು, ಶ್ರೀಕಂಠೇಗೌಡ ಮುಂತಾದವರು ಇಂಗ್ಲೀಷಿನಿಂದ ಮಾಡಿದ ಭಾಷಾಂತರ ರೂಪಗಳು, ಬೆಳ್ಳಾವೆ ನರಹರಿಶಾಸ್ತ್ರಿ, ನಂಜನಗೂಡು ಶ್ರೀಕಂಠಶಾಸ್ತ್ರಿಗಳು ರಚಿಸಿದ ಪೌರಾಣಿಕ ರಂಗನಾಟಕಗಳು, ಕೈಲಾಸಂ ಅವರ ಸಾಮಾಜಿಕ ನಾಟಕಗಳು ಅನೇಕ ಬಗೆಯ ಪ್ರಯೋಗಗಳಿಗೆ ಕ್ಷೇತ್ರವಾಗಿ ಬೆಳೆದು ಬಂದಿವೆ. ಸಣ್ಣಕತೆ, ಪ್ರಬಂಧ, ಪ್ರವಾಸ ಸಾಹಿತ್ಯ, ಪತ್ರಸಾಹಿತ್ಯ,

ಭಾಷಣಗಳು, ಹೀಗೆ ಎಲ್ಲ ಬಗೆಯ ಪ್ರಕಾರಗಳೂ ಕನ್ನಡದಲ್ಲಿ ಮೈದಾಳಿ ಚೆನ್ನಾಗಿ ರೂಪುಗೊಂಡಿವೆ. ಅತ್ಯಂತ ತಾಂತ್ರಿಕವೆನಿಸಿದ ವಿಜ್ಞಾನ ವಿಷಯಗಳೂ ಕನ್ನಡದಲ್ಲಿ ಅಭಿವ್ಯಕ್ತಗೊಳ್ಳುವದು ಸಾಧ್ಯವಿದೆ ಎಂಬುದನ್ನು ನಿದರ್ಶಿಸುವಂತೆ ಸಾವಿರಾರು ಗ್ರಂಥಗಳು ವಿಜ್ಞಾನದ ವಿವಿಧ ಶಾಖೆಗಳನ್ನು ಕುರಿತು ರಚಿತವಾಗಿದೆ. ಅಲ್ಲದೆ, ಇಪ್ಪತ್ತನೆಯ ಶತಮಾನದಲ್ಲಿ ಜಗತ್ತಿನಲ್ಲೇ ಮೊದಲ ಬಾರಿಗೆ " ಶ್ರೀ ರಾಮಾಯಣದರ್ಶನಂ " ಕೃತಿಯಂತಹ ಮಹಾಪ್ರಮಾಣದ ಮಹಾಕಾವ್ಯ ಕನ್ನಡದಲ್ಲಿ ಪ್ರಕಟವಾಗಿದೆ.

ಕನ್ನಡ ನುಡಿಯ ಬೆಳವಣಿಗೆಯಲ್ಲಿ ಹಲವು ಹತ್ತು ರೀತಿಯಲ್ಲಿ ಸೇವೆ ಸಲ್ಲಿಸಿರುವ ಮಹನೀಯರ ಹೆಸರು ಇಲ್ಲಿ ಉಲ್ಲೇಖನಾರ್ಹ. ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕ ವಿದ್ಯಾವರ್ಧಕ ಸಂಘಗಳ ಸ್ಥಾಪನೆ ಕನ್ನಡ ಜನರಲ್ಲಿ ನುಡಿಯ ಬಗೆಗೆ ಆಸಕ್ತಿ ಮೂಡುವಂತೆ ಕೈಕೊಂಡ ಕಾರ್ಯಕ್ರಮಗಳು, ಬಿ. ಎಂ. ಶ್ರೀಕಂಠಯ್ಯನವರು, ಟಿ. ಎಸ್. ವೆಂಕಣ್ಣಯ್ಯನವರು, ಎ. ಆರ್. ಕೃಷ್ಣಶಾಸ್ತ್ರಿಗಳು, ರಾ. ಹ. ದೇಶಪಾಂಡೆಯವರು, ಉಳ್ಳಾಲ ಮಂಗೇಶರಾಯರು, ಪಂಜೆ ಮಂಗೇಶರಾಯರು, ಆಲೂರು ವೆಂಕಟರಾಯರು, ಗೋವಿಂದ ಪೈಯವರು, ಚ. ವಾಸುದೇವಯ್ಯನವರು, ತಿರುಮಲಮ್ಮನವರು, ಕರ್ನಾಟಕ ಕಾವ್ಯ ಕಲಾನಿಧಿಯ ರಾಮಾನುಜಯ್ಯಂಗಾರರು, ಎಸ್. ಜಿ. ನರಸಿಂಹಾಚಾರ್ಯರು, ಕರ್ನಾಟಕ ಕವಿಚರಿತ್ರೆಯನ್ನು ರಚಿಸಿದ ಆರ್. ನರಸಿಂಹಾಚಾರ್ಯರು ಇತ್ಯಾದಿ ಮಹನೀಯರು ಕನ್ನಡದ ಏಳಿಗೆಗೆ ದುಡಿದ ಕಾರಣಪುರುಷರಾಗಿದೆ.

## ೧.೫ : ಕನ್ನಡ ಗ್ರಂಥೋದ್ಯಮ

ಗ್ರಂಥೋದ್ಯಮವೆಂದರೆ ಗ್ರಂಥರಚನೆ, ಪ್ರಕಾಶನ, ಮುದ್ರಣ, ಸಂಗ್ರಹ ಈ ನಾಲ್ಕೂ ಅಂಶಗಳು ಮಿಳಿತವಾಗುತ್ತವೆ. ಕನ್ನಡದಲ್ಲಿ ಈ ಅಂಶಗಳು ಹೇಗೆ ಬೆಳೆದು ಬಂದಿವೆ ಎಂಬುದನ್ನು ಸ್ಥೂಲವಾಗಿಯಾದರೂ ಸಮೀಕ್ಷಿಸುವದು ಇಲ್ಲಿ ಅಗತ್ಯ.

ಕದಂಬ, ಚಾಲುಕ್ಯ, ರಾಷ್ಟ್ರಕೂಟರು, ವಿಜಯನಗರ ಅರಸರ ಆಳ್ವಿಕೆಯಾದ ಮೇಲೆ ಕರ್ನಾಟಕವನ್ನು ಹೈದ್ರಾಬಾದ್, ಮುಂಬಯಿ, ಮದ್ರಾಸ್ ಪ್ರಾಂತಗಳಲ್ಲಿ ಹಂಚಿಹೋಗಿ ಎಲ್ಲ ರೀತಿಯ ಸಾಂಸ್ಕೃತಿಕ ಸಮಗ್ರ ಐಕ್ಯ ಹಾಗೂ ವಿಕಾಸಗಳಿಗೆ ಆಘಾತವುಂಟಾಯಿತು. ಮುಂಬಯಿ ಕರ್ನಾಟಕ ಪ್ರಾಂತದ ಪರಿಸ್ಥಿತಿ ತುಂಬಾ ವಿಷಾದಕರವಾಯಿತು. ಇಂಗ್ಲೀಷ ಮತ್ತು ಮರಾಠಿಗಳ ಪ್ರಭಾವ ವಿಪರೀತವಾಗಿ ಕನ್ನಡದಲ್ಲಿ ಮಾತನಾಡುವುದೆ ಹೀನಾಯಕರವೆಂಬ ಭಾವನೆ ಮೂಡಿತ್ತು. ಕ್ರಮೇಣ ಜಾಗೃತಿ ಮೂಡಿ ೧೮೩೫ ರ ವೇಳೆಗೆ ಹುಬ್ಬಳ್ಳಿಯಲ್ಲಿ ಒಂದು ವರ್ನಾಕ್ಯುಲರ್ ಶಾಲೆ ಹುಟ್ಟಿತು. ಕರ್ನಾಟಕದ ಬೇರೆ ಬೇರೆ ಪ್ರಾಂತಗಳಲ್ಲಿ ಕನ್ನಡ ಶಾಲೆಗಳು ಹುಟ್ಟಿದುವು.

ಶಾಲೆಗಳು ಹುಟ್ಟಿದಾಗ ಮೊದಲ ಅಗತ್ಯ ಪಠ್ಯಪುಸ್ತಕಗಳದ್ದು. ಇಂಗ್ಲೀಷ ರೀಡರ್‌ಗಳ ಮಾದರಿಯನ್ನು ಅನುಸರಿಸಿ ಕನ್ನಡದಲ್ಲಿ ಪಠ್ಯಪುಸ್ತಕಗಳು, ಕೈಪಿಡಿಗಳು, ಟಿಪ್ಪಣಿಗಳು ಧಾರಾಳವಾಗಿ ರಚಿತವಾದುವು. ಈ ಕೆಲಸದಲ್ಲಿ ಸರಕಾರವು ನೇಮಿಸಿದ ಟ್ರಾನ್ಸ್‌ಲೇಟರುಗಳ ಪಾತ್ರ ತುಂಬ ಮಹತ್ವದ್ದು. ಆರೋಗ್ಯಶಾಸ್ತ್ರ, ಚರಿತ್ರೆ, ಭೂಗೋಳ, ವಿಜ್ಞಾನ ವಿಷಯಗಳಾದ ಪಠ್ಯಪುಸ್ತಕಗಳನ್ನು ಅವರು ಅನುವಾದ ಮಾಡಿದರು. ರಾವಜೀ ಬಾಳಾಜಿ ಕರಂದೀಕರ ಅವರ ಹೆಸರು ಇಲ್ಲಿ ಉಲ್ಲೇಖನಾರ್ಹ. ಅವರು ಗವರ್ನಮೆಂಟ್ ಟ್ರಾನ್ಸ್‌ಲೇಟರ್ ಹುದ್ದೆಯಲ್ಲಿದ್ದರು. ಗೌರೀಶಂಕರ ರಾಮಪ್ರಸಾದ ಮಿಸರ, ಚನವೀರ ಪಕೀರಪ್ಪ ಅನಾಡ ಮುಂತಾದ ಲೇಖಕರು ಅನೇಕ ಪಠ್ಯಪುಸ್ತಕಗಳನ್ನು ರಚಿಸಿದರು.

ಪಠ್ಯಪುಸ್ತಕಗಳ ಜೊತೆಗೆ ಆಗ ಬಂದ ಸಾಹಿತ್ಯದಲ್ಲಿ ಧಾರ್ಮಿಕ ಸಾಹಿತ್ಯ ತುಂಬಾ ಮಹತ್ವವಾದದ್ದು. ಕ್ರೈಸ್ತಧರ್ಮ ಪ್ರಚಾರದ ಉದ್ದೇಶದಿಂದ ಇಲ್ಲಿಗೆ ಬಂದು ನೆಲೆಸಿ ಭಾಷೆಯನ್ನು ಕಲಿತ ಅನೇಕ ವಿದ್ವಾಂಸರು, ಪಾದ್ರಿಗಳು ಕನ್ನಡದಲ್ಲಿ ಕ್ರಿಶ್ಚಿಯನ್ ಧಾರ್ಮಿಕ ಸಾಹಿತ್ಯವನ್ನು ರಚಿಸಿ ಪ್ರಕಟಿಸಿದರು. ಕನ್ನಡದಲ್ಲಿ ಮೊದ ಮೊದಲು ಪ್ರಕಟವಾಗಿರುವ ಗ್ರಂಥಗಳಲ್ಲಿ ಬೈಬಲ್ಲಿನ ಅನುವಾದ ಅಪೋಸಲರ ಹೇಳಿಕೆಗಳು, ನೀತಿಕತೆಗಳು ಮುಖ್ಯವಾಗಿವೆ. ಆ ವಿದ್ವಾಂಸರು ದೇಶೀಯ ಸಾಹಿತ್ಯವನ್ನು ಬೆಳಕಿಗೆ ತರಲು ಸಾಕಷ್ಟು ಪ್ರಯತ್ನ ಮಾಡಿದರು. ಅಚ್ಚುಮೊಳೆ ಬರುವದಕ್ಕೂ ಮೊದಲೇ, ಇನ್ನೂ ಕಲ್ಲಚ್ಚಿನ ಅವಸ್ಥೆಯಲ್ಲೇ ಬಸವ ಪುರಾಣ, ಶಾಸನ ಪದಗಳು, ಸಾವಿರ ಗಾದೆಗಳು ಇವೆಲ್ಲ ಸಂಕಲಿತವಾಗಿ ಸಂಪಾದಿತವಾಗಿ ಪ್ರಕಟವಾಗಿವೆ.

ಇದು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದ ಕತೆಯಾಯಿತು. ಆಗ ಮುಖ್ಯವಾಗಿ ಮಂಗಳೂರಿನ ಭಾಷೆಲ್ ಮಿಶನ್ ಪ್ರೆಸ್, ಮದ್ರಾಸಿನ (ಈಗ ಚೆನ್ನೈ ಎಂದು ಕರೆಯಲಾಗುತ್ತಿದೆ) ಸರಸ್ವತಿ ಮುದ್ರಣಾಲಯ, ಧಾರವಾಡದ ಜ್ಞಾನವರ್ಧಕ ಛಾಪಖಾನೆ, ಗದಗಿನ ಜ್ಞಾನ ಚಂದ್ರೋದಯ ಛಾಪಖಾನೆ, ಬೆಳಗಾವಿಯ ಸಮಾಚಾರ್ ಪ್ರೆಸ್ – ಈ ಅಚ್ಚುಗಳು ಕನ್ನಡ ಗ್ರಂಥೋದ್ಯಮದಲ್ಲಿ ಬಹಳ ಪ್ರಮುಖವಾದ ಪಾತ್ರ ವಹಿಸಿದ್ದವು.

## ೧.೬ : ಮೊದಮೊದಲ ಪುಸ್ತಕಗಳು

ಆಗ ತಯಾರಾದ ಪಠ್ಯಪುಸ್ತಕಗಳ ವೈವಿಧ್ಯವೂ ಗಮನಾರ್ಹ ವಾದುದು. ಅಂಗೈಯಗಲದಿಂದ ಮೊದಲಗೊಂಡು ಇಂದು ನಾವು ಕ್ರೌನ್ ಚತುಷ್ಪತ್ರ ಎಂದು ಕರೆಯುವ ಅಳತೆಯವರೆಗೆ, ನಾಲ್ಕೈದು ಪುಟಗಳಿಂದ ನೂರೈವತ್ತು ಇನ್ನೂರು ಪುಟಗಳ ವರೆಗೆ ಪುಸ್ತಕಗಳು ನಿರ್ಮಾಣವಾಗಿವೆ. ಅವುಗಳಿಗೆ ಬಳಸಿರುವ ಕಾಗದ, ಉಪಯೋಗಿಸಿರುವ ಶಾಹಿ, ಇವೂ ಕೂಡ ವಿಶಿಷ್ಟವಾಗಿವೆ. ಇಂದು ನಾವು ತಯಾರಿಸುತ್ತಿರುವ ಕೆಲವು ಬಗೆಯ ಕಾಗದಗಳು ಅವುಗಳನ್ನು ದೀರ್ಘಕಾಲ ಉಳಿದಾವೋ ಇಲ್ಲವೋ " ಶಿಶು ಮತ್ತು ಶಿಸು ಜನಪದ ಪೂರ್ವೋತ್ತರಗಳು ", " ನೂತನ ಆರೋಗ್ಯ

ಮತ್ತು ದೀರ್ಘಾಯುಷ್ಯ " ಮುಂತಾದ ದೊಡ್ಡ ಹೊತ್ತಿಗೆಗಳು, ಚಿಕ್ಕ ಪುಟ್ಟ " ಸಚಿತ್ರ ದಕ್ಷಿಣ ಕನ್ನಡ ಜಿಲ್ಲೆ ", " ಹಿಂದೂ ದೇಶದ ಸಸ್ಯಶಾಸ್ತ್ರವೂ " ಮುಂತಾದ ಪಠ್ಯಕೃತಿಗಳಲ್ಲೂ ಸುಂದರವಾದ ವರ್ಣಚಿತ್ರಗಳನ್ನೂ ಹಾಕಿದ್ದಾರೆ. ಪುಸ್ತಕ ಆಕರ್ಷಕವಾಗುವಂತೆ ಮಾಡಿದ್ದಾರೆ. ಇನ್ನೂ ಅವುಗಳಲ್ಲಿ ಕಾಣುವ ವಿಷಯ ನಿರೂಪಣಾ ವಿಧಾನ, ಸೇರಿಸಿರುವ ಅಭ್ಯಾಸಗಳು, ಜ್ಞಾನದ ಎಲ್ಲಾ ಕ್ಷೇತ್ರಗಳಲ್ಲೂ ವಿದ್ಯಾರ್ಥಿಗೆ ಪ್ರವೇಶ ದೊರಕುವಂತೆ ಹಲವು ಹತ್ತು ಕಡೆಯಿಂದ ಕಲೆಹಾಕಿರುವ ವಿಷಯಗಳು ಪಾಠಗಳ ರಚನಾ ನೈಪುಣ್ಯ –ಇವುಗಳಂತೂ ಇಂದಿನ ಪಠ್ಯಪುಸ್ತಕಗಳ ದೃಷ್ಟಿಯಿಂದ ಅಧ್ಯಯನಯೋಗ್ಯವಾಗಿವೆ. ಅವು ಅನುಕರಣಯೋಗ್ಯವೂ ಎಂದು ಪರಿಶೀಲಿಸುವುದು ಇಂದೂ ಅಗತ್ಯವಾಗಿದೆ.

ಇದುವರೆಗೆ ತಿಳಿದಿರುವಂತೆ ಕನ್ನಡದಲ್ಲಿ ಅಚ್ಚಾಗಿರುವ ಪುಸ್ತಕ ವಿಲಿಯಂ ಕೇರಿ ಅವರ A Grammar of the curnatika Language ೧೮೧೭ ರಲ್ಲಿ ಕಲಕತ್ತೆಯ ಬಳಿಯ ಸೇರಾಂಪುರ (ಶೀರಾಮಪುರ) ದಲ್ಲಿ ಅಚ್ಚಾಗಿದೆ. ಇಂಗ್ಲೀಷಿನಲ್ಲಿ ರಚಿತವಾಗಿರುವ ಈ ವ್ಯಾಕರಣದಲ್ಲಿ ಉದಾಹರಣೆಗಳನ್ನು ಕನ್ನಡದಲ್ಲಿ ಮುದ್ರಿಸಿದೆ. ೧೮೨೦ ರಲ್ಲಿ ಜಾನ್ ಮೆಕೆರಲ್ " Grammar of the Curnatika Language " ಎಂಬ ಹೆಸರಿನ ಮತ್ತೊಂದು ವ್ಯಾಕರಣ ಪ್ರಕಟಿಸಿದನು. ಅದು ಅಚ್ಚಾಗಿರುವದು ಮದ್ರಾಸಿನ ಸೇಂಟ್ ಫೋರ್ಟ್ ಜಾರ್ಜ್ ಅಚ್ಚುಕೂಟದಲ್ಲಿ, ೧೮೨೦ ರಲ್ಲಿಯೇ ಬಳ್ಳಾರಿಯಲ್ಲಿ ಜೆ ಹ್ಯಾಂಡ್ಸ್ ಎಂಬ ಕ್ರೈಸ್ತ ವಿದ್ವಾಂಸ ಬೈಬಲ್ಲನ್ನು ಕನ್ನಡ ಗದ್ಯದಲ್ಲಿ ಅನುವಾದ ಮಾಡಿ ಪ್ರಕಟಿಸಿದನು. ಕನ್ನಡದಲ್ಲಿ ಬೈಬಲ್ಲಿನ ಮೊದಲ ಅವತರಣಿಕೆ ಇದು. ಇದರಲ್ಲಿ ಉಪಯೋಗಿಸಿರುವ " ಇಂಗ್ಲೀಷ ಭಾಷೆಯನ್ನು ಸಾಧಿಸುವದಕ್ಕೆ ಸಹಾಯವು " ಒಂದು ಕೈಪಿಡಿ, ಅದರಲ್ಲೂ ತೆಲುಗು ಲಿಪಿಯೇ ಇದೆ. ಅದು ಸುಬ್ಬರಾಯರ " A selection of stories and revenue papers in the Karnataka Language with traditions and gramatical analysis " ೧೮೪೬ ರಲ್ಲಿ ಪ್ರಕಟವಾಯಿತು.

## ೧.೭ : ಮುದ್ರಣ

ಈ ಪುಸ್ತಕಗಳಲ್ಲಿ ಉಪಯೋಗಿಸಿರುವ ಅಕ್ಷರಗಳ ಮಾದರಿ, ಅಚ್ಚುಮೊಳೆಗಳ ವಿನ್ಯಾಸ ಇದೇ ಒಂದು ಪ್ರತ್ಯೇಕ ಅಧ್ಯಯನಕ್ಕೆ ವಸ್ತುವಾಗುತ್ತದೆ. ಅವುಗಳಲ್ಲಿ ಮುಖ್ಯವಾಗಿ ಮೂರು ಮಾದರಿಗಳು ಕಂಡುಬರುತ್ತವೆ. ಚೌಕಟ್ಟಿನ ಅಕ್ಷರ ವಿನ್ಯಾಸ ಬರುವಂತೆ ರೂಪಿಸಿದ ಮಾದರಿಯಲ್ಲಿ ಕೊಂಬಿನಿಳಿ, ದೀರ್ಘಗಳು ತೆಲುಗನ್ನು ಹೋಲುತ್ತವೆ. ಎರಡನೆಯದು ಉದ್ದುದ್ದವಾಗಿ ತೆಲುಗನ್ನೂ ಹೋಲುವಂತೆ ತಯಾರಿಸಿದ ಅಕ್ಷರ ಮಾದರಿ ಈಗ ೧೬ ಪಾಯಿಂಟ್ ಎಂದು ಕರೆಯುವಷ್ಟು ದಪ್ಪನಾಗಿ ಗುಂಡಗೆ ಅಕ್ಷರಗಳನ್ನು ಕೊರೆದಿರುವ ಮಾದರಿ ಮೂರನೆಯದು. ಮುಖ್ಯವಾಗಿ ಮೊದಲಿನೆರಡು ಕ್ರಮವಾಗಿ ಬಾಸೆಲ್ ಮಿಶನ್ ಪ್ರೆಸ್ ಮತ್ತು ಮದ್ರಾಸಿನ ಶ್ರೀ ಸರಸ್ವತೀ ಪ್ರೆಸ್‌ಗಳಲ್ಲಿ

ಪ್ರಕಟವಾದ ಪುಸ್ತಕಗಳಲ್ಲಿ ಕಂಡುಬರುತ್ತವೆ. ಮೂರನೆಯ ಮಾದರಿ ಬಿಜಾಪುರ, ಬಳ್ಳಾರಿ, ಬೆಳಗಾಂವಗಳಲ್ಲಿ ಅಚ್ಚಾದ ಪುಸ್ತಕಗಳಲ್ಲಿ ಕಾಣಬರುತ್ತದೆ.

ಕನ್ನಡದಲ್ಲಿ ಪ್ರಕಟವಾಗಿರುವ ಪುಸ್ತಕಗಳ ಸಂಖ್ಯೆ ಅಗಣಿತ, ವೈವಿಧ್ಯ ವಿಪುಲ. ಪುಟ್ಟ ಕಿಸೆ ಪುಸ್ತಕಗಳಿಂದ ಮೊದಲುಗೊಂಡು ಬೃಹತ್ ವಿಶ್ವಕೋಶ ನಿಘಂಟುಗಳವರೆಗೆ ಅವುಗಳ ಆಕಾರ ಮತ್ತು ಮಹತ್ವ. ಇವುಗಳನ್ನು ಬೆಳಕಿಗೆ ತರುವ ವ್ಯವಹಾರದಲ್ಲಿ ಪ್ರಕಾಶಕರು ವಹಿಸಿರುವ ಪಾತ್ರವನ್ನು ಕುರಿತು ಎರಡು ಮಾತು ಹೇಳುವುದು ಸೂಕ್ತ.

ಮುದ್ರಣ ಪ್ರಾರಂಭವಾಗುವ ಮೊದಲು ಗ್ರಂಥ ಪ್ರಸಾರ ಬಹಳ ಮಿತವಾಗಿತ್ತು. ಬಹಳ ಶ್ರೇಷ್ಠವಾದ ಕಾವ್ಯವನ್ನು ಯಾರಾದರೂ ಉದಾರಿಗಳು ಲಿಪಿಕಾರರನ್ನು ನೇಮಿಸಿಕೊಂಡು ಕೈಯಲ್ಲಿ ಪ್ರತಿ ಮಾಡಿಸಿ " ಗ್ರಂಥದಾನ " ಮಾಡುತ್ತಿದ್ದರು. ಅತ್ತಿಮಬ್ಬೆ ರನ್ನನ ಅಜಿತತೀರ್ಥಂಕರ ಪುರಾಣ ತಿಲಕವನ್ನು ಹಾಗೆ ಗ್ರಂಥದಾನ ಮಾಡಿಸಿದ ವಿಷಯ ಬರುತ್ತದೆ. ಪೊನ್ನನ ' ಶಾಂತಿ ಪುರಾಣ ' ಕ್ಕೂ ಆ ಯೋಗ ಲಭಿಸಿತು. ಆದರೆ ಎಲ್ಲ ಕೃತಿಗಳೂ ಅಷ್ಟರ ಮಟ್ಟಿಗೂ ಪ್ರಸಾರಗೊಳ್ಳಲಾರವು. ಮೊದ ಮೊದಲಿನ ಪಠ್ಯ ಪುಸ್ತಕಗಳನ್ನು ಸರಕಾರ ಪ್ರಕಟಿಸುತ್ತಿತ್ತು. ಮುಂಬಯಿ ಸರಕಾರದ ವಿದ್ಯಾಖಾತೆ ಪ್ರಕಟಿಸಿರುವ ಪಠ್ಯಪುಸ್ತಕಗಳು ಬೇಕಾದಷ್ಟಿವೆ. ಆ ಮೇಲೆ ಖಾಸಗಿ ಪ್ರಕಾಶಕರು ಕಾಣಿಸಿಕೊಂಡರು. ಕೆಲವು ಮುಖ್ಯವಾದ ಹೆಸರುಗಳು ಬೆಂಗಳೂರಿನ ಕಲಾನಿಧಿ ಬುಕ್ ಡಿಪೋ; ಟಿ. ಎನ್. ಕೃಷ್ಣಯ್ಯ ಶೆಟ್ಟಿ; ಬಳ್ಳಾರಿಯ ಶಿವಲಿಂಗ ಶೆಟ್ಟು; ಕೋನೇರಿ ಶೆಟ್ಟಿ; ಬೆಳಗಾಂವನ ಸಮಾಚಾರ್ ಪ್ರೆಸ್, ಜ್ಞಾನ ಚಂದ್ರೋದಯ ಪ್ರೆಸ್; ಮುಂಬಯಿ ಗವರ್ನ್‌ಮೆಂಟ್ ಸೆಂಟ್ರಲ್ ಬುಕ್ ಡಿಪೋ; ಮೈಸೂರಿನ ಕರ್ನಾಟಕ ಕಾವ್ಯ ಕಲಾನಿಧಿ; ಗ್ರ್ಯಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಶನ್; ಮಂಗಳೂರಿನ ಬಾಸೆಲ್ ಮಿಶನ್ ಬುಕ್ ಮತ್ತು ಟ್ರ್ಯಾಕ್ಟ ಡಿಪೋಜಿಟರಿ; ಉಡುಪಿಯ ಅಂತರಂಗ ಕಾರ್ಯಾಲಯ; ಮಧ್ವಸಿದ್ಧಾಂತ ಗ್ರಂಥಾಲಯ –ಇತ್ಯಾದಿ ಇವುಗಳಲ್ಲಿ ಹಲವು ಈಗ ಅಲ್ಲ. ಕೆಲವು ಹೆಸರು ಮಾತ್ರಕ್ಕೆ ಉಳಿದಿವೆ. ಬೆರಳೆಣಿಕೆಯಷ್ಟು ಸಂಸ್ಥೆಗಳು ಈಗಲೂ ಉದ್ಯಮವನ್ನು ಮುಂದುವರಿಸಿವೆ. ಸೌಲಭ್ಯಗಳು ಏನೇನೂ ಇಲ್ಲದಾಗ ಈ ಜನ ಎಷ್ಟೊಂದು ಕೆಲಸ ಮಾಡಿದ್ದಾರೆ. ಪುಸ್ತಕದ ಕರ್ತೃ ಮೈಸೂರಿನಲ್ಲಿದ್ದು ಪುಸ್ತಕ ಮೈಸೂರಿನಲ್ಲಿ ಅಚ್ಚಾಗಿ ಬಳ್ಳಾರಿಯಲ್ಲಿ ಪ್ರಕಟವಾಗಿರುವ ಸಂದರ್ಭ ಇದೆ !

## ೧.೮ : ಸಂಗ್ರಹಣ

ಕರ್ನಾಟಕದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಗ್ರಂಥಾಲಯಗಳಿದ್ದುದು ಪುರಾತತ್ವ ಆಧಾರಗಳಿಂದ ಗೊತ್ತಾಗಿದೆ. ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಅರಸರು ಶಿಕ್ಷಣಕ್ಕೆ ಸರ್ವ ರೀತಿಯ ಪ್ರೋತ್ಸಾಹ ಕೊಡುತ್ತಿದ್ದು ಅಧ್ಯಯನ ಕ್ಷೇತ್ರಗಳಲ್ಲಿ ಗ್ರಂಥಗಳನ್ನು ಸಂಗ್ರಹಿಸಿಡಲು ಪ್ರಯತ್ನ ಮಾಡಿದ್ದರು.

ತಾಳಗುಂದ ಪಾವಿಟ್ಟಿಗೆ, ನಾಗಾವಿ, ಬಳ್ಳಿಗಾವೆಗಳಲ್ಲಿ ಅಂತಹ ಸಂಗ್ರಹಗಳಿದ್ದವು. ಓಲೆಗರಿ ಮತ್ತಿತರ ಗ್ರಂಥಸಂಗ್ರಹಗಳು ಅಭಿವೃದ್ಧಿ ಹೊಂದಿದ್ದವು. ಭೂರ್ಜಪತ್ರ, ತಾಮ್ರಪತ್ರ, ಓಲೆಗರಿ, ಕಡತಗಳಲ್ಲಿ ಬರೆದು, ಬರೆಯಿಸಿ ಅವುಗಳನ್ನು ಧಾರ್ಮಿಕ ಸ್ಥಳಗಳಲ್ಲಿ ಸಂಗ್ರಹಿಸಿಡುತ್ತಿದ್ದರು. ಹನ್ನೆರಡನೆ ಶತಮಾನದ ವಚನ ಚಳುವಳಿಯ ಧಾರ್ಮಿಕ ಕ್ರಾಂತಿ ಗ್ರಂಥ ಸಂಗ್ರಹ ಪ್ರಯತ್ನಕ್ಕೂ ಪ್ರಚೋದನೆ ನೀಡಿತು.

ಮುದ್ರಣ ಬಂದು ಅಚ್ಚುಕೂಟಗಳಿಂದ ಧಾರಾಕಾರವಾಗಿ ಗ್ರಂಥಗಳು ಹೊರಬರತೊಡಗಿದಾಗ ಅವುಗಳ ಜಾಡು ಹಿಡಿದು ಪತ್ತೆಮಾಡಿ, ಸಂಗ್ರಹಿಸಿ, ಒಂದು ಕಡೆ ಸೇರಿಸಿಡುವ ಪ್ರಯತ್ನ ಮಾಡಬೇಕಾಯಿತು. ದುರದೃಷ್ಟವಶಾತ್ ಇದು ಯಶಸ್ವಿಯಾಗಿ ನಡೆದಿಲ್ಲದ ಪ್ರಯತ್ನವಾಗಿದೆ. ಇಂದು ಕರ್ನಾಟಕದಲ್ಲಿ ಇರುವ ಅತ್ಯಂತ ಹಳೆಯದೆನಿಸಿದ ಗ್ರಂಥಾಲಯಗಳನ್ನು ನೋಡಿದರೆ, ಅವುಗಳ ಚರಿತ್ರೆ ಕೇಳಿದರೆ ಈ ವಿಷಯ ಮನವರಿಕೆಯಾಗುತ್ತದೆ. ಇದುವರೆಗೆ ಕನ್ನಡದಲ್ಲಿ ಕೊನೆಯ ಪಕ್ಷ ೪೦,೦೦೦ ಕೃತಿಗಳು ಪ್ರಕಟವಾಗಿವೆ. ಇವುಗಳಲ್ಲಿ ಯಾವುದೇ ಪುಸ್ತಕ ಭಂಡಾರದಲ್ಲಿ ಏಳೆಂಟು ಸಾವಿರಕ್ಕಿಂತ ಹೆಚ್ಚು ಪುಸ್ತಕಗಳು ಸಂಗ್ರಹವಾಗಿಲ್ಲ ಎಂಬುದು ವಿಷಾದನೀಯ.

ಕಾರವಾರದ ಜನರಲ್ ಲೈಬ್ರರಿಗೆ ಈಗ ನೂರು ವರ್ಷ ದಾಟಿದೆ. ಇಷ್ಟು ಹಳೆಯದಾದ ಈ ಭಂಡಾರದಲ್ಲಿ ಈಗ ಕನ್ನಡ ಪುಸ್ತಕಗಳು ಮೂರು ನಾಲ್ಕು ಸಾವಿರವೂ ಇಲ್ಲ. ೧೯೪೭ ರ ವರೆಗೂ ಕನ್ನಡ ಪುಸ್ತಕಗಳನ್ನು ಕೊಳ್ಳುತ್ತಲೇ ಇರಲಿಲ್ಲವಂತೆ. ಕೇವಲ ಇಂಗ್ಲೀಷ ಮತ್ತು ಮರಾಠಿ ಗ್ರಂಥಗಳು ಸಂಗ್ರಹವಾದವು. ಆಮೇಲೆ ಕನ್ನಡ ಗ್ರಂಥ ಸಂಗ್ರಹಕ್ಕಾಗಿ ಅಲ್ಲಿ ನಡೆದಿರುವ ಪ್ರಯತ್ನವೂ ಅಷ್ಟಕ್ಕಷ್ಟೇ ಇರುವದೆಲ್ಲ ಬಹುಮಟ್ಟಿಗೆ ಆಧುನಿಕ ಕತೆ ಕಾದಂಬರಿಗಳು ಇಷ್ಟೇ ಹಳೆಯದಾದ ಕುಮಟಾದ ವಿಕ್ಟೋರಿಯಾ ಜ್ಯೂಬಿಲಿ ಗ್ರಂಥಾಲಯದ ಕತೆಯೂ ಅಷ್ಟೇ. ಇರುವ ಆರೇಳು ಸಾವಿರ ಪುಸ್ತಕಗಳಲ್ಲಿ ಒಂದಾದರೂ ಪ್ರಾಚೀನ ಕಾವ್ಯಗ್ರಂಥವಾಗಲಿ, ಶಾಸ್ತ್ರಗ್ರಂಥವಾಗಲಿ ಸಿಗುವುದಿಲ್ಲ. ಇರುವುದೆಲ್ಲ ಕಾದಂಬರಿಗಳು ಕತೆಗಳು ಈಚಿನ ಪ್ರಹಸನಗಳು " ಗೆದ್ದಲು ಹಿಡಿದು ನಿರುಪಯುಕ್ತವೆಂದು ರಾಶಿ ಹಾಕಿದ ಸಾವಿರಾರು ಪುಸ್ತಕಗಳನ್ನು ಈಚೆಗೆ ಸುಟ್ಟು ಹಾಕಿದರಂತೆ "[೮] ಲಕ್ಷ್ಮೇಶ್ವರದ ಆದಿಪಂಪಸ್ಮಾರಕ ಗ್ರಂಥಾಲಯ ಮತ್ತು ವಾಚನಾಲಯದ ಪರಿಸ್ಥಿತಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದೆ, ಹಳೆಯದಾಗಿ ಮುಟ್ಟಿದರೇ ಹರಿದು ಹೋಗುವಂತಿದ್ದ ನೂರಾರು ಪುಸ್ತಕಗಳಿದ್ದವಂತೆ. ರಾಜ್ಯದ ವರಿಷ್ಠ ಗ್ರಂಥಾಲಯದ ಕಡೆಯಿಂದ ಬಂದ ಅಧಿಕಾರಿಗಳೇ " ಈ ಅನುಪಯುಕ್ತ ಜೂಲು ಪುಸ್ತಕಗಳಿಂದ ಬೇರೆ ಪುಸ್ತಕಗಳಿಗೂ ಗೆದ್ದಲು ಬರಬಹುದೆಂದು ತಿಳಿದು ಅವುಗಳನ್ನು ನಾಶ ಮಾಡಲು ಆದೇಶ ನೀಡಿದರಂತೆ. "[೯]

ಅಲ್ಲಿಯ ಕ್ಯಾಟಲಾಗಿನಲ್ಲಿ ಸೇರಿರುವ ಗ್ರಂಥಗಳು ಬೀರುಗಳಲ್ಲಿ ಇಲ್ಲ. ಯಾವ ಅಧಿಕಾರಿಗಳು ಗ್ರಂಥ ಸಂರಕ್ಷಣೆಯಲ್ಲಿ ತೀರ ಆಸಕ್ತಿಯಿಂದ ನಿರತರಾಗಬೇಕೋ ಅವರೇ ಅವುಗಳ ವಿನಾಶದ ಆದೇಶ ನೀಡಿದಾಗ ಕನ್ನಡದಲ್ಲಿ ಉತ್ತಮ ಗ್ರಂಥ ಸಂಗ್ರಹಗಳಿನ್ನುವುದು ಆಗದ ಮಾತಾಗುತ್ತದೆ. ಇದು ವಿದ್ಯಾವಂತ ಸಮಾಜದ ಲಕ್ಷಣವಲ್ಲ. ಏಳಿಗೆಯ ಕುರುಹಲ್ಲ.

ಸಾಮಾನ್ಯವಾಗಿ ಶಾಲಾ ಕಾಲೇಜುಗಳ ಪುಸ್ತಕ ಭಂಡಾರಗಳಲ್ಲಿ ಪಠ್ಯಪುಸ್ತಕಗಳು ಸೇರಿರುವುದು ಹೆಚ್ಚು. ಸಾರ್ವಜನಿಕ ಗ್ರಂಥಾಲಯಗಳು ಕಡಿಮೆ. ಹೀಗಾಗಿ ಎಲ್ಲೂ ಗಮನಾರ್ಹ ಪ್ರಮಾಣದಲ್ಲಿ ಕನ್ನಡ ಪುಸ್ತಕಗಳೂ ಸಂಗ್ರಹಿತವಾಗಿಲ್ಲ. ಈ ದೃಷ್ಟಿಯಿಂದ ಬೆಳಗಾವಿಯ ಸಾರ್ವಜನಿಕ ವಾಚನಾಲಯ ಹೆಮ್ಮೆ ಪಡಬೇಕಾದ ಗ್ರಂಥಾಲಯ. ಅಲ್ಲಿ ಹನ್ನೆರಡು ಸಾವಿರದಷ್ಟು ಕನ್ನಡ ಪುಸ್ತಕಗಳು ಇವೆ. ಈಚೆಗೆ ಕರ್ನಾಟಕದಲ್ಲಿ ಗ್ರಂಥಾಲಯ ಪದವಿ ತರಗತಿಗಳು ವಿಶ್ವವಿದ್ಯಾಲಯ ಮಟ್ಟದಲ್ಲಿ ನಡೆಯುತ್ತಿವೆ. ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸುಶಿಕ್ಷಿತ ಗ್ರಂಥಪಾಲರುಗಳು ಹೊರಬರುತ್ತಿದ್ದಾರೆ. ಗ್ರಂಥಗಳ ಬೆಲೆಯನ್ನು ಅರಿತು ಅವನ್ನು ಶಾಸ್ತ್ರೀಯವಾಗಿ ವಿಂಗಡಿಸಿ ಸಂಗ್ರಹಿಸುವ ಪ್ರಯತ್ನ ಗಣನೀಯ ಪ್ರಮಾಣದಲ್ಲಿ ನಡೆಯುತ್ತಿದೆ.

**ಧಾರ್ಮಿಕ ಸಾಹಿತ್ಯ ಪ್ರಕಟಣೆಯ ಕಾಲ :**

೧೮೨೦ ರಲ್ಲಿ ಜೆ. ಹ್ಯಾಂಡ್ಸ್ ಬೈಬಲ್ಲನ್ನು ಪ್ರಕಟಿಸಿದಾಗಿನಿಂದ ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ ಸಾಹಿತ್ಯ ಕನ್ನಡದಲ್ಲಿ ಅಪಾರವಾಗಿ ಪ್ರಕಟವಾಗಿದೆ. ಮತತತ್ವಗಳು, ಪಾಠಗಳು, ವಿವಿಧ ವಯೋಮಿತಿಯವರಿಗೆ ಬೆಳಗಿನ ಶಾಲೆಗಳಿಗೆ ತಕ್ಕ ಪಾಠಗಳು, ಪ್ರವಚನಗಳು, ಆಚರಣೆಗಳ ವಿವೇಚನೆಗಳು, ಉಪದೇಶಗಳು, ಹಾಡುಗಳು ಪ್ರಕಟವಾಗಿವೆ. ಈ ವೈವಿಧ್ಯಮಯವಾದ ಸಾಹಿತ್ಯವಷ್ಟೆ ಒಂದು ಪ್ರತ್ಯೇಕ ಅಧ್ಯಯನಕ್ಕೆ ಸಾಮಗ್ರಿಯಾಗಬಲ್ಲುದು. ಕೃತಿಗಳ ವಿಷಯ ಮಾತ್ರವಲ್ಲ. ಅವುಗಳ ಹೊರರೂಪವು ಅಷ್ಟೇ ಸ್ವಾರಸ್ಯವಾಗಿದೆ. ವಿವಿಧ ಗಾತ್ರದಿಂದ ಹಿಡಿದು ಅಲಮಾರುಗಳಲ್ಲಿ ಭವ್ಯವಾಗಿ ಶೋಭಿಸಬಹುದಾದ ಗಾತ್ರದವರೆಗೆ ಹಲವು ಆಕಾರಗಳು, ಸುಂದರವಾದ ರಟ್ಟುಗಳು, ಚರ್ಮ, ರೆಕ್ಸೀನ್ ರಟ್ಟು, ಕಟ್ಟು, ಗಿಟ್ಟು ಅಲಂಕಾರ ಮಾಡಿರುವ ವೈಖರಿ, ಚಿತ್ರಗಳು, ಇವೂ ಅಭ್ಯಾಸಯೋಗ್ಯವೇ ಆಗಿವೆ. ಕೆಲವು ಪುಸ್ತಕಗಳಂತೂ ಅವುಗಳ ಹೊರನೋಟದಿಂದಲೇ ಆಕರ್ಷಿಸಿ ಹತ್ತಿರ ಇಟ್ಟುಕೊಳ್ಳಬೇಕೆನಿಸುತ್ತದೆ. ಇಲ್ಲಿ ಬಳಸಿರುವ ಎಷ್ಟೆಷ್ಟೋ ಪಾಯಿಂಟ್ ಅಕ್ಷರದ ಹಾಗೂ ವಿವಿಧ ವಿನ್ಯಾಸದ ಮೊಳೆಗಳು ಈಗ ಚಾಲ್ತಿಯಲ್ಲಿ ಇಲ್ಲವೇ ಇಲ್ಲ.

ಹೀಗೆಯೇ ವೀರಶೈವ ಧರ್ಮದ ಕ್ಷೇತ್ರದಲ್ಲೂ ವ್ಯಾಪಕವಾಗಿ ಕೆಲಸ ನಡೆದಿರುವುದು ಕಂಡುಬರುತ್ತದೆ. ಧಾರ್ಮಿಕ ತತ್ವಗಳು ನಿರೂಪಣೆಯಷ್ಟೇ ಪ್ರಧಾನ್ಯವನ್ನು ಆಚರಣೆಗೂ ಕೊಟ್ಟು ಕೃತಿಗಳನ್ನು ಹೇರಳವಾಗಿ ಪ್ರಕಟಿಸುವುದು ಕಂಡುಬರುತ್ತದೆ. ಲಿಂಗಧಾರಣೆ, ಪಾದೋದಕ ಸೇವನೆ, ಬಿಲ್ವಾರ್ಚನೆ, ಭಸ್ಮಧಾರಣೆಗಳ ಬಗೆಗೆ ಪ್ರತ್ಯೇಕವಾಗಿ ಕೃತಿಗಳು ರಚಿತವಾಗಿವೆ. ಶಿವಪೂಜಾ ವಿಧಿಯನ್ನು ಕುರಿತೇ ಮೂವತ್ತು ಕೃತಿಗಳಿವೆ. ಹೇರಳವಾಗಿ ಪ್ರಕಟವಾಗಿರುವ ವಚನ ಸಾಹಿತ್ಯವನ್ನು ನಾವು ಗ್ರಂಥಸೂಚಿಯ ಮೂರನೆಯ ಸಂಪುಟದಲ್ಲಿ ಸಾಹಿತ್ಯದ ಕಾವ್ಯವಿಧಾನಕ್ಕೆ ಸೇರಿಸಿದ್ದೇವೆ.

ಮೈಸೂರಿನ ಮಹಾರಾಜರಾಗಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ಈ ಕ್ಷೇತ್ರದಲ್ಲಿ ಮಾಡಿರುವ ಒಂದು ಅಮೂಲ್ಯವಾದ ಕೆಲಸವನ್ನು ಇಲ್ಲಿ ವಿಶೇಷವಾಗಿ ಉಲ್ಲೇಖಿಸಬೇಕಾಗಿದೆ. ಸಮರ್ಥರಾದ

ವಿದ್ವಾಂಸರನ್ನು ಒಳಗೊಂಡಂತೆ ' ವೇದ ವಿಮರ್ಶನ ಮಂಡಲಿ ' ಯೊಂದನ್ನು ರಚಿಸಿ ಋಗ್ವೇದವನ್ನು ಸಂಪೂರ್ಣವಾಗಿ ಅರ್ಥ, ಸಾರಾಂಶ, ಪದಪಾಠ, ಸಾಯಣ ಭಾಷ್ಯ, ಇಂಗ್ಲೀಷಿನಲ್ಲಿ ತಾತ್ಪರ್ಯ, ವ್ಯಾಕರಣ ವಿಶೇಷಾಂಶಗಳು ಇವೆಲ್ಲವುಗಳ ಸಹಿತ ಒಟ್ಟು ಮೂವತ್ತಾರು ಸಂಪುಟಗಳಲ್ಲಿ ಪ್ರಕಟಿಸಿದರು. ವೈದಿಕ ವಾಙ್ಮಯವನ್ನು ಅಭ್ಯಾಸ ಮಾಡುವವರಿಗೆ ' ಜಯಚಾಮರಾಜೇಂದ್ರ ವೇದರತ್ನಮಾಲೆ ' ಯು ಎಂಥ ಉಪಕಾರ ಮಾಡಿದೆಯೆನ್ನುವುದು ಈ ಸಂಪುಟಗಳನ್ನು ತಿರುವಿ ಹಾಕಿದರೆ ಮನದಟ್ಟಾಗದಿರದು. ಭಾರತದ ಯಾವದೇ ಭಾಷೆಯಲ್ಲಿಯೂ ಋಗ್ವೇದ ವಾಙ್ಮಯ ಈ ರೀತಿ ಪ್ರಕಟವಾಗಿಲ್ಲ. ಕನ್ನಡದ ಈ ಶ್ಲಾಘ್ಯ ಪ್ರಯತ್ನವನ್ನು ಎಷ್ಟು ಪ್ರಶಂಸಿಸಿದರೂ ಸಾಲದು. ಋಗ್ವೇದದ ಸೂಕ್ತಗಳು ಸಂಪೂರ್ಣವಾಗಿರುವದರ ಜೊತೆಗೆ ಐತರೇಯ ಬ್ರಾಹ್ಮಣ, ಐತರೇಯ ಅರಣ್ಯಕ, ನಿರುಕ್ತಗಳೂ ಈ ಸಂಪುಟಗಳಲ್ಲಿ ಅಡಕಗೊಂಡಿವೆ. ಸೂಚಿಗಳಿಗೆಂದೇ ಕೊನೆಯ ಸಂಪುಟ ಮೀಸಲಾಗಿದೆ. ಮೊದಲನೆಯ ಸಂಪುಟದಲ್ಲಿ ವೈದಿಕ ವಾಙ್ಮಯವನ್ನು ಕುರಿತು ವಿದ್ವತ್ಪೂರ್ಣವಾದ ವಿಮರ್ಶೆಯಿದೆ.

' ಜಯ ಚಾಮರಾಜೇಂದ್ರ ಗ್ರಂಥರತ್ನಮಾಲೆ ' ಯಲ್ಲಿ ಋಗ್ವೇದ ಮಾತ್ರವಲ್ಲದೆ, ಅಷ್ಟಾದಶಾಪುರಾಣಗಳೂ ಪ್ರಕಟವಾಗಿವೆ. ಪದ್ಮ, ಲಿಂಗ, ವಾಯು, ನಾರದ, ಬ್ರಹ್ಮಾಂಡ, ಬ್ರಹ್ಮವೈವರ್ತ ಮೊದಲಾದ ಪುರಾಣಗಳ ಮೂಲ ಶ್ಲೋಕಗಳನ್ನು ಕನ್ನಡ ಲಿಪಿಯಲ್ಲಿ ಕೊಟ್ಟು ಕೆಳಗೆ ಗದ್ಯದಲ್ಲಿ ಅವುಗಳ ತಾತ್ಪರ್ಯವನ್ನು ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ, ಹಾನಗಲ್ ಯಜ್ಞೇಶ್ವರಶಾಸ್ತ್ರಿ, ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿ, ಬಿ. ಗಂಗಾಧರಶಾಸ್ತ್ರಿ ಮೊದಲಾದ ಪ್ರಕಾಂಡ ಪಂಡಿತರನೇಕರು ಈ ಕೆಲಸವನ್ನು ನಿರ್ವಹಿಸಿದ್ದಾರೆ. ಶ್ರೀ ದೇವಡು ನರಸಿಂಹಶಾಸ್ತ್ರಿಗಳು ಅನುವಾದಿಸಿದ ಯೋಗವಾಸಿಷ್ಠ ಸಂಪುಟಗಳು ವಿಶಿಷ್ಟವಾದವು. ಇಪ್ಪತ್ತನೆಯ ಶತಮಾನದ ನಾಲ್ಕನೆ ದಶಕದಲ್ಲಿ ಹೆಚ್ಚಾಗಿ ಇವುಗಳ ಪ್ರಕಟಣೆಯಾಯಿತು. ಕನ್ನಡ ಮುದ್ರಣ - ಪ್ರಕಾಶನ ಕ್ಷೇತ್ರದಲ್ಲಿ ಇದು ಒಂದು ಮಹತ್ವಪೂರ್ಣವಾದ ಘಟ್ಟವೆಂದೇ ಹೇಳಬೇಕು. ಆಗ ಈ ಕೆಲಸಕ್ಕಾಗಿಯೇ ಹುಟ್ಟಿಕೊಂಡ ಎಷ್ಟೆಷ್ಟೋ ಮುದ್ರಣಾಲಯಗಳು ಇಂದಿಗೂ ಕಾರ್ಯ ನಿರ್ವಹಿಸುತ್ತಿವೆ. ಕೆಲವು ಈಗ ಇಲ್ಲ. ಒಂದೊಂದು ಪುರಾಣವು ಹದಿನೈದು ಇಪ್ಪತ್ತು ಸಂಪುಟಗಳಾಗಿ ಅಚ್ಚಾಗಿರುವುದನ್ನು ನೋಡಿದರೆ ಎಷ್ಟು ಅಗಾಧ ಪ್ರಮಾಣದಲ್ಲಿ ಮೈಸೂರಿನಲ್ಲಿ ಆಗ ಮುದ್ರಣ ಚಟುವಟಿಕೆ ನಡೆದಿದ್ದಿರಬೇಕೆಂಬುದು ವೇದವಾಗುತ್ತದೆ. ವಿದ್ವಾಂಸರ ನಿಯಮನ, ಕಾರ್ಯದ ಹಂಚಿಕೆ, ಮುದ್ರಣದ ಮೇಲುಸ್ತುವಾರಿ, ಕಾಗದದ ಒದಗರೆ, ಅಚ್ಚುಕೂಟಗಳ ವ್ಯವಸ್ಥೆ ಸಂಪುಟಗಳ ನಡುವೆ ಹಾಗೂ ಬೇರೆ ಬೇರೆ ಕಡೆ ಏಕಕಾಲದಲ್ಲಿ ನಡೆಯುತ್ತಿದ್ದ ಕೆಲಸಗಳ ನಡುವೆ ಹೊಂದಾಣಿಕೆ, ಈ ಎಲ್ಲ ದೃಷ್ಟಿಗಳಿಂದ ವಿಶೇಷವಾಗಿ ಅಧ್ಯಯನ ಮಾಡಲು ತಕ್ಕ ವಸ್ತುವಾಗಿದೆ. ' ಜಯಚಾಮರಾಜೇಂದ್ರ ಗ್ರಂಥರತ್ನಮಾಲೆ ' ಯ ಇತಿಹಾಸ.

**ಅಭಿನಂದನ ಸಾಹಿತ್ಯ ಅಥವಾ ಸಂಭಾವನಾ ಗ್ರಂಥಗಳು :**

ಅಭಿನಂದನ ಸಾಹಿತ್ಯ ಎಂಬ ವಿಶಿಷ್ಟವಾದ ಒಂದು ತೆರನಾದ ಸಂಕಲನ ಕೃತಿಗಳು ಕನ್ನಡದಲ್ಲಿ ವಿಶೇಷವಾಗಿ ಪ್ರಕಟವಾಗಿವೆ. ನಾವು ಇವುಗಳನ್ನು ' ಸಾಮಾನ್ಯ ಸಂಕಲನ ' ಗಳ ಸಾಲಿನಲ್ಲಿ ಸೇರಿಸಿದ್ದೇವೆ. ಫೆಸ್ಟ್ ಸ್ಕ್ರಿಫ್ಟ್ಸ್ (Fest - schrifts) ಎಂದು ಕರೆಯಿಸಿಕೊಳ್ಳುವ ಈ ಸಾಹಿತ್ಯ ಕನ್ನಡದಲ್ಲಿ ಈಚಿನ ಬೆಳವಣಿಗೆ. ನಮಗೆ ತಿಳಿದಿರುವಂತೆ ಬಹುಶಃ ಬಿ. ಎಂ. ಶ್ರೀ ಅವರಿಗೆ ಅರ್ಪಿಸಿದ ' ಸಂಭಾವನೆ ' ಯೇ ಇಂತಹ ಮೊದಲನೆಯ ಅಭಿನಂದನ ಗ್ರಂಥ. ಅದು ಪ್ರಕಟವಾದದ್ದು ೧೯೪೧ ರಲ್ಲಿ. ಅದಾದ ಮೇಲೆ ಇಲ್ಲಿಯವರೆಗೆ ಸುಮಾರು ೧೫೦ ಸಂಭಾವನಾ ಗ್ರಂಥ ಸಂಪುಟಗಳು ಪ್ರಕಟವಾಗಿವೆ. ಈ ಒಂದೇ ಹೆಸರಿನಡಿಯಲ್ಲಿ ಇನ್ನೂ ಎರಡು ರೂಪದ ಸಂಪುಟಗಳನ್ನು ನಾವು ಸೇರಿಸಿದ್ದೇವೆ. ಹಿಂದೆ ಇದ್ದ ಒಬ್ಬ ಕೃತಿಕಾರನ ಪ್ರಶಸ್ತಿ ರೂಪವಾಗಿ ವಿಮರ್ಶೆ ಲೇಖನಗಳನ್ನು ಹಲವರು ಬರೆದು ಸಂಕಲಿಸಿದ ' ಪ್ರಶಸ್ತಿ ಸಂಪುಟ ' ಗಳು. ಉದಾಹರಣೆ : ಕುಮಾರವ್ಯಾಸ ಪ್ರಶಸ್ತಿ, ರನ್ನಕವಿ ಪ್ರಶಸ್ತಿ, ಹರಿಹರದೇವ ಮುಂತಾದವು.

**ಪಠ್ಯಕೃತಿಗಳ ರಚನೆ :**

ಪಠ್ಯ ಕೃತಿಗಳ ರಚನೆಯಲ್ಲಿ ಕನ್ನಡದಲ್ಲಿ ತುಂಬ ಕೆಲಸ ನಡೆದಿದೆ. ಪಾಠಗಳನ್ನು ಬರೆದು ವರ್ಣರಂಜಿತವಾದ ಚಿತ್ರಗಳೊಂದಿಗೆ ವೈವಿಧ್ಯಪೂರ್ಣವಾದ ಆಕಾರಗಳಲ್ಲಿ ಪ್ರಕಟಿಸಿದುದಿರಲಿ, ಭಾಷಾಂತರ, ವಾಕ್ಯರಚನೆ, ಕಾಪಿ ತಿದ್ದುವಿಕೆ, ಅಕ್ಷರಾಭ್ಯಾಸ, ಪತ್ರಲೇಖನ ಮುಂತಾದ ಕ್ಷೇತ್ರಗಳಲ್ಲೆಲ್ಲ ಕೃಷಿ ನಡೆದಿದೆ, ಕೃತಿಗಳು ಹೊರಬಂದಿವೆ. ಧಾರವಾಡದ ಕರ್ನಾಟಕ ಗ್ರಂಥಾಲಯದಲ್ಲಿದ್ದ ಹತ್ತೋ ಹನ್ನೆರಡೋ ಲೇಖನಾಸಭಾಪಲಗಳ ವಿಷಯವಾಗಿ ಒಂದು ಮಾತು ಹೇಳಬೇಕು. ಇಂದು ನೇತ್ರ ವೈದ್ಯರ ಚಿಕಿತ್ಸಾಲಯಗಳಲ್ಲಿ ನಾವು ನೋಡುವಂತಹ ಚಾರ್ಟುಗಳು ಇವು. ದಪ್ಪನೆಯ ಅಕ್ಷರಗಳಿಂದ ತೊಡಗಿ ಯಾವುದೋ ಒಂದು ವಾಕ್ಯವನ್ನು ಸಾಲುಸಾಲಾಗಿ ಬರೆದಿದೆ. ಕೊನೆಕೊನೆಗೆ ಈಗಿನ ೨೩ ಪಾಯಿಂಟ್ ಅಥವಾ ೧೬ ಪಾಯಿಂಟ್ ಗಾತ್ರದ ಅಕ್ಷರಗಳವರೆಗೆ ಮುದ್ದಾದ ದುಂಡನೆಯ ಅಕ್ಷರದಲ್ಲಿ ಬರೆದು ಇಡೀ ಚಾರ್ಟನ್ನು ಕಲ್ಲಚ್ಚು ಮಾಡಿದೆ. ಇಂಥ ಪಟಗಳು ಗ್ರಂಥಗಳೆಂದು ಪರಿಗಣಿಸಲು ಅರ್ಹವಲ್ಲವಾದರೂ, ಭಾಷಾಭ್ಯಾಸಂಗದ ದೃಷ್ಟಿಯಿಂದ ಪ್ರಾಚೀನ ಕಾಲದಲ್ಲಿ ನಡೆದ ಪ್ರಯತ್ನ ಉಲ್ಲೇಖಾರ್ಹವೆಂದು ಭಾವಿಸಿ ಇಲ್ಲಿ ಅವುಗಳನ್ನು ಸೇರಿಸಿದೆ.

ನಿಘಂಟುಗಳ ವಿಭಾಗವೂ ಇಲ್ಲೇ ಬರುತ್ತದೆ. ಇಲ್ಲಿಯೂ ನಾವು ವೈವಿಧ್ಯವನ್ನು ನೋಡಬಹುದು. ಮುದ್ರಣದ ದೃಷ್ಟಿಯಿಂದ ಉಲ್ಲೇಖಾರ್ಹವಾದ ವಿಲಿಯಂ ರೀವ್ ಅವರ ಇಂಗ್ಲೀಷ - ಕನ್ನಡ ಕೋಶದ ನಾಲ್ಕನೆ ಆವೃತ್ತಿ ೧೮೪೪ ರಲ್ಲಿ ಪ್ರಕಟವಾಯಿತು. ಗ್ಯಾರೆಟ್ ಅವರು ಸಂಪಾದಿಸಿ ಪರಿಷ್ಕರಿಸಿದ ೨೩,೦೦೦ ಶಬ್ದಗಳನ್ನೊಳಗೊಂಡ ಈ ನಿಘಂಟು ಇಡೀ ಪುಟದಲ್ಲಿ ಒಂದೇ ಕಲಮಿನಲ್ಲಿ ಅಚ್ಚಾಗಿದೆ. ಕನ್ನಡ ಶಬ್ದಗಳು ಕಲ್ಲಚ್ಚಿನಲ್ಲಿ ಒಂದೇ ಕಲಮಿನಲ್ಲಿ

ಅಚ್ಚಾಗಿದೆ. ಕನ್ನಡ ಶಬ್ದಗಳು ಕಲ್ಲಚ್ಚಿನಲ್ಲಿ ಮುದ್ರಣವಾಗಿವೆ. ಷಡ್ಭಾಷಾ ಪಂಚಭಾಷಾ 'ಶಬ್ದಸಂಪತ್ತು' (Vocululary) ಗಳು ಅಂದರೆ ಸಮಾನಾರ್ಥಕ ಕೋಶಗಳು ಪ್ರಕಟವಾಗಿವೆ. ಸಂಖ್ಯಾ ಕೋಶಗಳು. ಅಮರಕೋಶದ್ದೇ ಮೂವತ್ತೊಂಬತ್ತು ಆವೃತ್ತಿಗಳು ಹೊರಬಂದಿವೆ. ಚತುರಾಸ ನಿಘಂಟು. ಕರ್ನಾಟಕ ಕಲ್ಪದ್ರುಮಂ. ಕಬ್ಬಿಗರ ಕೈಪಿಡಿ. ಕರ್ನಾಟಕ ನಿಘಂಟು –ಹೀಗೆ ಪದ್ಯರೂಪದಲ್ಲಿ ರಚಿತವಾದ ನಿಘಂಟುಗಳೂ ಹಲವಾರಿವೆ.

**ವ್ಯಾಕರಣಗಳ ರಚನೆಯ ಕಾಲ :**

ವ್ಯಾಕರಣಗಳ ರಚನೆಯಲ್ಲಿ ಕಂಡುಬಂದಿರುವ ವೈವಿಧ್ಯ ಉಲ್ಲೇಖಾರ್ಹ. ಕನ್ನಡದ ಕ್ಲಾಸಿಕಲ್ ವ್ಯಾಕರಣಗಳಾದ ಶಬ್ದಮಣಿದರ್ಪಣ. ಭಾಷಾಭೂಷಣ. ಶಬ್ದಾನುಶಾಸನಗಳ ಹಲವು ಆವೃತ್ತಿಗಳು ಬೇರೆ ಬೇರೆ ಟೀಕೆ ಟಿಪ್ಪಣಿ ವ್ಯಾಖ್ಯಾನ ವಿವರಣೆಗಳೊಂದಿಗೆ ಪ್ರಕಟವಾಗಿರುವದರ ಜೊತೆಗೆ ಪ್ರಾಥಮಿಕ ತರಗತಿಗಳಿಂದ ಉನ್ನತ ತರಗತಿಗಳ ವರೆಗೆ ಬೇರೆ ಬೇರೆ ಹಂತದ ವ್ಯಾಕರಣ ಪುಸ್ತಕಗಳು ನೂರಾರು ರಚಿತವಾಗಿವೆ.

ಕನ್ನಡದಲ್ಲಿ ದೊರೆತಿರುವ ಮೊದಲನೆಯ ಮುದ್ರಿತ ಗ್ರಂಥವೇ ವ್ಯಾಕರಣ. ವಿಲಿಯಂ ಕ್ಯಾರಿಯ 'ಎ ಗ್ರಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್ವೇಜ್' (೧೮೨೭). ಸೂತ್ರಗಳು ಇಂಗ್ಲೀಷಿನಲ್ಲಿ. ಉದಾಹರಣೆಗಳು ಕನ್ನಡದಲ್ಲಿ. ಇದು ಆಗಿನ ವ್ಯಾಕರಣಗಳಲ್ಲಿ ಅನುಸರಿಸಿದ್ದ ಕ್ರಮ. ಕಿಟ್ಟೆಲ್ ಇಂಗ್ಲೀಷಿನಲ್ಲಿ ಬರೆದ ಕನ್ನಡ ವ್ಯಾಕರಣ. ಮೆಕೆರಲನ ವ್ಯಾಕರಣ. ಹೆರಾಲ್ಡ್ ಸ್ಪೆನ್ಸರ್. ಥಾಮಸ್ ಹಾಡ್ಸನ್ ಇವರ ಕೃತಿಗಳು ಧೊಂಡೋ ನರಸಿಂಹ ಮುಳಬಾಗಲ ಅವರ 'ಕನ್ನಡ ಕಯ್ಪಿಡಿ'. 'ನುಡಿಗಟ್ಟು'. ನರೇಗಲ್ಲ ಅವರ 'ವಾಣೀಮುಕರ'. ಪುಟ್ಟಪರ್ತಿ ಶೇಷಾಚಾರ್ಯರ 'ವ್ಯಾಕರಣ ಸಂಗ್ರಹವೆಂಬ ಹೊಸಗನ್ನಡ ವ್ಯಾಕರಣವು' (ಇದರ ಮೂರನೆಯ ಆವೃತ್ತಿ ೧೯೯೭ ರಲ್ಲಿ ಬಂದಿತು. ಆಗ ೩೦,೦೦೦ ಪ್ರತಿ ಅಚ್ಚಿಸಿದ್ದಾರೆ.) ಮ. ಪ್ರ. ಪೂಜಾರರ 'ಕನ್ನಡ ನುಡಿಗನ್ನಡಿ' ಸಜೀವ ರಾಮಕೃಷ್ಣಯ್ಯನವರ 'ಕನ್ನಡ ವಚನ ಕೌಮುದಿ' ತಿರು ಶ್ರೀನಿವಾಸಚಾರ್ಯರ 'ವ್ಯಾಕರಣ ಸಾರ' –ಇವೆಲ್ಲ ಬಹಳ ಜನಪ್ರಿಯವಾಗಿದ್ದ ವ್ಯಾಕರಣ ಪುಸ್ತಕಗಳು. ಕ್ರಿಶ್ಚಿಯನ್ ಸಂಸ್ಥೆಗಳ ಮೂಲಕ ಪ್ರಕಟವಾದ ಬಹುಪಾಲು ವ್ಯಾಕರಣಗಳು ಸಂಭಾಷಣಾ ರೂಪದವು ಅಥವಾ ಪ್ರಶ್ನೋತ್ತರ ರೂಪದವು. ಅಂಗೈಯಗಲದಲ್ಲಿ ಅಚ್ಚಾದ 'ಪದ್ಯಕಾವ್ಯ ವ್ಯಾಕರಣ' ಮುನಶಿ ಶ್ರೀನಿವಾಸಯ್ಯ ಬರೆದದ್ದು. ಕಂದಪದ್ಯ ರೂಪದಲ್ಲಿದೆ. 'A Catachism of Canarese Grammar' ಅಥವಾ 'ಕನ್ನಡ ಬಾಲವ್ಯಾಕರಣ (ಪ್ರಶ್ನೋತ್ತರ ಸಂವಾದ)' ಎಂಬ ವ್ಯಾಕರಣ ಮಂಗಳೂರಿನ ಬಾಸೆಲ್ ಮಿಶನ್ ಬುಕ್ ಮತ್ತು ಟ್ರಾಕ್ಟ್ ಡಿಪಾಜಿಟರಿಯಿಂದ ಪ್ರಕಟವಾಯಿತು. ೧೮೬೭ ರಲ್ಲಿ ಐದನೆಯ ಆವೃತ್ತಿಯಾಗಿದ್ದ ಇದೇ ಪುಸ್ತಕವೇ ೧೯೪೨ ರಲ್ಲಿ ಇಪ್ಪತ್ನಾಲ್ಕನೆಯ ಆವೃತ್ತಿಯಾಗಿ ಸುಲಭವಾಗಿ ತಿಳಿದುಕೊಳ್ಳಬಹುದು. ಕೇವಲ ೬೦ ಪುಟಗಳ

ಎರಡಾಣೆ ಬೆಲೆಯ ಈ ಕಿರುಕುಸ್ತಕವು ೧೬೦ ಪ್ರಶ್ನೆ ಉತ್ತರಗಳ ರೂಪದಲ್ಲಿ ಕನ್ನಡ ವ್ಯಾಕರಣದ ಮೂಲತತ್ವಗಳನ್ನು ನಿರೂಪಿಸುತ್ತದೆ. ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ ಬರೆದ 'ಹೊಸಗನ್ನಡ ನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವು' ಎಂಬ ಕೃತಿಗಳ ವ್ಯಾಕರಣಗಳ ಸಾಲಿನಲ್ಲಿ ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ. ವ್ಯಾಕರಣಕ್ಕೂ ಭಾಷಾಶಾಸ್ತ್ರಕ್ಕೂ ಇರುವ ನಂಟನ್ನು ಗುರುತಿಸಿ ಭಾಷಾಶಾಸ್ತ್ರದ ಕೆಲವೊಂದು ತತ್ವಗಳ ದೃಷ್ಟಿಯಿಂದ ನೂತನ ರೀತಿಯಲ್ಲಿ ನಿರೂಪಿಸಿರುವ ವ್ಯಾಕರಣ ಇದು. ಇದರ ರಚನೆಗೆ ಒದಗಿದ ಪ್ರಚೋದನೆ, ಪ್ರೋತ್ಸಾಹ ಮುಂತಾದವುಗಳನ್ನು ವಿವರಿಸುವ ಒಂದು ಮುನ್ನುಡಿಯನ್ನು ಲೇಖಕನು ಬರೆದಿದ್ದಾನೆ. ಬಹಳ ಸ್ವಾರಸ್ಯವಾದ ಅಂಶಗಳು ಅದರಲ್ಲಿವೆ.

**ಸ್ಮಾರಕ ಸಂಪುಟಗಳು :**

ಒಂದು ಸಂಸ್ಥೆಯ ಬೆಳ್ಳಿಯ ಹಬ್ಬ ಅಥವಾ ಒಂದು ಸಮ್ಮೇಳನ ಹೀಗೆ ಯಾವುದೋ ಒಂದು ಮಹತ್ವಪೂರ್ಣ ಘಟನೆಯ ನೆನಪಿಗಾಗಿ ವಿವಿಧ ಲೇಖನಗಳನ್ನು ಸಂಕಲಿಸಿ ಪ್ರಕಟಿಸಿದ 'ಸ್ಮಾರಕ ಸಂಪುಟ'ಗಳು ಉದಾಹರಣೆ : ಸರ್ವಧರ್ಮ ಸಮ್ಮೇಳನ ರಜತ ಮಹೋತ್ಸವ ಸಂಪುಟ, 'ಪಂಚ ಕಜ್ಜಾಯ' ಇಂಥವು. ಮೂರನೆಯ ಬಗ್ಗೆ ಒಬ್ಬ ಕವಿ ಅಥವಾ ಲೇಖಕನ ಜೀವನದಲ್ಲಿ ಮುಖ್ಯವಾದೊಂದು ಸಂದರ್ಭ ಬಂದಾಗ ಅದರ ಅಭಿನಂದನಾರ್ಥವಾಗಿ ತಯಾರಿಸಿ ಅರ್ಪಿಸಿದ 'ಸಂಭಾವನಾ ಗ್ರಂಥ'ಗಳು ಅಭಿವಂದನೆ, ಬಾಗಿನ, ಕಾರಂತ ಅರವತ್ತು, ಉಪಾಯನ ಕವಿಶೈಲ, ಗಂಗೋತ್ರಿ ಮೊದಲಾದವು. ಇಲ್ಲೂ 'ಒಬ್ಬರೇ ಲೇಖಕರ ಕೃತಿಗಳನ್ನು ಕುರಿತು ಲೇಖನಗಳನ್ನುಳ್ಳವು. ವಿವಿಧ ಲೇಖನಗಳುಳ್ಳವು ಒಂದು ಎರಡು ಬಗೆ. ಈ ಬಗೆಯ ಗೌರವಸೂಚಕ ಗ್ರಂಥಸಂಪುಟಗಳೇ ಹೆಚ್ಚು. ಸಾಮಾನ್ಯವಾಗಿ ವಿದ್ವಾಂಸರು ಹಲವು ವಿಚಾರಗಳನ್ನು ಕುರಿತು ಲೇಖನಗಳನ್ನು ಬರೆದಿರುವುದರಿಂದ ಇವುಗಳನ್ನು ವಿಷಯಾನುಗುಣವಾಗಿ ವಿಂಗಡಿಸಿ ಗುಂಪು ಮಾಡಲು ಸಾಧ್ಯವಿಲ್ಲವಾಗುತ್ತದೆ. ಆದ್ದರಿಂದ ವರ್ಗೀಕರಣ ಪದ್ಧತಿಯ ಶಾಸ್ತ್ರೀಯತೆಗೆ ಒಂದೆಡೆ ಸೇರಿಸಿದರೆ 'ಅಭಿನಂದನ - ಸ್ಮಾರಕ - ಪ್ರಶಸ್ತಿ ಸಂಪುಟ'ಗಳು ಎಂದು ಕರೆದಿದ್ದೇವೆ.

ಸಾಮಾನ್ಯ ಸಂಕಲನಗಳ ಗುಂಪಿಗೆ 'ಪಠ್ಯಸಂಕಲನಗಳು' ಎಂಬ ಉಪವಿಭಾಗವನ್ನು ಸೇರಿಸಬೇಕಾಗಿತ್ತು. ಮೊದಲನೆಯ ತರಗತಿಯಿಂದ ಹಿಡಿದು ಪದವೀ ತರಗತಿಯ ವರೆಗೆ ಭಾಷಾ ಪಠ್ಯಪುಸ್ತಕಗಳು ಹೇರಳವಾಗಿ ರಚಿತವಾಗಿವೆ. ಅವುಗಳ ಹಲವು ಆವೃತ್ತಿಗಳು ಹೊರಬಂದಿವೆ. ಒಂದೊಂದಕ್ಕೂ ಸಹಾಯಕ ಪುಸ್ತಕಗಳು ಬಂದಿವೆ. ಕಲ್ಲಚ್ಚಿನ ಕಾಲದಿಂದಲೇ ಇಂಥ ಭಾಷಾ ಪಠ್ಯಸಂಕಲನಗಳು ಕಾಣುತ್ತವೆ. ಮುಂಬಯಿ ಕರ್ನಾಟಕ, ಮದ್ರಾಸ್, ಕರ್ನಾಟಕ, ಹೈದ್ರಾಬಾದ್ ಕರ್ನಾಟಕ ಎಂದು ಹರಿದುಹೋಗಿದ್ದ ಕಾಲದಲ್ಲೂ ಆ ಒಂದೊಂದು ಕಡೆಯೂ ಬೇರೆ ಬೇರೆ ತರಗತಿಗಳಿಗೆ ಪದ್ಯಗದ್ಯ ಪಠ್ಯಸಂಕಲನಗಳು ರಚಿತವಾಗಿ ಪ್ರಕಟವಾಗಿದ್ದವು. ಇಂತಹ ಪಟ್ಟಿಕೆಗಳನ್ನು ಇಲ್ಲಿಯೇ

ಅಳವಡಿಸಬೇಕಾಗಿತ್ತು. ಮೊದಲ ಯೋಜನೆಯ ಪ್ರಕಾರ. ಆದರೆ ಈಗಾಗಲೇ ಈ ಸಂಪುಟದ ಗಾತ್ರ ತುಂಬ ಹೆಚ್ಚಾಯಿತಾದುದರಿಂದ ಅವನ್ನು ಇಲ್ಲಿ ಕೈ ಬಿಡಲಾಗಿದೆ. ಮುಂದೆ ಎಂಟನೆಯದಾದ ಮಾನವಿಕ ಶಾಸ್ತ್ರಗಳನ್ನು ಕುರಿತು ಸಂಪುಟದಲ್ಲಿ ಶಿಕ್ಷಣ ಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಗಳ ಜೊತೆಗೆ ಈ ಪಠ್ಯಸಂಕಲನಗಳನ್ನು ಸೇರಿಸುವದೆಂದು ನಿರ್ಧರಿಸಲಾಗಿದೆ.

## ೧.೯ : ಅಧ್ಯಯನದ ಕಿರುಪರಿಚಯ

ಈ ಕೆಳಗಿನಂತೆ ಪ್ರಮುಖವಾಗಿ ಐದು ಅಧ್ಯಯನಗಳೊಂದಿಗೆ ಸಮಾರೋಪ ಅಧ್ಯಾಯವನ್ನೊಳಗೊಂಡು ಆರು ಅಧ್ಯಾಯಗಳನ್ನು ಸಂಪ್ರಬಂಧ ರಚನೆಯಲ್ಲಿ ತೊಡಗಿಸಿಕೊಂಡಿರುವೆ.

೦೧. ಗ್ರಂಥಸೂಚಿಯ ಪರಿಚಯ ಮತ್ತು ಪ್ರವೇಶ

೦೨. ಗ್ರಂಥಸೂಚಿಯ ಇತಿಹಾಸ ಮತ್ತು ಬೆಳವಣಿಗೆ

೨.೧ ವ್ಯಾಖ್ಯೆಗಳು

೨.೨ ಗುರಿಗಳು

೨.೩ ಉದ್ದೇಶಗಳು

೨.೪ ವ್ಯಾಪ್ತಿ

೦೩. ಗ್ರಂಥಸೂಚಿಯ ರಚನೆಗಳು

೦೪. ಸಂದರ್ಭ ಸಾಹಿತ್ಯದಲ್ಲಿ ಸೂಚಿಗಳು

೩.೧ ಪ್ರಕಟಿತ ಸೂಚಿಗಳ ರೂಪರೇಷೆ

೩.೨ ಸೂಚಿಗಳ ಇತ್ತೀಚಿಗಿನ ಬೆಳವಣಿಗೆ

೦೫. ಪ್ರಕಟಿತ ಸೂಚಿಗಳ ತೌಲನಿಕ ಅಧ್ಯಯನ

೦೬. ಸೂಚಿಗಳ ಮೇಲೆ ಮಾಹಿತಿ ತಂತ್ರಜ್ಞಾನ ಪರಿಣಾಮ

## ೧.೧೦. ಅಧ್ಯಯನದ ಆವಶ್ಯಕತೆ (Need for Study)

ಅಪರಿಮಿತ ಸಾಮಗ್ರಿಗಳಲ್ಲಿ ನಮಗೆ ಬೇಕಾದುದನ್ನು ಹುಡುಕುವ ಕೆಲಸ ಕಷ್ಟಸಾಧ್ಯ. ಯಾವುದೇ ವಿಷಯದಲ್ಲಿ ಚಾರಿತ್ರಿಕ ಬೆಳವಣಿಗೆಯನ್ನು ಗಮನಿಸಿ ಅದರಲ್ಲಿ ಸಾರವನ್ನು, ಸಿದ್ಧಾಂತವನ್ನು ವಿಮರ್ಶೆ ಮಾಡಿ ಅಂಗೀಕರಿಸಿ ಅಥವಾ ನಿರಾಕರಿಸಿ ಮುನ್ನಡೆಯುವ ಸಾಹಸಿಗರಿಗೆ ಆಯಾ ವಿಷಯದಲ್ಲಿ ಪ್ರಕಟವಾಗಿರುವ ಪುಸ್ತಕಗಳ, ಲೇಖನಗಳ

ಬಗ್ಗೆ ವಿವರಗಳು ಬೇಕಾಗುತ್ತದೆ. ಈ ಎಲ್ಲಾ ಸಾಮಗ್ರಿಗಳು ಒಂದೇ ಗ್ರಂಥಾಲಯದಲ್ಲಿ ದೊರೆಯುವುದು ಹಾಗಿರಲಿ, ಅವುಗಳ ಬಗ್ಗೆ ಪೂರ್ಣ ಮಾಹಿತಿ ಮೊದಲು ದೊರೆಯಬೇಕು. ಪುಸ್ತಕಗಳೂ, ಲೇಖನಗಳೂ ಅಸಂಖ್ಯಾತವಾದರೂ ಅವುಗಳಲ್ಲಿ ಎಲ್ಲಾ ಅಧ್ಯಯನ ಯೋಗ್ಯವೆ ಎಂದು ನಿರ್ಧರಿಸಲು ಅವುಗಳನ್ನು ಪರಿಣಿತರು ಓದಿ ಸೂಚಿಸಬೇಕು.

ವಿಜ್ಞಾನ ಅಥವಾ ಇತರ ವಿಷಯಗಳ ಅಧ್ಯಯನ ಮುಂದುವರಿದಂತೆ ನೂತನ ಬರಹಗಳು, ಪುಸ್ತಕಗಳು ಒಂದು ಗ್ರಂಥಸೂಚಿಗೆ ಸಾಮಗ್ರಿಗಳನ್ನು ಒದಗಿಸುತ್ತದೆ. ಗ್ರಂಥಸೂಚಿಯಿಂದ ಯಾವುದೇ ವಿಷಯದಲ್ಲಿ ಇದುವರೆಗೆ ನಡೆದಿರುವ ಸಂಶೋಧನೆ, ಕಾರ್ಯಗಳ ಬಗ್ಗೆ ನಿರ್ದಿಷ್ಟ ಮಾಹಿತಿ ದೊರಕುತ್ತದೆ. ಗ್ರಂಥಸೂಚಿಗೂ, ಒಂದು ವಿಷಯದ ಅಭ್ಯಾಸಕ್ಕೂ ಕಾರ್ಯಕಾರಣ ಸಂಬಂಧವಿದೆ. 'ಗ್ರಂಥಸೂಚಿ' ಯಾದರೋ ಒಂದು ಗ್ರಂಥಾಲಯಕ್ಕೆ ಒಂದು ಸ್ಥಳಕ್ಕೆ ಅಥವಾ ಒಂದು ಪ್ರದೇಶಕ್ಕೆ ಸೀಮಿತವಾಗಿರದೆ ಮಾನವನ ಚಿಂತನ ಫಲ ಬರಹ ರೂಪದಲ್ಲಿ ಎಲ್ಲೇ ಇರಲಿ, ಯಾವ ರೂಪದಲ್ಲೆ ಇರಲಿ ಅದನ್ನು ಕುರಿತದ್ದಾಗಿರುತ್ತದೆ. ಇದು ಎಲ್ಲೆಯರಿಯದ, ವರ್ಷಂಪ್ರತಿ ಅತಿ ವೇಗದಲ್ಲಿ ಅಸಂಖ್ಯಾತವಾಗಿ ಬೆಳೆಯುತ್ತಿರುವ ಬರೆದ ಸಾಮಗ್ರಿಗಳ ಸಮುದ್ರದಲ್ಲಿ ಅಣಿಮುತ್ತುಗಳನ್ನಾರಿಸುವ ಸಾಹಸ.

ಈ ಕೆಳಗಿನ ಪ್ರಶ್ನೆಗಳ ಮುಖಾಂತರ ಈ ವಿಷಯದ ಆವಶ್ಯಕತೆಗಳನ್ನು ನಾವೆಲ್ಲರೂ ಅರಿಯಬಹುದಾಗಿದೆ. ಅವುಗಳು ಈ ಕೆಳಗಿನಂತಿವೆ.

೧. ಒಂದು ವಿಷಯದಲ್ಲಿ ಪ್ರಕಟಿತ ಪುಸ್ತಕಗಳು ಯಾವುವು ?

೨. ಒಂದು ಪುಸ್ತಕದ ವಿವಿಧ ಆವೃತ್ತಿಯ ಭಿನ್ನ ಪಾಠಗಳಲ್ಲಿ ಯಾವುದು ಸರಿ ?

೩. ಪ್ರಕ್ಷಿಪ್ತ ಭಾಗಗಳು ಯಾವುವು ?

೪. ಸಂಶೋಧನೆಯಲ್ಲಿ ನಡೆದಿರುವ ಕೆಲಸವೇನು ?

ಹೀಗೆ ಅನೇಕ ಪ್ರಶ್ನೆಗಳಿಗೆ, ಸವಾಲುಗಳಿಗೆ ಉತ್ತರ ಕೊಡುವ ಪರಿಹಾರ ನೀಡುವ ಆವಶ್ಯಕತೆ ಗ್ರಂಥಸೂಚಿಗೆ ಇರಬೇಕು.

**ಪಾಶ್ಚಾತ್ಯರ ಹವ್ಯಾಸಗಳು :**

ಪಾಶ್ಚಾತ್ಯ ದೇಶಗಳಲ್ಲಿ ಕೆಲವರಿಗೆ ಅಪೂರ್ವ ಹಾಗೂ ಪ್ರಾಚೀನ ವಸ್ತುಗಳನ್ನು ಕೊಂಡು ಸಂಗ್ರಹಿಸುವ ಹವ್ಯಾಸವಿರುತ್ತದೆ. ಅಂತಹವರು ಪ್ರಾಚೀನ ಬರಹಗಳನ್ನು, ಹಿಂದಿನ ಶತಮಾನದ ಗ್ರಂಥಗಳ ಹಸ್ತಪ್ರತಿಗಳು ಮುಂತಾದುವನ್ನು ಎಚ್ಚರಿಕೆಯಿಂದ ಸಂಗ್ರಹಿಸುತ್ತಾರೆ. ಅವರಿಗೆ ಈ ಬರಹಗಳ ಪೂರ್ಣ ವಿವರಣೆ, ಪುಸ್ತಕದ ಪುಟಸಂಖ್ಯೆ, ಬರೆದ ಸಾಮಗ್ರಿಯ ಗುಣದೋಷಗಳು ಇವುಗಳ ಬಗ್ಗೆ ಮಾಹಿತಿ ಅತ್ಯವಶ್ಯಕವಾಗಿರುತ್ತದೆ.

ಗ್ರಂಥಸೂಚಿಯ ರಚನೆಯ ಪ್ರಯತ್ನ ನಾಲ್ಕು ಶತಮಾನಗಳಿಂದಲೂ ಹಿಂದಿನದು. ೧೬ ನೇ ಶತಮಾನದಲ್ಲಿದ್ದ ಕಾನ್ರಾಡ್ ಗೆಸ್‌ನರ್ ಎಂಬಾತನನ್ನು 'ಗ್ರಂಥಸೂಚಿಯ ಜನಕ' ಎನ್ನುತ್ತಾರೆ. ೧೫೪೫ ರಲ್ಲಿ ಪ್ರಕಟವಾದ ತನ್ನ ಕೃತಿ ಬಿಬ್ಲಿಯೋಥೆಕ ಯುವರ್ಸಾಲಿಸ್ ಎಂಬುದರಲ್ಲಿ ಸಂಲ್ಲೇಖಗಳನ್ನು ಒಂದು ಸರ್ವಸಾಮಾನ್ಯ ರೀತಿಯಲ್ಲಿ ವ್ಯವಸ್ಥಿತವಾಗಿ ರಚಿಸಿದನು. ಈ ಗ್ರಂಥಸೂಚಿಯಲ್ಲಿ ಆತನಿಗೆ ತಿಳಿಸಿದ್ದ ಲ್ಯಾಟಿನ್, ಗ್ರೀಕ್, ಹೀಬ್ರೂ ಭಾಷೆಯಲ್ಲಿ ಪುಸ್ತಕಗಳ ಬಗ್ಗೆ ಟೀಕೆಗಳನ್ನು ಸೇರಿಸಿದ್ದನು. ೧೯೪೮ ರಲ್ಲಿ ಈ ಕೃತಿ ಇನ್ನೂ ಪರಿಷ್ಕೃತವಾಯಿತು. ಇದು ಮುಂಬರುವ ರಾಷ್ಟ್ರೀಯ ಗ್ರಂಥಸೂಚಿಗಳಿಗೆ ನಾಂದಿಯಾಯಿತು. ಈ ಶತಮಾನದಲ್ಲಿ ಇಂಗ್ಲೆಂಡ್, ಇಟಲಿ, ಫ್ರಾನ್ಸ್ ದೇಶಗಳಲ್ಲಿ ಆಯಾ ದೇಶಭಾಷೆಗಳಲ್ಲಿ ಮುದ್ರಿತ ಗ್ರಂಥಗಳ ಸೂಚಿಯನ್ನು ತಯಾರಿಸುವ ಯತ್ನ ಪಡೆಯಿತು. ೧೮ ನೇ ಶತಮಾನದಲ್ಲಿ ಫ್ರಾನ್ಸಿನ ಗಿಲಾಮೆ ಡಿಬೂರ್ ಮತ್ತು ಬ್ರೂನೆ ಇವರ ಗ್ರಂಥಸೂಚಿಗಳ ಕಾಲದ ನಂತರ ನಾನಾ ಭಾಷೆಗಳಲ್ಲಿ ಲೇಖಕರ ಸೂಚಿ, ವಿಷಯ ಸೂಚಿಗಳು ಪ್ರಕಟವಾದುವು. ಈ ಅಸಂಖ್ಯಾತ ಗ್ರಂಥಸೂಚಿಗಳಿಗೇ ಒಂದು ಗ್ರಂಥಸೂಚಿಯ ಆವಶ್ಯಕತೆಯಿತ್ತು.

**ಗ್ರಂಥಸೂಚಿಯ ಆವಶ್ಯಕತೆ :**

ಗ್ರಂಥಸೂಚಿಯ ಆವಶ್ಯಕತೆಯನ್ನು ಪ್ರಭುಶಂಕರ ಅವರು ಈ ರೀತಿ ವರ್ಣಿಸಿದ್ದಾರೆ[೧೦]

" ಗ್ರಂಥಸೂಚಿ ಸಂಶೋಧಕರಿಗೆ ಅತ್ಯಂತ ಆವಶ್ಯಕವಾದ ಆಕರ ಗ್ರಂಥ. ಯಾವುದೇ ವಿಷಯದಲ್ಲಿ ಸಂಶೋಧನೆಗೆ ತೊಡಗುವ ಮೊದಲು ಸಂಶೋಧಕ ಮಾಡುವ ಕೆಲಸ ಅವರಿಗೆ ಆ ವಿಷಯವಾಗಿ ಹೊರಬರುವ ವಿಷಯುಗಳನ್ನು ಸಂಗ್ರಹಿಸುವದು. ಆ ಕೆಲಸಕ್ಕೆ ಸೂಚಿಯಿಂದ ದೊರೆಯುವಂಥ ತಕ್ಷಣದ ಸಿದ್ಧ ನೆರವು ಬೇರೆ ಯಾವುದರಿಂದಲೂ ದೊರೆಯುವುದಿಲ್ಲ. ಅಲ್ಲದೆ ಗ್ರಂಥಸೂಚಿ ಕೊಡುವ ಚಿತ್ರ ಅತ್ಯಂತ ವಿಸ್ತಾರವೂ ವರ್ಣಮಯವೂ ಆದದ್ದು. ಬರವಣಿಗೆ ರೂಪಾಂತರಗೊಂಡಂದಿನಿಂದಲೂ ಮಾನವ ತತ್ವ, ಕಲೆ, ಸಾಹಿತ್ಯ, ಶಾಸ್ತ್ರ, ವಿಜ್ಞಾನ, ತಂತ್ರಜ್ಞಾನ ಮೊದಲಾದ ಅಸಂಖ್ಯ ಕ್ಷೇತ್ರಗಳಲ್ಲಿ ಹೇಗೆ ಚಿಂತನೆ ನಡೆಸಿದ್ದಾನೆ. ಈ ಚಿಂತನೆಗೆ ಹೇಗೆ ಅಭಿವ್ಯಕ್ತಿ ನೀಡಿದ್ದಾರೆ. ಅವನ ಅಭಿರುಚಿಗಳು ಕಾಲದಿಂದ ಕಾಲಕ್ಕೆ ಹೇಗೆ ಬದಲಾಗಿವೆ. ಶೈಲಿ ಹೇಗೆ ರೂಪಾಂತರಗೊಳ್ಳುತ್ತಾ ಹೋಗಿದೆ. ಅವನ ಸಂಸ್ಕೃತಿಯ ಮೇಲೆ ಇದರ ಪರಿಣಾಮ ಏನಾಗಿದೆ. ಎಂಬೆಲ್ಲಾ ವಿಚಾರಗಳನ್ನು ಅಧ್ಯಯನ ಮಾಡಲು ಗ್ರಂಥಸೂಚಿಯೇ ಆಧಾರ. "

ಯಾವುದೇ ವಿಷಯ ಅಥವಾ ಗ್ರಂಥಗಳ ಸಮುದಾಯಕ್ಕೆ ಸೀಮಿತವಾದ ಗ್ರಂಥಸೂಚಿಗಳನ್ನು ರಚಿಸಬಹುದಾಗಿದೆ. ಸಂಶೋಧನೆಗೆ ಮೊದಲು ಸಂಶೋಧಕರು ನಡೆಸುವ ವಿಷಯ ಸಮೀಕ್ಷೆ. ಅದರ ಆಳ ಮತ್ತು ವ್ಯಾಪ್ತಿ, ಕಲೆಹಾಕುವ

ದಿಶೆಯಲ್ಲಿ, ಗ್ರಂಥಸೂಚಿಗಳು ಆವಶ್ಯಕ. ಸಂಶೋಧನೆಗೆ ಆಯ್ದು ವಿಷಯದ ಮೇಲೆ ಲಭ್ಯವಿರುವ ಗ್ರಂಥಸೂಚಿಗಳ ವಿವರ ಪಡೆಯಲು ಸಹ ಗ್ರಂಥಸೂಚಿಗಳು ಸಹಕಾರಿ. ಆದುದರಿಂದ ಸಂಶೋಧನಾ ಸಾಮಗ್ರಿಯಾಗಿ, ಸಾಹಿತ್ಯ ಸಂಗ್ರಹದ ಕಾರ್ಯಾಚರಣೆಯಲ್ಲಿ ಗ್ರಂಥಸೂಚಿಯ ಪಾತ್ರ ಅತ್ಯಮೂಲ್ಯ.

**ಸಾಹಿತ್ಯ ಸೃಷ್ಟಿ :**

" ಭಾರತ ದೇಶದ ಎಲ್ಲ ಜನ ಭಾಷೆಗಳಲ್ಲಿ ಕಳೆದ ಅನೇಕ ದಶಕಗಳಿಂದ ಸಾಕಷ್ಟು ಸಾಹಿತ್ಯ ಸೃಷ್ಟಿಯಾಗುತ್ತಿದೆ. ಸಾಕ್ಷರತೆಯ ಪ್ರಮಾಣ ಹೆಚ್ಚಿದಂತೆ ಹಾಗೂ ಸಮಾಜದ ವಿವಿಧ ಸ್ತರಗಳಿಂದ ಬರುವ ಸುಶಿಕ್ಷಿತರ ಸಂಖ್ಯೆ ಹೆಚ್ಚಿದಂತೆ ಪ್ರಕಟಿತ ಸಾಹಿತ್ಯಕ್ಕೆ ಹೆಚ್ಚು ಹೆಚ್ಚಿನ ಬೇಡಿಕೆ ಉಂಟಾಗುವುದು ಸ್ವಾಭಾವಿಕವೇ. ಮುದ್ರಿತವಾದದ್ದೆಲ್ಲ ಬಹುಕಾಲ ತಾಳಬಲ್ಲ, ಬೆಲೆಯುಳ್ಳ ಸಾಹಿತ್ಯವಾಗಿರಲಿಕ್ಕಿಲ್ಲ; ಆದರೆ ಜನಸಮುದಾಯದ ಅನೇಕ ಬಗೆಯ ತುರ್ತುಗಳನ್ನು ಸಮಾಧಾನಪಡಿಸಲು ಜ್ಞಾನ ಹಾಗೂ ಅನುಭವಗಳ ಅನೇಕ ನೆಲೆಗಳಲ್ಲಿ ಸಾಹಿತ್ಯ ಹುಟ್ಟಲೇ ಬೇಕಾಗುತ್ತದೆ. ಸಂಸ್ಕೃತಿಯ ನಿರಂತರತೆಯನ್ನು ಪ್ರವಾಹೋಪಾದಿಯಲ್ಲಿ ಕಾಪಾಡಿಕೊಳ್ಳಲು ಇದು ಆವಶ್ಯಕ. " [೧೧]

ಆಧುನಿಕ ಕನ್ನಡ ವಾಙ್ಮಯವು ಸೃಜನಶೀಲ ಸಾಹಿತ್ಯ, ವಿಮರ್ಶೆ, ಸಂಶೋಧನೆಗಳ ಸ್ತರಗಳಲ್ಲಿ ಬಹುಮುಖವಾಗಿ ವರ್ಷ ವರ್ಷವೂ ಬೆಳೆಯುತ್ತಲೇ ಬಂದಿದೆ. ನಮ್ಮ ಪ್ರಮುಖ ದಿನಪತ್ರಿಕೆಗಳು ದಿನನಿತ್ಯದ ಸುದ್ದಿಯನ್ನು ಪೂರೈಸುವದರ ಜತೆಗೆ ಸಾಪ್ತಾಹಿಕ ಪುರವಣಿಗಳ ಮೂಲಕ, ವಾರ್ಷಿಕ ವಿಶೇಷಾಂಕಗಳ ಮೂಲಕ, ವಿಶೇಷ ಬಗೆಯ ಸಾಹಿತ್ಯವನ್ನು ಪ್ರಕಟಿಸುತ್ತಿವೆ. ಮಾಸಿಕ, ದ್ವೈಮಾಸಿಕ - ತ್ರೈಮಾಸಿಕಗಳು ಜ್ಞಾನದ ವಿಶಿಷ್ಟ ಶಾಖೆಗಳಲ್ಲಿ ಪರಿಣಿತರಾದ ಬರಹಗಾರರನ್ನು ಓದುಗರಿಗೆ ಅವರ ಕೃತಿಗಳ ಮೂಲಕವೇ ಪರಿಚಯಿಸಿಕೊಡುತ್ತಿವೆ. ನೂರಾರು ಸಂಖ್ಯೆಯ ಪ್ರಕಾಶನ ಸಂಸ್ಥೆಗಳು, ಮುದ್ರಣ ಸಾಮಗ್ರಿಯ ಬೆಲೆ ದಿನ ದಿನಕ್ಕೆ ಏರುತ್ತಿರುವ ಈ ದಿನಗಳಲ್ಲೂ ಪುಸ್ತಕಗಳನ್ನು ಹೊರತರುತ್ತಲೇ ಇವೆ. ಸಾಹಿತ್ಯ ಪರಿಷತ್ತು, ಅಕಾಡೆಮಿಗಳು ಹಾಗೂ ವಿಶ್ವವಿದ್ಯಾಲಯಗಳು ಪ್ರಕಟಣೆಗಳ ಮಹಾಪ್ರವಾಹಕ್ಕೆ ಕೊಡುಗೆಯನ್ನು ದೊಡ್ಡ ಪ್ರಮಾಣದಲ್ಲಿ ಸಲ್ಲಿಸುತ್ತಿವೆ. ನಮ್ಮ ಕಣ್ಣೆದುರಿಗಿನ ಈ ಸಾಹಿತ್ಯರಾಶಿ ವಿಪುಲವಿರುವಷ್ಟೇ ವೈವಿಧ್ಯಮಯವೂ ಆಗಿವೆ.

ಕೈಗೆ ಸಿಕ್ಕಿದ ಲೇಖನವನ್ನೋ, ಪುಸ್ತಕವನ್ನೋ ಓದಿ ಅನುಭವಿಸಿ, ಆನಂದಿಸಿ ಅನಂತರ ಅದನ್ನು ಆಚೆಗೆ ಇಟ್ಟುಬಿಡುವ ಪ್ರವೃತ್ತಿಯೆ ಬಹಳ ಜನ ಓದುಗರದು. ಆದರೆ ಸಾಹಿತ್ಯದಲ್ಲಿ ವ್ಯಕ್ತವಾಗುವ ಅನುಭವಗಳಿಗೆ ಹಾಗೂ ಮೌಲ್ಯಗಳಿಗೆ ತಾತ್ಕಾಲಿಕ ಪ್ರಯೋಜನವಿರುವಂತೆಯೆ ಒಂದು ಕಾಲ ಘಟ್ಟದ ಸಾಹಿತ್ಯ ಸೃಷ್ಟಿಯನ್ನು ಒಟ್ಟಾಗಿ ತೂಗಿ ನೋಡಿ ಬೆಲೆ ಕಟ್ಟುವ ಸಂದರ್ಭದಲ್ಲಿ ಈ ಮಾತಿನ ಅರಿವು ನಮಗಾಗುತ್ತದೆ.

ವಿಮರ್ಶಕರು ಈ ನಿಟ್ಟಿನಲ್ಲಿ ಗ್ರಂಥಾಲಯ ವಿಜ್ಞಾನದ ನೆರವು ಪಡೆಯಬೇಕಾಗುತ್ತದೆ. ರಚಿಸಿದ ಸಾಹಿತ್ಯ ಆದಷ್ಟು ಹೆಚ್ಚು ಓದುಗರನ್ನು ಮುಟ್ಟಿ ಹೆಚ್ಚು ಕಾಲ ಬದುಕಿರುವಂತಾಗಬೇಕಾದರೆ ಅದಕ್ಕೆ ಸಮರ್ಪಕವಾದ ವಾಙ್ಮಯದರ್ಶಕ (ದರ್ಪಣ), ಸೂಚಿ ಮತ್ತು ನಿರ್ದೇಶಿಗಳನ್ನು ರಚಿಸುವದು ತುಂಬಾ ಆವಶ್ಯಕ. ಇವುಗಳ ಮೂಲಕವೇ ಸಾಹಿತ್ಯವು ಚಿರವಾಗಿ ಉಳಿಯುವದಲ್ಲದೆ ಮುಂದಿನ ಪೀಳಿಗೆಗೆ ನಮ್ಮ ಸಾಧನೆಯನ್ನು ಸೂಕ್ತ ಮತ್ತೂ ಸೂಚ್ಯ ರೀತಿಯಲ್ಲಿ ತಿಳಿಸಲು ಸಾಧ್ಯವಾಗುತ್ತದೆ. ಇಂಥ ಒಂದು ಸಕ್ರಿಯ ಕಾರ್ಯಕ್ರಮ ಇಲ್ಲದಿದ್ದರೆ ಸಾಹಿತ್ಯಾರಾಧನೆ ಮತ್ತು ರಚನೆ ಒಂದು ರೀತಿಯಿಂದ ಅಪೂರ್ಣವೆ ಆಗಿ ಉಳಿಯುತ್ತದೆ.

**ಕನ್ನಡ ಸಾಹಿತ್ಯದಲ್ಲಿ ನಿಯತಕಾಲಿಕೆಗಳು :**

ಇತ್ತೀಚೆಗೆ ಕನ್ನಡ ಸಾಹಿತ್ಯದಲ್ಲಿ ಹೊರಬರುತ್ತಿರುವ ನಿಯತಕಾಲಿಕೆಗಳ ಸಂಖ್ಯೆ ಮತ್ತು ಅವುಗಳು ಪ್ರಕಟಿಸುತ್ತಿರುವ ಲೇಖನಗಳು ಪ್ರವಾಹದೋಪಾದಿಯಲ್ಲಿ ದಿನೇ ದಿನೇ ಹೆಚ್ಚುತ್ತಾ ಹೋಗುತ್ತಿವೆ. ಜ್ಞಾನಮಾರ್ಗದಲ್ಲಿ ಮುಂದೆ ಸಾಗುವ ಜ್ಞಾನ ಪಿಪಾಸುವಿಗೆ ಹಿಂದಿನ ಕಾರ್ಯಸಾಧನೆಯನ್ನು ತಿಳಿದಿರುವುದರ ಜೊತೆಗೆ ತನ್ನ ಆಸಕ್ತ ವಿಷಯದ ಬಗ್ಗೆ ಪ್ರಕಟವಾಗಿರುವ ಸಮಗ್ರ ವಾಚನ ಸಾಮಗ್ರಿ ಎಲ್ಲೆಲ್ಲಿ ದೊರೆಯುತ್ತದೆ ಎಂಬುದನ್ನು ಪೂರ್ವಭಾವಿಯಾಗಿ ತಿಳಿದುಕೊಂಡಿರಬೇಕಾದದ್ದು ತೀರಾ ಆವಶ್ಯಕವಾಗಿರುತ್ತದೆ. ಈ ದಿಶೆಯಲ್ಲಿ ಗ್ರಂಥಸೂಚಿಗಳು ಮತ್ತು ಲೇಖನ ಸೂಚಿಗಳು ಗ್ರಂಥಸ್ಥವಾದ ಸಾಹಿತ್ಯವು ಸೂಕ್ತ ರೀತಿಯಲ್ಲಿ ಹಿಡಿದಿಡುವಲ್ಲಿ ಬಹಳಷ್ಟು ಮಟ್ಟಿಗೆ ಉಪಯೋಗುವಾಗುತ್ತವೆ. ಗ್ರಂಥಸೂಚಿಯ ರಚನಾ ಕಾರ್ಯಕ್ರಮಗಳು ಹಲವಾರು. ಸಂಘ, ಸಂಸ್ಥೆ ಮತ್ತು ವಿಶ್ವವಿದ್ಯಾಲಯಗಳಿಂದ ನಡೆದೇ ಇವೆ. ಆದರೆ ನಿಯತಕಾಲಿಕೆಗಳಲ್ಲಿ ಪ್ರಕಟವಾಗುತ್ತಿರುವ ರಾಶಿ ರಾಶಿ ಬರಹಗಳನ್ನು ಕ್ರಿಯಾತ್ಮಕ ಬರವಣಿಗೆಗೆ ಮತ್ತು ಅಧ್ಯಾಪನಕ್ಕೆ ಅರ್ಥಪೂರ್ಣವಾಗಿ ಅಣಿ ಮಾಡಿಕೊಟ್ಟು ತನ್ಮೂಲಕ ಸಾಹಿತ್ಯದ ಸಾಧನೆಯ ಮೈಲುಗಲ್ಲಾಗಿ ನಿಲ್ಲುವ ಸೂಚಿಯ ರಚನೆ ನಿತ್ಯ ನಿರಂತರವಾಗಿ ಅತ್ಯವಶ್ಯವಾಗಿ ಸೂಚೀಕರಿಸಬೇಕಾಗಿದೆ.

ಈ ರೀತಿಯ ಸೂಚಿಗಳು ಕನ್ನಡ ಸಾಹಿತ್ಯದ ವೈವಿಧ್ಯಮಯ ಬರವಣಿಗೆಯನ್ನು ಹಿಡಿದಿಡುವ ರನ್ನಗನ್ನಡಿಗಳಾಗುತ್ತವೆ. ಸಾಹಿತ್ಯಾಭ್ಯಾಸಿಗಳಿಗೆ, ಸಂಶೋಧಕರಿಗೆ, ಬರಹಗಾರರಿಗೆ ಒಂದು ರೀತಿಯ ಆತ್ಮವಿಶ್ವಾಸವನ್ನು ಮೂಡಿಸುವ ಸಂಪನ್ಮೂಲಗಳಾಗುತ್ತವೆ. ಹೀಗೆ ಸಂಶೋಧಕರಿಗೆ ಅಪಾರ ಹಣ, ಕಾಲ, ಶ್ರಮ ಉಳಿತಾಯವಾಗುತ್ತದೆ.

## ೧.೧೧ : ಅಧ್ಯಯನದ ಉದ್ದೇಶಗಳು

" ಸಂಶೋಧಕನಿಗೆ ಅಥವಾ ಓದುಗನಿಗೆ ಬೇಕಾದ ಗ್ರಂಥಗಳು ಗ್ರಂಥಾಲಯದಲ್ಲಿ ಯಾವ ಸ್ಥಳದಲ್ಲಿ ಯಾವ ಶೆಲ್ಫಿನಲ್ಲಿ ಸಿಗುತ್ತವೆ ಎಂಬುದನ್ನು ತಿಳಿಸುವದಕ್ಕೆ ಸೂಚಿಗಳು ಸೀಮಿತವಾಗಿರುತ್ತವೆ. ಅದರಲ್ಲಿ ಏನಿದೆ, ಏನಿಲ್ಲ ಎಂಬುದನ್ನು ಓದುಗನ ಸ್ವಪ್ರಯತ್ನಕ್ಕೆ ಬಿಡಬೇಕು ಎಂಬುದಾಗಿ ಕೆಲವರ ಅಭಿಪ್ರಾಯವಾಗಿದೆ. "[೧೨]

ಈ ವಾದಸರಣಿಯ ಮೇರೆಗೆ ಸೂಚಿಗಳು ಅನಾವಶ್ಯಕ ವಿವರಗಳನ್ನಾಗಲಿ ಅವುಗಳಲ್ಲಿ ವಿಷಯದ ಕುರಿತು ಸುದೀರ್ಘ ಚರ್ಚೆಯಾಗಲಿ ಕೊಡುವುದರಿಂದ ಓದುಗನಿಗೆ ಹೆಚ್ಚೇನು ಉಪಯೋಗವಾಗಲಿಕ್ಕಿಲ್ಲವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ವಿವರಣಾತ್ಮಕ ಮತ್ತು ಪಾಂಡಿತ್ಯಪೂರ್ಣ ಸೂಚಿಗಳನ್ನು ಕೂಡ ಸಂಶೋಧಕನು ಸಂಶಯದ ದೃಷ್ಟಿಯಿಂದ ನೋಡುವ ಸಂಭವವಿರುತ್ತದೆ. ಅನೇಕ ಮಹತ್ವದ ಅಂಶಗಳನ್ನು ತಯಾರಿಸುವಾಗ ಸೂಚಿಕಾರನು ಬಿಟ್ಟಿರುವ ಸಂಭವವಿದೆ. ಹೀಗಾಗಿ ಸಂಶೋಧಕನು ಹಸ್ತಪ್ರತಿಗಳನ್ನು ಸ್ವತಃ ಪರಿಶೀಲಿಸಬೇಕಾಗುವ ಸಂಭವವಿರುತ್ತದೆ. ಸಂಶೋಧಕನಿಗೆ ಬೇಕಾಗಿರುವ ಗ್ರಂಥ ಎಲ್ಲಿದೆ ಹಾಗೂ ಆ ಗ್ರಂಥವನ್ನು ಎಷ್ಟು ಸುಲಭವಾಗಿ ಕಂಡು ಹಿಡಿಯಬಹುದು ಎಂಬುದನ್ನು ಸೂಚಿಗಳು ತಿಳಿಸಿದರೆ ಸಾಕು. ಅವುಗಳಲ್ಲಿಯ ವಿಷಯವನ್ನು ಕಂಡುಕೊಳ್ಳುವದು ಸಂಶೋಧಕನ ಕರ್ತವ್ಯವಾಗಿದೆ. ಈ ವಿಷಯ ಕುರಿತು ಒಕಹ್ಯಾಮ್ ಎಂಬ ಪಾಶ್ಚಾತ್ಯ ಗ್ರಂಥಪಾಲಕ ಕೆಳಗಿನಂತೆ ಬರೆದಿದ್ದಾನೆ.

" ..... The reader is doing the research, the shaff need not do it for him. The curator's duty ends with steering the reader to the right or relevent to collection..... the reader should be prepared to dig through a pack of chaff to reach his grain of wheat. That is what constitutes research. " [೧೩]

ಗ್ರಂಥಾಲಯದಲ್ಲಿ ಓದುಗನಿಗೆ / ಸಂಶೋಧಕರಿಗೆ ಏನು ಬೇಕು ? ಯಾವುದನ್ನು ಪಡೆಯಬೇಕು ? ಆಯ್ಕೆಗೆ ಸಹಾಯ ನೀಡುವಿಕೆ ಹೇಗೆ ? ಇತ್ಯಾದಿ ವಿಷಯಗಳನ್ನು ತಿಳಿಸುವದು ಗ್ರಂಥಸೂಚಿಯ ಕೆಲಸ. ಈಗ ಅದನ್ನು ಕೆಳಗಿನ ಶೀರ್ಷಿಕೆಗಳಡಿಯಲ್ಲಿ ಹೀಗೆ ನಿರೂಪಿಸಲಾಗಿದೆ.

೧. ಪುಸ್ತಕ ಪಡೆಯುವದರ ಬಗೆಗಿನ ಮಾಹಿತಿ

ಅ) ಲೇಖಕ

ಬ) ಶೀರ್ಷಿಕೆ

ಕ) ವಿಷಯ

೨. ಗ್ರಂಥಾಲಯದಲ್ಲಿ ಏನನ್ನು ತೋರಿಸುವದು

ಡ) ಲೇಖನ

ಇ) ವಿಷಯ

ಫ) ಮಾಹಿತಿಯ ರೂಪ ಅಥವಾ ಸಾಹಿತ್ಯದ ರೂಪ

೩. ಪುಸ್ತಕದ ಆಯ್ಕೆಯಲ್ಲಿ ಸಹಾಯ ನೀಡುವಿಕೆ

ಗ) ಪುಸ್ತಕಗಳ ಆವೃತ್ತಿಗಳ ಬಗ್ಗೆ

(ಗ್ರಂಥವಿವರಣ ಪಟ್ಟಿಕೆಗಳ ವಿವರಣೆ)

ಹ) ಪುಸ್ತಕಗಳ ಗುಣಗ್ರಹಿಕೆ ಬಗ್ಗೆ

(ಸಾಹಿತ್ಯ ರೂಪ / ಪ್ರಾಸಂಗಿಕ / ಪ್ರಚಲಿತ ವಿಷಯಗಳ ವಿವರಣೆ... ಇತ್ಯಾದಿ)

ಐ) ಪುಸ್ತಕಗಳ ಪರಿಷ್ಕರಣೆ (Revision) ಗಳಲ್ಲಿ ಪೂರಕ (Supplementary) ವಿಷಯಗಳ ಹೊಸ ಬೆಳವಣಿಗೆಗಳನ್ನು ಗಮನಿಸಿ ಆವೃತ್ತಿ ಬೆಳವಣಿಗೆಯ ಬಗೆಗಿನ ಮಾಹಿತಿ.

**ಮಾಹಿತಿ ಸಂಗ್ರಹಣೆ :**

ಮೇಲಿನ ವಿಷಯವನ್ನು ಇನ್ನೂ ವಿವರವಾಗಿ ಹೇಳುವುದಾದರೆ ಕೆಳಗಿನ ಅಂಶಗಳಿಂದ ಅದು ಇನ್ನೂ ಸ್ಪಷ್ಟವಾದೀತು. ಶೀರ್ಷಿಕೆಯಿಂದ ಹಿಡಿದು ಗ್ರಂಥಮಾಹಿತಿಯ ಎಲ್ಲ ವಿವರಣೆಗಳನ್ನು ನೀಡುವುದೇ ಗ್ರಂಥಸೂಚಿಯ ಮುಖ್ಯ ಉದ್ದೇಶ. ಇಲ್ಲದಿದ್ದರೆ ಗ್ರಂಥಸೂಚಿ ಅಪೂರ್ಣವಾಗಿಬಿಡುತ್ತದೆ. ಹೀಗಾಗಿ ಪುಸ್ತಕ ಮುದ್ರಣದಿಂದಲೇ ಲೇಖಕರು / ಪ್ರಕಾಶಕರು ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಳ್ಳುವದು ಅವಶ್ಯವಾಗಿದೆ. ಶೀರ್ಷಿಕೆ ಪುಟ ಮತ್ತು ಹಿಂಬದಿಯಲ್ಲಿ ಪುಸ್ತಕದ ಕರ್ತೃ / ಹಕ್ಕುಗಳು; ಆವೃತ್ತಿ, ಸಾಹಿತ್ಯರೂಪ, ಪುಟಗಳು, ಪ್ರಕಟನೆಯ ವರ್ಷ, ಗಾತ್ರ, ಬೆಲೆ, ಮುಖಪುಟ ಕಲೆ, ಮುದ್ರಕರು, ಪ್ರಕಾಶಕರು, ಅಂತರ್‌ರಾಷ್ಟ್ರೀಯ ಪುಸ್ತಕ ಸಂಖ್ಯೆ (ISSN / ISBN), ಅನುವಾದ, ಭಾಷಾಂತರಕಾರ – ಈ ಎಲ್ಲ ವಿವರಗಳನ್ನು ಲೇಖಕ ಮತ್ತು ಪ್ರಕಾಶಕರು ಪುಸ್ತಕವು ಮುದ್ರಣಕ್ಕೆ ಹೋಗುವುದಕ್ಕೆ ಮುಂಚೆ ಪರಿಶೀಲಿಸಿ ಕಳಿಸುವುದು ಒಳಿತು. ಇಲ್ಲದಿದ್ದರೆ ಗ್ರಂಥಸೂಚಿಗೆ, ಸೂಚೀಕರಣಕ್ಕೆ ಅಪೂರ್ಣ ಮಾಹಿತಿ ನೀಡಿದಂತಾಗುತ್ತದೆ. ಸಂಪೂರ್ಣ ಮಾಹಿತಿಯನ್ನು ಒದಗಿಸಿದಲ್ಲಿ ಗ್ರಂಥಸೂಚಿಯ ದಾಖಲೀಕರಣಕ್ಕೆ ಸರಳವಾಗಿ ಪುಸ್ತಕದ ಬಗೆಗಿನ ಪೂರ್ಣ ಮಾಹಿತಿ ಸಿಕ್ಕಿ ಅದು ಸೂಚೀಕರಣಕ್ಕೂ / ಸೂಚೀಕಾರನಿಗೂ ಮತ್ತು ಗ್ರಂಥಾಲಯದ ಸಿಬ್ಬಂದಿಗೆ ಎಲ್ಲ ಮಾಹಿತಿಗಳನ್ನು ನೀಡಿ ಓದುಗನಿಗೆ ಅನುಕೂಲವಾಗಿ ಪರಿಣಮಿಸುತ್ತದೆ.

ಕೆಲವು ಪುಸ್ತಕಗಳಿಗೆ ಪ್ರಕಟನೆಯ ವರ್ಷವಿರುವುದಿಲ್ಲ. ಎಷ್ಟು ಪ್ರತಿಗಳು ಅಚ್ಚಾಗಿವೆ ಎಂಬ ಬಗ್ಗೆ ಮಾಹಿತಿ ಇರುವದಿಲ್ಲ. ಪ್ರಕಾಶನದ ಸ್ಥಳದ ಬಗ್ಗೆ ಮಾಹಿತಿ ಇರುವುದಿಲ್ಲ. ಇಂಥ ಅಪೂರ್ಣ ಮಾಹಿತಿಗಳಿದ್ದರೆ ಸೂಚೀಕರಣಕ್ಕೂ ಮತ್ತು ಸೂಚೀಕಾರರಿಗೂ ಪುಸ್ತಕವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಅಪೂರ್ಣ ಮಾಹಿತಿಗಳು ಓದುಗರಿಗೆ, ಆಸಕ್ತರಿಗೆ ಸಿಗುವುದರಿಂದ ನಿರಾಸೆ ಮೂಡಬಹುದು. ಈ ಎಲ್ಲ ಅಂಶಗಳನ್ನು ಈಗ ಲೇಖಕರು, ಪ್ರಕಾಶಕರು, ಗ್ರಂಥಾಲಯಗಳು ಅರಿಯುವದು ಅವಶ್ಯವಾಗಿದೆ. ಮುದ್ರಣಕಾರರೂ ಕೂಡ ಈ ಅಂಶಗಳನ್ನು ಅತ್ಯಂತ ಅವಶ್ಯವಾಗಿ ಮುದ್ರಿಸಬೇಕಾಗಿರುವುದರಿಂದ ಲೇಖಕರಿಂದ, ಪ್ರಕಾಶಕರಿಂದ ಪೂರ್ಣ ಮಾಹಿತಿಯನ್ನು ಪಡೆಯುವದು ಅವಶ್ಯವಾಗಿದೆ.

ಇಂಥ ಅಪೂರ್ಣ ಮಾಹಿತಿಗಳಿಂದ ಯಾರಿಗೂ ಮಾಹಿತಿ ದಕ್ಕದೆ ಪುಸ್ತಕದ ಬಗೆಗಿನ ಮಾಹಿತಿ ಅಪೂರ್ಣವಾಗುವದಲ್ಲದೆ ಇಂಥ ಪುಸ್ತಕಗಳು ದಾಖಲೆಗೆ ಯೋಗ್ಯ ಸಾಮಗ್ರಿಗಳಾಗುವದಿಲ್ಲವೆನ್ನುವದನ್ನು ಎಲ್ಲರೂ ಒಪ್ಪಿಕೊಂಡು ಯೋಗ್ಯ ಕ್ರಮ ಕೈಗೊಳ್ಳಬೇಕಾದ ಆವಶ್ಯಕತೆ ಹಿಂದಿಗಿಂತಲೂ ಇಂದು ಅವಶ್ಯವಾಗಿದೆ.

ಮುಖ್ಯಾಂಶಗಳನ್ನು ಕೆಳಗಿನಂತೆ ನಿರೂಪಿಸಲಾಗಿದೆ :

೧. ಪ್ರಮುಖವಾಗಿ ಲೇಖಕ, ಶೀರ್ಷಿಕೆ ಮತ್ತು ವಿಷಯದ ಬಗ್ಗೆ ಮಾಹಿತಿ ನೀಡಿದರೂ ಮುದ್ರಣ, ಪ್ರಕಾಶನ ಸ್ಥಳ, ಬೆಲೆ ಇತ್ಯಾದಿ ವಿಷಯಗಳನ್ನು ಗ್ರಂಥಸೂಚಿ ನೀಡುತ್ತದೆ.

೨. ಪುಸ್ತಕಗಳ ಗುಂಪಿನಲ್ಲಿ ಅದರ ಸ್ಥಾನ, ಸ್ಥಳ ತಿಳಿಯಬಹುದು.

೩. ಓದುಗನಿಗೆ ಆಯ್ಕೆಯನ್ನು ನಿಗದಿ ಮಾಡುತ್ತದೆ.

೪. ಲೇಖಕ, ಶೀರ್ಷಿಕೆಗಳ ಬಗ್ಗೆ ಮಾಹಿತಿ, ಇದರಲ್ಲಿ ಜಂಟಿ ಲೇಖಕರು (ಒಬ್ಬರಿಗಿಂತ ಹೆಚ್ಚು ಜನರಿದ್ದಲ್ಲಿ) ಹೆಸರುಗಳು ಇತ್ಯಾದಿ.

೫. ಪುಸ್ತಕವು ಸಂಪಾದನೆಯಾಗಿದ್ದಲ್ಲಿ, ಸಂಕಲನಕಾರನ ಹೆಸರು, ಸಂಪಾದಕನ ಹೆಸರು ಇತ್ಯಾದಿ ದಾಖಲೆಗಳು.

೬. ಬೇರೆ ಭಾಷೆಗಳಿಂದ ಅನುವಾದ, ತುರ್ಜುಮೆಗಳಿದ್ದರೆ ಮೂಲ ಲೇಖಕರ ಬಗೆಗಿನ ಮಾಹಿತಿ ಮತ್ತು ಅನುವಾದಕರ / ಭಾಷಾಂತರಕಾರರ ಬಗೆಗಿನ ಮಾಹಿತಿಗಳು.

೭. ವಿಷಯದ ಬಗ್ಗೆ ಮತ್ತು ಸಂದರ್ಭ ಸಾಹಿತ್ಯ ಸೂಚಿಗಳ ಬಗ್ಗೆ ಮಾಹಿತಿ ನೀಡುವುದು.

೮. ಗುಪ್ತನಾಮಗಳ, ಕಾವ್ಯನಾಮಗಳ ಬಗ್ಗೆ ದಾಖಲಿಸುವುದು.

೯. ಸಂಬಂಧಿಸಿದ ವಿಷಯಗಳ ಬಗ್ಗೆ ಮೂಲಗಳಿದ್ದಲ್ಲಿ ಒದಗಿಸುವುದು.

೧೦. ಮಾಹಿತಿಯ ರೂಪ, ಆಕಾರ, ಗಾತ್ರ, ಮತ್ತು ಯಾವ ಭಾಷೆಯಲ್ಲಿಯ ಸಂದರ್ಭ (Reference) ಗಳನ್ನು ನೀಡುವುದು.

೧೧. ಕೃತಿಯ ಮುದ್ರಣ ಪರಿಷ್ಕರಣೆಗಳ ಬಗೆಗಿನ ಹೊಸ ಮಾಹಿತಿಗಳು.

**ಕಟ್ಟರ್ ಉವಾಚ :**

ಕಟ್ಟರ್ ಹೇಳುವಂತೆ ಶೀರ್ಷಿಕೆಯಿಂದ ಹಿಡಿದು ಮುದ್ರಣ, ಮರುಮುದ್ರಣ, ಟಿಪ್ಪಣಿಗಳು, ಪರಿಷ್ಕರಣೆಗಳು, ಭಾಷಾಂತರ, ಅನುವಾದಕ, ಪ್ರಕಟನೆಯ ವರ್ಷ, ಪುಟಗಳು, ಪುಸ್ತಕಗಳ ಬಗೆಗಿನ ಸಂಪೂರ್ಣ ಮಾಹಿತಿ, ಸಂಗ್ರಹ (Bibliographical details) ಒದಗಿಸುವುದು ಗ್ರಂಥಸೂಚಿಯ ಮುಖ್ಯ ಜವಾಬ್ದಾರಿಯೆನ್ನುವುದನ್ನು ನಾವು ಒಪ್ಪಿಕೊಳ್ಳಲೇಬೇಕು.

ಇವೆಲ್ಲವುಗಳ ಜೊತೆಗೆ ಗ್ರಂಥಸೂಚಿ ಒಂದು ಕೃತಿಯ ಬಗ್ಗೆ ನಿಖರ ಮತ್ತು ಆಳವಾದ ಉದ್ದೇಶವನ್ನು ಹೊಂದಿರುತ್ತದೆ. ರಂಗನಾಥನ್‌ರು ಹೇಳುವಂತೆ– " ಓದುಗ / ಸಂಶೋಧಕ ಆಸಕ್ತಿಯಿಂದ ಗ್ರಂಥಾಲಯಕ್ಕೆ ಕಾಲಿಟ್ಟರೆ ಅವನ ಸರ್ವಗ್ರಹಿಕೆಯನ್ನು ಗ್ರಂಥಸೂಚಿ ಪೂರೈಸಬೇಕೆಂಬುದನ್ನು "[೧೪] ಒತ್ತಿ ಹೇಳುತ್ತಾರೆ.

ಕಟ್ಟರ್‌ನ ಹೇಳಿಕೆಯಂತೆ– " ಗ್ರಂಥಸೂಚಿ ಎನ್ನುವುದು ಸಾರ್ವಜನಿಕ ಹಿತಾಸಕ್ತಿಯನ್ನು ಬಯಸುವುದು "[೧೫] ಎನ್ನುತ್ತಾರೆ. ಸಿದ್ಧಾಂತ ಮತ್ತು ರೂಢಿ (Theory and Practice) ಗಳಲ್ಲಿ ಸಾಮ್ಯತೆಗಳಿಲ್ಲ ಎನ್ನುವುದಕ್ಕೆ ಮೇಲಿನ ಹೇಳಿಕೆ ಒಂದು ಉದಾಹರಣೆ. ಕೆಲವು ಗ್ರಂಥಸೂಚಿಗಳು ಅಪೂರ್ಣತೆಯಿಂದ ಕೂಡಿರಬಹುದು. ಇನ್ನೂ ಕೆಲವು ಪೂರ್ಣ ಪ್ರಮಾಣದಲ್ಲಿ ಓದುಗನನ್ನು ತಪ್ಪಿಗೊಳಿಸಬಹುದು.



**ವರ್ಗೀಕರಣ ಗ್ರಂಥಸೂಚಿ ನಿಯಮಗಳ ಉದಯ :**

ಸಿದ್ಧಾಂತ ಮತ್ತು ರೂಢಿಗಳಲ್ಲಿರುವ ಅಸಮಾನತೆಯೇ ಮತ್ತೊಂದು ಉದಯಿಸಲು ಕಾರಣವಾಗುತ್ತದೆ. ಈ ಧ್ಯೇಯಗಳ ಉದ್ದೇಶ ಈಡೇರಿಸಲು ವರ್ಗೀಕರಣ ಗ್ರಂಥಸೂಚಿ ನಿಯಮಗಳು (CCC) ಮತ್ತು ಆಂಗ್ಲೋ-ಅಮೇರಿಕನ್ ಗ್ರಂಥಸೂಚಿ ನಿಯಮಗಳು ಜಾರಿಯಲ್ಲಿ ಬಂದವು.

ಗ್ರಂಥಸೂಚಿ ಉದ್ದೇಶಗಳನ್ನು ರಂಗನಾಥನ್ ಹೀಗೆ ವಿವರಿಸುತ್ತಾರೆ. ಅಥವಾ ಈ ಕೆಳಗಿನಂತೆ ರೂಪಿಸುತ್ತಾರೆ. ಗ್ರಂಥಾಲಯ ಪಂಚ ಸೂತ್ರಗಳನ್ನು ಮಾರ್ಪಾಡಿಸುತ್ತ ಈ ಕೆಳಗಿನ ಹೇಳಿಕೆಗಳನ್ನು ರೂಪಿಸಿದ್ದಾರೆ. ಈ ಹೇಳಿಕೆಗಳು ಗ್ರಂಥಸೂಚಿಯ ಉದ್ದೇಶಗಳನ್ನು ನಿರ್ವಹಿಸುತ್ತಿವೆಯೆಂದು ಹೇಳಬಹುದು. ಈ ಹೇಳಿಕೆಗಳು ಗ್ರಂಥಾಲಯದ ಓದುಗರನ್ನು ತೃಪ್ತಿ ಪಡಿಸಲೇಬೇಕೆಂಬ ನಿಯಮವಿದ್ದರೂ ಗ್ರಂಥಗಳ ಬಗ್ಗೆ ಹೇಳುತ್ತಾರೆ. ಗ್ರಂಥಸೂಚಿಗಳ ಬಗ್ಗೆಯೂ ಈ ನಿಯಮಗಳನ್ನು ಅನ್ವಯಿಸಬಹುದು.



೧. ಗ್ರಂಥಕ್ಕೊಬ್ಬ ಓದುಗ / ಗ್ರಂಥಸೂಚಿಗೊಬ್ಬ ಓದುಗ.

೨. ಓದುಗನಿಗೊಂದು ಗ್ರಂಥ / ಓದುಗನಿಗೊಂದು ಗ್ರಂಥಸೂಚಿ.

೩. ಓದುಗನ ಸಮಯವನ್ನು ಉಳಿಸುವದು– ಇದರ ಮುಖ್ಯ ಉದ್ದೇಶ.



೪. ಸಿಬ್ಬಂದಿಯ ಸಮಯವನ್ನು ಉಳಿಸುವದು.

ಮೇಲಿನ ನಾಲ್ಕು ಉದ್ದೇಶಗಳು ರಂಗನಾಥನ್‌ರ ಗ್ರಂಥಾಲಯದ ಪಂಚಸೂತ್ರಗಳ ಅಡಿಯಲ್ಲಿ ಆಧಾರವಾಗಿಟ್ಟುಕೊಂಡು ಹುಟ್ಟಿವೆ.[೧೬] ಯಾಕೆಂದರೆ ಗ್ರಂಥಾಲಯ ವಿಜ್ಞಾನದ ನಿರ್ಮಾಣದಲ್ಲಿ ಪಂಚಸೂತ್ರಗಳ

ಕೊಡುಗೆ ಅಪಾರ. ಆ ಸೂತ್ರಗಳನ್ನು ನೆನೆಯದಿದ್ದರೆ ಹೇಗೆ? ಇದಲ್ಲದೆ ಕಟ್ಟರ್‌ನ ಸೂತ್ರ ಮಾತ್ರ ಮುಖ್ಯ ಉದ್ದೇಶಗಳನ್ನು ಪೂರ್ತಿ ಮಾಡುವದಾಗಿದೆ.

ಲುಬೆಟ್‌ಜ್ಕಿಯು ಗ್ರಂಥಸೂಚಿಯ ಉದ್ದೇಶವನ್ನು ಕಟ್ಟರ್ ಮತ್ತು ರಂಗನಾಥನ್ ಅವರಿಗಿಂತಲೂ ಸ್ಪಷ್ಟವಾಗಿ ವಿವರಿಸಿದ್ದಾನೆ.[೧೭]

೧) ಪ್ರಕಾಶನ ಮತ್ತು ಪುಸ್ತಕ ಸಿಗುವ ಸ್ಥಳದ ವಿವರಗಳನ್ನು ನೀಡುತ್ತಾನೆ. ಇದರಲ್ಲಿ ಪುಸ್ತಕದ ಆವೃತ್ತಿ, ಗ್ರಂಥಾಲಯದಲ್ಲಿ ದೊರಕುವ ಸ್ಥಳದ ವಿವರಗಳನ್ನು ನೀಡುತ್ತವೆ.

೨) ಪ್ರಕಟಣೆಯ ವಿವರಗಳೊಂದಿಗೆ ಮುದ್ರಣ, ಲೇಖಕನ ಬಗೆಗಿನ ವಿವರಗಳು ಮುಖ್ಯವಾದುದಾಗಿದೆ.

ಇವೆಲ್ಲ ಅಂಶಗಳೊಂದಿಗೆ ಅಮೆರಿಕಾ ಗ್ರಂಥಾಲಯ ಸಂಘಟನೆಯು ೧೯೪೯ ರಲ್ಲಿ ಗ್ರಂಥಸೂಚಿಯ ನಿಯಮಗಳನ್ನು ಸಂಘ ಪರಿಶೀಲಿಸಿ ಅನುಮೋದಿಸಿದ್ದು ಕಂಡುಬರುತ್ತದೆ.

ಪುಸ್ತಕದ ಶೀರ್ಷಿಕೆ, ಪರಿವಿಡಿ, ಮುದ್ರಣ, ಆವೃತ್ತಿಗಳು, ಭಾಷಾಂತರಗಳು, ತಿದ್ದುಪಡಿಗಳು, ಮರುಮುದ್ರಣ, ಎಲ್ಲ ವಿವರಗಳನ್ನು ನೀಡುತ್ತಾನೆ. ಅಲ್ಲದೆ ಸರ್ವಸಮ್ಮತ ಶೀರ್ಷಿಕೆಯಡಿ, ಲೇಖಕ ಮತ್ತು ಶೀರ್ಷಿಕೆಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಒದಗಿಸುವುದಾಗಿದೆ.

ಗ್ರಂಥಸೂಚಿಯ ಉದ್ದೇಶಗಳನ್ನು ಸಾರಾಂಶ ರೂಪದಲ್ಲಿ ಕೆಳಗಿನಂತೆ ಒದಗಿಸಬಹುದಾದರೆ– ಲೇಖಕನ ಹೆಸರು, ಮಾಲಿಕೆಯಾದರೆ ಮಾಲೆಯ ಸಂಪಾದಕ, ಪ್ರಕಟನೆಯ ವರ್ಷ, ಆವೃತ್ತಿಗಳು, ಆಕಾರ, ಪುಟಗಳು, ಪ್ರಕಾಶನದ ಸ್ಥಳ, ಅನೇಕ ಸ್ಥಳಗಳಲ್ಲಿ ಕೃತಿ ಪ್ರಕಟವಾಗಿದ್ದರೆ, ಎಲ್ಲ ಸ್ಥಳಗಳ ಹೆಸರು, ಕೃತಿಯ ಹಕ್ಕುಗಳು, ಕಾಪಿರೈಟ್, ಇತ್ತೀಚಿನ ಆವೃತ್ತಿಗಳ ವಿವರಗಳು, ಅಂತರ್‌ರಾಷ್ಟ್ರೀಯ ಪುಸ್ತಕದ ನಂಬರ್, ಅದರ ಬೆಲೆ, ಉಪಯೋಗಿಸಿದ ಕಾಗದದ ಬಗೆಗಿನ ವಿವರಗಳು, (ಇದರಲ್ಲಿ ಸರಕಾರದಿಂದ ರಿಯಾಯ್ತಿ ದರದಲ್ಲಿ ಕಾಗದ ಸಿಕ್ಕಿದ್ದರೆ, ಅದರ ಮಾಹಿತಿ) ಮುದ್ರಣಕಾರನ ಸಂಸ್ಥೆಯ ಹೆಸರು, ಮುದ್ರಿಸುವ ಮುದ್ರಣದ ಹೆಸರು, ಇತ್ಯಾದಿ ವಿವರಗಳನ್ನು ಗ್ರಂಥಸೂಚಿ ಒದಗಿಸುತ್ತದೆ. ಒಟ್ಟಾರೆ ಕೃತಿಯ ಬಗೆಗಿನ ಮಾಹಿತಿ ಒಂದು ವಿವರಣಾ ಪಟ್ಟಿಯಾಗಿರುತ್ತದೆಯಲ್ಲದೆ, ಗ್ರಂಥಾಲಯದಲ್ಲಿ ಅದು ಸಿಗುವ ಸ್ಥಳವನ್ನು ಗ್ರಂಥಸೂಚಿ ನಿರ್ದೇಶಿಸುತ್ತದೆ.

## ೧.೨ : ಅಧ್ಯಯನ ವ್ಯಾಪ್ತಿ

ಭರತಖಂಡದ ಅಖಂಡ ಪರಂಪರೆಯಲ್ಲಿ ಗ್ರಂಥಸೂಚಿಗಳಿಗೆ ಮಹತ್ವದ ಸ್ಥಾನ ಸಲ್ಲುತ್ತದೆ. ಹೀಗೆ ಗ್ರಂಥಸೂಚಿಗಳಿಗೆ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದ ಮಹತ್ವವನ್ನು ಗಳಿಸಿಕೊಟ್ಟ ಕೀರ್ತಿ ಕರ್ನಾಟಕದ

ಪ್ರಮುಖ ಧರ್ಮಗಳದಾಗಿದೆ. ಆಯಾ ಧರ್ಮಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಸೃಷ್ಟಿಸಿದ ಲೌಕಿಕ - ಆಗಮಿಕ ಸಾಹಿತ್ಯ ಕೃಷಿಯ ಫಲವೆನಿಸಿವೆ. ಈ ಕನ್ನಡ ಇಂಗ್ಲೀಷ ಗ್ರಂಥಸೂಚಿಗಳು.

ಕನ್ನಡ ನಾಡಿನ ಜನತೆ ಬರೆಯಿಸುವದರ ಮೂಲಕ ಪೋಷಕರಾಗಿ, ಬರೆಯುವದರ ಮೂಲಕ ಬರೆಹಗಾರರಾಗಿ ಸೂಚಿಗಳ ನಿರ್ಮಾಣ ಕಾರ್ಯವನ್ನು ಜೀವಂತವಾಗಿಟ್ಟುಕೊಂಡಿರುವ ನಮ್ಮ ನಾಡನ್ನು, ಅಪಾರವಾದ ಸಾಹಿತ್ಯ ನಿರ್ಮಾಣವನ್ನು ತನ್ನ ಒಡಲಲ್ಲಿ ಅಡಗಿಸಿಟ್ಟುಕೊಂಡಿರುವ ಭಂಡಾರಗಳನ್ನಾಗಿಸಿದ್ದಾರೆ. ಇದು ವ್ಯಕ್ತಿಯಿಂದ ವ್ಯಕ್ತಿಗೆ ಜನಾಂಗದಿಂದ ಜನಾಂಗಕ್ಕೆ, ತಲೆಮಾರಿನಿಂದ ತಲೆಮಾರಿಗೆ ಬಳುವಳಿಯಾಗಿ, ಧರ್ಮದತ್ತಿಯಾಗಿ ಉಳಿದುಕೊಂಡು ಬಂದಿದೆ.

ಇಂಥ ಸೂಚಿಗಳು ಅರಸರ ಗ್ರಂಥ ಭಂಡಾರಗಳಲ್ಲಿ, ಮಠ ಮಾನ್ಯರುಗಳಲ್ಲಿ, ಅಗ್ರಹಾರಗಳಲ್ಲಿ, ದೇವಸ್ಥಾನಗಳಲ್ಲಿ, ಬದುಕಿನ ಸ್ವಸುಖದ - ಪರಸುಖದ ಕಾಮಧೇನುಗಳೆಂದೋ ಭಾವಿಸಿ ಇಂದಿನವರೆಗೂ ಕನ್ನಡಿಗರು ಅವುಗಳನ್ನು ಪೂಜ್ಯ ಭಾವನೆಯಿಂದ ಸಂರಕ್ಷಿಸಿಕೊಂಡು ಬಂದಿದ್ದಾರೆ.

ಈಚೆಗೆ ಪಾಶ್ಚಾತ್ಯ ಸಂಸ್ಕೃತಿಯ ದಟ್ಟ ನೆರಳು ನಮ್ಮ ಸಂಸ್ಕೃತಿಯ ಮೇಲೆ ಹರಡುತ್ತಿದ್ದಂತೆ, ನಮ್ಮ ಇಡೀ ಬದುಕನ್ನು ಅಂಕೆಯಲ್ಲಿಟ್ಟುಕೊಂಡಿದ್ದ ಧರ್ಮಗಳ ಹಿಡಿತ ಸಡಿಲುಗೊಂಡಿತು. ಬದುಕಿನ ಮೌಲ್ಯಗಳು ವ್ಯತ್ಯಸ್ತಗೊಂಡು ಭೌತಿಕ ಜೀವನವೇ ಪ್ರಧಾನ ಸ್ಥಾನ ಪಡೆಯಿತು. ಇದರ ಪರಿಣಾಮವಾಗಿ ನಮ್ಮ ಪ್ರಾಚೀನರು ಬದುಕಿನ ಹಿಂದೆ ಗೂಢವಾಗಿಟ್ಟುಕೊಂಡು ಬಂದಿದ್ದ ಮೌಲ್ಯಗಳು ಅಲುಗಾಡಿದವು. ಪೂರ್ವಿಕರು ಉಳಿಸಿಕೊಂಡು ಬಂದಿದ್ದ ಸಾಂಸ್ಕೃತಿಕ ಸಂಪತ್ತು ಅಲಕ್ಷಿತವಾಗತೊಡಗಿತು. ಅವುಗಳಲ್ಲಿ ಹಸ್ತಪ್ರತಿಗಳು, ಓಲೆಗರಿಗಳು, ಜಾನಪದ ಸಂಗ್ರಹಗಳು, ಸೂಚಿಗಳು ಇತ್ಯಾದಿ..... ಇತ್ಯಾದಿಗಳನ್ನು ಉದ್ದ ಪಟ್ಟಿ ಮಾಡಬಹುದು.

ಒಂದೆಡೆ ಪಾಶ್ಚಾತ್ಯ ನಾಗರಿಕತೆಯೊಂದಿಗೆ ನಮ್ಮಲ್ಲಿ ಪ್ರವೇಶ ಪಡೆದ ಮುದ್ರಣ ಯಂತ್ರಗಳಿಂದಾಗಿ, ಮುದ್ರಿತ ಕೃತಿಗಳು ಅನಾಯಾಸ ಕೈಗೆ ಬಂದು ಅವುಗಳಿಗೆ ಮೂಲವಾಗಿದ್ದ ಹಸ್ತಪ್ರತಿಗಳು, ಹಸ್ತಪ್ರತಿ ಸೂಚಿಗಳು ಅಲಕ್ಷ್ಯಕ್ಕೆ ತುತ್ತಾಗುವಂತಾಯಿತು. ಇನ್ನೊಂದೆಡೆ ನಮ್ಮ ಪೂರ್ವಿಕರು ಉಳಿಸಿಕೊಂಡು ಬಂದಿದ್ದ ಸಾಂಸ್ಕೃತಿಕ ಸಂಪತ್ತು ಅಲಕ್ಷಿತವಾಗತೊಡಗಿತು. ಸಂಗ್ರಹಿಸಿಟ್ಟಿದ್ದ ಹಸ್ತಪ್ರತಿಗಳನ್ನು ವಿಶೇಷ ಕಾಳಜಿವಹಿಸಿ ಕಾಪಾಡಿಕೊಳ್ಳುವದು ವ್ಯರ್ಥಶ್ರಮವೆಂದು ಭಾವಿಸಿದ ಮಠ - ಮಾನ್ಯ ಮನೆತನಗಳು ಒಡೆಯರು ಹಸ್ತಪ್ರತಿಗಳನ್ನು, ಗ್ರಂಥಸೂಚಿಗಳನ್ನು (ಪ್ರಾಚೀನರಲ್ಲಿ ಅವು ಯಾದಿ ರೂಪಗಳಲ್ಲಿರುತ್ತಿದ್ದವು) ಅಟ್ಟಕ್ಕೆ ಏರಿಸಿದ, ಸಂದೂಕದಲ್ಲಿಳಿಸಿದ ಇನ್ನೂ ಕಿರಿಕಿರಿಯಾದಾಗ ಒಲೆಗೆಕ್ಕಿ ಮೈ ತೊಳೆದುಕೊಂಡ ನಿದರ್ಶನಗಳಿವೆ.

ಇಂಥ ಪರಿಸ್ಥಿತಿಯನ್ನು ಹತೋಟಿಗೆ ತರಲು ವಿಶ್ವವಿದ್ಯಾಲಯಗಳು, ಕೆಲವು ಮಠ ಮಾನ್ಯಗಳು, ಆಸಕ್ತ ವಿದ್ವಾಂಸರು ಹಸ್ತಪ್ರತಿಗಳನ್ನು ಸಂಗ್ರಹಿಸಿ ಸೂಚಿ ಕಾರ್ಯದಲ್ಲಿ ತೊಡಗಿದರು. ಜಾಗರೂಕತೆಯಿಂದ ಕಾಪಾಡಲು

ಮುಂದಾಗಿದ್ದಾರೆ. ಹಲವಾರು ಕೃತಿಗಳನ್ನು ಶಾಸ್ತ್ರೀಯವಾಗಿ ಗ್ರಂಥಸೂಚಿಗಳನ್ನು ತಯಾರಿಸಿದ್ದಾರೆ. ನಮ್ಮಲ್ಲಿ ಬಹುಮಟ್ಟಿಗೆ ಮಂದಗತಿಯಲ್ಲಿ ನಡೆದಿರುವ ಈ ಸೂಚಿ ಕ್ರಿಯಾ ಕಲಾಪದಿಂದಾಗಿ ಹಲವು ವಿದ್ವಾಂಸರಿಗೆ ಗ್ರಂಥಸೂಚಿಗಳಿಂದ ನಾವು ಪಡೆಯಬೇಕಾದುದನ್ನು ಪಡೆದಿದ್ದೇವಲ್ಲ ಅಥವಾ ಪಡೆಯುತ್ತಿದ್ದೇವಲ್ಲ ಎಂದೆನಿಸಿ ತೃಪ್ತಿಯಾವರಿಸಿರಬಹುದು. ಸಂತೋಷದ ಸಂಗತಿಯೆಂದರೂ ಕನ್ನಡದಲ್ಲಿ ಈ ರಚನೆ ಆಸಕ್ತಿದಾಯಕವಲ್ಲದಿದ್ದರೂ ನಿರಾಸೆಯನ್ನಂತೂ ಮಾಡುವದಿಲ್ಲ. ವಿದ್ವಾಂಸರು ಅನೇಕ ಗ್ರಂಥಸೂಚಿ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇನ್ನೂ ಕೆಲವು ವಿದ್ವಾಂಸರಿಗೆ ಇಂಥ ಕಾರ್ಯ ಪೂರೈಸಿಕೊಂಡರೆ ಆಯಿತೆ ? ಅವುಗಳ ಪ್ರಯೋಜನ ಅಷ್ಟು ಸೀಮಿತವೆ ? ಎಂಬ ಪ್ರಶ್ನೆಗಳು ಕಾಡಿದಂತಿವೆ.

ಈಗ. ಈ ಹಸ್ತಪ್ರತಿಸೂಚಿಗಳಿಂದ ಕವಿಚರಿತೆಗೆ. ನಾಡಿನ ಇತಿಹಾಸಕ್ಕೆ ಪ್ರಯೋಜನವಿದೆ. ಕನ್ನಡಿಗರಿಗೆ ವಿದ್ಯಾಭಿಮಾನದ ಹೆಜ್ಜೆಗಳನ್ನು ಇವುಗಳಿಂದ ಗುರುತಿಸಿಕೊಳ್ಳುವ ಸಾಧ್ಯತೆಗಳಿವೆ. ಹಸ್ತಪ್ರತಿಸೂಚಿಗಳ ನಿರ್ಮಾಣ ವಿಧಾನ. ನಿರ್ಮಾತೃಗಳ ಜೀವನ - ವೃತ್ತಿ. ದಾನಿಗಳ - ಪರಿಗ್ರಾಹಕರ ಉದ್ದೇಶಗಳನ್ನು ತಿಳಿದುಕೊಳ್ಳಬಹುದಾಗಿದೆ. ಕನ್ನಡಿಗರ ಸಾಂಸ್ಕೃತಿಕ ಜೀವನದ ಕೆಲ ಮುಖಗಳನ್ನಾದರೂ ಇವು ಪ್ರತಿಫಲನಗೊಳಿಸುತ್ತವೆ ಎಂಬ ಹೊಸ ವಿಚಾರಗಳು ವಿದ್ವಾಂಸರಲ್ಲಿ ಅಂಕುರಿಸಿವೆ. ಈ ಹೊಸ ಆಲೋಚನೆಗಳು ಮುಂದೆ ಸ್ವರೂಪ ತಾಳಲಿರುವ ಹಸ್ತಪ್ರತಿಗಳು ಅವುಗಳ ಸೂಚಿಗಳನ್ನು ಕುರಿತು ಗ್ರಂಥಸೂಚಿ ಶಾಸ್ತ್ರದ ಕೆಲವು ಮುಖಗಳನ್ನು ಕಂಡುಕೊಳ್ಳಲು ಅನುವು ಮಾಡಿಕೊಟ್ಟಿದೆ.

ಕನ್ನಡದಲ್ಲಿ ಗ್ರಂಥಸೂಚಿ ರಚನೆಯ ಅನೇಕ ಪ್ರಯೋಗಗಳು ನಡೆದಿವೆ. ಈ ಕುರಿತು ಡಾ. ಕರಿಸಿದ್ದಪ್ಪ (ಸಿ. ಆರ್.) ಅವರ : ಕ್ರಿ. ಶ. ೧೮೦೦ ರಿಂದೀಚೆಗೆ ಪ್ರಕಟವಾದ ಕನ್ನಡ ಸಂದರ್ಭ ಗ್ರಂಥಗಳು : ಒಂದು ತಾಂತ್ರಿಕ ಅಧ್ಯಯನ– ಈ ಸಂಶೋಧನಾ ಸಂಪ್ರಬಂಧ ಸೂಚಿಯ ರಚನೆಯಲ್ಲಿ ಒಂದು ಮುಖ್ಯ ಮೈಲುಗಲ್ಲು.[೧೮] ನಂತರ ಅಶೋಕ ಯ. ಅಸುಂಡಿಯವರ : ಕನ್ನಡದಲ್ಲಿ ಸಂದರ್ಭ ಗ್ರಂಥಗಳು : ಸಮಗ್ರ ಸಮೀಕ್ಷೆ ಮತ್ತು ವಿವರಣಾತ್ಮಕ ಸೂಚಿ[೧೯] ಮತ್ತೊಂದು ಮುಖ್ಯ ಕೃತಿ. ಈ ಎರಡು ಕೃತಿಗಳು ಸೂಚಿಗಳ ಬಗೆಗಿನ ಇತಿಹಾಸ ಮತ್ತು ಬೆಳವಣಿಗೆಗಳ ಬಗ್ಗೆ ಸಮಗ್ರ ಅಧ್ಯಯನಕ್ಕೆ ನಾಂದಿ ಹಾಡಿವೆ. ಅಲ್ಲಲ್ಲಿ ಕಿರು ಪ್ರಯತ್ನಗಳು ನಡೆದಿವೆ.

ಮೇಲಿನ ವಿದ್ವಾಂಸರ ಪ್ರಯತ್ನಗಳ ಗ್ರಂಥಸೂಚಿ ರಚನೆಯ ಸಮಗ್ರ ಬೆಳವಣಿಗೆಗಳ ಮೇಲೆ ಬೆಳಕು ಚೆಲ್ಲಿ ಅನೇಕ ವಿಷಯಗಳನ್ನು ಇಲ್ಲಿ ತೆರೆದಿಟ್ಟಿವೆ. ಗ್ರಂಥಸೂಚಿ ರಚನಾ ಸಂಬಂಧಿ ಶಾಸ್ತ್ರೀಯ ಕೆಲಸಗಳು ಇವೆಯೆಂದು ಹೇಳಬಹುದು. ನಂತರ ಸೂಚಿಗಳ ಪ್ರಕಟನೆ ಸಾಕಷ್ಟು ನಡೆದು ಸೂಚಿಗಳು ಪ್ರಕಟವಾಗಿವೆ. ಈ ಕುರಿತು ಆಂಗ್ಲಭಾಷೆಯಲ್ಲಿ ಸಾಕಷ್ಟು ಬಗೆಯ ಗ್ರಂಥಸೂಚಿಗಳು ಲಭ್ಯವಿವೆ. ಆ ರೀತಿ ಕನ್ನಡ ಗ್ರಂಥಗಳಿಗೆ ಸೂಚಿಗಳು ಕಡಿಮೆ ಸಂಖ್ಯೆಯಲ್ಲಿವೆ. ಮೈಸೂರು ವಿಶ್ವವಿದ್ಯಾಲಯವು ೧೮೧೭ ರಿಂದ ೧೯೭೮ ರ ವರೆಗೆ ಪ್ರಕಟವಾದ ಕನ್ನಡ ಗ್ರಂಥಗಳಿಗೆ ವಿವರಣಾತ್ಮಕ

ಸೂಚಿಯನ್ನು ೭ ಸಂಪುಟಗಳಲ್ಲಿ ಹೊರ ತಂದಿದೆ. ಈ ಏಳು ಸಂಪುಟಗಳಲ್ಲಿ ಸುಮಾರು ೨೫,೦೦೦ ಗ್ರಂಥಗಳ ವಿವರಣೆಯಿದೆ. ನಂತರ ೧೯೬೯ ರಿಂದ ೧೯೮೦ ರ ವರೆಗಿನ ಅವಧಿಯಲ್ಲಿ ಮುದ್ರಣಗೊಂಡ ೧೩,೭೨೮ ಕನ್ನಡ ಗ್ರಂಥಗಳಿಗೆ ವಿವರಣಾತ್ಮಕ ಸೂಚಿಯನ್ನು ವಾರ್ಷಿಕ ಸಂಪುಟಗಳ ರೂಪದಲ್ಲಿ ೪ ಸಂಪುಟಗಳಲ್ಲಿ ಹೊರತಂದಿದೆ. ಇವುಗಳ ಸಂಪಾದಕ ಮಂಡಳಿಗಳು ಸದಸ್ಯರಾಗಿ ಡಾ. ದೇ. ಜವರೇಗೌಡ, ಡಾ. ಪ್ರಭುಶಂಕರ, ಡಾ. ಹಾ. ಮಾ. ನಾಯಕ. ಶ್ರೀ ಕೆ. ಎಸ್. ದೇಶಪಾಂಡೆ ಇವರು ಮಾಡಿದ ಕಾರ್ಯ ಪ್ರಶಂಸನೀಯವಾಗಿದೆ.[೨೦] ಇದು ಸಂಶೋಧನಾ ಕಾರ್ಯದಲ್ಲಿ ಒಂದು ಆತಂಕವೇ ಸರಿ.[೨೧]

ಭಾರತ ಸರಕಾರ ಗ್ರಂಥ ಪೂರೈಕೆ ಕಾಯಿದೆಯಂತೆ (Book delever act) ಭಾರತೀಯ ಗ್ರಂಥಪ್ರಕಾಶಕರು ಕಲಕತ್ತೆಯ ರಾಷ್ಟ್ರೀಯ ಗ್ರಂಥಾಲಯದಲ್ಲಿ ಸ್ಥಾಪಿಸಲಾಗಿರುವ ರೆಫರನ್ಸ್ ಲಾಯಬ್ರರಿಗೆ ಎರಡು ಪ್ರತಿಗಳನ್ನು ಪುಕ್ಕಟೆಯಾಗಿ ಕಳಿಸಬೇಕು. ಹೀಗೆ ಕಳಿಸಿದ ಗ್ರಂಥಗಳ ರಾಷ್ಟ್ರೀಯ ಗ್ರಂಥಸೂಚಿಯನನ್ನು ೧೯೫೮ ರಿಂದ ಪ್ರಕಟಮಾಡುತ್ತಾ ಬರಲಾಯಿತು. ಇದರ ಭಾಗವಾದ ಕನ್ನಡ ರಾಷ್ಟ್ರೀಯ ಗ್ರಂಥಸೂಚಿಯನ್ನು ೧೯೫೮ ರಿಂದ ೧೯೬೨ ರ ವರೆಗೆ ಐದು ವಾರ್ಷಿಕ ಸಂಪುಟಗಳಲ್ಲಿ ಪ್ರಕಟಿಸಲಾಯಿತು. ೧೯೬೩ ರಿಂದ ತ್ರೈಮಾಸಿಕವಾಗಿ ಸಂಪುಟಗಳಲ್ಲಿ ೧೯೭೬ ರ ವರೆಗೆ ಪ್ರಕಟಿಸಲಾಯಿತು. ಅನಂತರ ಅದೂ ನಿಂತು ಹೋದುದು ದುರ್ದೈವದ ಸಂಗತಿ. ಕರ್ನಾಟಕ ರಾಜ್ಯದ ಸಾರ್ವಜನಿಕ ಗ್ರಂಥಾಲಯ ಇಲಾಖೆಯಿಂದ ಇಂಥದೇ ಕಾರ್ಯ ಪ್ರಾರಂಭವಾಗಿ ಪುನಃ ಸ್ಥಗಿತಗೊಂಡಿರುವ ವಿಷಯ ಶೋಚನೀಯ.

**ಕನ್ನಡದಲ್ಲಿ ಗ್ರಂಥಸೂಚಿ ರಚನೆಗಳು :**

ಕನ್ನಡದಲ್ಲಿ ಕೆಲವು ವಿಷಯ ಗ್ರಂಥಸೂಚಿಗಳು (Subject Bibliographies) ಪ್ರಕಟವಾಗಿವೆ. ಅವುಗಳಲ್ಲಿ ಡಾ. ಹಾ. ಮಾ. ನಾಯಕರು ಶಾಸ್ತ್ರೀಯವಾಗಿ ಸಂಕಲಿಸಿದ ' ಕನ್ನಡ ಜಾನಪದ ಗ್ರಂಥಸೂಚಿ ' ಯ (೧೯೭೪) ಮಹತ್ವದ್ದಾಗಿದೆ. ಇದರಲ್ಲಿ ೫೦೦ ಜಾನಪದ ಗ್ರಂಥಗಳನ್ನು ಉಲ್ಲೇಖಿಸಲಾಗಿದೆ.[೨೨] ಕನ್ನಡದ ಕೆಲವು ಸಾಹಿತ್ಯಜ್ಞರನ್ನು ಕುರಿತ ವ್ಯಕ್ತಿಗತ ಗ್ರಂಥಸೂಚಿಗಳು (Indivisual Author Bibliography) ಬೆಳಕು ಕಂಡಿವೆ. ಡಾ. ಹಾ. ಮಾ. ನಾಯಕರು ಸಿದ್ಧಪಡಿಸಿದ ' ಗೋಕಾಕ ಗ್ರಂಥಾವಳಿ ' ಮತ್ತು ' ಮಾಸ್ತಿಯವರ ಪುಸ್ತಕಗಳು ', ಡಾ. ಎಚ್. ಎಸ್. ಸುಜಾತಾ ಅವರು ಸಂಕಲಿಸಿದ ' ಹಾಮಾನಾ ಹೊತ್ತಗೆಗಳು ' (೧೯೯೧), ಡಾ. ಎಸ್. ಆರ್. ಗುಂಜಾಳರ ' ಬಸವಸಾಹಿತ್ಯ ದರ್ಪಣ ', ಶ್ರೀ ಎಸ್. ಶಿವಣ್ಣವರ ' ಬಸವಪಥ ' ಪತ್ರಿಕೆಯಲ್ಲಿ ಸಂಪುಟ - ೨, ಸಂಚಿಕೆ - ೩, ಆಗಸ್ಟ್ (೧೯೮೦) ಪ್ರಕಟಿಸಿದ ಡಾ. ಫ. ಗು. ಹಳಕಟ್ಟಿಯವರು ಲೇಖನ ಕೃತಿ ಇತ್ಯಾದಿ ಸೂಚಿಗಳು ಪ್ರಮುಖವಾಗಿವೆ.

ಸಾಹಿತಿಗಳಿಗೆ ಅವರ ಅಭಿಮಾನಿಗಳು ಅರ್ಪಿಸಿದ ಗೌರವ ಗ್ರಂಥಗಳಲ್ಲಿ ಅವರವರ ಕೃತಿಗಳ ಸೂಚಿಗಳನ್ನು ಸೇರಿಸಿರುವರು. ಎಂ. ಆರ್. ಕೃ. : ಜೀವನ ಸಾಧನೆ (೧೯೭೧), ' ವಿನಾಯಕ ವಾಙ್ಮಯ ' ((೧೯೬೯), ' ತಳುಕಿನ ವೆಂಕಣ್ಣಯ್ಯ ಸ್ಮಾರಕ : ಸ್ವಸ್ತಿ (೧೯೮೩), ಉತ್ತಂಗಿ ಚೆನ್ನಪ್ಪನವರು : ಜೀವನ ಕೃತಿಗಳು (೧೯೮೨), ಹಳಕಟ್ಟಿಯವರ ಸ್ಮರಣ ಗ್ರಂಥ ' ವಚನ ಪಿತಾಮಹ ' ೧೯೭೮ ಮುಂತಾದ ಹಲವು ಗ್ರಂಥಗಳಲ್ಲಿ ಆಯಾ ಸಾಹಿತ್ಯಜ್ಞರ ಸಮಗ್ರ ವಾಙ್ಮಯ ಸೂಚಿಗಳು ಜೋಡಿಸಲ್ಪಟ್ಟಿವೆ.

ಡಾ. ಜಿ. ಎಂ. ಹೆಗಡೆಯವರು ಬರೆದಿರುವ ' ವೀರಶೈವ ಅಧ್ಯಯನ ಸಂಸ್ಥೆ ' ಗ್ರಂಥವು ಬೆಳಗಾವಿ, ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾಡೆಮಿಯಿಂದ ಬೆಳಕು ಕಂಡಿದೆ (೧೯೯೪). ಇದರಲ್ಲಿ ಪಿಎಚ್.ಡಿ. ಮಹಾಪ್ರಬಂಧ ಸಾಹಿತ್ಯ, ' ವಚನ ಸಾಹಿತ್ಯ ಸಂಪುಟ ', ' ಸಂಪುಟಗಳು ', ' ಸ್ವರವಚನ ಸಾಹಿತ್ಯ ', ' ಪ್ರಾಚೀನ ಸಾಹಿತ್ಯ ', ' ಆಧುನಿಕ ಸಾಹಿತ್ಯ ', ' ಅಭಿನಂದನ ಗ್ರಂಥ ಸಾಹಿತ್ಯ ', ' ಅನುವಾದ ಸಾಹಿತ್ಯ ', ' ವೀರಶೈವ ಪುಣ್ಯ ಪುರುಷರ ಮಾಲೆ ' ಈ ಶಿರೋನಾಮೆಗಳ ಅಡಿಯಲ್ಲಿ ಗ್ರಂಥಗಳು ಪ್ರಕಟವಾಗಿರುವ ವಿಷಯ ವಿವೇಚಿಸಲ್ಪಟ್ಟಿದೆ. ಇದು ಒಂದು ವಿಶಿಷ್ಟ ಬಗೆಯ ಸೂಚಿಯೇ ಆಗಿದೆ. ಶ್ರೀ ಶೇಖರ ಇಡ್ಯ ಮತ್ತು ಮಾಲಿನಿ ಮಲ್ಯರು ಶಿವರಾಮ ಕಾರಂತರ ಎಲ್ಲ ಗ್ರಂಥಗಳಿಗೆ ' ಕೃತಿ ಕರಂಡ ' ಎಂಬ ಹೆಸರಿನಲ್ಲಿ ಸೂಚಿ ಸಿದ್ಧಪಡಿಸಿರುವರು (೧೯೯೧).

ಮೈಸೂರು ವಿಶ್ವವಿದ್ಯಾಲಯ ಪ್ರಸಾರಾಂಗದ ಕನ್ನಡ ಗ್ರಂಥಸೂಚಿಯ ಹನ್ನೊಂದು ಸಂಪುಟಗಳು ಸಂಪಾದಕರು ಡಾ. ಹಾ. ಮಾ. ನಾಯಕರು ಒಬ್ಬರು. ' ಗೋವಿಂದ ಪೈ ವಾಙ್ಮಯ ದರ್ಶನ ' ಸಂಪಾದಕರು. ಮ. ವಿ. ನಾಯಕರು, ಶ್ರೀನಿವಾಸ ಹಾವನೂರ, ಸುರುಚಿ ನೂರು : ಸಂ. ಸಿ. ಪಿ. ಕೆ., ' ಐ. ಬಿ. ಎಚ್. ಗ್ರಂಥಾವಳಿ : ಸಂಪಾದಕ : ಟಿ. ವಿ. ವೆಂಕಟರಮಣಯ್ಯ ಕೆಲವು ಮುಖ್ಯ ಗ್ರಂಥಸೂಚಿಗಳು.[೨೩]

ಸಂಕ್ರಮಣ ಶತಕ : ಸಿ. ಆರ್. ಕರಿಸಿದ್ದಪ್ಪನವರು ಸಂಕಲಿಸಿರುವ ಈ ಕೃತಿಸೂಚಿಯಲ್ಲಿ ' ಸಂಕ್ರಮಣ ' ದ ನೂರು ಸಂಚಿಕೆಗಳಲ್ಲಿನ ಲೇಖನಸೂಚಿ, ಲೇಖನ ನಿರ್ದೇಶಿಗಳನ್ನು ಸಂಕ್ರಮಣ ಶತಕದಲ್ಲಿ ದಾಖಲಿಸಿದ್ದಾರೆ.[೨೪] ಕನ್ನಡ ಸಾಹಿತ್ಯದ ಮುನ್ನಡೆಯಲ್ಲಿ ಎಂ. ಆರ್. ಸಣ್ಣರಾಮೇಗೌಡರ ' ಲೇಖಕ ಸೂಚಿ ', ಟಿ. ವಿ. ಸುಬ್ರಹ್ಮಣ್ಯರ ' ಕನ್ನಡ ಭಾಷಾ ಸಾಹಿತ್ಯ ಲೇಖನ ಸೂಚಿ ' ಮತ್ತು ಪಿ. ಕೆ. ಪಾಟೀಲರ " ಅಭಿನಂದನ ಗ್ರಂಥಗಳ ಲೇಖನಸೂಚಿ " ಮೊದಲಾದವುಗಳು ಸಾಹಿತಿಗಳಿಗೆ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ಬರಹಗಾರರಿಗೆ ಬಹಳ ಉಪಯುಕ್ತವಾಗಿವೆ.[೨೫]

ಇಷ್ಟೇ ಅಲ್ಲದೆ ಹಲವಾರು ನಿಯತಕಾಲಿಕೆಗಳು ಕ್ರಮವಾಗಿ ತಮ್ಮ ಸಂಪುಟಗಳ ಲೇಖನ - ನಿರ್ದೇಶಿಯನ್ನು ಪ್ರಕಟಿಸುತ್ತಿರುವದು ಸಾಕಷ್ಟು ಅನುಕೂಲಕರವಾಗಿದೆ. ಈ ಮಹಾಪ್ರಬಂಧದ ವಿಷಯವು ಒಟ್ಟು ಆರು ಅಧ್ಯಾಯಗಳಲ್ಲಿ

ಹರಡಿಕೊಂಡಿದೆ. ಪ್ರಾರಂಭದ ಅಧ್ಯಾಯ ಒಂದರಲ್ಲಿ ' ಪರಿಚಯ ಮತ್ತು ಪ್ರವೇಶ ' – ಇದರಲ್ಲಿ ಗ್ರಂಥಸೂಚಿಯ ಪ್ರಯತ್ನಗಳು, ಬೆಳವಣಿಗೆ, ಪೂರ್ವ ಇತಿಹಾಸ ಒಳಗೊಂಡಿರುತ್ತದೆ. ಪುಸ್ತಕ ಬೆಳವಣಿಗೆಯ ಕುರಿತು, ಮುದ್ರಣ ಕುರಿತು, ಮುದ್ರಣ ಬರುವದಕ್ಕಿಂತಲೂ ಪುಸ್ತಕದ ಪೂರ್ವ ಇತಿಹಾಸದ ಬೆಳವಣಿಗೆಗಳು, ಶಿಲಾಯುಗದ ಕಾಣಿಕೆಗಳು, ಮಠಮಾನ್ಯಗಳ ಕಾಣಿಕೆ, ಅಗ್ರಹಾರ, ದೇವಸ್ಥಾನಗಳ ಕಾಣಿಕೆಗಳು, ಮನೆತನಗಳು (ಕೆಲವು ವಿಶಿಷ್ಟವಾಗಿ ಕೆಲಸ ಮಾಡಿವೆ) ವಿಶೇಷವಾಗಿ ಲಿಪಿಕಾರರಾಗಿ, ಪುಸ್ತಕ ಸಂಗ್ರಹಗಳಿಗಾಗಿ ಕಾರ್ಯ ಮಾಡಿದ, ಮಾಡುತ್ತಿರುವವರ ಬಗೆಗಿನ ಇತಿಹಾಸ ಮತ್ತು ಬೆಳವಣಿಗೆಯನ್ನು ಮೊದಲನೆ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಸೂಚಿ : ಇತಿಹಾಸ ಮತ್ತು ಬೆಳವಣಿಗೆ ಕುರಿತು ಚರ್ಚಿಸಲಾಗಿದೆ. ವಿಶೇಷವಾಗಿ ಗ್ರಂಥಸೂಚಿ ವ್ಯಾಖ್ಯೆಗಳು, ವಿವಿಧ ವಿದ್ವಾಂಸರ ಉಲ್ಲೇಖಗಳು, ಆಂಗ್ಲ ಮತ್ತು ಕನ್ನಡದಲ್ಲಿನ ವ್ಯಾಖ್ಯೆಗಳನ್ನು ಇಲ್ಲಿ ನಿರೂಪಿಸಲಾಗಿದೆ. ಗುರಿಗಳು, ಉದ್ದೇಶಗಳು, ಮುಖ್ಯ ಕಾರ್ಯಚಟುವಟಿಕೆಗಳು ಇತ್ಯಾದಿಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಅಧ್ಯಾಯ ಮುಖ್ಯವಾಗಿ ಸೂಚಿಯ ವ್ಯಾಖ್ಯೆಗಳು, ಗುರಿಗಳು, ಉದ್ದೇಶಗಳು, ಕಾರ್ಯಚಟುವಟಿಕೆಗಳಿಗೆ ಮೀಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕನ್ನಡ ಸಂದರ್ಭ ಸಾಹಿತ್ಯದಲ್ಲಿ ಸೂಚಿಗಳು ಕುರಿತದ್ದಾಗಿದೆ. ಮುಖ್ಯವಾಗಿ ಪ್ರಕಟಿತ ಸೂಚಿಗಳ ರೂಪರೇಷೆ ಮತ್ತು ಕನ್ನಡದಲ್ಲಿ ಇತ್ತೀಚಿಗಿನ ಬೆಳವಣಿಗೆಗಳ ಮಹತ್ವವನ್ನು ಚರ್ಚಿಸಲಾಗಿದೆ. ಇತ್ತೀಚಿಗೆ ಕನ್ನಡದಲ್ಲಿ ಎಲ್ಲ ವಿಷಯಗಳ ಬಗೆಗಿನ ಸೂಚಿಗಳು ಬೆಳಕು ಕಾಣಲು ಹತ್ತಿವೆ. ಹೀಗಾಗಿ ಸಂಶೋಧಕರು, ವಿದ್ವಾಂಸರು ಗಮನ ಹರಿಸಿದ್ದಾರೆ ಎಂದು ಅರ್ಥವಾಗುತ್ತದೆ. ಈ ಅಧ್ಯಾಯವು ಅತ್ಯಂತ ಮಹತ್ವದ್ದಾಗಿದ್ದು ಮಹಾಪ್ರಬಂಧದ ರಚನೆಯಲ್ಲಿ ಈ ಅಧ್ಯಾಯಕ್ಕೆ ಹೆಚ್ಚಿನ ಶ್ರಮ, ವೇಳೆ, ತಾಳ್ಮೆಯಿಂದ ಈ ಅಧ್ಯಾಯವನ್ನು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಸೂಚಿಗಳ ತೌಲನಿಕ ಅಧ್ಯಯನವಾಗಿದ್ದು, ತುಲನಾತ್ಮಕ ಅಭ್ಯಾಸವನ್ನು ಇಲ್ಲಿ ಗಮನಿಸಬೇಕು. ಯಾವ ರೀತಿ ತುಲನಾತ್ಮಕ ಎಂದರೆ ಬೇರೆ ಭಾಷೆಗಳ ಸೂಚಿಗಳೊಂದಿಗೆ, ಕನ್ನಡದಲ್ಲಿ ಕನ್ನಡ ಶಾಸನಸೂಚಿ ಸಂಪುಟಗಳು, ಲೇಖನಸೂಚಿಗಳು, ಗ್ರಂಥಸೂಚಿಗಳು ಪ್ರಕಟವಾಗಿ ಅವುಗಳ ಅಭ್ಯಾಸ, ಅಧ್ಯಯನದೊಂದಿಗೆ ಗ್ರಂಥಾಲಯ ಶಾಸ್ತ್ರದಲ್ಲಿಯ ಅಂಶಗಳೊಂದಿಗೆ ವೈಜ್ಞಾನಿಕವಾಗಿ ತುಲನೆ ಮಾಡಬೇಕಾಗಿದೆ. ಇದೊಂದು ರೀತಿಯ ಮೌಲ್ಯಮಾಪನದ ಕೆಲಸವಾದರೂ ಶಾಸ್ತ್ರೀಯ ರೀತಿಯ ಕೆಲಸ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಪ್ರಕಟಿತ ಸೂಚಿಗಳ ಅಧ್ಯಯನ ಮತ್ತು ಶಿಸ್ತುಬದ್ಧವಾಗಿ ಪ್ರಕಟನೆ ಆಗಿದೆಯೋ ಇಲ್ಲವೋ ಅಥವಾ ಹೇಗಾಗಬೇಕೆಂಬ ನಿಲುವನ್ನು ಇಲ್ಲಿ ದಾಖಲಿಸಲಾಗಿದೆ.

ಐದನೆಯ ಅಧ್ಯಾಯವು ಸೂಚಿಗಳ ಮೇಲೆ ಮಾಹಿತಿ ತಂತ್ರಜ್ಞಾನದ ಪರಿಣಾಮ ಕುರಿತು ಗಮನಿಸಲಾಗಿದೆ. ೨೦ ನೇ ಶತಮಾನದ ಮತ್ತು ೨೧ ನೇ ಶತಮಾನವು ಮಾಹಿತಿ ತಂತ್ರಜ್ಞಾನದ ಮೇಲೆ ಅಗಾಧ ಪರಿಣಾಮ ಉಂಟುಮಾಡಬಹುದಾಗಿದೆ. ಈ ಮಾಹಿತಿ ತಂತ್ರಜ್ಞಾನದಿಂದ ಸೂಚಿಗಳ ಬೆಳವಣಿಗೆ ಮೇಲೆ ಯಾವ ಪರಿಣಾಮಗಳಾಗಿವೆ. ಅದರ ಅನುಕೂಲ ಮತ್ತು ಅನಾನುಕೂಲತೆಗಳನ್ನು ಕುರಿತು ಗಮನ ಸೆಳೆಯಲಾಗಿದೆ. ಗಣಕಯಂತ್ರಗಳು ಈ ಶತಮಾನದ ಮಹತ್ವದ ಕೊಡುಗೆಗಳಾಗಿರುವುದರಿಂದ ಅವುಗಳು ಕೂಡ ಮಾಹಿತಿ ತಂತ್ರಜ್ಞಾನದ ಮೇಲೆ ಪ್ರಭಾವ ಬೀರಿವೆ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಗ್ರಂಥಾಲಯದಲ್ಲಿ ಮತ್ತು ಗ್ರಂಥಾಲಯ ಬೆಳವಣಿಗೆಗಳಲ್ಲಿ ಈ ಗಣಕಯಂತ್ರಗಳನ್ನು ಮರೆಯುವಂತೆಯೇ ಇಲ್ಲ. ಹೀಗಾಗಿ ಗ್ರಂಥಾಲಯಗಳ ಮೇಲೆ ಮಾಹಿತಿ ತಂತ್ರಜ್ಞಾನ ಇಡೀ ಜಗತ್ತನ್ನು ವಿಶ್ವಗ್ರಾಮವನ್ನಾಗಿ ಪರಿವರ್ತಿಸಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಆರನೆಯ ಅಧ್ಯಾಯವು ಉಪಸಂಹಾರ. ಕನ್ನಡ ಸಮಗ್ರ ಗ್ರಂಥಸೂಚಿಯನ್ನು ಕಣ್ಣೆದುರಿಗೆ ತಂದುಕೊಂಡಾಗ ಮೇಲ್ನೋಟಕ್ಕೆ ಗೋಚರಿಸುವ ಬೆಳವಣಿಗೆಗಳು ಹೊಸ ಅಧ್ಯಯನ ಕ್ಷೇತ್ರಗಳ ನಿದರ್ಶನಗಳನ್ನು ತೋರಿಸಿಕೊಟ್ಟು "ಗ್ರಂಥಸೂಚಿ ಶಾಸ್ತ್ರಕ್ಕೆ ಒಳಪಡುವ ಇಂಥ ಅಧ್ಯಯನ ಬಹುಮಟ್ಟಿಗೆ ಕನ್ನೆನೆಲ" ಇನ್ನೂ "ಸಂಶೋಧಕರಿಗೆ ಅವಕಾಶಗಳು ಸಮೃದ್ಧವಾಗಿವೆ" ಎಂಬ ಸೂಚನೆಯೊಂದಿಗೆ ಉಪಸಂಹಾರದಲ್ಲಿ ಸಮಾರೋಪಿಸಲಾಗಿದೆ.

ಒಂದು ವಿಚಾರ. ಈ ಅಧ್ಯಯನದ ವ್ಯಾಪ್ತಿಗೆ ಒಳಪಡುವ ವಿಷಯವನ್ನು ವಿದ್ವಾಂಸರು ಈಗಾಗಲೆ ಚರ್ಚಿಸಿದ್ದರೆ, ಅಲ್ಲಿ ಮತ್ತೇನನ್ನು ಹೇಳುವ ಸಾಧ್ಯತೆ ಇಲ್ಲದಂತಿದ್ದರೆ ಅದನ್ನೆ ಸಮರ್ಥಿಸಿ ಇಲ್ಲವೆ ಅಡಿಟಿಪ್ಪಣಿಯಲ್ಲಿ ಸೂಚಿಸಿ ಮುಂದೆ ಸಾಗಿದ್ದೇನೆ. ಹಾಗೆಯೇ, ಯಾವುದೇ ವಿಚಾರಗಳ ಮರುಪರಿಶೀಲನೆ ಸಾಧ್ಯವಿದ್ದರೆ, ಅಗತ್ಯವಿದ್ದರೆ ಅಂಥದನ್ನು ಚರ್ಚಿಸಿ, ಬೇರೆ ನಿಲುವನ್ನು ಮಂಡಿಸಿದ್ದೇವೆ.

ಹೀಗೆ ಈ ಪ್ರಬಂಧಕ್ಕೆ ಒಂದು ಉದ್ದೇಶವನ್ನು ಕಲ್ಪಿಸಿಕೊಂಡು, ನಿರ್ದಿಷ್ಟ ವ್ಯಾಪ್ತಿಯಲ್ಲಿ ಇದನ್ನು ರೂಪಿಸಲಾಗಿದೆ. ಇದೊಂದು ಸಂದರ್ಭ ಸಾಹಿತ್ಯದ ಸಂದರ್ಭದಲ್ಲಿ ಮರೆಯದೆ ಉಪಯೋಗಿಸುವ ಗ್ರಂಥಸೂಚಿಯನ್ನು ಕುರಿತು ಇಲ್ಲಿಯವರೆಗೆ ಸಂಪೂರ್ಣ ಚರ್ಚೆಗಳು ನಡೆದಿಲ್ಲ. ಈ ದಿಶೆಯಲ್ಲಿ ಇದು ನನ್ನದೊಂದು ಮಹತ್ವದ ಪ್ರಯತ್ನ. ಇದನ್ನು ಅಲಕ್ಷ್ಯವೆಂದು ಅನೇಕರು ಭಾವಿಸಿದ್ದಾರೆ. ಆದರೆ ಗ್ರಂಥಸೂಚಿ ಒಂದು ಮಹತ್ವದ ವಿಷಯವೆಂದು ಪರಿಗಣನೆಗೆ ತೆಗೆದುಕೊಂಡು ಎಲ್ಲ ಅಧ್ಯಾಯಗಳನ್ನು ಇಲ್ಲಿ ಸಂಪೂರ್ಣವಾಗಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ.

## ೧.೧೩ : ಅಧ್ಯಯನದ ಮಿತಿಗಳು

ಗ್ರಂಥಸೂಚಿಗಳಿಗೆ ಹಾಗೂ ಅಧ್ಯಯನಗಳಿಗೆ ಹಲವು ಮಿತಿಗಳಿವೆ. ಯಾವುದೇ ನಿರ್ದಿಷ್ಟ ವಿಷಯದಲ್ಲಿ ಸಿಗುವ ದಾಖಲೆಗಳು ಅಪಾರವಾಗಿರುವುದರಿಂದ ಗ್ರಂಥಸೂಚಿಯ ಅಧ್ಯಯನಗಳೂ ಕೂಡಾ ಸಮಗ್ರವಾಗಿಯೂ ವಿಷಯದಲ್ಲಿ ಇತ್ತೀಚಿಗಿನ ಮಾಹಿತಿಗಳು ಸಿಕ್ಕದೆ ಅಧ್ಯಯನ ಕಷ್ಟಸಾಧ್ಯ. ದಾಖಲೆಗಳು ಬೇರೆ ಭಾಷೆಗಳಲ್ಲಿರುವುದರಿಂದ ಸಂಶೋಧಕನು ಆ ವಿಚಾರಗಳನ್ನು ತಿಳಿಯಲು ತಡವಾಗುತ್ತದೆ. ಕೆಲವು ತಯಾರಕರು ತಮ್ಮ ಸಂಸ್ಥೆಯಲ್ಲಿ ನಡೆಯುವ ಸಂಶೋಧನೆಯ ವಿವರಗಳ ದಾಖಲೆಗಳನ್ನು ರಹಸ್ಯವಾಗಿಟ್ಟಿರುವುದರಿಂದ ಈ ದಾಖಲೆಗಳ ಹೆಸರು ಗ್ರಂಥಸೂಚಿಯಲ್ಲಿದ್ದರೂ ಅವು ದೊರೆಯುವಂತಿಲ್ಲ.

ಕೆಲವು ಸರಕಾರಿ ದಾಖಲೆಗಳೂ ಅಷ್ಟೇ ಲಭ್ಯ. ವೈಜ್ಞಾನಿಕ ಸೂತ್ರಗಳು ತಂತ್ರಗಳು ಈಗ ಸಮಾಜ ವಿಜ್ಞಾನದ ವಿಷಯಗಳಲ್ಲೂ ಉಪಯೋಗಿಸುತ್ತಿರುವುದರಿಂದ ಹಿಂದೆ ಬೇರೆ ಬೇರೆ ಎಂದು ತಿಳಿದಿದ್ದ ಹಲವಾರು ವಿಷಯಗಳು ಇಂದು ನಿಕಟವರ್ತಿಯಾಗಿವೆ. ಇವುಗಳ ಮಾಹಿತಿಗಳನ್ನು ಜೋಡಿಸಲು ಕಷ್ಟ.

ಬರಹ ವೈವಿಧ್ಯಗಳೂ ಅಪಾರವಾಗಿರುವುದೂ ಒಂದು ಸಮಸ್ಯೆಯೇ ಸರಿ. ಆದರೆ ಈ ಎಲ್ಲಾ ದಾಖಲೆಗಳೂ ಜ್ಞಾನಪ್ರಸಾರಕ್ಕೆ ನಾನಾ ರೀತಿಯ ಕೊಡುಗೆಗಳು. ಎಷ್ಟೇ ಎಡರು ತೊಡರುಗಳಿದ್ದರೂ ಈ ದಾಖಲೆಗಳ ಮಾಹಿತಿಯನ್ನು ವ್ಯವಸ್ಥಿತ ರೀತಿಯಲ್ಲಿ ಒದಗಿಸಲು ಗ್ರಂಥಸೂಚಿ ಯತ್ನಿಸುತ್ತದೆ. ಆದ್ದರಿಂದ ಅದು ತಾನು ತಿಳಿಸುವ ಹಾಗೂ ವಿವರಿಸುವ ದಾಖಲೆಗಳಷ್ಟೇ ಮುಖ್ಯವಾದುದು.

ಗ್ರಂಥಸೂಚಿ ತುಂಬ ವೆಚ್ಚದ್ದಾಗಿರುವುದರಿಂದ ಪ್ರಕಟಣಾ ಸಂಸ್ಥೆಗಳು ವ್ಯಾಪಾರಿ ಗ್ರಂಥಸೂಚಿಗಳನ್ನಷ್ಟೆ ಪ್ರಕಟಿಸಿಬಿಡುತ್ತವೆ. ಗ್ರಂಥಸೂಚಿ ತಯಾರಿ ವೆಚ್ಚದ್ದಾಗಿರುವಂತೆಯೂ ಅದನ್ನು ರೂಪಿಸುವ ವ್ಯಕ್ತಿಯ ತಾಳ್ಮೆ, ಶ್ರಮ ಮತ್ತು ವೇಳೆಯನ್ನು ವ್ಯಯಿಸುವಂತಹದ್ದು.

ಅಲ್ಲದೆ ವಿಷಯದ ಸಮಗ್ರತೆ ಇರುವುದಿಲ್ಲ. ಅಷ್ಟು ಇಷ್ಟು ಪ್ರಕಟಣೆಗಳಾದರೂ ಅವುಗಳ ಸಂಗ್ರಹದಲ್ಲಿ ಸಮಗ್ರತೆಯ ಕೊರತೆ ಕಾಣಸುತ್ತದೆ. ಅವು ಸರಿಯಾದ ಸಮಯಕ್ಕೆ ಸರಿಯಾದ ವ್ಯಕ್ತಿಗಳಿಗೆ ಸಂಸ್ಥೆಗಳಲ್ಲಿ ಲಭ್ಯವಿಲ್ಲದಿರುವದು ಮತ್ತೊಂದು ಮುಖ್ಯ ಕೊರತೆ. ಗ್ರಂಥಸೂಚಿಗಳ ಪ್ರಕಟಣೆಗೆ ಯೋಗ್ಯ ಸಂಸ್ಥೆಗಳು ಇಲ್ಲದಿರುವುದು. ಇದ್ದರೂ ಕೂಡ ಅಧಿಕೃತ (Authentic) ಇಲ್ಲದಿರುವುದು. ಗ್ರಂಥಸೂಚಿಗಳ ಮೌಲ್ಯಮಾಪನ ಇಲ್ಲದಿರುವುದು. ವಿದ್ವಾಂಸರು ಈ ವಿಷಯದ ಬಗ್ಗೆ ಅಷ್ಟಾಗಿ ಗಮನ ನೀಡದಿರುವುದು. ಯಾವುದೋ ಒಂದು ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ಪ್ರಕಟವಾದರೂ ಅದರಲ್ಲಿ ಆಳತೆಗೋಲು ಇಲ್ಲದಿರುವುದು. ಪ್ರಕಟವಾದ ಎಷ್ಟೋ ಗ್ರಂಥಸೂಚಿಗಳಲ್ಲಿ

ಕ್ರಮಬದ್ಧತೆ ಇಲ್ಲದಿರುವುದು. ದಾಖಲೆಗಳು ಅಪೂರ್ಣವಾಗಿರುತ್ತವೆ. ಯಾವುದೇ ಒಂದು ವಿಷಯದಲ್ಲಿ ನಿರ್ದಿಷ್ಟತೆ, ಸ್ಪಷ್ಟ ರೂಪರೇಷೆಗಳಿಲ್ಲದೆ ಇರುವುದು.

ಗ್ರಂಥಸೂಚಿಗಳ ತಯಾರಿಕೆ ಬಗ್ಗೆ ವಿದ್ವಾಂಸರು ಸ್ಪಷ್ಟ ಅಭ್ಯಾಸ ಪೂರ್ಣ ಲೇಖನಗಳ, ಪುಸ್ತಕಗಳ ಕೊರತೆ ಇನ್ನೊಂದು ಮುಖ್ಯ ಕಾರಣ. ವಿದ್ವಾಂಸರು ಗ್ರಂಥಸೂಚಿಗಳು, ಪದಸೂಚಿಗಳ ತಯಾರಿ ಬಗ್ಗೆ ವಿಶೇಷ ಗಮನ ನೀಡಬೇಕು. ಹಾಗಾದಾಗ ಮಾತ್ರ ದಾಖಲೆಗಳು ಸರಿಯಾದ ಕ್ರಮ ಜೋಡಣೆಯಲ್ಲಿ ನಿರೂಪಿತವಾಗಬೇಕು. ಇದಕ್ಕೊಂದು ಅಂತರ್‌ರಾಷ್ಟ್ರೀಯ ಪುಸ್ತಕ ಸಂಖ್ಯೆಗಳನ್ನು ಕೊಡುವಂತೆ ಮಾದರಿಯನ್ನು ರೂಪಿಸುವದು ಇಂದು ಹಿಂದಿಗಿಂತಲೂ ಹೆಚ್ಚು ಅವಶ್ಯವಾಗಿದೆ ಎಂದು ನನ್ನ ಅನಿಸಿಕೆ.

ಈ ಎಲ್ಲದರ ಮಿತಿಗಳ ನಡುವೆ ಅನೇಕ ಸೂಚಿಗಳು ನಿರ್ಮಾಣವಾಗಿವೆ. ಈ ಕ್ಷೇತ್ರದಲ್ಲಿ ಇನ್ನೂ ಹೆಚ್ಚು ಹೆಚ್ಚು ತೊಡಗಿಕೊಳ್ಳುವುದರಿಂದ ಈ ಅಭ್ಯಾಸಕ್ಕೆ ಚಾಲನೆ ಸಿಗಬಹುದೆಂದು ಆಶಿಸಬಹುದು.

## ೧.೧೪ : ಅಧ್ಯಯನದ ಪದ್ಧತಿಗಳು

ಅಧ್ಯಯನದ ಪದ್ಧತಿಗಳನ್ನು ಈ ಕೆಳಗಿನಂತೆ ವಿಂಗಡಣೆ ಮಾಡಿ ಅಧ್ಯಯನ ಕೈಕೊಳ್ಳಲಾಗಿದೆ. ಸಾಹಿತ್ಯ ಸಂದರ್ಭದಲ್ಲಿ ಅನೇಕ ಸಂದರ್ಭಗಳಲ್ಲಿ ಇವುಗಳ ದಾಖಲೆಗಳನ್ನು ಪರಿಶೀಲಿಸದೆ ಸಂದರ್ಭಗಳಲ್ಲಿ ಇವುಗಳ ದಾಖಲೆಗಳನ್ನು ಪರಿಶೀಲಿಸದೆ ಸಮಾಜ ವಿಜ್ಞಾನದ ಅಧ್ಯಯನ ಮುಂದೆ ಸಾಗುವುದಿಲ್ಲ. ಹೀಗಾಗಿ ಈ ಮಾಹಿತಿಗಳು ಆವಶ್ಯಕ ಮಾರ್ಗದರ್ಶಿಗಳಾಗಿವೆ. ಹಾಗೆಯೇ ಮೂಲ ಆಕರಗಳಾಗಿ ಇವುಗಳ ಎಲ್ಲ ಕಾಲಕ್ಕೂ ಆವಶ್ಯಕ ದಾಖಲೆಗಳಾಗಿವೆ. ಅವುಗಳೆಂದರೆ :

- ಲಿಖಿತ ದಾಖಲೆಗಳು (Written Documentary Sources)
- ವಿದ್ವಾಂಸರೊಂದಿಗೆ ಸಂವಾದ (Discussion with known experts)
- ಇದ್ದ ಸೂಚಿಗಳ ಅಧ್ಯಯನ (Study of Existing Bibliographies)
- ಸೂಚಿಗಳ ತೌಲನಿಕ ಅಧ್ಯಯನ (Comparision study)

### ೧.೧೪.೧ : ಲಿಖಿತ ದಾಖಲೆಗಳು (Documentary Sources)

ಗ್ರಂಥಾಲಯಕ್ಕೆ ಮುಖ್ಯವಾಗಿ ಗ್ರಂಥಗಳೆ ಮೂಲವಾಗಿರುವಂತೆಯೇ ಸೇವೆಯೇ ಅದರ ಮುಖ್ಯ ಗುರಿ. ಹಾಗಾಗಿ ಗ್ರಂಥಾಲಯದಲ್ಲಿ ಮುಖ್ಯವಾಗಿ ಈ ಕೆಳಗಿನ ದಾಖಲೆಗಳು ಮುಖ್ಯವಾಗಿರುತ್ತವೆ. ಇವುಗಳ ಉಪಯೋಗ, ಕೆಲಸ ಕಾರ್ಯಗಳು, ಸಂಶೋಧನೆಗೆ, ಅನೇಕ ಯೋಜನೆಗಳಿಗೆ, ಇವುಗಳು ಅತ್ಯವಶ್ಯಕ ದಾಖಲೆಗಳಾಗಿರುವಂತೆ

ಇವುಗಳ ಪರಿಶೀಲನೆ ಎಲ್ಲ ಕಾಲಕ್ಕೂ ಎಲ್ಲರೂ ಪರಿಶೀಲಿಸುವುದು ಜರೂರಿನ ಕೆಲಸವಾಗಿರುತ್ತದೆ. ಇವುಗಳ ಸಂಗ್ರಹ ಗ್ರಂಥಾಲಯಕ್ಕೆ ಭೂಷಣಪ್ರಾಯವಾಗಿರುತ್ತದೆ.

- ಪುಸ್ತಕಗಳು
- ವೃತ್ತಪತ್ರಿಕೆಗಳು ಮತ್ತು ನಿಯತಕಾಲಿಕೆಗಳು
- ಸರಕಾರಿ ದಾಖಲೆಗಳು ಮತ್ತು ಪ್ರಕಟಣೆಗಳು
- ಪ್ರಬಂಧಗಳು ಮತ್ತು ಸಂಪ್ರಬಂಧಗಳು
- ವರದಿಗಳು
- ಕರಪತ್ರಗಳು
- ನಿರ್ದಿಷ್ಟ ಮಾಪನಗಳು (Standards) ಮತ್ತು ವಿಶಿಷ್ಟ ಮಾಪಕಗಳು (Specifications)
- ಪೇಟೆಂಟ್ಸ್
- ವ್ಯಾಪಾರ ಸಾಹಿತ್ಯ (Trade literature)
- ನಕಾಶೆಗಳು, ಗೋಳ
- ಭಾವಚಿತ್ರಗಳು ಮತ್ತು ವಿವರಣೆಗಳು
- ಸೂಕ್ಷ್ಮದರ್ಶಕಗಳು
- ದೃಶ್ಯ - ಶ್ರವ್ಯ - ಮಾಧ್ಯಮಗಳು

ಇವುಗಳು ಮುಖ್ಯವಾಗಿ ಪುಸ್ತಕಗಳ ಜೊತೆಗೆ ಇರುವ ಗ್ರಂಥಾಲಯಕ್ಕೆ ಅವಶ್ಯ ದಾಖಲೆಗಳಾಗಿರುತ್ತವೆ. ಅಂತೆಯೆ ಇವುಗಳಲ್ಲದೆ ಈ ಕೆಳಗಿನವುಗಳ ಪಟ್ಟಿ ಕೂಡಾ ಸಾಹಿತ್ಯ - ಸಂದರ್ಭ ಸೇವೆಯನ್ನು ಒದಗಿಸಲು ಸಹಾಯ ಮಾಡುತ್ತವೆ. ಅವುಗಳು ಮುಖ್ಯವಾಗಿ.

- ಶಬ್ದಕೋಶಗಳು
- ವಿಶ್ವಕೋಶಗಳು
- ಗ್ರಂಥಸೂಚಿಗಳು
- ಗೆಝೆಟಿಯರ್‌ಗಳು
- ಶಾಸನಗಳು
- ಸೂಚನಾಫಲಕಗಳು

- ಮಾರ್ಗದರ್ಶಿಗಳು / ಮಾರ್ಗಸೂಚಿಗಳು (Directions)
- ನಾಣ್ಯಗಳು
- ಪ್ರವಾಸ ಚರಿತ್ರೆಗಳು
- ಪಂಚಾಂಗಗಳು, ಕ್ಯಾಲೆಂಡರ್‌ಗಳು
- ವಾರ್ಷಿಕ ಪುಸ್ತಕಗಳು / ಪುರವಣಿಗಳು / ವಿಶೇಷಾಂಕಗಳು
- ಪುಸ್ತಕ ವಿಮರ್ಶೆ / ಸಾದರ ಸ್ವೀಕಾರಗಳು

ಇವುಗಳಲ್ಲದೆ,

- ದಾಖಲಿತ ಆಕರ ಸಾಮಗ್ರಿಗಳು
- ಶಾಸನಗಳು, ನಾಣ್ಯಗಳು, ಪುರಾತತ್ವ ಲೇಖನಗಳು
- ಪತ್ರಗಳು – ಆಡಳಿತಾತ್ಮಕ ಪತ್ರಗಳು ಹಾಗೂ ಇತರೆ ಲೇಖನಗಳು, ಪತ್ರಾಗಾರ ಲೇಖಗಳು

ಈ ಎಲ್ಲ ವಿಷಯ ಸಂಗ್ರಹಣೆ, ಊಹನಾ ಸಿದ್ಧಾಂತದ ಪರಿಕಲ್ಪನೆ (Hypothesis) ಗೆ ಸಂಶೋಧನೆ ರೂಪರೇಷೆ ಮತ್ತು ಪರಾಮರ್ಶನ ಸಾಹಿತ್ಯಸೂಚಿಗಳು ನಮ್ಮ ಸಂಶೋಧನೆಯ ಸ್ಪಷ್ಟ ಪರಿಕಲ್ಪನೆಗೆ, ಹೊಳವುಗಳಿಗೆ ಮಾರ್ಗಸೂಚಿಯನ್ನು ಸೂಚಿಸಿ ಸಂಶೋಧನೆಯ ದಾರಿಯಲ್ಲಿ ಸಾಗಲು ಅನುವು ಮಾಡಿಕೊಡುತ್ತವೆ.

## ೧.೧೪.೨ : ಇದ್ದ ಸೂಚಿಗಳ ಅಧ್ಯಯನ (Study of existing Bibliographics)

ಎಲ್ಲ ಪ್ರೌಢಭಾಷೆಗಳಲ್ಲೂ ಗ್ರಂಥಸೂಚಿ ಒಂದು ಅನಿವಾರ್ಯವಾದ ಅಗತ್ಯವಾಗಿದ್ದು ಅವುಗಳಲ್ಲಿ ಬೇಕಾದಷ್ಟು ಗ್ರಂಥಸೂಚಿಗಳು ರಚಿತವಾಗಿವೆ. ಗ್ರಂಥಸೂಚಿಗಳ ಸಂಖ್ಯೆ ಎಷ್ಟು ಹೇರಳವಾಗಿದೆಯೆಂದರೆ ಅವುಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿ ವಿವರಿಸಲು ಗ್ರಂಥಸೂಚಿಗಳ ಗ್ರಂಥಸೂಚಿಯೊಂದನ್ನು ೧೯೮೦ ರಲ್ಲಿ ಥಿಯೋಡೋರ್ ಬೆಸ್ಟರ್‌ಮನ್ ರಚಿಸಿದನು.

ಗ್ರಂಥಸೂಚಿ ಸಂಶೋಧಕರಿಗೆ ಅತ್ಯಂತ ಅವಶ್ಯಕವಾದ ಆಕರ ಗ್ರಂಥ. ಯಾವುದೇ ವಿಷಯದಲ್ಲಿ ಸಂಶೋಧನೆಗೆ ತೊಡಗುವ ಮೊದಲು ಸಂಶೋಧಕ ಮಾಡುವ ಕೆಲಸ ಆವರೆಗೆ ಆ ವಿಷಯವಾಗಿ ಹೊರಬಂದಿರುವ ವಿಷಯಗಳನ್ನು ಸಂಗ್ರಹಿಸುವುದು. ಈ ಕೆಲಸಕ್ಕೆ ಗ್ರಂಥಸೂಚಿಯಿಂದ ದೊರೆಯುವಂಥ ತಕ್ಷಣದ ಸಿದ್ಧ ನೆರವು ಬೇರೆ ಯಾವುದರಿಂದಲೂ ದೊರಕುವುದಿಲ್ಲ. ಅಲ್ಲದೆ ಗ್ರಂಥಸೂಚಿ ಕೊಡುವ ಚಿತ್ರ ಅತ್ಯಂತ ವಿಸ್ತಾರವೂ ವರ್ಣಮಯವೂ ಆದದ್ದು. ಬರವಣಿಗೆ ರೂಪಾಗೊಂಡಂದಿನಿಂದಲೂ ಮಾನವ ತತ್ವ, ಕಲೆ, ಸಾಹಿತ್ಯ, ಶಾಸ್ತ್ರ, ವಿಜ್ಞಾನ, ತಂತ್ರ, ಮಾದಲಾದ ಅಸಂಖ್ಯ ಕ್ಷೇತ್ರಗಳಲ್ಲಿ ಹೇಗೆ ಚಿಂತನೆ ನಡೆದಿದೆ. ಅವನ ಅಭಿರುಚಿಗಳು ಕಾಲದಿಂದ ಕಾಲಕ್ಕೆ ಹೇಗೆ ಬದಲಾಗಿವೆ.

ಶೈಲಿ ಹೇಗೆ ರೂಪಾಂತರಗೊಳ್ಳುತ್ತಾ ಹೋಗಿದೆ. ಅವನ ಸಂಸ್ಕೃತಿಯ ಮೇಲೆ ಇದರ ಪರಿಣಾಮ ಏನಾಗಿದೆ ಎಂಬೆಲ್ಲ ವಿಚಾರಗಳನ್ನು ಅಧ್ಯಯನ ಮಾಡಲು ಗ್ರಂಥಸೂಚಿನೇ ಆಧಾರ.

ಉದಾ : 'ಕನ್ನಡ ಗ್ರಂಥಸೂಚಿ', ಸಂಪುಟಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು

## ೧.೧೪.೩ : ತೌಲನಿಕ ಅಧ್ಯಯನ (Comperative study) :

ಇಂಗ್ಲೀಷ, ಹಿಂದಿ, ಬಂಗಾಳಿ, ತೆಲಗು, ಮರಾಠಿ ಗ್ರಂಥಸೂಚಿಗಳು ರಚಿಸಲ್ಪಟ್ಟಿವೆ. ಅನೇಕ ಪ್ರಕಾಶನ ಸಂಸ್ಥೆಗಳು ಗ್ರಂಥಸೂಚಿಗಳ ರಚನೆಯಲ್ಲಿ ತೊಡಗಿವೆ. ಕನ್ನಡ ಮತ್ತು ಇತರ ಭಾಷೆಗಳಿಗೆ ಹೋಲಿಸಿದರೆ ಕನ್ನಡದಲ್ಲಿಯ ಮುಖ್ಯ ಪ್ರಯತ್ನಗಳನ್ನು ತುಲನೆ ಮಾಡುವುದರ ಮೂಲಕ ತೌಲನಿಕ ಅಧ್ಯಯನಕ್ಕೆ ಸಹಾಯಕವಾಗುತ್ತದೆ. ಈ ರೀತಿಯ ಅಭ್ಯಾಸದಿಂದ ಕನ್ನಡದ ಗ್ರಂಥಸೂಚಿ ಈ ಎಲ್ಲ ಗ್ರಂಥಸೂಚಿಗಳಿಗಿಂತಲೂ ವಿಶಿಷ್ಟವಾಗಿರುವಂತೆ ಮಾಡಬೇಕೆಂಬ ಮಹಾದಾಶೆ ಈ ಅಧ್ಯಯನದ ಆಶಯ.

## ೧.೧೪.೪ : ವಿದ್ವಾಂಸರೊಂದಿಗೆ ಸಂವಾದ (Discussion with experts)

ಸಂಶೋಧಕ ತನ್ನ ಸಂಶೋಧನೆಗೆ ನೆರವಾಗುವ ವ್ಯಕ್ತಿಗಳನ್ನು, ಪ್ರದೇಶಗಳನ್ನು ಪ್ರತ್ಯಕ್ಷವಾಗಿ ಸಂದರ್ಶಿಸಿ ತನ್ನ ವಿಷಯಕ್ಕೆ ಸಂಬಂಧಿಸಿದ ಹೆಚ್ಚಿನ ಮಾಹಿತಿಯನ್ನು ಕೇಳಿ ಪಡೆದುಕೊಳ್ಳುವುದರಿಂದ ಆತನ ಸಂಶೋಧನೆಗೆ ಹೆಚ್ಚಿನ ಆಳ ಮತ್ತು ವಿಸ್ತಾರತೆ ಉಂಟಾಗುತ್ತದೆ. ಮಾನವನ ಆಂತರಿಕ ಭಾವನೆಗಳನ್ನು ಅವರ ನಂಬಿಕೆಗಳನ್ನು ಅವರ ವೈಯಕ್ತಿಕ ನಡವಳಿಕೆಯ ವಿಷಯಗಳನ್ನು ತಿಳಿದುಕೊಳ್ಳಲು ಇದರಿಂದ ಸಾಧ್ಯವಾಗುತ್ತದೆ. ಇದನ್ನು ಕುರಿತು P. V. Young " Interview is an effective informal verbal and non-verbal conversation initiated for specific purposes and focused on certain planned content areas " ಎಂದಿದ್ದಾನೆ. [೨೬] ಇಲ್ಲಿ ಎರಡು ಪ್ರಕಾರದ ವ್ಯಕ್ತಿಗಳನ್ನು ಸಂದರ್ಶಿಸುತ್ತೇವೆ. ಇವರಲ್ಲಿ ಪ್ರಮುಖರು : ೧) ನಮ್ಮ ಸಂಶೋಧನೆಗೆ ಅಡಿಗಲ್ಲಿನಂತಿರುವವರು, ನಾವು ಸಂಶೋಧನೆಗೆ ಎತ್ತಿಕೊಂಡಿರುವ ಭಾಷೆಯನ್ನಾಡುವ ಅಥವಾ ಸಂಸ್ಕೃತಿಯನ್ನು ಪ್ರತಿನಿಧಿಸುವ ಜನರು. ಇದರಿಂದ ಸಂಶೋಧನೆಗೆ ಬೇಕಾದ ಮೂಲಸಾಮಗ್ರಿ ದೊರೆಯುತ್ತದೆ. ನಿಜವಾದ ಕ್ಷೇತ್ರಕಾರ್ಯವೆಂದರೆ ಇವರಿಂದ ಸಾಮಗ್ರಿ ಸಂಗ್ರಹಿಸುವುದು. ೨) ಇನ್ನೊಂದು ವರ್ಗದ ಜನರಿಗೆ ಈ ವಿಷಯದಲ್ಲಿ ಪರಿಣತಿ ಹೊಂದಿದ ಸಂಶೋಧಕರು ಮತ್ತು ಪಂಡಿತರು. ನಮಗೆ ಸಹಾಯಕವಾಗುವ ಎಷ್ಟೋ ಅಂಶಗಳನ್ನು ಇವರಿಂದ ಸಂಗ್ರಹಿಸಬಹುದು.

ನನ್ನ ಸಂಶೋಧನೆಗೆ ಉಪಯೋಗ ಬೀಳಬಹುದಾದ ವ್ಯಕ್ತಿಗಳು ಇರುವ ಕಡೆ ಹೋಗಿ ವಿಷಯ ಸಂಗ್ರಹಿಸುವುದು ಕ್ಷೇತ್ರಕಾರ್ಯದ ಇನ್ನೊಂದು ವಿಧಾನವೇ ವಿದ್ವಾಂಸರೊಂದಿಗೆ ಸಂವಾದ. ಆ ವ್ಯಕ್ತಿಗಳಿಂದ ಸಾಮಗ್ರಿಗಳನ್ನು

ಸಂಗ್ರಹಿಸುವಲ್ಲಿ ಈ ಸಾಧನಗಳು ಸಹಾಯಕ್ಕೆ ಬರುತ್ತವೆ. ಸಂದರ್ಶನ (Interview) ಗಳ ವಿವಿಧ ರೀತಿಗಳಲ್ಲಿ ಸಾಮಗ್ರಿಯನ್ನು ಸಂಗ್ರಹಿಸಬಹುದಾಗಿದೆ.

- ಯೋಜಿತ ಸಂದರ್ಶನ ಮತ್ತು ತತ್‌ಕ್ಷಣ ಸಂದರ್ಶನ

  (Planned and spot interview)

- ರಚನಾತ್ಮಕ ಮತ್ತು ಅರಚನಾತ್ಮಕ ಸಂದರ್ಶನ

  (Structural and unstructural interview)

- ವೈಯಕ್ತಿಕ ಮತ್ತು ಮುಕ್ತ ಸಾಮೂಹಿಕ ಸಂದರ್ಶನ

  (Personal and open common interview)

- ಮುಕ್ತ ಪದ್ಧತಿ ಮತ್ತು ಬದ್ಧ ಪದ್ಧತಿ

  (Open and closed system)

ಈ ಎರಡು ಆಕರಗಳನ್ನು ಬಳಸಿಕೊಳ್ಳುವಾಗ ಎಚ್ಚರಿಕೆ ವಹಿಸಬೇಕಾದುದು ಅವಶ್ಯ. ಲಿಖಿತ ಆಕರಗಳಲ್ಲಿಯ ಮೂಲ ಆಕರ, ಆನುಷಂಗಿಕ ಆಕರಗಳಲ್ಲಿ ಹೇಗೆ ಮೂಲ ಆಕರಕ್ಕೆ ಹೆಚ್ಚಿನ ಪ್ರಾಧಾನ್ಯತೆಯೋ, ಇಲ್ಲಿಯೂ ನಮ್ಮ ಸಂಶೋಧನೆಗೆ ಮೊದಲ ಗುಂಪಿನ ಜನರಿಗೆ ಹೆಚ್ಚಿನ ಪ್ರಾಧಾನ್ಯತೆ. ಅನಿವಾರ್ಯವಾದ ಸಂದರ್ಭದಲ್ಲಿ ಆನುಷಂಗಿಕ ಆಕರಗಳನ್ನು ಉಪಯೋಗಿಸುವಂತೆ ಮೇಲಿನ ಎರಡನೆ ಗುಂಪಿನ ಜನರನ್ನು, ಅವರ ಅಭಿಪ್ರಾಯಗಳನ್ನು ದ್ವಿತೀಯ ಆಕರಗಳಂತೆ ಉಪಯೋಗಿಸಿಕೊಳ್ಳಬೇಕು.

## ೧.೧೫ : ಸಮಾರೋಪ

ಒಂದು ರಾಷ್ಟ್ರದಲ್ಲಿ ಅನೇಕ ಭಾಷೆಗಳಿದ್ದಲ್ಲಿ ಅಲ್ಲಿನ ಗ್ರಂಥಸೂಚಿಗಳು ಆ ದೇಶದ ಭಾಷೆಗಳ ಶಕ್ತಿ ಸಾಮರ್ಥ್ಯಗಳ ಒರೆಗಲ್ಲುಗಳಾಗಿ ಪರಿಣಮಿಸುತ್ತವೆ.

ಗ್ರಂಥಸೂಚಿಗಳು ಆಯಾ ರಾಷ್ಟ್ರದ, ಜನಾಂಗದ, ಬೌದ್ಧಿಕ ಸಾಧನೆಯ ಅಳತೆಗೋಲುಗಳು; ಅಲ್ಲಿನ ವಿಚಾರವಂತರು ಜ್ಞಾನ - ವಿಜ್ಞಾನ ಕ್ಷೇತ್ರಗಳಲ್ಲಿ ಮಾಡಿದ ಕೃಷಿಯ ವೈಖರಿಯ ಚಿತ್ರ, ನಕ್ಷೆ, ಅವಲೋಕನ, ಇತ್ಯಾದಿಗಳಾಗಿ ವಿವರಿಸಬಹುದು.

ಗ್ರಂಥಸೂಚಿಗಳು ಸಂಶೋಧಕರಿಗೆ ಅವರವರ ಸಂಶೋಧನೆಯ ಕ್ಷೇತ್ರಕ್ಕೆ ಸಂಬಂಧಿಸಿದ ಹಳೆ - ಹೊಸ ಗ್ರಂಥಗಳ ಪರಿಚಯ ಮಾಡಿಕೊಡುತ್ತವೆ. ಹೊಸದಾಗಿ ಸಂಶೋಧನೆ ಮಾಡುವವರಿಗೆ ಯುವ ವಿಷಯವನ್ನು ತಾವು

ಅರಿಸಿಕೊಳ್ಳಬೇಕು. ಗ್ರಂಥಪಾಲಕರಿಗೆ ಹೊಸ ಗ್ರಂಥಗಳ ಆಯ್ಕೆಯಲ್ಲಿ, ಇನ್ನುಳಿದ ಗ್ರಂಥಗಳ ಲೇಖಕರು, ಪ್ರಕಾಶಕರು, ಬೆಲೆ ಮುಂತಾದ ವಿವರಗಳನ್ನು ತಿಳಿದುಕೊಳ್ಳಲು ನೆರವಾಗುತ್ತವೆ. ಪುಸ್ತಕ ವ್ಯಾಪಾರಿಗಳಿಗೂ ಇವು ಬೇಕೇ ಬೇಕು.

ಗ್ರಂಥಸೂಚಿಗಳು ಸಾಮಾನ್ಯ ಸ್ವರೂಪವಾಗಿರಬಹುದು. ಇಲ್ಲವೇ ಒಂದು ಭಾಷೆಗೆ, ಒಂದು ವಿಷಯಕ್ಕೆ, ಒಂದು ಪ್ರದೇಶಕ್ಕೆ, ಒಂದು ರಾಜ್ಯಕ್ಕೆ ವಿಶೇಷವಾಗಿ ಸೀಮಿತವಾಗಿರಬಹುದು. ಆದರೆ ಆಗಿನ ಜ್ಞಾನ ಸಾಮ್ರಾಜ್ಯ ಈಗಿನಂತೆ ಇಷ್ಟೊಂದು ಶಾಖೋಪಶಾಖೆಯಾಗಿ ವಿರಾಟ್ ಸ್ವರೂಪ ತಳೆದಿರಲಿಲ್ಲ. ಧರ್ಮ, ದರ್ಶನ, ಜ್ಯೋತಿಷ್ಯ, ಆಯುರ್ವೇದ, ಕಾವ್ಯಶಾಸ್ತ್ರ, ರಾಜ್ಯಶಾಸ್ತ್ರ –ಇವೇ ಕೆಲವು ವಿಷಯಗಳಿಗೆ ಮಾತ್ರ ಸೀಮಿತವಾಗಿತ್ತು.

ಈಗಲೇ ! ಜ್ಞಾನದ ವಿಸ್ತಾರ ಅಪಾರವಾಗಿದೆ. ಕ್ಷಣ ಕ್ಷಣಕ್ಕೂ ಹೊಸ ಸಂಶೋಧನೆಗಳು ಆಗುತ್ತಿವೆ. ತನ್ಮೂಲಕ ಹೊಸ ಜ್ಞಾನ ಸಂಚಯವಾಗುತ್ತಾ ನಡೆದಿದೆ. ದಿನ ದಿನವೂ ಬೆಳೆಯುತ್ತಿರುವ ಈ ಜ್ಞಾನ, ಗ್ರಂಥರಾಶಿಯಲ್ಲಿ ರಕ್ಷಿತವಾಗಿರುತ್ತದೆ. ಆದ್ದರಿಂದ ಗ್ರಂಥಸೂಚಿಯು ಕೂಡಾ ಆಳವಾದ ಅಭ್ಯಾಸಕ್ಕೆ ತೊಡಗುವವರಿಗೆ ವಿಸ್ತಾರವನ್ನು ಒದಗಿಸುತ್ತದೆ. ಈಗ ಇದೊಂದು ಶಿಸ್ತಿನ ಅಧ್ಯಯನವಾಗಿ ಗುರುತಿಸಲ್ಪಟ್ಟಿದೆ. ಸದ್ಯದಲ್ಲಿ ಇದು ಶಿಸ್ತುಬದ್ಧವಾಗಿ ವರ್ಣಾನುಕ್ರಮ ಪಟ್ಟಿಯಾಗಿ ಬೆಳೆಯುತ್ತಿದೆ. ಮೂಲಭೂತವಾಗಿ ಇದು ಆಕರಸೂಚಿಯಾಗಿ ಅಭಿವೃದ್ಧಿ ಹೊಂದುತ್ತಾ ಇದೆ. ಅಷ್ಟೇ ಆಳವಾದ ವಿಸ್ತಾರ, ಮಹತ್ವದ ಸ್ವರೂಪವನ್ನು ತನ್ನ ಒಡಲಿನಲ್ಲಿ ಅಡಗಿಸಿಟ್ಟುಕೊಂಡಿದ್ದು ಇದರ ಮಹತ್ವವನ್ನು ಪಾಶ್ಚಾತ್ಯರು ಮನಗಂಡು ವಿಷಯವನ್ನು ಅಭಿವೃದ್ಧಿ ಪಡಿಸುವಷ್ಟು ತೀವ್ರವಾಗಿ ಭಾರತದಲ್ಲಿ ಬೆಳವಣಿಗೆಗಳು ನಡೆದಿಲ್ಲ. ಆದರೆ ಬೆಳವಣಿಗೆಗಳು ತೀರಾ ನಿರಾಶದಾಯಕವಾಗಿಲ್ಲ. ಅಲ್ಲಲ್ಲಿ ಒಂದಿಷ್ಟು ಬೆಳವಣಿಗೆಗಳು ನಿಖರವಾಗಿಯಲ್ಲವಾದರೂ ವಿಷಯವನ್ನು ಒಳಗೊಂಡು ನಡೆದಿವೆ.

• ಅಡಿಟಿಪ್ಪಣಿಗಳು •

೧. ಟಿ. ವಿ. ಸುಬ್ರಹ್ಮಣ್ಯ : ಗ್ರಂಥಸೂಚಿಯ ರಚನೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧, ಪು. ೨೭ - ೨೮
೨. ಡಾ. ಎಂ. ಎಂ. ಕಲಬುರ್ಗಿ : ಕನ್ನಡ ಹಸ್ತಪ್ರತಿಸೂಚಿಗಳು : ಗ್ರಂಥಾಲಯ ರಜತದೀಪ್ತಿ : ಕರ್ನಾಟಕ ಸರಕಾರ ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು, ೧೯೯೪, ಪು. ೧೩೧ - ೧೩೩
೩. ಡಾ. ಎಂ. ಎಂ. ಕಲಬುರ್ಗಿ : ಕನ್ನಡ ಹಸ್ತಪ್ರತಿಸೂಚಿಗಳು : ಗ್ರಂಥಾಲಯ ರಜತದೀಪ್ತಿ : ಕರ್ನಾಟಕ ಸರಕಾರ ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು, ೧೯೯೪, ಪು. ೧೩೧ - ೧೩೩
೪. ಹಾ. ಮಾ. ನಾಯಕ : ಸನ್ನುಡಿ : ತವೆಂ ಸ್ಮಾರಕ ಗ್ರಂಥಮಾಲೆ, ಗೋಕುಲಾ, ಮೈಸೂರು, ೧೯೯೩, ಪು ೨೧ - ೨೬
೫. Chakraborti (M. L.) : Bibliography, p. 18 - 19
೬. UNESCO Library of congress report, 1950
೭. ಪ್ರಭುಶಂಕರ : ಮುನ್ನುಡಿ : ಕನ್ನಡ ಗ್ರಂಥಸೂಚಿ, ಸಂ. ೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧

೮. ಕನ್ನಡ ಗ್ರಂಥಸೂಚಿ : ಮುನ್ನುಡಿ : ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧, ಪು. xii

೯. ಕನ್ನಡ ಗ್ರಂಥಸೂಚಿ : ಮುನ್ನುಡಿ : ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧, ಪು. xii

೧೦. ಪ್ರಭುಶಂಕರ : ಮುನ್ನುಡಿ : ಕನ್ನಡ ಗ್ರಂಥಸೂಚಿ, ಸಂ. ೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧, ಪು. ix

೧೧. ಕರಿಸಿದ್ದಪ್ಪ (ಸಿ. ಆರ್.) : ಸಂಕ್ರಮಣ ಶತಕ : ಸಂಕಲನಕಾರರ ಮಾತು : ಸಂಕ್ರಮಣ ಪ್ರಕಾಶನ, ಧಾರವಾಡ, ೧೯೮೧

೧೨. ಶಿರಹಟ್ಟಿ ಎನ್. ಜಿ. : ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ : ಗ್ರಂಥಾಲಯ ರಜತದೀಪ್ತಿ

೧೩. Palkham H. H. : Arranging and Cataloging Manuscripts in Willium L. cements library, American Archivist, Oct, 1938, p. 215 - 229

೧೪. Girija Kumar and Krishan Kumar : Theory of Cataloging : Vikas Publishing House Pvt. Ltd., Delhi, 1975, p. 5 - 7

೧೫. Girija Kumar and Krishan Kumar : Theory of Cataloging : Vikas Publishing House Pvt. Ltd., Delhi, 1975, p. 5 - 7

೧೬. Ranganathan S. R. : Five laws of library science, 1975, Bangalore, Sharada Ranganathan Series

೧೭. ಸಂಗಮು ಎಸ್. ಎಲ್. : ಸಂದರ್ಭಸೇವೆ : ನಿರ್ಮಲ ಪ್ರಕಾಶನ, ಗುಲಬರ್ಗಾ, ೧೯೮೬, ಪು. ೧೯ - ೨೧

೧೮. ಕರಿಸಿದ್ದಪ್ಪ (ಸಿ. ಆರ್.) : ಕ್ರಿ. ಶ. ೧೮೦೦ ರಿಂದೀಚೆಗೆ ಪ್ರಕಟವಾದ ಕನ್ನಡ ಸಂದರ್ಭ ಗ್ರಂಥಗಳು : ಒಂದು ತಾಂತ್ರಿಕ ಅಧ್ಯಯನ, ಪಿಎಚ್.ಡಿ. ಪ್ರಬಂಧ, ಗುಲಬುರ್ಗಾ ವಿಶ್ವವಿದ್ಯಾಲಯ, ಗುಲಬುರ್ಗಾ, ೧೯೮೩

೧೯. ಅಸುಂಡಿ ಅಶೋಕ ಯ. : ಕನ್ನಡದಲ್ಲಿ ಸಂದರ್ಭ ಗ್ರಂಥಗಳು : ಸಮಗ್ರ ಸಮೀಕ್ಷೆ ಮತ್ತು ವಿವರಣಾತ್ಮಕ ಸೂಚಿ : ಎನ್. ಎ. ಪ್ರಕಾಶನ, ೧೦೭೯, ೮ ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು, ೧೯೯೨

೨೦. ಗುಂಜಾಳ ಎಸ್. ಆರ್. : ಪ್ರಸ್ತಾವನೆ : ಸಂಶೋಧನಾ ಲೇಖನಸೂಚಿ

೨೧. ರಾಚನಾಯ್ಕರ (ವಿ. ಡಿ.) : ಲಿಂಗಾಯತ ಸಂಶೋಧನಾ ಕೇಂದ್ರ ಗ್ರಂಥಾಲಯ, ರುದ್ರಾಕ್ಷಿಮಠ, ಶಿವಬಸವನಗರ, ಬೆಳಗಾವಿ, ೧೯೯೬, ಪು. xvi - xvii

೨೨. ಗುಂಜಾಳ ಎಸ್. ಆರ್. : ಪ್ರಸ್ತಾವನೆ : ಸಂಶೋಧನಾ ಲೇಖನಸೂಚಿ, ಪು. xvi - xvii

ರಾಚನಾಯ್ಕರ (ವಿ. ಡಿ.)

೨೩. ಸುಜಾತಾ ಎಚ್. ಎಸ್ : ಪ್ರಸ್ತಾವನೆ : ಹಾಮನಾ ಹೊತ್ತಗೆಗಳು, ಸುಹಾಸ, ಮೈಸೂರು, ೧೯೯೧, ಪು. xvi

೨೪. ಕರಿಸಿದ್ದಪ್ಪ (ಸಿ. ಆರ್.) : ಸಂಕ್ರಮಣ ಶತಕ : ಸಂಕ್ರಮಣ ಪ್ರಕಾಶನ, ೧೯೮೧

೨೫. ಕರಿಸಿದ್ದಪ್ಪ (ಸಿ. ಆರ್.) : ಸಂಕ್ರಮಣ ಶತಕ : ಸಂಕಲನಕಾರರ ಮಾತು : ಸಂಕ್ರಮಣ ಪ್ರಕಾಶನ, ಧಾರವಾಡ, ೧೯೮೧, ಪು. iii - v

೨೬. Social and Scientific Research References, p. 34

" ಆರು ಜನ ನಂಬುಗೆಯ ಸ್ನೇಹಿತರು ನನಗೆ
ನಾನು ಅರಿತುದನೆಲ್ಲ ಅವರೆ ಕಲಿಸಿದರು
' ಏನು ' ' ಯಾಕೆ ' ' ಯಾವಾಗ ' ' ಹೇಗೆ '
' ಎಲ್ಲಿ ' ಮತ್ತು ' ಯಾರು ' ಎಂಬವರೇ ಅವರು "

— ರುಡಯಾರ್ಡ ಕಿಪ್ಲಿಂಗ

*" I have six honest faithful friends*
*They taught me all knew*
*Their names are ' what ' and ' why ' and ' when '*
*and ' how ' and ' where ' and ' who '.*

— Rudyard Kipling

ಅಧ್ಯಾಯ : ಎರಡು

# ಇತಿಹಾಸ ಮತ್ತು ಬೆಳವಣಿಗೆ

## ಅಧ್ಯಾಯ : ಎರಡು

# ಇತಿಹಾಸ ಮತ್ತು ಬೆಳವಣಿಗೆ

### ೨.೧ : ಮೂಲಾಧಾರಗಳು

ಕ್ರಿ. ಶ. ೧೫೦೦ ಕ್ಕೆ ಮುಂಚೆ ಯುರೋಪ್ ರಾಷ್ಟ್ರಗಳಲ್ಲಿನ ಮುದ್ರಿತವಾದ ಪುಸ್ತಕಗಳನ್ನು " ಮುದ್ರಣದ ಆದಿಕಾಲದ ಪುಸ್ತಕಗಳು " (Incunablela) ಎಂದು ಕರೆಯುತ್ತಾರೆ. ಈ ಪುಸ್ತಕಗಳು ಅಪೂರ್ವವಾದುದರಿಂದ ಬಹು ಬೆಲೆಬಾಳುವಂತಹವು. ಇವುಗಳನ್ನೇ ಒಂದು ಪಟ್ಟಿ ಮಾಡಿ ಮಾಹಿತಿಯನ್ನು ವರ್ಷಾನುಕ್ರಮವಾಗಿ ಜೋಡಿಸಿದ್ದಾರೆ.

೧೫೪೫ ರಲ್ಲಿ ಕಾನ್ರಾಡ್ ಗೆಸನರ್ (Conard Gestener) ಎಂಬ ಜರ್ಮನ್ ವೈದ್ಯ ಪ್ರಕೃತಿ ವಿಜ್ಞಾನಿ ಹಾಗೂ ಭಾಷಾಶಾಸ್ತ್ರ ಪ್ರವೀಣ ಬೃಹತ್ ಪ್ರಯತ್ನದಿಂದ ಲ್ಯಾಟಿನ್, ಗ್ರೀಕ್, ಹಿಬ್ರೂ ಭಾಷೆಗಳ, ೧೨,೦೦೦ ಪುಸ್ತಕಗಳನ್ನು ಲೇಖಕರ ಕ್ರಿಶ್ಚಿಯನ್ ಹೆಸರಿನ ಅಕಾರಾದಿಯಾಗಿ ಪಟ್ಟಿ ಮಾಡಿದ. ಇದೇ ಬಿಬ್ಲಿಯೋತೇಕ ಯುನಿವರ್ಸಾಲಿಸ್ (Bibliotheca Universalis). ೧೫೫೫ ರಲ್ಲಿ ಒಂದು ಪುರವಣಿ ಹೊರಡಿಸಿ ೩,೦೦೦ ಪುಸ್ತಕಗಳ ಮಾಹಿತಿಯನ್ನು ಸೇರಿಸಿದ. ಮುದ್ರಣ ಆರಂಭವಾದಾಗಿನಿಂದ ಕ್ರಿ. ಶ. ೧೫೦೦ ರ ವರೆಗೆ ಸುಮಾರು ೪೦,೦೦೦ ಪುಸ್ತಕಗಳು ಪ್ರಕಟವಾಗಿವೆಯೆಂದು ಅಂದಾಜು ಮಾಡಲಾಗಿದೆ. ಆದರೆ ಈತ ತನ್ನ ತಾಯ್ನಾಡಿನಲ್ಲಿ ಪುಸ್ತಕಗಳ ಮಾಹಿತಿಯನ್ನೇ ಸೇರಿಸಲಿಲ್ಲ. ಗ್ರಂಥಸೂಚಿಯ ತಯಾರಿಕೆಯಲ್ಲಿ ಪ್ರತಿ ಪೀಳಿಗೆಯೂ ಒಂದಲ್ಲ ಒಂದು ರೀತಿಯಲ್ಲಿ ಕೆಲವು ಬರೆದ ಪ್ರಕಾರಗಳನ್ನು ಕೈ ಬಟ್ಟಿದೆ. ಇದು ಅಜ್ಞಾನ ಅಥವಾ ಸರಳತೆಯ ದೃಷ್ಟಿಯಿಂದಿರಬಹುದು. ಈ ಬರೆದ ಪ್ರಕಾರಗಳ ಸಂಖ್ಯೆ ಎಷ್ಟು ಅಗಾಧವಾಗಿದೆಯೆಂದರೆ ವಿಶ್ವದಾದ್ಯಂತ ಇರುವ ಇಂತಹುಗಳ ಪಟ್ಟಿಯನ್ನು ತಯಾರಿಸಬೇಕೆಂಬುದು ಇನ್ನೂ ಹಗಲುಗನಸಾಗಿಯೇ ಉಳಿದಿದೆ. ಗ್ರಂಥಸೂಚಿಯ ತಯಾರಿಕೆಯಲ್ಲಿ ಸೂಕ್ಷ್ಮ ವಿವರಗಳಿಗೇ ಹೆಚ್ಚು ಗಮನವೀಯಬೇಕೆಂಬ ತತ್ವ ಸಹಜವಾಗಿಯೇ ಇದೆ. ಪ್ರಾಚೀನ ಪುಸ್ತಕಗಳನ್ನು ಸರಿಯಾಗಿ ಗುರುತಿಸಲು ಅವುಗಳ ಮೊದಲಲ್ಲಿರುವ ಖಾಲಿ ಹಾಳೆಗಳು, ಮುದ್ರಕರು ಪ್ರತಿ ಫಾರಂನ್ನು ಅದು ಯಾವ ಪುಸ್ತಕಕ್ಕೆ ಸೇರಿದುದು ಎಂದು ಗುರುತಿಸಲು ಉಪಯೋಗಿಸುವ ಚಿಹ್ನೆಗಳು, ಕಾಗದದ ಆಕಾರ, ಅಚ್ಚು ಮೊಳೆಗಳ ವಿನ್ಯಾಸ, ಇತ್ಯಾದಿ ವಿವರಗಳು ಆವಶ್ಯಕ. ಆದರೆ ಈ ವಿವರಗಳನ್ನು ಇತ್ತೀಚಿನ ಪುಸ್ತಕಗಳ ಬಗ್ಗೆ ಕೊಡುವದು ಹಾಸ್ಯಾಸ್ಪದವೆನಿಸುತ್ತದೆ.

ಗ್ರಂಥಸೂಚಿಯ ರಚನೆಯಲ್ಲಿ ಬರೆದ ಪ್ರಕಾರಗಳಲ್ಲಿ ಯಾವುದನ್ನು ಸೇರಿಸಬೇಕು, ಯಾವುದನ್ನು ಬಿಡಬೇಕು ಎಂದು ನಿರ್ಣಯಿಸುವುದು ಕಷ್ಟ. ಈ ನಿರ್ಣಯ ವಿಷಯ ತಜ್ಞರಿಂದಲೇ ಸಾಧ್ಯ. ಇಲ್ಲವಾದರೆ ಈ ಸಾಮಗ್ರಿಗಳ ಆಯ್ಕೆಯಲ್ಲಿ ಅನುಸರಿಸಿರುವ ವಿಧಾನವನ್ನು ಸೂಚಿಸುವುದು ಅಗತ್ಯ. ಕೆಲವು ಮೇಲೆ ಈ ಮಿತಿ ಗ್ರಂಥಸೂಚಿಯ ಶೀರ್ಷಿಕೆಯಿಂದಲೇ ವ್ಯಕ್ತವಾಗುತ್ತದೆ. ಪೋಲಾರ್ಡ್ ಮತ್ತು ರೆಡ್ ಗ್ರೇವ್ ಅವರು ತಯಾರಿಸಿದ ಗ್ರಂಥಸೂಚಿಯ ಹೆಸರು " ೧೪೭೫ ರಿಂದ ೧೬೪೦ ರ ವರೆಗೆ ಇಂಗ್ಲೆಂಡ್, ಸ್ಕಾಟಲೆಂಡ್, ಐರ್ಲೆಂಡ್‌ಗಳಲ್ಲಿ ಪ್ರಕಟವಾದ ಪುಸ್ತಕಗಳ ಹಾಗೂ ಹೊರದೇಶಗಳಲ್ಲಿ ಪ್ರಕಟವಾದ ಇಂಗ್ಲೀಷ್ ಪುಸ್ತಕಗಳ ಹ್ರಸ್ವ ಶೀರ್ಷಿಕೆಯ ಪಟ್ಟಿ. " ಇದರಲ್ಲಿ ಕಾಲ, ಭಾಷೆ, ದೇಶ, ಬರೆದ ಪ್ರಕಾರದ ಮಿತಿಯನ್ನು ಸ್ಪಷ್ಟವಾಗಿ ತಿಳಿಸಿದೆ. ಮಾಹಿತಿಯಲ್ಲಿ ಪುಸ್ತಕಗಳನ್ನು ಗುಂಪುಗಳಾಗಿ ವಿಭಾಗಿಸಿ, ಪ್ರತಿ ಪುಸ್ತಕಕ್ಕೂ ಒಂದು ಕ್ರಮಸಂಖ್ಯೆ, ಅದರ ಹ್ರಸ್ವ ಶೀರ್ಷಿಕೆ, ಆಕಾರ, ಪ್ರಕಾಶನ, ಮುದ್ರಿತ ವರ್ಷ, ಅಲ್ಲದೆ ಪ್ರಾಚೀನ ಪುಸ್ತಕಗಳು ಯಾವ ಗ್ರಂಥಾಲಯದಲ್ಲಿ ದೊರೆಯುತ್ತವೆಯೆಂಬುದನ್ನು ಸಂಕೇತಗಳ ಮೂಲಕ ಸೂಚಿಸಿದೆ. ಮಾಹಿತಿ ಚಿಕ್ಕದಾಗಿದ್ದರೂ ಪೂರ್ಣವಾಗಿದೆ.

ನಿಯತಕಾಲಿಕೆಗಳ ಹೆಸರನ್ನು ಮಾತ್ರ ಒಳಗೊಂಡ ಪಟ್ಟಿಯನ್ನು ತಯಾರಿಸಬಹುದು. " ವಿಶ್ವದಾದ್ಯಂತ ೧೯೦೦ ರಿಂದ ೧೯೬೦ ರ ವರೆಗೆ ಪ್ರಕಟವಾದ ವಿಜ್ಞಾನ ನಿಯತಕಾಲಿಕೆಗಳ ಪಟ್ಟಿ " ಯೊಂದಿದೆ. ಇದು ಮೂರು ಸಂಪುಟಗಳಲ್ಲಿದ್ದು ನಾಲ್ಕನೆಯ ಆವೃತ್ತಿ ೧೯೬೩ ರ ವರೆಗೆ ಪ್ರಕಟವಾಯಿತು. ೬೦,೦೦೦ ಶೀರ್ಷಿಕೆಗಳಿರುವ ಈ ಪಟ್ಟಿಯಲ್ಲಿ " ೧೯೦೦ ರಿಂದ ಹಿಂದಿನಿಂದಲೂ ಪ್ರಕಟವಾಗಿ ೨೦ ನೇ ಶತಮಾನದಲ್ಲಿ ಪ್ರಕಟವಾಗಿರುವ ನಿಯತಕಾಲಿಕೆಗಳು ೧೯೬೦ ರಿಂದ ಈಚೆಗೆ ಹೆಸರು ಬದಲಿಸಿದ ನಿಯತಕಾಲಿಕೆಗಳ " ಮಾಹಿತಿ ಇದೆ. ಈ ಪುಸ್ತಕದ ಹಿಂದಿನ ಆವೃತ್ತಿಯಲ್ಲಿ ಹೆಸರಿಸಿದ್ದ ೧೦,೦೦೦ ಪತ್ರಿಕೆಗಳು ಸಾಮಾಜಿಕ ಅಥವಾ ವ್ಯಾಪಾರೀ ಮನೋಭಾವದಿಂದ ಪ್ರಕಟವಾಗಿ ವೈಜ್ಞಾನಿಕ ನಿಯತಕಾಲಿಕೆಗಳ ಪಂಕ್ತಿಗೆ ಸೇರದುದರಿಂದ ಅವುಗಳ ಹೆಸರನ್ನು ಈ ಆವೃತ್ತಿಯಲ್ಲಿ ಕೈಬಿಡಲಾಗಿದೆ. ೧೯೫೧ - ೧೯೬೦ ರಲ್ಲಿ ನಿಯತಕಾಲಿಕೆಗಳ ಸಂಖ್ಯೆ ವಿಪರೀತ ಹೆಚ್ಚಿದುದರಿಂದ ಅವುಗಳೇ ಹೆಚ್ಚು ಸಂಖ್ಯೆಯಲ್ಲಿ ಉಲ್ಲೇಖಿತವಾಗಿವೆ. ಈ ಗ್ರಂಥಸೂಚಿಯ ವ್ಯಾಪ್ತಿಯಲ್ಲಿ ನಿಯತಕಾಲಿಕೆಗಳನ್ನು ಮಾತ್ರ ಸೇರಿಸಿದುದರಿಂದ ಒಂದು ಬರೆದ ಪ್ರಕಾರಕ್ಕೆ, ಒಂದು ನಿಯಮಿತ ಕಾಲಮಾನಕ್ಕೆ ಮೀಸಲಾಗಿದೆ. ಇದರಂತೆಯೇ ಹೆಸರಿಸಬಹುದಾದ ಮತ್ತೊಂದು ಗ್ರಂಥಸೂಚಿಯೆಂದರೆ ಥಿಯೋಡೋರ್ ಬೆಸ್ಟರ್‌ಮನ್ (Theodre Besterman) ಅವರ ಗ್ರಂಥಸೂಚಿಗಳ ಗ್ರಂಥಸೂಚಿ (Bibliography of Bibliographies) ಇದು ಗ್ರಂಥಸೂಚಿಗಳಿಗೆ ಮಾತ್ರ ಮೀಸಲಾಗಿದೆ. ಸಂಕಲಿತ ಸೂಚಿ ತಯಾರಿಸಲು ಇದರಿಂದ ಅನುಕೂಲ.

" ಬ್ರಿಟಿಷ್ ಮ್ಯೂಸಿಯಂನಲ್ಲಿರುವ ೧೫ ನೇ ಶತಮಾನದ ಪ್ರಕಟಿತ ಪುಸ್ತಕಗಳ ಪಟ್ಟಿ " (Catalogue of Books Printed in XV Century, New in British Museum). ಬಹು ವಿಧದ ವಿಷಯಗಳನ್ನೊಳಗೊಂಡ ಅಗಾಧ ಮಾಹಿತಿಯನ್ನು ಒಳಗೊಂಡಿರುತ್ತದೆ.

ಭಾರತದಲ್ಲಿ ಗ್ರಂಥಾಲಯಗಳ ವ್ಯವಸ್ಥೆ, ಗ್ರಂಥಾಲಯದ ಅಧ್ಯಯನಕ್ಕೆ ಕಾರಣಪುರುಷರಾದ ಡಾ. ರಂಗನಾಥನ್‌ರವರು ಇಂಗ್ಲಿಷ್ ಪದಗಳಾದ ' ಬಿಬ್ಲಿಯೋಗ್ರಫಿ ', ' ಕ್ಯಾಟಲಾಗ್ ', ' ಇಂಡೆಕ್ಸ್ ' ಎಂಬ ಪದಗಳಿಗೆ ಕ್ರಮವಾಗಿ ' ಗ್ರಂಥಸೂಚಿ ', ' ಸೂಚಿ ' ಮತ್ತು ' ನಿರ್ದೇಶಿ ' ಎಂಬ ಸಂಸ್ಕೃತ ಪರ್ಯಾಯ ಪದಗಳನ್ನು ಸೂಚಿಸುತ್ತಾರೆ. ಗ್ರಂಥಸೂಚಿ ಎಂಬ ಪದವನ್ನೇ ಇಲ್ಲಿ ಉಪಯೋಗಿಸಲಾಗಿದೆ.

ಇಂಗ್ಲೀಷನಲ್ಲಿಯೂ ಸಹ ' ಬಿಬ್ಲಿಯೋಗ್ರಫಿ ' ಪದ ನಾನಾ ಅರ್ಥಗಳಲ್ಲಿ ಉಪಯೋಗವಾಗುತ್ತದೆ. ಪದಶಃ ಅರ್ಥ ಸಹ ಕಾಲಕ್ರಮೇಣ ಬದಲಾವಣೆ ಹೊಂದುತ್ತಾ ಬಂದಿದೆ. ೧೬೭೮ ರಲ್ಲಿ ' ಬಿಬ್ಲಿಯೋಗ್ರಫಿ ' ಎಂದರೆ ಪುಸ್ತಕವನ್ನು ಬರೆಯುವದು ಎಂಬ ಅರ್ಥ ಇತ್ತು. ಅನಂತರ ೧೬೬೧ ರಲ್ಲಿ ಬಿಬ್ಲಿಯೋಗ್ರಾಫರ್ ಎಂಬ ಪದಕ್ಕೆ ಪುಸ್ತಕವನ್ನು ಬರೆಯುವವ ಅಥವಾ ನಕಲು ಮಾಡುವವ ಎಂಬ ಅರ್ಥವಿದ್ದು, ೧೮ ನೇ ಶತಮಾನದ ಕಡೆಯಲ್ಲಿ ಫ್ರಾನ್ಸಿನಲ್ಲಿ ಈ ಪದಕ್ಕೆ ಪುಸ್ತಕದ ಬಗ್ಗೆ ಬರೆಯುವದು ಎಂಬರ್ಥ ಬಂದು, ೧೯ ನೇ ಶತಮಾನದ ಆದಿಯಲ್ಲಿ " ಪುಸ್ತಕದ ಮುದ್ರಣ ಕಲೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಅಭ್ಯಾಸ ಮಾಡುವವ " ಎಂಬ ಅರ್ಥವಿತ್ತು. ಪುಸ್ತಕದ ಪ್ರತಿಗಳನ್ನು ತಯಾರಿಸುವ ವಿಧಾನ ಅಭ್ಯಾಸಕ್ಕೆ ಬಿಬ್ಲಿಯಾಲಜಿ ಅಥವಾ ಪುಸ್ತಕಶಾಸ್ತ್ರ ಎಂಬ ನೂತನ ಪದ ಹೆಚ್ಚು ಸಮಂಜಸವೆನಿಸಿದರೂ ಅದು ಬಳಕೆಗೆ ಬರಲಿಲ್ಲ.

ಈಗ ಬಿಬ್ಲಿಯೋಗ್ರಫಿ ಪದವನ್ನು ಎರಡು ಅರ್ಥದಲ್ಲಿ ಉಪಯೋಗಿಸುತ್ತಾರೆ. ಮೊದಲನೆಯದು ಈಗಾಗಲೇ ಸೂಚಿಸಿರುವಂತೆ ಗ್ರಂಥಸೂಚಿ ಎಂಬ ಅರ್ಥದಲ್ಲಿ, ಎರಡನೆಯದು ಪುಸ್ತಕದ ಪಾಠ ನಿರ್ಣಯದಲ್ಲಿ, ಪುಸ್ತಕವೂ ಹಸ್ತಪ್ರತಿಯ ಘಟ್ಟದಿಂದ, ಮೊದಲ ಮುದ್ರಣ, ಪುನರ್ ಮುದ್ರಣ, ಪರಿಷ್ಕೃತ ಮುದ್ರಣಗಳು, ಇತ್ಯಾದಿ ಆವೃತ್ತಿಗಳ ತಯಾರಿಕೆಯ ನಾನಾ ಘಟ್ಟಗಳಲ್ಲಿ ಉಂಟಾಗಿರಬಹುದಾದ ಲೋಪದೋಷಗಳನ್ನು ಕಂಡುಹಿಡಿದು ಪುಸ್ತಕದ ಪಾಠ ನಿರ್ಣಯಕ್ಕೆ ಸಹಾಯಕವಾಗುವ ಅಧ್ಯಯನ. ಈ ಪಾಠ ನಿರ್ಣಯದಲ್ಲಿ ಭಾಷಾ ಪಂಡಿತರ ಸ್ಥಾನವನ್ನು ಆಕ್ರಮಿಸುವದು ಇದರ ಉದ್ದೇಶವಲ್ಲ. ಈ ರೀತಿಯ ಅಧ್ಯಯನವನ್ನು " ಪುಸ್ತಕ ಶಾಸ್ತ್ರ " ಎಂದು ಕರೆಯುವದಾದರೆ ಭಾಷಾ ಪಂಡಿತರು ಪುಸ್ತಕ ಶಾಸ್ತ್ರವನ್ನು ತಿಳಿದಿರಬಹುದು. ಆದರೆ ಪುಸ್ತಕ ಶಾಸ್ತ್ರಾಧ್ಯಾಯಿಯ ಭಾಷೆಯಲ್ಲಿ ಪಾಂಡಿತ್ಯ ಗಳಿಸಿರುವದು ಅಪರೂಪ. ಹಸ್ತಪ್ರತಿಗಳ ತಯಾರಿಕೆ ವಿಧಾನ, ಆಗಿನ ಕಾಲದ ಮುದ್ರಣ ವಿಧಾನ, ಅಚ್ಚುಮೊಳೆ ವಿನ್ಯಾಸ, ಪುಟ ವಿನ್ಯಾಸ, ಅಚ್ಚಾಗಿರುವ ಕಾಗದ, ರಟ್ಟು ಕಟ್ಟಿರುವ ಬಗೆ, ಚಿತ್ರಗಳ ರೀತಿ, ಮುದ್ರಣಾಲಯದ

ರೀತಿ - ನೀತಿಗಳು, ಅಚ್ಚುಮೊಳೆ ಜೋಡಿಸುವವರ, ಮುದ್ರಕರ ಹವ್ಯಾಸಗಳು, ಇವುಗಳನ್ನು ತಿಳಿದರೆ, ಪುಸ್ತಕದ ಪಾಠ ನಿರ್ಣಯಕ್ಕೆ ಪುಸ್ತಕ ಶಾಸ್ತ್ರವು ಒಂದು ವೈಜ್ಞಾನಿಕ ಸಾಧನವಾಗುತ್ತದೆ.

ಯುರೋಪಿನಲ್ಲಿ ಅದರಲ್ಲೂ ಜರ್ಮನಿ ಮತ್ತು ಫ್ರಾನ್ಸಿನಲ್ಲಿ ೧೯ ನೇ ಶತಮಾನದಲ್ಲಿ ಅನೇಕ ಗ್ರಂಥಸೂಚಿಗಳು ತಯಾರಾದವು. ಇವುಗಳಲ್ಲಿ ಹೆಚ್ಚು ಸೂಚಿಗಳು ನಿರ್ದಿಷ್ಟ ವಿಷಯಗಳಿಗೆ ಸಂಬಂಧಿಸಿದ್ದು, ಹಿಂದಿನ ಕಾಲದಿಂದ ಇಂದಿನವರೆಗೂ ಆ ವಿಷಯದಲ್ಲಿರುವ ಬರೆದ ಪ್ರಕಾರಗಳ ಮಾಹಿತಿಗಳನ್ನೊದಗಿಸಿದುವು. ಇದಲ್ಲದೆ ವ್ಯಾಪಾರೀ ಗ್ರಂಥಸೂಚಿಗಳು ಪ್ರಕಟವಾದುವು.

ಪ್ಯಾರಿಸ್ಸಿನ ವ್ಯಾಪಾರಿ ಚಾರ್ಲ್ಸ್ ಬ್ರೂನೆ (Charles Jaiques Brunet) ತನ್ನ ಮೂವತ್ತನೆಯ ವಯಸ್ಸಿನಲ್ಲಿ ಅಂದರೆ ೧೮೧೦ ರಲ್ಲಿ ಒಂದು ಗ್ರಂಥಸೂಚಿಯನ್ನು ತಯಾರಿಸಿ ೧೮೬೫ ರ ವರೆಗೂ ಪರಿಷ್ಕರಿಸಿದನು. ಇದರಲ್ಲಿ ಪ್ರಾಚೀನ ಪುಸ್ತಕಗಳಲ್ಲದೆ, ಪ್ರಚಲಿತ ಪ್ರಮುಖ ಪುಸ್ತಕಗಳು, ಅವುಗಳ ಬಾಹ್ಯರೂಪ, ಮುದ್ರಣ, ಚಿತ್ರ, ಮತ್ತಾವುದಾದರೂ ದೃಷ್ಟಿಯಿಂದ ಅಮೌಲ್ಯವೆಂದು ಪರಿಗಣಿಸಿದುದನ್ನು ಸೇರಿಸಿ ತನ್ನ ಗ್ರಂಥಸೂಚಿಗೆ ವರ್ಗೀಕೃತ ಸೂಚಿಯನ್ನು ತಯಾರಿಸಿದ.

೧೮೯೫ ರಲ್ಲಿ ಬೆಲ್ಜಿಯಂ ದೇಶದ ಬ್ರಸೆಲ್ ನಗರದಲ್ಲಿ ಸರ್ಕಾರದ ನೆರವಿನಿಂದ ಪಾಲ್ ಆಟ್ಲೆ (Paul Otlet) ಮತ್ತು ಹೆನ್ರಿ ಲಾ ಫಾಂಟೆಸ್ ಎಂಬಿಬ್ಬರು ಲಾಯರುಗಳ ಅಂತರ್‌ರಾಷ್ಟ್ರೀಯ ಗ್ರಂಥಸೂಚಿ ಸಂಸ್ಥೆಯನ್ನು ಸ್ಥಾಪಿಸಿದರು. ಅವರ ಯೋಜನೆಯೆಂದರೆ ಯುರೋಪಿನಲ್ಲಿ ಮುದ್ರಣ ಆರಂಭವಾದಾಗಿನಿಂದ ಇದುವರೆಗೆ ವಿಶ್ವದ ಎಲ್ಲೆಡೆ ಎಲ್ಲಾ ಭಾಷೆಗಳಲ್ಲಿ ಎಲ್ಲಾ ವಿಷಯಗಳಲ್ಲಿ ಪ್ರಕಟವಾಗಿರುವ ಪುಸ್ತಕಗಳ ಪಟ್ಟಿಯನ್ನು ಪತ್ರಕಗಳ ಮೇಲೆ, ವರ್ಗೀಕೃತ ಪಟ್ಟಿಯಲ್ಲಿ ಲೇಖಕರ ಹೆಸರಿನ ಅಕಾರಾದಿಯಾಗಿ, ಬೃಹತ್ ಗ್ರಂಥಸೂಚಿಯನ್ನು ತಯಾರಿಸುವದು. ಈ ದೊಡ್ಡ ಯೋಜನೆಯಲ್ಲಿ ಸಹಕರಿಸುವ ಎಲ್ಲಾ ದೇಶಗಳಿಗೂ ಒಪ್ಪಿಗೆಯಾಗುವಂತಹ ಕೆಲಸ ನಡೆಯುವದೆಂದು ಯೋಚಿಸಿದರು.

ಪಾಲ್ ಆಟ್ಲೆ ಐದು ವರ್ಷಗಳಲ್ಲಿ ಗ್ರಂಥಾಲಯಗಳ ಮತ್ತಿತರ ಸಂಸ್ಥೆಗಳಿಂದ ಪುಸ್ತಕ ಪಟ್ಟಿಗಳನ್ನು, ಗ್ರಂಥಸೂಚಿಗಳನ್ನು ಪಡೆದು, ಪುಸ್ತಕ ವ್ಯಾಪಾರಿಗಳ ಪುಸ್ತಕ ಪಟ್ಟಿಗಳನ್ನೂ ಪಡೆದು ಪ್ರತಿ ಪುಸ್ತಕದ ಮಾಹಿತಿಯನ್ನು ಕತ್ತರಿಸಿ ಪತ್ರಕಗಳ ಮೇಲೆ ಅಂಟಿಸಿ ೧೨ ಮಿಲಿಯನ್ ಪತ್ರಕಗಳನ್ನು ತಯಾರಿಸಿದ. ಇದಕ್ಕಾಗಿ ಡ್ಯೂಯಿ ದಶಮಾನ ಪದ್ಧತಿಯನ್ನು (DDC) ರೂಪಿಸಿದ. ಈ ರೀತಿ ಮಾಹಿತಿಗಳನ್ನು ಕಲೆ ಹಾಕಿ ವ್ಯವಸ್ಥೆ ಮಾಡುವ ಏರ್ಪಾಡು ಮಾಡಿದ, ಎರಡನೇ ಮಹಾಯುದ್ಧಕ್ಕೆ ಮುಂಚೆ ಫೆಡರೇಶನ್ ಇಂಟರ್‌ನ್ಯಾಶನಲ್ ಡಾಕ್ಯುಮೆಂಟೇಶನ್ (Federation International Documentation) ಸಂಸ್ಥೆ ಲೇಖನ ಭಾಗದ ವರ್ಗೀಕರಣ ಹಾಗೂ ಅದಕ್ಕೆ ಸೂಚಿ

ತಯಾರಿಸುವದರಲ್ಲಿ ಆಸಕ್ತಿ ವಹಿಸಿತು. ವ್ಯವಸ್ಥಾತ್ಮಕ ಗ್ರಂಥಸೂಚಿ ಮಡಲೆಳಸಿದ ಕೆಲಸವನ್ನು ಇದು ಯತ್ನಿಸಿ ಹೊಸ ಸಾಧನಗಳನ್ನು ರೂಪಿಸಿತು.

ಮಹಾಯುದ್ಧದ ನಂತರ ವಿಶ್ವದ ನಾನಾ ರಾಷ್ಟ್ರಗಳ ರಾಷ್ಟ್ರೀಯ ಗ್ರಂಥಸೂಚಿಗಳನ್ನು ಸೇರಿಸಿ ವಿಶ್ವದ ಬೃಹತ್ ಗ್ರಂಥಸೂಚಿ ತಯಾರಿಸುವ ಆಲೋಚನೆ ಪುನಃ ಉದಯಿಸಿತು. ಆದರೆ ಇಲ್ಲಿ ಸಹ ಪುಸ್ತಕಗಳನ್ನು ಪಟ್ಟಿ ಮಾಡುವದರಲ್ಲಿ ಕಾಲ, ಭಾಷೆ, ಹಣದ ನಿರ್ಬಂಧವಿದೆ.

೧೯೬೫ ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯದ ಗ್ರಂಥಾಲಯ ತನ್ನಲ್ಲಿದ್ದ ಕ್ರಿಶ್ಚಿಯನ್ ಧರ್ಮಯುದ್ಧಕ್ಕೆ ಸಂಬಂಧಿಸಿದ ಪುಸ್ತಕಗಳು ಮತ್ತಿತರ ಪ್ರಕಾರಗಳ ಸೂಚಿಯನ್ನು ತಯಾರಿಸಲು ಗಣಕಯಂತ್ರವನ್ನು ಯಶಸ್ವಿಯಾಗಿ ಬಳಸಿತು.

ಷೇಕ್ಸ್‌ಪಿಯರ್‌ನ ನಾಟಕಗಳು ೧೬೨೩ ರಲ್ಲಿ ಒಟ್ಟಾಗಿ ಮೊದಲ ಬಾರಿಗೆ ಪ್ರಕಟವಾದುವು.

೧೬ ನೇ ಶತಮಾನದಲ್ಲಿದ್ದ ಕಾನ್ರಾಡ್ ಗೆಸನರ್ (conard Gestner) ಎಂಬಾತನನ್ನು 'ಗ್ರಂಥಸೂಚಿಯ ಜನಕ' ಎನ್ನುತ್ತಾರೆ. ೧೫೪೫ ರಲ್ಲಿ ಪ್ರಕಟವಾದ ತನ್ನ ಕೃತಿ ಬಿಬ್ಲಿಯೋಥೆ ಯುನಿವರ್ಸಾಲಿಸ್ (Bibliotheca Universalis) ವ್ಯವಸ್ಥಿತವಾಗಿ ರೂಪಿಸಿದನು. ಈ ಗ್ರಂಥಸೂಚಿಯಲ್ಲಿ ಆತನಿಗೆ ಲ್ಯಾಟಿನ್, ಗ್ರೀಕ್, ಹೀಬ್ರೂ ಭಾಷೆಯ ಪುಸ್ತಕಗಳ ಬಗ್ಗೆ ಟೀಕೆಗಳನ್ನು ಸೇರಿಸಿದ್ದನು. ೧೯೪೮ ರಲ್ಲಿ ಈ ಕೃತಿ ಇನ್ನೂ ಪರಿಷ್ಕೃತವಾಯಿತು. ಇದು ಮುಂಬರುವ ರಾಷ್ಟ್ರೀಯ ಗ್ರಂಥಸೂಚಿಗಳಿಗೆ ನಾಂದಿಯಾಯಿತು. ಈ ಶತಮಾನದಲ್ಲಿ ಇಂಗ್ಲೆಂಡ್, ಇಟಲಿ, ಫ್ರಾನ್ಸ್ ದೇಶಗಳಲ್ಲಿ ಆಯಾ ದೇಶಭಾಷೆಗಳಲ್ಲಿ ಮುದ್ರಿತ ಗ್ರಂಥಗಳ ಸೂಚಿಯನ್ನು ತಯಾರಿಸುವ ಯತ್ನ ಪಡೆಯಿತು. ೧೮ ನೇ ಶತಮಾನದಲ್ಲಿ ಫ್ರಾನ್ಸಿನ ಗಿಲಾಮೆ ದಿ ಬೂರ್ (Gillame de Bure) ಮತ್ತು ಬ್ರೂನೇ (Brunet) ಇವರ ಗ್ರಂಥಸೂಚಿಗಳ ಕಾಲದ ನಂತರ ನಾನಾ ಭಾಷೆಗಳಲ್ಲಿ ಲೇಖಕರ ಸೂಚಿ, ವಿಷಯಸೂಚಿಗಳು ಪ್ರಕಟವಾದುವು. ಈ ಅಸಂಖ್ಯಾತ ಗ್ರಂಥಸೂಚಿಗಳಿಗೇ ಒಂದು ಸೂಚಿಯ ಆವಶ್ಯಕತೆಯಿತ್ತು. ೧೯ ನೇ ಶತಮಾನದ ಮಧ್ಯದಲ್ಲಿ ಪೆಟ್ಸೋಲ್ಡ್ (Petsold) ಎಂಬಾತನು ರಚಿಸಿದ ಗ್ರಂಥಸೂಚಿಯಲ್ಲಿ ೫,೫೦೦ ಸಲ್ಲೇಖಗಳಿದ್ದು ಅದು ಆತನ ವಿದ್ವತ್ತು, ಜ್ಞಾನ, ವಿಮರ್ಶಾತ್ಮಕ ಶಕ್ತಿ, ನಿರ್ದಿಷ್ಟತೆಗೆ ಸಾಕ್ಷಿಯಾಗಿದೆ.

## ೨.೧.೧ : ಕನ್ನಡದಲ್ಲಿ ಪ್ರಾರಂಭಿಕ ಪ್ರಯತ್ನಗಳು

"೧೮೬೪ ನೇ ಡಿಸೆಂಬರ್ ವರೆಗೆ ಬೊಂಬಾಯಿ ಪ್ರಾಂತ್ಯದಲ್ಲಿ ಪ್ರಕಟವಾಗಿರುವ ದೇಶೀಯ ಪ್ರಕಟಣೆಗಳು" ಎಂಬ ಪುಸ್ತಕ ಪಟ್ಟಿಯನ್ನು ಸರ್. ಎ. ಗ್ರಾಂಟ್ ಎಂಬುವರು ೧೮೬೫ ರಲ್ಲಿ ತಯಾರಿಸಿ ಪ್ರಕಟಿಸಿದರು. ಇದರಲ್ಲಿ

೮೯೮ ನಮೂದುಗಳಲ್ಲಿ ಕೇಂದ್ರ ಕನ್ನಡ ಪುಸ್ತಕಗಳಿಗೆ ಸಂಬಂಧಿಸಿದ ನಮೂದುಗಳಿದ್ದವು. ಇದು ಕನ್ನಡ ಗ್ರಂಥಸೂಚಿಯ ಮೊದಲ ಪ್ರಯತ್ನ. ಈತನ ಸೂಚನೆಯ ಮೇರೆಗೆ ಅಂದಿನ ಸರಕಾರವು ೧೮೬೭ ರಲ್ಲಿ ಒಂದು ಕಾನೂನನ್ನು ರಚಿಸಿತು. ಅದರ ಪ್ರಕಾರ ಬ್ರಿಟಿಷ್ ಮ್ಯೂಜಿಯಂನಲ್ಲಿ ಸಂಗ್ರಹಗೊಂಡ ಕನ್ನಡ ಪುಸ್ತಕಗಳ ಪಟ್ಟಿಯನ್ನು "ದಿ ಕ್ಯಾಟಲಾಗ್ ಆಫ್ ದಿ ಕನ್ನಡ. ಬಡಗ ಎಂಡ್ ಕೂರ್ಗ ಬುಕ್ಸ್ ಇನ್ ದಿ ಲೈಬ್ರರಿ ಆಫ್ ದಿ ಬಿಟಿಷ್ ಮ್ಯೂಜಿಯಂ" ಎಂಬ ಆಕರ ಗ್ರಂಥವನ್ನು ಎಲ್. ಡಿ. ಬಾರ್ನೆಟ್ ಎಂಬುವರು ೧೯೧೦ ರಲ್ಲಿ ಪ್ರಕಟಿಸಿದರು. ಈ ಕಾರ್ಯದಲ್ಲಿ ಅವರಿಗೆ ಆರ್. ನರಸಿಂಹಾಚಾರ್ಯ ಮತ್ತು ಜೆ. ಎಫ್. ಫ್ಲೀಟ್ ಎಂಬ ವಿದ್ವಾಂಸರು ನೆರವು ನೀಡಿದರಂತೆ, ಕನ್ನಡದಲ್ಲಿ ಉನ್ನತ ಅಧ್ಯಯನದಲ್ಲಿ ತೊಡಗುವವರಿಗೆ ಇದು ಬಹಳ ಉಪಯುಕ್ತ ಆಕರ ಗ್ರಂಥ. ಬಾರ್ನೆಟ್ ಅವರ ಕ್ಯಾಟಲಾಗ್‌ಗೆ ಪುರವಣಿಯೊಂದು ಇತ್ತೀಚೆಗೆ ಪ್ರಕಟವಾಗಿದೆ. ಅದರ ಹೆಸರು : ಸಪ್ಲಿಮೆಂಟರಿ ಕ್ಯಾಟಲಾಗ್ ಆಫಿ ದಿ ಕನ್ನಡ ಬುಕ್ಸ್ ಇನ್ ದಿ ಬ್ರಿಟಿಷ್ ಲೈಬ್ರರಿ. ಇದನ್ನು ಡಾ. (ಶ್ರೀಮತಿ) ಅಲ್ಬರ್ಟನ್ ಗೌರ್ ತಯಾರಿಸಿದ್ದಾರೆ. ಲಂಡನ್ ಬ್ರಿಟಿಷ್ ಲೈಬ್ರರಿಯವರು ಇದನ್ನು ೧೯೮೫ ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ೧೯೧೦ ರಿಂದ ೧೯೮೦ ರ ವರೆಗೆ ಬ್ರಿಟಿಷ್ ಮ್ಯೂಜಿಯಂ ಮತ್ತು ಇಂಡಿಯಾ ಆಫೀಸ್ ಲೈಬ್ರರಿಗಳಲ್ಲಿ ಸಂಗ್ರಹಗೊಂಡ ಗ್ರಂಥಗಳನ್ನು ಪಟ್ಟಿ ಮಾಡಿದ್ದಾರೆ. ಇದರ ತಯಾರಿಕೆಯಲ್ಲಿ ಗೌರ್ ಅವರಿಗೆ ಡಾ. ಶ್ರೀಸಿವಾಸ ಹಾವನೂರ್ ಸಹಾಯ ಮಾಡಿದರಂತೆ. ಈ ಗ್ರಂಥಸೂಚಿಯ ಪ್ರಕಟಣೆಯಿಂದ ಇಂಗ್ಲೆಂಡಿನಲ್ಲಿರುವ ಕನ್ನಡ ಪುಸ್ತಕಗಳ ಎರಡು ದೊಡ್ಡ ಸಂಗ್ರಹಗಳನ್ನು ಕನ್ನಡಿಗರಿಗೆ ಪರಿಚಯಿಸಿದಂತಾಗಿದೆ. ಆಗಿನ ಲೈಬ್ರರಿಗೆ ತಲುಪಿದ ಭಾರತೀಯ ಪ್ರಕಟಣೆಗಳ ತ್ರೈಮಾಸಿಕ ಪಟ್ಟಿಗಳು ಪ್ರಕಟಗೊಂಡವು. ಇವುಗಳಲ್ಲಿ ಕನ್ನಡ ಗ್ರಂಥಸೂಚಿಗಳು ಇವೆ. ಕನ್ನಡದಲ್ಲಿ ಮೊದ ಮೊದಲು ಪ್ರಕಟವಾದ ಗ್ರಂಥಗಳ ಬಗೆಗೆ ತಿಳಿಯಬೇಕಾದರೆ ಇದನ್ನು ಅಲಕ್ಷಿಸುವಂತೆಯೇ ಇಲ್ಲ. ಮೊದಲಿಗೆ 'ಗ್ರಂಥಸೂಚಿಗಳೆಂದರೆ ಪ್ರಕಾಶಕರ ಪಟ್ಟಿ'[೧] ಗಳೆಂದು ಹೇಳಲಾಗುತ್ತಿತ್ತು ಅವುಗಳಲ್ಲಿ ಪ್ರಕಾಶಕರು ಪ್ರಕಟಿಸಿದ ಪುಸ್ತಕಗಳ ಪಟ್ಟಿಗಳಿರುತ್ತಿದ್ದವು. ೧೬ ನೇ ಶತಮಾನದಲ್ಲಿ ಅವುಗಳನ್ನು ಸಂಗ್ರಹ ರೂಪದಲ್ಲಿ (fair catalogue) ನಿರ್ದಿಷ್ಟ ರೂಪದಲ್ಲಿ (messkatalogue) ತರಲಾಯಿತು. ಪುಸ್ತಕಗಳ ಬೆಲೆ, ಪುಟಗಳು, ಲೇಖಕರ ಹೆಸರು, ಮುದ್ರಣ ಇತ್ಯಾದಿ ಗ್ರಂಥವಿವರಣಾ ಪಟ್ಟಿ (Bibliographical data) ರೂಪದಲ್ಲಿ ಕಂಡುಬರುತ್ತಿದ್ದವು. ಕೊನಾರ್ಡ್ ಗೆಸನರ್ ರಂಥವರು ಅವುಗಳಿಗೆ ವಿದ್ವಾಂಸರ ರಚನೆ (list of scholorly publications) ಗಳೆಂದು ರೂಪಾಂತರ ಹೊಂದಿದವು. ಹೀಗೆ ೧೫೪೫ ರಲ್ಲಿ ಬಿಬ್ಲಿಯೋಥಿಕಾ ಯುನಿವರ್ಸಾಲಿಸ್ (Bibliotheca Universalis) ಹೀಗೆ ರೂಪಾಂತರಗೊಂಡ ಶಾಸ್ತ್ರೀಯವಾಗಿ ತಯಾರಿಸಲ್ಪಟ್ಟ ವಿಶ್ವದ ಪ್ರಪ್ರಥಮ ಗ್ರಂಥಸೂಚಿ ಪ್ರಸಿದ್ಧಿ ಪಡೆಯಿತು. ಹೀಗೆ ಅಂತರಾಷ್ಟ್ರೀಯ ಮಟ್ಟದಲ್ಲಿ ಗ್ರಂಥಸೂಚಿಗಳ ಪ್ರಯತ್ನ ಗೆಸನರ್‌ರಿಂದ ಮೊಟ್ಟ ಮೊದಲು ತಯಾರಾಯಿತು. ೧೭ ನೇ ಶತಮಾನದ ಮಧ್ಯದಲ್ಲಿ ಪುಸ್ತಕಗಳ ಬಗ್ಗೆ ವರ್ಣನೆ (ವರ್ಣನಾತ್ಮಕ ರೂಪ) ಗಳು ಕಂಡುಬಂದವು.

ಟಿಪ್ಪಣಿಗಳು, ಶುರುವಾದವು. ವಿಷಯವಾರು ಗ್ರಂಥಸೂಚಿಗಳು ಪ್ರಚಲಿತದಲ್ಲಿ ಬಂದವು. ಇವು ಹೀಗೆ ಸಾಮಾನ್ಯ ರೂಪಕ್ಕೆ ಗ್ರಂಥಸೂಚಿಗಳಾಗಿ ಪರಿವರ್ತನೆಗಳಾಗಿ ಹೊರಬಂದವು.

೧೮ ನೇ ಶತಮಾನದ ಶುರುವಿನಲ್ಲಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ವಿಮರ್ಶಾತ್ಮಕ ಗ್ರಂಥಸೂಚಿಗಳ ಪ್ರಯತ್ನ ಮತ್ತೊಂದು ದಿಕ್ಕನ್ನು ತೆರೆದುಕೊಂಡಿತ್ತು. ೧೮ ನೇ ಶತಮಾನದ ಮಧ್ಯದಲ್ಲಿ ಇವು ಅತೀ ಸಾಮಾನ್ಯ ಎಂಬಂತೆ ರೂಪರೇಷೆಯನ್ನು ಪಡೆದುಕೊಂಡವು. ನಿಯತಕಾಲಿಕೆಗಳ ಬರಹ ಪಟ್ಟಿಗಳನ್ನು ಸಂಗ್ರಹ ಮಾಡುವ ಸಂಕ್ರಮಣದ ಹೆಜ್ಜೆ ರೂಢಿಗೆ ಬಂತು. ಹೀಗೆ ಏಕಕಾಲಕ್ಕೆ ಪುಸ್ತಕಗಳ ಪಟ್ಟಿ ಮತ್ತು ನಿಯತಕಾಲಿಕೆಗಳಲ್ಲಿಯ ಬರಹಗಳ ಪಟ್ಟಿಯನ್ನು ರೂಢಿಗೆ ತರಲಾಯಿತು. ಹೀಗೆ ಶುರುವಾದ ಪಟ್ಟಿಗಳ ವಿಚಾರ ಗೆಸನ್‌ರ್‌ನಿಂದ ಪ್ರೇರಿತವಾದರೂ ಎಲ್ಲ ವಿದ್ವಾಂಸರ ಪುಸ್ತಕಗಳ ಪಟ್ಟಿಯೊಂದನ್ನು ತಯಾರು ಮಾಡಬೇಕೆಂಬ ಗೆಸನರ್ ಅವರ ಕನಸು ನನಸಾಗಲೇ ಇಲ್ಲ. ಯಾಕೆಂದರೆ ವಿಶ್ವದಾದ್ಯಂತ ಪ್ರಕಟಿಸಲ್ಪಟ್ಟ ಎಲ್ಲ ಲೇಖಕರ ಪುಸ್ತಕಗಳನ್ನು ಸಂಗ್ರಹಿಸುವದು; ಏಕಕಾಲಕ್ಕೆ ಅವುಗಳ ಪಟ್ಟಿ ಮಾಡುವದು ವಿದ್ವಾಂಸರ ಅಪಾರ ವೇಳೆ, ಶ್ರಮವನ್ನು ಬೇಡುವದು ಇನ್ನೊಂದು ಮುಖ್ಯ ಕಾರಣವಾಗಿತ್ತು. ಹೀಗಾಗಿ ಗೆಸನರ್‌ರ ಕನಸು ಕೊನೆಯವರೆಗೂ ನನಸಾಗಲಿಲ್ಲ.

'ಗ್ರಂಥಸೂಚಿಯೆಂದರೆ ಪುಸ್ತಕಗಳ ಪಟ್ಟಿ'[೨] ಎನ್ನುವದು ಪ್ರಾಚೀನರು ಸಾಮಾನ್ಯವಾಗಿ ಬಳಸುತ್ತಿದ್ದರು. ಅವರಿಗೆ ಗ್ರಂಥಗಳ ಪಟ್ಟಿ ಮಾಡುವಾಗ ಈ ಶಬ್ದವನ್ನು ಅಸ್ಸೀರಿಯಾ ಭಾಷಾತಜ್ಞರು ಬಳಸಿದ್ದು ಕಂಡುಬರುತ್ತದೆ. ಪ್ರಾಚೀನರು; ಮುದ್ರಣವಿಲ್ಲದಿದ್ದ ಸಮಯದಲ್ಲಿ ಕಲ್ಲು, ಮಣ್ಣು, ಇಟ್ಟಿಗೆಗಳ ಮೇಲ್ಮೈ ಮೇಲೆ ಬರವಣಿಗೆ ಮಾಡುವದನ್ನು ಈ ತಜ್ಞರು ಕಂಡುಕೊಂಡಿದ್ದರೆ. ಅವರ ಕಾಲ ಬಹುಶಃ ಕ್ರಿ. ಶ. ಪೂರ್ವ ೭ ನೇ ಶತಮಾನ ಎಂದು ಉಲ್ಲೇಖಿಸಿದ್ದಾರೆ. ಇದಲ್ಲದೆ ಬರವಣಿಗೆ ಮೂಲದ ಇತರ ಅವಶೇಷಗಳನ್ನು ಜಿನೇವಾದಲ್ಲಿರುವ ಸೆನ್ನಾಚೆರಿಬ ಗ್ರಂಥಾಲಯದಲ್ಲಿ ಸರ್ ಹೆನ್ರಿ ಲೇಯಾರ್ಡ್ ಮತ್ತು ಅಸ್ಸೀರಿಯಾ ಭಾಷಾತಜ್ಞರು ಬರವಣಿಗೆಯ ದಾಖಲೆಗಳನ್ನು ಗುರುತಿಸಿದ್ದಾರೆ. ಅಲೆಗ್ಝಾಂಡ್ರಿಯಾ ಗ್ರಂಥಾಲಯದಲ್ಲಿ ದೊರೆ ಮಾರ್ಕ್ ಆಂಟೋನಿ ಕ್ಲಿಯೋಪಾತ್ರ ರಾಣಿಗೆ ಕೊಟ್ಟ ಗ್ರಂಥಗಳು ಕ್ರಿ. ಪೂ. ೪೧೧ ರಲ್ಲಿ ಈ ಗ್ರಂಥಾಲಯದಲ್ಲಿ ಇವೆ. ಈ ಕೈ ಬರಹದ ಪ್ರತಿಗಳನ್ನು ಈಗಲೂ ಅಲೆಗ್ಝಾಂಡ್ರಿಯ ಗ್ರಂಥಾಲಯದಲ್ಲಿ ಇಡಲಾಗಿದೆ. ಇಡೀ ಜಗತ್ತನ್ನೇ ಗೆಲ್ಲಲು ಹೊರಟ ಮಹತ್ವಾಕಾಂಕ್ಷಿ ಅಲೆಗ್ಝಾಂಡರ್ ಮಹಾಶಯ ಗ್ರಂಥಾಲಯ ಸ್ಥಾಪನೆಗೆ ಕಾರಣವಾದುದರಿಂದ ಇದಕ್ಕೆ ಅಲೆಗ್ಝಾಂಡ್ರಿಯಾ ಎಂದು ಹೆಸರಿಸಲಾಗಿದೆ. ಈತ ಪ್ರಸಿದ್ಧ ತತ್ವಜ್ಞಾನಿ, ಕಾವ್ಯಮೀಮಾಂಸಕನೆಂದು ಪ್ರಸಿದ್ಧನಾದ ಅರಿಸ್ಟಾಟಲ್‌ನ ಶಿಷ್ಯನೆಂದು ಗುರುತಿಸಲಾಗಿದೆ. ಇದು ಗ್ರೀಕ್ ಸಾಹಿತ್ಯ - ಸಂಸ್ಕೃತಿಗಳ ಅಂತರ್‌ರಾಷ್ಟ್ರೀಯ ಕೇಂದ್ರವಾಗಬೇಕೆಂದು ಟಾಲೆಮಿ ದೊರೆಗಳು ಕನಸು ಕಂಡರು. ಅನೇಕ ಚಕ್ರವರ್ತಿಗಳ ಆಶ್ರಯದಾತರ ಹೆಸರುಗಳು ಈ ಗ್ರಂಥಾಲಯದ ಪೋಷಕವರ್ಗದಲ್ಲಿ ಬಂದಿವೆ.

ಸಾಹಿತಿಗಳಿಗೆ ಪಂಡಿತರುಗಳಿಗೆ ಮತ್ತು ಸಂಶೋಧಕರಿಗೆ ಇದೊಂದು ಸರಸ್ವತಿ ಮಂದಿರವೆನಿಸಿತ್ತು. ಅಂದಿನ ಗ್ರಂಥಪಾಲಕರನ್ನು ವಿದ್ವನ್ಮಣಿಗಳ ಗುಂಪಿಗೆ ಸೇರಿಸಲಾಗಿತ್ತು. ಇದೊಂದು ಪ್ರಾರಂಭಾವಸ್ಥೆಯ ಅತ್ಯಂತ ಪ್ರಾಚೀನ ಗ್ರಂಥಾಲಯವೆಂದು ಪ್ರತೀತಿ ಪಡೆದಿದೆ. ಅಂದಿನಿಂದ ಇಂದಿನವರೆಗೆ ಪುಸ್ತಕಗಳ ಪಟ್ಟಿ, ಪುಸ್ತಕಗಳ ಭಾಗಗಳನ್ನು ಅಭ್ಯಸಿಸುವ ಶಾಸ್ತ್ರ, ಇತ್ಯಾದಿ ಹೆಸರುಗಳಿಂದ ಅವರು ಈ ಗ್ರಂಥಸೂಚಿಯನ್ನು ಗುರುತಿಸಿದುದೊಂದು ಮುಂದಿನ ಅನೇಕ ಬೆಳವಣಿಗೆಗಳಿಗೆ ಇದೂ ಪೂರಕ ಅಭ್ಯಾಸದ ವಿಕಸನವಾಗಿದೆ.

ಗ್ರಂಥಸೂಚಿಯ ರಚನೆಯು ಇಂದು ನಿನ್ನೆಯದಲ್ಲ. ಇದಕ್ಕೆ ಸಾಕಷ್ಟು ಇತಿಹಾಸವಿದೆ. ಆದರೆ ಇಂದಿನ ಅರ್ಥವೈಶಾಲ್ಯತೆ ಹಿಂದೆ ಇರಲಿಲ್ಲ. ಇವುಗಳಿಗೆ ಗ್ರಂಥ ಅಸ್ತಿತ್ವ ಸೂಚಿಗಳೆಂದು ಹೇಳಬಹುದು. ಸೂಚಿ ಗ್ರಂಥಾಲಯದಲ್ಲಿದ್ದ ಒಟ್ಟು ಗ್ರಂಥಗಳ ಪಟ್ಟಿಯಾಗಿರುತ್ತಿತ್ತು. ಸೂಚಿ ರಚನೆಯ ಕಾರ್ಯದಲ್ಲಿ ಕೆಲವು ನಿರ್ದಿಷ್ಟ ನಿಯಮಗಳನ್ನು ರಚಿಸಬೇಕಾಗುತ್ತದೆ. ಈ ನಿಯಮಗಳ ಗ್ರಂಥಕ್ಕೆ 'ಗ್ರಂಥಸೂಚೀಕಲ್ಪ' ಎಂದು ಹೆಸರು. ಇವುಗಳ ಹುಟ್ಟು ಮತ್ತು ಬೆಳವಣಿಗೆಗೆ ದೊಡ್ಡ ಇತಿಹಾಸವಿದೆ.

ತಾಳೆಗರಿಗಳಲ್ಲಿ ಗ್ರಂಥಗಳನ್ನು ರಚಿಸುವ ಕಾಲಕ್ಕಿಂತ ಪೂರ್ವದ ಇತಿಹಾಸವನ್ನು ನೋಡಿದರೆ ಆಯಾ ಕಾಲಕ್ಕೆ ಸರಿಹೋಗುವಂತಹ ಗ್ರಂಥರಚನೆಯಾದದ್ದು ಕಂಡುಬರುತ್ತದೆ. ಅದಕ್ಕೆ ತಕ್ಕುದಾದ ಗ್ರಂಥಸೂಚಿಗಳೂ ಪ್ರಚಾರದಲ್ಲಿರಬಹುದು. ಆದರೆ ಅವುಗಳ ಇರುವು ಹೀಗೇನೇ ಎಂದು ಹೇಳಲು ಬಾರದು. ಈಗ ಸಿಕ್ಕಷ್ಟು ಅವಶೇಷಗಳಿಂದ ಗ್ರಂಥಸೂಚೀಕಲ್ಪಗಳು ಹುಟ್ಟಿ ಬೆಳೆದು ಬಂದ ರೀತಿಯನ್ನು ಈ ಕೆಳಗಿನಂತೆ ಹೇಳಬಹುದು.

## ೨.೩ : ಪೂರ್ವ ಇತಿಹಾಸ

ಸುಮಾರು ಕ್ರಿ. ಪೂ. ೨೦೦೦ ವರ್ಷಗಳ ಹಿಂದೆ 'ನಿಪ್ಪೂರ' ಎಂಬಲ್ಲಿ ದೊರೆತ ಸುಮೇರಿಯಾದ ಇಟ್ಟಂಗಿ ಮೇಲೆ ಬರೆದ ಅಕ್ಷರಗಳನ್ನು ಪರೀಕ್ಷಿಸಿದರೆ, ಇದು ಮೊದಲನೆಯ 'ಗ್ರಂಥಸೂಚಿ' ಎಂದು ಹೇಳಬಹುದು. ಬೆಬಿಲೋನಿಯಾದಲ್ಲಿಯೂ ಹಿಂದಿನ ಕಾಲದಲ್ಲಿ ಬರೆದವುಗಳೆಂದು ಹೇಳಲಾದ ಕೆಲವು ಮಣ್ಣಿನ ಸುಟ್ಟ ಇಟ್ಟಂಗಿಗಳಲ್ಲಿಯೂ ಗ್ರಂಥಸೂಚಿಗಳ ಅಸ್ಪಷ್ಟ ರೇಖೆಗಳನ್ನು ಗುರುತಿಸಲಾಗಿದೆ. ಕ್ರಿ. ಪೂ. ೧೪೦೦ ರಲ್ಲಿ ಈಜಿಪ್ಟಿನಲ್ಲಿ ದೊರೆತ ಕೆಲವು ಮಣ್ಣಿನ ಹಲಗೆಗಳಲ್ಲಿ ಕೆತ್ತಲಾದ ಗ್ರಂಥಸೂಚಿಯು ಗ್ರಂಥಾಲಯದ ಗ್ರಂಥಗಳ ವಿಶ್ಲೇಷಣೆಗೆ ಅನುವು ಮಾಡಿಕೊಡುತ್ತವೆ. ಇವು ಬೆಬಿಲೋನಿಯಾ ಭಾಷೆಯಲ್ಲಿ ಬರೆಯಲ್ಪಟ್ಟವೆಂದು ತಿಳಿದು ಬಂದಿದೆ. ಅಲ್ಲದೆ ಉಸುಕಿನಲ್ಲಿ ಹುಗಿದಿಟ್ಟವೂ ಕೆಡದ ಆಪಿನಪರೆ (Papyrus) ಗಳಲ್ಲಿ ಬರೆಯಲಾದ ಗ್ರಂಥಸೂಚಿಗಳ ಮೇಲೆ ಗ್ರಂಥದ ತಲೆಬರಹ, ಕ್ರಮಾಂಕ, ಲಿಪಿಗಾರನ ಹೆಸರು, ಗ್ರಂಥ ರಚಿಸಿದ ಮಿತಿ ಇವುಗಳನ್ನು ಬರೆಯಲಾಗಿದೆ.

ಕ್ರಿ. ಶ. ೬೩೦ ರಲ್ಲಿ ಅಸೀರಿಯಾದ ಅಶುರಬನಿಪಾಲ (Ashurbanipal) ಮಹಾರಾಜನ ರಾಜಧಾನಿಯಾದ ನಿನೇವ್ಹ (Nineveh) ನಗರದಲ್ಲಿ ಸುಮಾರು ೨೦, ಹಲಗೆಗಳು ದೊರೆತಿದ್ದು ಅವು ಅರಮನೆಯ ಗ್ರಂಥಾಲಯದಲ್ಲಿ ಇಟ್ಟಂಥವುಗಳೆಂದು ತಿಳಿದು ಬಂದಿದೆ. ಅವುಗಳ ಮೇಲೆ ಗ್ರಂಥದ ಹೆಸರು, ಲೇಖಕ, ಕ್ರಮಾಂಕ, ಲಿಪಿಗಾರನ; ನಕಲು ಮಾಡಿದವನ ಹೆಸರು, ಕೊನೆಯಲ್ಲಿ ರಾಜಮುದ್ರೆಗಳಿವೆ. ಇಷ್ಟೆಲ್ಲ ಮಾಹಿತಿ ನಮಗೆ ಸಿಕ್ಕರೂ ಸೂಚೀಕಲ್ಪದ ನಿರ್ದಿಷ್ಟ ರೂಪ-ರೇಷೆ ತಿಳಿದಿಲ್ಲ.

ಕ್ರಿ. ಪೂ. ೨೦೦ ರಲ್ಲಿ ಕಟ್ಟಲಾದ ಈಜಿಪ್ತ ದೇಶದ ಎಡ್ಪು (Edfu) ಗ್ರಾಮದ, ದೇವಾಲಯದ ಗೋಡೆಯ ಮೇಲೆ ಗ್ರಂಥಸೂಚಿಯನ್ನು ಬರೆಯಲಾಗಿದೆ. ಗ್ರೀಕ್ ದೇಶಗಳ ನಾಗರಿಕತೆಯ ಕೇಂದ್ರ ಸ್ಥಾನಗಳಾದ ಅಲೆಗ್ಸಾಂಡ್ರಿಯಾ ಮತ್ತು ಪೆರುಗಾಮಮ್ ನಗರಗಳಲ್ಲಿ ಗ್ರಂಥಾಲಯಗಳು ಇದ್ದವೆಂದೂ ತಿಳಿದು ಬರುತ್ತವೆ. ಆದರೆ ಸೂಚಿಯ ವಿಷಯವಾಗಿ ಯಾವ ಉಲ್ಲೇಖಗಳೂ ದೊರೆತಿಲ್ಲ. ಆದರೆ ಪೆರುಗಾಮಮ್ ಪಟ್ಟಣದಲ್ಲಿ ದೊರೆತ ಗ್ರಂಥಗಳಲ್ಲಿ ಪಂಡಿತರ ಹೆಸರುಗಳುಳ್ಳ ಗ್ರಂಥಸೂಚಿಗಳು ಸಿಗುತ್ತವೆ. ಇವುಗಳಿಗೆ ಪಿನೇಕಗಳೆಂದು (pinekas) ಹೆಸರು. ಕ್ಯಾಲಿಮಕಸ್ ನೆಂಬ (Callimacus) ಪಂಡಿತನು ಇಂತಹ " ಗ್ರಂಥಕಾರರ ಸೂಚಿ " ಗಳನ್ನು ಸಿದ್ಧಪಡಿಸಿದನೆಂದು ಗೊತ್ತಾಗುತ್ತದೆ.

ಎಂಟನೇ ಶತಮಾನದ ಎಲ್ಲ ಗ್ರಂಥಾಲಯಗಳಲ್ಲಿ ಒಂದು ಬಗೆಯ ಸಾಮಾನ್ಯ ತರಹದ ಗ್ರಂಥಸೂಚಿಗಳು ಉಪಯೋಗದಲ್ಲಿದ್ದವು. ಅವುಗಳಲ್ಲಿ ಗ್ರಂಥಗಳು ಗ್ರಂಥಾಲಯಗಳಲ್ಲಿ ಕಂಡ ಹಾಗೆ ಬರೆದುಕೊಂಡ ಪರಿಗ್ರಹಣ ಗ್ರಂಥ (Accession Register) ದಲ್ಲಿಯ ಕ್ರಮಾಂಕಗಳನ್ನು ತೋರಿಸುವವೇ ಹೆಚ್ಚು. ಅದಕ್ಕೆ ಯಾವ ವಿಂಗಡಣೆಯೂ ಇರಲಿಲ್ಲ. ಇವುಗಳಿಗೆ ಗ್ರಂಥ ಅಸ್ತಿತ್ವ ಸೂಚಿಗಳೆಂದು (Inventary Catalogue) ಹೇಳಬಹುದು.

ಹದಿನೈದನೆಯ ಶತಮಾನದ ಸುಮಾರಿಗೆ ಜರ್ಮನಿಯ ಜೋಹನ್ ತ್ರಿಥೆಮ್‌ನು (Hohann Trithem) ಒಂದೊಂದು ವಿಷಯದ ಮೇಲಿನ ಗ್ರಂಥಗಳನ್ನು ಕಾಲಾನುಕ್ರಮವಾಗಿ (Chronologically) ನಿರ್ಮಿಸಿದುದು ಒಂದು ಮುನ್ನಡೆಯೆಂದು ಹೇಳಬಹುದು. ಶೈಕ್ಷಣಿಕ ಸಂಸ್ಥೆಗಳು ಗ್ರಂಥಸೂಚಿಗಳನ್ನು ನವೀನ ರೀತಿಯಲ್ಲಿ ಸಿದ್ಧಗೊಳಿಸಿದುದು ಕಂಡುಬರುತ್ತದೆ. ಅಂತರ್‌ವಿಷಯಿ ಉಲ್ಲೇಖಗಳನ್ನು (Cross References) ಗ್ರಂಥಸೂಚಿಯಲ್ಲಿ ಕೊಡಲು ಪ್ರಾರಂಭಿಸಿದುದು ಇವುಗಳಲ್ಲಿಯೇ ಮೊದಲು.

ಜರ್ಮನ್ ದೇಶದ ಮೈನ್ಸ್ ಎಂಬಲ್ಲಿದ್ದ ಜಾನ್ ಗೂಟೆನ್‌ಬರ್ಗ್ ಎಂಬ ಅಕ್ಕಸಾಲಿ ಮುದ್ರಣವನ್ನು ಕಂಡುಹಿಡಿದ ಎಂದು ಹೇಳುತ್ತಾರೆ. ಆದರೆ ಜಾನ್ ಗೂಟೆನ್‌ಬರ್ಗ್ ಮೊಟ್ಟ ಮೊದಲು ಮುದ್ರಣ ವಿಧಾನವನ್ನು ಕಂಡುಹಿಡಿದ ಎಂದು ಹೇಳಿದರೆ ತಪ್ಪಾಗುತ್ತದೆ. ಈ ಕೆಲಸ ಒಬ್ಬ ವ್ಯಕ್ತಿ ಮಾಡುವ ಕೆಲಸವಲ್ಲ. ಒತ್ತುವಿಕೆಯಿಂದ

ಬೇರೊಂದು ವಸ್ತುವಿನ ಮೇಲೆ ಚಿತ್ರವನ್ನು ಮುದ್ರಿಸುವ ತತ್ವ ಬಹಳ ಕಾಲದಿಂದಲೂ ಬೆಳೆದು ಬಂದಿತ್ತು. ಗೂಟೆನ್‌ಬರ್ಗ್ ಕಾಲಕ್ಕೆ ಬಹಳ ಹಿಂದೆಯೇ ಬ್ಯಾಬಿಲೋನಿಯ ಮತ್ತು ಸುಮೇರಿಯಾ ದೇಶದ ವರ್ತಕರಿಗೆ, ಈಜಿಪ್ತ ದೇಶದ ಶ್ರೀಮಂತರಿಗೆ ಮೊಹರುಗಳನ್ನು ಬಳಸುವದು ತಿಳಿದಿದ್ದಿತು. ಬ್ಯಾಬಿಲೋನಿಯಾ ದೇಶದ ಜನರು ಮರದಿಂದ ಪಟ್ಟಿಯನ್ನು ಮಾಡಿ, ಮೃದುವಾದ ಜೇಡಿ ಮಣ್ಣಿನಿಂದ ಇಟ್ಟಿಗೆಗಳನ್ನು ಅಚ್ಚೊತ್ತುವ ಕಲೆಯನ್ನು ತಿಳಿದಿದ್ದರು. ಅವರು ಪೂರ್ತಿ ಒಂದು ಪುಟವನ್ನು ಏಕಕಾಲದಲ್ಲಿ ಅಚ್ಚು ಮಾಡುವ ವಿಧಾನವನ್ನು ಬಲ್ಲವರಾಗಿದ್ದರು.

ಚೀನಿಯರು ಬಹಳ ಪ್ರಾಚೀನ ಕಾಲದಲ್ಲಿಯೇ ಮುದ್ರಣ ತತ್ವವನ್ನು ಅರಿತಿದ್ದರು. ಮುದ್ರಣ ಕಲೆ ಪ್ರಾರಂಭವಾದುದು ಚೀನಾ ದೇಶದಲ್ಲಿ ಎಂದು ಹೇಳಬಹುದು. ಚೀನಾದಲ್ಲಿ ಕ್ರಿ. ಶ. ೧೦೩೫ ರಿಂದ ಗುಹೆಯಲ್ಲಿ ಬಚ್ಚಿಟ್ಟಿದ್ದ ಪುಸ್ತಕವೊಂದನ್ನು ಕ್ರಿ. ಶ. ೧೯೦೦ ರಲ್ಲಿ ಕಂಡು ಹಿಡಿಯಲಾಯಿತು. ಅನೇಕ ಹಾಳೆಗಳನ್ನು ಒಟ್ಟಾಗಿ ಸೇರಿಸಿ ಅಂಟಿಸಿದ "ಡೈಮಂಡ್ ಸೂತ್ರ"[2] ಎಂಬ ಈ ಪುಸ್ತಕದ ಮೇಲೆ ಇರುವ ತಾರೀಖಿನಿಂದ ಇದು ಕ್ರಿ. ಶ. ೮೬೮ ರಲ್ಲಿ ಮುದ್ರಿತವಾಯಿತೆಂದು ತಿಳಿದುಬರುತ್ತದೆ. ಪ್ರಪಂಚದಲ್ಲಿ ಈಗ ಸಿಕ್ಕಿರುವ ಪುಸ್ತಕಗಳಲ್ಲಿ ಇದು ಅತ್ಯಂತ ಪ್ರಾಚೀನವಾದುದೆಂದು ಹೇಳಬಹುದು. ಮರದ ಪಡಿಯಚ್ಚುಗಳಿಂದ ಈ ಪುಸ್ತಕ ಮುದ್ರಿತವಾಗಿದೆ. ತರುವಾಯ ಚೀನಾದಿಂದ ಮುದ್ರಣ ಕಲೆ ಜಪಾನ್ ದೇಶಕ್ಕೆ ಹರಡಿತು. ಚೀನಿಯರು ಪ್ರಾಚೀನ ಗ್ರಂಥಸಂಗ್ರಹಗಳ ಮುದ್ರಣ ಕಾರ್ಯವನ್ನು ಪೂರ್ಣಗೊಳಿಸಿದರು. ಈ ಕೆಲಸಕ್ಕೆ ಮರದ ಪಡಿಯಚ್ಚುಗಳನ್ನು ಬಳಸಿದರು. ಮರದ ಪಡಿಯಚ್ಚುಗಳಿಂದ ಮುದ್ರಿಸುವ ವಿಧಾನವನ್ನು ಯುರೋಪ್ ದೇಶದಲ್ಲಿ ೧೫ ನೇ ಶತಮಾನದಲ್ಲಿ ಅರಿತು ಬಳಸಿದರು. ಚೀನಾದಲ್ಲಿ ಸುಮಾರು ೧೧ ನೇ ಶತಮಾನದಲ್ಲಿ ಪಿ-ಶೆಂಗ್ ಎನ್ನುವವನು ಪ್ರತಿ ಅಕ್ಷರಕ್ಕೂ ಪ್ರತ್ಯೇಕವಾದ ಅಚ್ಚಿನ ಮೊಳೆಗಳನ್ನು ಮಾಡಿ ಅವುಗಳಿಂದ ಮುದ್ರಿಸಿದ. ಆದರೆ ಚೀನಾ ಭಾಷೆಯನ್ನು ಪ್ರತ್ಯೇಕವಾದ ಅಚ್ಚಿನ ಮೊಳೆಗಳಿಂದ ಮುದ್ರಿಸುವುದು ಅಷ್ಟಾಗಿ ಹೊಂದಿಕೊಳ್ಳದಿದ್ದುದರಿಂದ ಪಿ-ಶೆಂಗ್ ನ ಮರಣದ ಜೊತೆಗೆ ಅವನ ಕಲ್ಪನಾ ಶಕ್ತಿ ಮಣ್ಣುಗೂಡಿತು. ಹದಿಮೂರನೆ ಶತಮಾನದಲ್ಲಿ ಲೋಹದಿಂದ ಮಾಡಿದ ಬಿಡಿ ಅಚ್ಚಿನ ಮೊಳೆಗಳು ಚೀನಾ, ಕೋರಿಯಾ, ಜಪಾನ್ ಮುಂತಾದ ಪೌರಾತ್ಯ ದೇಶಗಳಲ್ಲಿ ಪ್ರಚಾರಕ್ಕೆ ಬಂದಿದ್ದವು.

ಚೀನಾದ ಮುದ್ರಣ ವಿಧಾನ ಯುರೋಪ್ ದೇಶದ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವ ಬೀರಿತು ಎಂದು ನಿರ್ದಿಷ್ಟವಾಗಿ ಹೇಳುವದು ಕಷ್ಟ. ಹದಿನೈದನೇ ಶತಮಾನದಲ್ಲಿ ಪಶ್ಚಿಮ ದೇಶದವರಿಗೆ ಪೂರ್ವ ದೇಶಗಳ ಪರಿಚಯ ಸಾಕಷ್ಟು ಆಗಿರಲಿಲ್ಲ. ಮಾರ್ಕೊಪೋಲೋ ಮತ್ತು ಇತರ ಪ್ರವಾಸಿಗಳು ಚೀನಾ ದೇಶಕ್ಕೆ ಭೇಟಿ ಇತ್ತು ಅಸಾಧಾರಣವಾದ, ಅಸಂಭವವಾದ, ಅತ್ಯಾಶ್ಚರ್ಯಕರವಾದ ಕಥೆಗಳನ್ನು ಹೊತ್ತು ತಮ್ಮ ದೇಶಕ್ಕೆ ಹಿಂದಿರುಗುವವರೆಗೂ ಮತ್ತು ಗೋಲ್ಡನ್ ಹಾರ್ಡೆ ಯುರೋಪಿನ ಅರ್ಧ ಭಾಗದ ಆಚೆಕಡೆಗೆ ಆಕ್ರಮಿಸಿ ಹೊಸ ಜ್ಞಾನವನ್ನು ಹೊತ್ತು

ತರುವವರೆಗೂ ಯುರೋಪಿನಲ್ಲಿ ಮುದ್ರಣ ಕಲೆ ತಲೆ ಹಾಕಿರಲಿಲ್ಲ. ಮಧ್ಯಯುಗ ಮುಗಿಯುವ ವೇಳೆಗೆ ಮೂರು ಬಗೆಯ ಪುಸ್ತಕ ಮುದ್ರಣ ವಿಧಾನ ಯುರೋಪಿನಲ್ಲಿ ತಲೆದೋರಿತು. ಪುಸ್ತಕಗಳ ವಿಚಾರವಾಗಿ ಜನಗಳ ಆಕಾಂಕ್ಷೆ ಹೆಚ್ಚಿತು. ಇಲ್ಲಿಯವರೆಗೆ ಮಠಗಳಲ್ಲಿ ಧರ್ಮಗ್ರಂಥಗಳನ್ನು ಮರದ ಪಡಿಯಚ್ಚುಗಳಿಂದ ಮುದ್ರಿಸಿ ಪ್ರಕಟಿಸುತ್ತಿದ್ದರು. ಜನರಲ್ಲಿ ಓದುವ ಇಚ್ಛೆ ಹೆಚ್ಚಿದಂತೆ ಈ ಕಲೆ ಚರ್ಚ್‌ಗಳಿಂದ, ಮಠಗಳಿಂದ, ಅಗ್ರಹಾರಗಳಿಂದ, ಅರಸೊತ್ತಿಗೆ ಪೀಠಗಳಾಚೆ ಹೋಗಿ ಸಾಮಾನ್ಯ ಕಲೆಗಾರರ ಕೈ ಸೇರಿದುದು ಕಾಣುತ್ತದೆ.

ಮರದ ಪಡಿಯಚ್ಚುಗಳಿಂದ ಮುದ್ರಿಸುವ ವಿಧಾನ ಮತ್ತು ಪ್ರತ್ಯೇಕವಾದ ಅಚ್ಚಿನ ಮೊಳೆಗಳನ್ನು ಜೋಡಿಸಿ ಮುದ್ರಿಸುವ ವಿಧಾನ ಜಾರಿಗೆ ಬಂದವು. ಈ ಎರಡು ವಿಧಾನಗಳಲ್ಲಿ ಯುರೋಪಿನಲ್ಲಿ ಯಾವುದು ಮೊದಲು ಬಳಕೆಗೆ ಬಂದಿತು ಎಂಬ ವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಬಿಡಿ ಅಚ್ಚಿನ ಮೊಳೆಗಳಿಂದ ಮುದ್ರಿಸಿದ ಪುಸ್ತಕಕ್ಕಿಂತ ಹಿಂದೆ ಮರದ ಪಡಿಯಚ್ಚುಗಳನ್ನು ಉಪಯೋಗಿಸಿ ಮುದ್ರಿಸಿದ ಪುಸ್ತಕ ಯಾವುದೂ ಸಿಕ್ಕಿಲ್ಲ.[೮] ಆದರೆ ಮರದ ಪಡಿಯಚ್ಚುಗಳಿಂದ ಮುದ್ರಿಸುವ ವಿಧಾನ ಜಾರಿಗೆ ಬಂದುವು. ಮರದ ಪಡಿಯಚ್ಚುಗಳಿಂದ ಮುದ್ರಿಸುವ ವಿಧಾನ ಬಹಳ ಪ್ರಾಚೀನವಾದುದು ಎಂದು ಒಪ್ಪಿಕೊಳ್ಳಲೇಬೇಕು. ಬಿಡಿ ಅಚ್ಚಿನ ಮೊಳೆಗಳನ್ನು ಜೋಡಿಸಿ ಮುದ್ರಿಸುವ ವಿಧಾನ ಬಳಕೆಗೆ ಬಂದ ಮೇಲೆ ಮರದ ಪಡಿಯಚ್ಚುಗಳಿಂದ ಮುದ್ರಿಸುವ ವಿಧಾನ ಬಹಳ ಕಾಲ ಬೆಳೆದು ಉಳಿಯಲಿಲ್ಲ. ಇದಕ್ಕೆ ಮುಖ್ಯ ಕಾರಣ ಮರದ ಪಡಿಯಚ್ಚುಗಳನ್ನು ಮಾಡುವದು ಸುಲಭವಲ್ಲ. ಇದಕ್ಕೆ ಹೆಚ್ಚು ಕಾಲ ಬೇಕಾಗುತ್ತದೆ; ಖರ್ಚು ಬಹಳ. ಪ್ರತಿಯೊಂದು ಪುಟಕ್ಕೂ ಪ್ರತ್ಯೇಕವಾದ ಪಡಿಯಚ್ಚನ್ನು ಮಾಡಬೇಕು. ಮರದ ಪಡಿಯಚ್ಚುಗಳಿಂದ ಯಾವುದೇ ಒಂದು ಪುಸ್ತಕವನ್ನು ಮಾತ್ರ ಮುದ್ರಿಸಬಹುದು. ತಪ್ಪನ್ನು ಸುಲಭವಾಗಿ ತಿದ್ದುವದು ಆಗುವದಿಲ್ಲ; ಖರ್ಚನ್ನು ಎಲ್ಲ ಪುಸ್ತಕಗಳಿಗೆ ಹಂಚಲು ಸಾಧ್ಯವಾಗುವದಿಲ್ಲ. ಬೇರೆ ಪುಸ್ತಕಕ್ಕೆ ಬೇರೆ ಮರದ ಪಡಿಯಚ್ಚುಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಬಿಡಿ ಅಚ್ಚಿನ ಮೊಳೆಗಳಿಂದ ಯಾವ ಪುಸ್ತಕವನ್ನು ಬೇಕಾದರೂ ಮುದ್ರಿಸಬಹುದು. ಹದಿನಾಲ್ಕನೇ ಶತಮಾನದಲ್ಲಿ ಪಡಿಯಚ್ಚುಗಳನ್ನು ಉಪಯೋಗಿಸಿ ಮುದ್ರಿಸಿದ ಪುಸ್ತಕಗಳ ಸಂಖ್ಯೆ ಹೆಚ್ಚಿತು. ಪ್ರತಿ ಅಕ್ಷರಕ್ಕೂ ಪ್ರತ್ಯೇಕವಾದ ಅಚ್ಚಿನ ಮೊಳೆಗಳನ್ನು ಕಂಡುಹಿಡಿದ ಮೇಲೆ ಮುದ್ರಣ ಕಲೆ ಬಹುಮುಖವಾಗಿ ಬೆಳೆಯಲು ಅವಕಾಶವಾಯಿತು.

ಹದಿನೈದನೇ ಶತಮಾನದಲ್ಲಿ ಜಾನ್ಸ್‌ಜಾನ್ ಕಾಸ್ಪರ್ ಎಂಬುವನು ಪ್ರತಿ ಅಕ್ಷರಕ್ಕೂ ಪ್ರತ್ಯೇಕವಾದ ಅಚ್ಚಿನ ಮೊಳೆಯನ್ನು ಮಾಡಲು ಪ್ರಯೋಗ ನಡೆಸಿದನು. ಎರಕದ ಅಚ್ಚನ್ನು ಮಾಡಿ ಅದರಿಂದ ಅಚ್ಚಿನ ಮೊಳೆಯನ್ನು ಮಾಡಲು ಪ್ರಯೋಗ ನಡೆಸಿದನು. ಇದರಿಂದ ಯಾವ ಪುಸ್ತಕವನ್ನು ಬೇಕಾದರೂ ಸುಲಭವಾಗಿ ಮುದ್ರಿಸಲು ಅನುಕೂಲವಾಯಿತು. ಒಂದು ಪುಸ್ತಕವನ್ನು ಮುದ್ರಿಸಿದ ಮೇಲೆ ಅದೇ ಅಚ್ಚಿನ ಮೊಳೆಗಳನ್ನು ತೆಗೆದುಕೊಂಡು ಬೇರೆ

ಪುಸ್ತಕವನ್ನು ಮುದ್ರಿಸಲು ಅವಕಾಶ ದೊರಕಿತು. ತಪ್ಪುಗಳನ್ನು ತಿದ್ದಲು ಅವಕಾಶವಾಯಿತು. ಆದರೆ ಕಾಸ್ಟರ್ ತನ್ನ ಕಾರ್ಯದಲ್ಲಿ ಯಶಸ್ಸು ಸಾಧಿಸಿದ ಎಂಬುದನ್ನು ನಿರ್ದಿಷ್ಟವಾಗಿ ಹೇಳಲು ಹೆಚ್ಚು ಆಧಾರಗಳು ಸಿಕ್ಕಿಲ್ಲ. ಸುಂದರವಾದ ಅಚ್ಚಿನ ಮೊಳೆಗಳನ್ನು ಎರಕ ಹೊಯ್ಯುವ ಕಲೆಗಾರಿಕೆಯಲ್ಲಿ ಅವನ ಕಲೆಗಾರಿಕೆ ಗೂಟೆನ್‌ಬರ್ಗ್‌ನ ಕಲೆಗಾರಿಕೆಯ ಎದುರಿಗೆ ನಿಲ್ಲದಾಯಿತು.[೯]

ಹದಿನಾರನೆಯ ಶತಮಾನದಲ್ಲಿ ಇಂಗ್ಲೆಂಡ್‌ದ ಸಿಯೋನ್‌ಮಠದಲ್ಲಿ ಅನುವರ್ಗಸೂಚಿಯಲ್ಲಿ, ಅದಕ್ಕೆ ಪೂರಕವೆಂದು ತಯಾರಿಸಿದ ಗ್ರಂಥಕಾರ ನಿರ್ದೇಶಿಯೂ (Author Index) ದೊರೆಯುತ್ತದೆ. ಜರ್ಮನಿಯ ಕೋನಾರ್ಡ್ (Konard) ಎಂಬ ಗ್ರಂಥಸೂಚೀಕಾರನ ಹೆಸರು ಬಹು ಪ್ರಸಿದ್ಧವಾಗಿದೆ. ಫ್ಲೋರಿಯನ್ ಟಿಪ್ಲರ್ (Florian Trefler) ಎಂಬ ಇನ್ನೊಬ್ಬ ಜರ್ಮನಿಯ ಪಂಡಿತನು ತನ್ನದೇ ಆದ ಒಂದು ವರ್ಗೀಕರಣ ಪದ್ಧತಿ (Scheme of classification) ಯನ್ನನುಸರಿಸಿ ಗ್ರಂಥಸೂಚಿಯನ್ನು ನಿರ್ಮಿಸಿದನು.

ಜರ್ಮನಿಯ ಇನ್ನೊಬ್ಬ ಗ್ರಂಥಸೂಚೀಕಾರ ಗೆಸ್ನರ್ ತನ್ನ ಸೂಚಿಯಲ್ಲಿ ಗ್ರಂಥಕರ್ತನ ಹೆಸರಿಗೆ ಪ್ರಥಮ ಸ್ಥಾನವನ್ನಿತ್ತಿದ್ದಾನೆ. ಅಂಡ್ರು ಮಾನ್‌ಸೆಲ್ (Bndrew Mannsell) ಎಂಬ ಇಂಗ್ಲೆಂಡ್‌ದ ಗ್ರಂಥ ವ್ಯಾಪಾರಿಯು ತನ್ನ ಸೂಚಿಯಲ್ಲಿ ಕರ್ತೃವಿನ ಅಡ್ಡ ಹೆಸರಿಗೆ ಮೊದಲನೆಯ ಸ್ಥಾನವನ್ನು ಕೊಟ್ಟಿದ್ದಾನೆ. ಅಲ್ಲದೆ ಕರ್ತೃಗಳ ಗುಪ್ತನಾಮ (Penedajym) ಮತ್ತು ಕಾವ್ಯನಾಮಗಳ (Pennames) ಪೂರಕ ಕೋಶವನ್ನು ಕೊಟ್ಟಿರುವದು ಸೂಚಿ ಕಾರ್ಯದಲ್ಲಿ ಮತ್ತೊಂದು ಪ್ರಗತಿಪರ ಹೆಜ್ಜೆಯಾಗಿದೆ. ಗ್ರಂಥಸೂಚಿಯಲ್ಲಿ ಭಾಷಾಂತರಕಾರರ ಹೆಸರಿನ ಮೇಲೆಯೂ ದಾಖಲೆಗಳನ್ನು (Entry) ಮಾಡಿರುವದು ಒಂದು ವೈಶಿಷ್ಟ್ಯ.

ಹದಿನೇಳನೆಯ ಶತಮಾನದಲ್ಲಿ ಸೂಚೀಕಾರನೆಂದು ಪ್ರಸಿದ್ಧಿ ಪಡೆದವನೆಂದರೆ ಸರ್ ಥಾಮಸ್ ಬೋಡ್ಲೆ (Sir Thomas Bodley) ಇವನು ಸರಕಾರಿ ನೌಕರಿಯಿಂದ ನಿವೃತ್ತನಾಗಿ. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಗ್ರಂಥಾಲಯವನ್ನು ನವೀನ ಮಾದರಿಯಲ್ಲಿ ವ್ಯವಸ್ಥೆಗೊಳಿಸಿದನು. ಆ ಗ್ರಂಥಾಲಯದ ಗ್ರಂಥಪಾಲ ಥಾಮಸ್ ಜೇಮ್ಸ್‌ನಿಗೆ ಸೂಚೀಕರಣ ಕಾರ್ಯದಲ್ಲಿ ಮಾರ್ಗದರ್ಶಕನೆಂದೂ ಮೇಲ್ವಿಚಾರಕನೆಂದೂ ನಿಯಮಿಸಲ್ಪಟ್ಟನು. ತನ್ನ ಅನುಭವಗಳ ಮೇಲಿಂದ ' ಸೂಚೀಕಲ್ಪ ' (Library Catalogue Code) ಸಿದ್ಧಪಡಿಸಿದನು.

ಹತ್ತೊಂಬತ್ತನೆಯ ಶತಮಾನದಲ್ಲಿ ಇಂಗ್ಲೆಂಡಿನ ರೆ. ಥಾಮಸ್ ಹಾರ್ಟವೆಲ್ ಹಾರ್ನ್ (Rev. Thomas Hartwell horne) ಎಂಬ ಪಂಡಿತನು ವರ್ಗೀಕರಣ ಪದ್ಧತಿಯೊಂದನ್ನು, ಜೊತೆಗೆ ಸೂಚೀಕಲ್ಪವೊಂದನ್ನು ಕೇಂಬ್ರಿಜ್‌ನ ಮಹಾರಾಣಿ ಕಾಲೇಜಿನ ಗ್ರಂಥಾಲಯ ಉಪಯೋಗಕ್ಕಾಗಿ ಬರೆದು ಪ್ರಕಟಿಸಿದನು. ಇದು ಒಪ್ಪಿಗೆಯಾದಲ್ಲಿ

ಬ್ರಿಟಿಷ್ ವಸ್ತು ಸಂಗ್ರಹಾಲಯದ ಗ್ರಂಥಾಲಯಕ್ಕೂ (British Museum Library) ಇವುಗಳನ್ನು ಉಪಯೋಗಿಸಬಹುದೆಂದು ಸೂಚಿಸಿದನು. ಸೂಚನೆ ಕಾರ್ಯರೂಪಕ್ಕೆ ಬರಲಿಲ್ಲ.

## ೨.೨.೧ : ಅಂಥೋನಿ ಪನಿಝಿ (Anthony Panizzi)

ಇಟಲಿ ದೇಶದ ಪ್ರಸಿದ್ಧ ವಕೀಲ. ದೇಶದ ರಾಜಕೀಯ ಸಂತ್ರಪ್ತನಾಗಿ ೧೮೩೧ ರಲ್ಲಿ ಬ್ರಿಟಿಷ್ ವಸ್ತು ಸಂಗ್ರಹಾಲಯದ ಗ್ರಂಥಾಲಯದಲ್ಲಿ ಸಹಾಯಕ ಗ್ರಂಥಪಾಲಕನೆಂದು ನೇಮಿಸಲ್ಪಟ್ಟನು. ಬ್ರಿಟಿಷ್ ಸರಕಾರವು ಈ ಗ್ರಂಥಾಲಯ ಪುನರ್‌ವ್ಯವಸ್ಥೆ ಮಾಡಲು ೧೮೩೬ ರಲ್ಲಿ ಆಜ್ಞೆಯಿತ್ತ ಮೇರೆಗೆ ಅದರ ಗ್ರಂಥಸೂಚಿಯಲ್ಲಿ ಸಂಪೂರ್ಣ ಬದಲಾವಣೆ ಮಾಡುವ ಕಾರ್ಯ ಪನಿಝಿಯ ಮಾರ್ಗದರ್ಶನದಲ್ಲಿ ಪ್ರಾರಂಭವಾಯಿತು. ಹಿಂದಿನ ಲೋಪದೋಷಗಳನ್ನು ಅಭ್ಯಸಿಸಿ, ೯೧ ಹೊಸ ನಿಯಮಗಳ ರಚನೆಯೊಂದನ್ನು ಪ್ರತಿಪಾದಿಸಿದ. ಗ್ರಂಥಾಲಯದ ಸೂಚಿಯಲ್ಲಿ ಲೇಖಕನಿಗೆ ಹೆಚ್ಚಿನ ಮಹತ್ವ ಕೊಟ್ಟನು. ಗುಪ್ತನಾಮಗಳನ್ನು ಇದ್ದಂತೆಯೇ ಉಪಯೋಗಿಸಿ, ವಿದ್ಯಾಪೀಠ (Academy) ಎಂಬ ಶಿರೋನಾಮೆ ಕೊಟ್ಟು ಎಲ್ಲ ಶೈಕ್ಷಣಿಕ ಸಂಸ್ಥೆಗಳು ಇವರಡಿಯಲ್ಲಿ ಬರುವಂತೆ ನೋಡಿಕೊಂಡನು. ನಿಯತಕಾಲಿಕೆಗಳ (periodicals) ನಿಯಮಗಳನ್ನು ಕೊಟ್ಟಿದ್ದಾನೆ.

## ೨.೨.೨ : ಚಾರ್ಲಸ್ ಸಿ. ಜ್ಯೂವೆಟ್ (Charles C. Jewett)

೧೮೫೨ ರಲ್ಲಿ ೩೯ ನಿಯಮಗಳನ್ನು ಚಾರ್ಲಸ್ ಸಿ. ಜ್ಯೂವೆಟ್ ಪನಿಝಿ ಸೂಚಿಯಂತೆ ನಿಯಮಗಳನ್ನು ಹೋಲುತ್ತಿದ್ದರೂ ಸಮಷ್ಟಿ ಗ್ರಂಥಕಾರರ (Carporate authors) ಆಯ್ಕೆಯ ವಿಷಯದಲ್ಲಿ ತನ್ನದೇ ಆದ ವಿಚಾರ ವ್ಯಕ್ತಪಡಿಸಿದ್ದಾನೆ. ಸರಕಾರವೂ ಕೂಡ ಪ್ರಕಟಣೆಗಳನ್ನು ಆ ದೇಶದ ಹೆಸರಿನಲ್ಲಿ ದಾಖಲು ಪಡಿಸಬೇಕೆಂದು ಮಂಡಿಸಿದನು.

## ೨.೨.೩ : ಕ್ರಿಸ್ಟಾಡೋರೋ (Crestadoro)

ಕ್ರಿಸ್ಟಾಡೋರೋ " ಗ್ರಂಥಾಲಯಗಳ ಗ್ರಂಥಸೂಚಿಗಳನ್ನು ತಯಾರಿಸುವ ಕಲೆ " (The Art of making catalogues of libraries) ಎಂಬ ಪಟ್ಟಿ ಸೂಚೀಕಲ್ಪವನ್ನು ೧೮೫೬ ರಲ್ಲಿ ಪ್ರಕಟಿಸಿದನು. ಮ್ಯಾಂಚೆಸ್ಟರ್ ಸಾರ್ವಜನಿಕ ಗ್ರಂಥಾಲಯದಲ್ಲಿ ಮುಖ್ಯ ಗ್ರಂಥಪಾಲನಾಗಿದ್ದನು.

## ೨.೨.೪ : ಚಾರ್ಲಸ್ ಅಮ್ಮಿಕಟರ್ (Charles Ammi Cutter)

೧೮೭೬ ರಲ್ಲಿ ಹೊಸ ವಿಚಾರಗಳಿಂದ ಕೂಡಿದ ಹೊಸ ನಿಯಮಗಳ ಸೂಚೀಕಲ್ಪವನ್ನು ಬೋಸ್ಟನ್ ಪಟ್ಟಣದ ಅಥೆನಿಯಮ್ ಗ್ರಂಥಪಾಲನಾದ ಚಾರ್ಲಸ್ ಅಮ್ಮಿಕಟಕ್ (Rules for dictionary catalogue)

ಅಮೆರಿಕೆಯ ಸರಕಾರದ ಪ್ರಸಿದ್ಧಿ ಶಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟವಾಗಿ ದೇಶದ ಹೊರಗೂ ಪ್ರಸಿದ್ಧಿ ಪಡೆಯಿತು. ಈ ಸೂಚೀಕಲ್ಪವನ್ನು ಪರಿಶೀಲಿಸುತ್ತ ಮತ್ತು ಬದಲಾವಣೆ ಮಾಡುತ್ತ ಹೋದರು. ಪ್ರಥಮ ಆವೃತ್ತಿಯಲ್ಲಿ ೨೦೫ ಸೂತ್ರಗಳು, ೧೯೦೩ ರ ನಾಲ್ಕನೇ ಆವೃತ್ತಿಯಲ್ಲಿ ೩೬೯ ಸೂತ್ರಗಳಿವೆ. ಇಲ್ಲಿ ಸೂಚೀಕಾರರಿಗಿಂತ ಸೂಚಿ ಉಪಯೋಗಿಸುವವರಿಗೆ (ಓದುಗರಿಗೆ, ಸಂಶೋಧಕರಿಗೆ) ಹೆಚ್ಚು ಮಹತ್ವ ಕೊಟ್ಟರು. ಸೂತ್ರಗಳಲ್ಲಿ ಹೆಚ್ಚು ಕಾಠಿಣ್ಯತೆ ಇರದೆ ಸೂಚೀಕಾರನಿಗೆ ಸ್ವಾತಂತ್ರ್ಯ ಕೊಟ್ಟರು ಸೂಚಿ ಬರೆಯುವ ವಿಧಾನವನ್ನು ವಿವರಿಸಲಾಗಿದೆ. ಮುಂದಿನ ಸೂಚೀಕಲ್ಪಗಳು ಇದನ್ನೆ ಅನುಸರಿಸಿವೆ. ಡಾ. ರಂಗನ್ನಾಥನ್‌ರವರು ಸಹಿತ ಇದು ಮುಂದಿನ ಇಂಗ್ಲೀಷ್ ಭಾಷೆಯ ಸೂಚೀಕಲ್ಪಗಳಿಗೆ ಮುಖ್ಯ ಆಕರ (If appears to have been the chief source of later codes is the English language) ಎಂದು ಹೇಳಿದ್ದಾರೆ.

### ೨.೨.೫ : ಇಪ್ಪತ್ತನೆಯ ಶತಮಾನ :

ಈ ಶತಮಾನವು ಹೊಸ ಗಾಳಿ, ಹೊಸ ಬೆಳವಣಿಗೆಗಳಿಗ, ಬದಲಾವಣೆಗೆ, ಚಳುವಳಿಗಳಿಗೆ ಒಡ್ಡಿಕೊಂಡಿತು. ಹಿಂದಿನ ಬೆಳವಣಿಗೆಗಳನ್ನು ಗಮನದಲ್ಲಿಟ್ಟುಕೊಂಡೇ ಅದಕ್ಕೆ ಪೂರಕವಾಗಿ ಗ್ರಂಥಾಲಯ ಚಳುವಳಿಗಳಿಗೆ ನಾಂದಿಯಾಯಿತು. ಈ ಚಳುವಳಿಗಳನ್ನು ಈ ಕೆಳಗಿನಂತೆ ನಿರೂಪಿಸಬಹುದು.

### ೨.೨.೫.೧ : ಅಮೇರಿಕಾ ಗ್ರಂಥಾಲಯ ಸಂಘ (A. L. A.)

ಅಮೇರಿಕಾ ಗ್ರಂಥಾಲಯ ಸಂಘವು ೧೮೭೬ ರಲ್ಲಿ ಮತ್ತು ೧೮೭೭ ರಲ್ಲಿ ಬ್ರಿಟೀಷ್ ಗ್ರಂಥಾಲಯ ಸಂಘ ಎಂಬ ಮಹಾಸಂಸ್ಥೆಗಳು ಸ್ಥಾಪನೆಯಾದವು. ಇವೆರಡು ಒಟ್ಟಿಗೆ ಸೇರಿ ೧೯೦೮ ರಲ್ಲಿ ಗ್ರಂಥಕರ್ತೃ ಹಾಗೂ ಶಿರೋನಾಮೆ ಉಲ್ಲೇಖಗಳ ಸೂಚೀಕಲ್ಪವನ್ನು (Cataloguing Rules, Author and Title entries compiled by the committee of the American Library Association and the Library Association) ಸಿದ್ಧಪಡಿಸಿದವು. ಇವುಗಳಲ್ಲಿಯ ಅನೇಕ ವಿರೋಧಾಭಾಸಗಳನ್ನು ಮತ್ತು ಸಮಸ್ಯೆಗಳನ್ನು ಪರಿಹರಿಸಲು ೧೯೪೯ ರಲ್ಲಿ ಗ್ರಂಥಕರ್ತೃ ಮತ್ತು ಶಿರೋನಾಮೆ ಉಲ್ಲೇಖ ಸೂಚೀಕಲ್ಪವನ್ನು (A.L.A. Cataloguing Rules for author and Title Entries) ತಯಾರಿಸಿತು.

೧೯೫೩ ರಲ್ಲಿ ಲುಬೆಟ್ಸ್‌ಕಿ ಇದರ ಮೇಲೆ ಟೀಕೆ ಟಿಪ್ಪಣಿಗಳನ್ನು ಒಂದು ವರದಿ (Report) ರೂಪದಲ್ಲಿ ಬರೆದು (Cataloguing Rules and Principles) ಎಲ್ಲ ನಿಯಮಗಳು ಅವಶ್ಯವಿಲ್ಲವೆಂದು ಕೆಲವೊಂದನ್ನು ಒಪ್ಪಿಕೊಂಡನು.

### ೨.೨.೫.೨ : ವರ್ಗೀಕೃತ ಗ್ರಂಥಸೂಚಿ (C.C.C.)

೧೯೩೪ ರಲ್ಲಿ ಡಾ. ಎಸ್. ಆರ್. ರಂಗನಾಥನ್‌ರವರು ವರ್ಗೀಕೃತ ಗ್ರಂಥಸೂಚಿ (Classified Catalogue Code) ಯನ್ನು ರಚಿಸಿದರು. ಪ್ರಪಂಚದ ಎಲ್ಲ ಗ್ರಂಥಾಲಯಗಳಲ್ಲಿಯೂ ಉಪಯೋಗವಾಗಬೇಕು ಮತ್ತು ಸೂಚೀಕಲ್ಪದ ನಿರ್ಮಾಣದ ಮೂಲತತ್ವಗಳನ್ನು (Normative principles) ಮತ್ತು ಶೃಂಖಲಾ ನಿಯಮ (Chain Procedure) ಗಳನ್ನು ಮಹಾ ಕೊಡುಗೆಗಳೆಂದು ಗುರುತಿಸಲಾಯಿತು.

#### ಸಿ. ಸಿ. ಸಿ. ಯ ಭಾಗಗಳು

೧. ಸೂಚಿಗಳನ್ನು ಬರೆಯುವ ರೀತಿ, ನೀತಿಗಳು, ಅದರ ಭಾಷೆ, ಗ್ರಂಥಸೂಚಿಯ ಸಿಂಹಾವಲೋಕನ... ಇತ್ಯಾದಿ.

೨. ಸೂಚಿಯ ನಿರ್ಮಾಣ ಕಾರ್ಯದಲ್ಲಿ ಬರುವ ಪಾರಿಭಾಷಿಕ ಶಬ್ದಗಳ ಅರ್ಥ, ವ್ಯಾಖ್ಯೆ.

೩. ಸೂಚಿಯ ಪತ್ರದಲ್ಲಿ ಬರೆಯುವ ಹೆಸರುಗಳನ್ನು ಆರಿಸುವ ಕ್ರಮ.

೪. ವರ್ಗ ನಿರ್ದೇಶಿ ಉಲ್ಲೇಖ (Class Intex Entry).

೫. ವಿಷಯಾಂತರ ನಿರ್ದೇಶಿ ಉಲ್ಲೇಖ (Cross Reference Index Entry)

೬. ಸಾದಾ ಪುಸ್ತಕ (Simple Book)

೭. ಸಂಕೀರ್ಣ ಗ್ರಂಥ (Composite Book)

೮. ಅನೇಕ ಸಂಪುಟಗಳ ಗ್ರಂಥ (Multivolumed Book)

೯. ನಿಯತಕಾಲಿಕೆಗಳು (Periodical Publications)

ಇಲ್ಲಿಯ ಸೂತ್ರಗಳು ತರ್ಕಬದ್ಧವಾಗಿವೆ. ವಿಚಾರ ಪ್ರಚೋದಕವಾಗಿವೆ. ಹಾಗೂ ವಿಶ್ವಗ್ರಂಥಸೂಚಿಯ ಮೂಲತತ್ವಗಳನ್ನೊಳಗೊಂಡಿದೆ. ಇಲ್ಲಿ ಸಂಕೀರ್ಣ ಪುಸ್ತಕಗಳ ಮತ್ತು ನಿಯತಕಾಲಿಕೆಗಳ ಬಗೆಗಿರುವ ಸೂತ್ರಗಳು ಕಡಿಮೆಯೆನಿಸಿದರೂ ತಿದ್ದುಪಡಿಗಳಿಗೆ ಮತ್ತು ಸಂಕಲನ (Addition) ಗಳಿಗೆ ಅವಕಾಶಗಳನ್ನು ನೀಡಲಾಗಿದ್ದು ಮೆಚ್ಚುವಂಥಹದಾದರೂ ಕಾಲ ಬದಲಾದಂತೆ ಹೊಸ ಬೆಳವಣಿಗೆಗಳು ಆದಂತೆ ಬದಲಾವಣೆಗಳ ಮೂಲಕ ತಿದ್ದುಪಡಿಗಳನ್ನು ಮಾಡಬಹುದೆಂದು ಅನಿಸುತ್ತದೆ.

### ೨.೨.೫.೩ : ಎ. ಎ. ಸಿ. ಆರ್. ೧ (A. A.C.R. 1)

೧೯೬೧ ರಲ್ಲಿ ಜರುಗಿದ ಅಂತರ್‌ರಾಷ್ಟ್ರೀಯ ಗ್ರಂಥಾಲಯ ಸಮ್ಮೇಳನ (I.F.L.A.) ನಡೆದಾಗ ವಿಶ್ವಗ್ರಂಥ ಸೂಚೀಕಲ್ಪಗಳಿಗೆ (International Catalogue Code) ಬುನಾದಿ ಹಾಕುವ ನಿರ್ಣಯಗಳನ್ನು ಸ್ವೀಕರಿಸಿ ಲುಬೆಟ್ಸ್‌ಕಿ ಟೀಕಿಸಿದ ALA ನಿಯಮಗಳನ್ನು ಮುರಿದು ಹೊಸ ವರದಿಯ ರೂಪದಲ್ಲಿ ತಯಾರಿಸಲು ಸೂಚಿಸಲಾಯಿತು. ಆಗ,

ಅ) ಉತ್ತರ ಅಮೇರಿಕಾ ಆವೃತ್ತಿ (North American Edition)

ಬ) ಆಂಗ್ಲ ಆವೃತ್ತಿ (British Edition)

ಎರಡು ಪಠ್ಯಗಳ ಮುಖಾಂತರ ರಚಿಸಲಾಯಿತು. ವಿಶಿಷ್ಠ (special library) ಸಾರ್ವಜನಿಕ (Public) ಗ್ರಂಥಾಲಯಗಳಿಗಾಗಿ ಸೂತ್ರಗಳನ್ನು ರಚಿಸಲಾಯಿತು. ಮುಖ್ಯವಾಗಿ ಸಂಶೋಧನಾ ಗ್ರಂಥಾಲಯದಲ್ಲಿ ಬರುವ i) ಗ್ರಂಥಗಳು (Books), ii) ಗ್ರಂಥಗಳ ಹಾಗೆ ಇರುವ (Book likes), ಮತ್ತು iii) ಗ್ರಂಥೇತರ ಸಾಮಗ್ರಿಗಳು (Non Books Materials) ಸಾಮಗ್ರಿಗಳಿಗೆ ಸೂತ್ರಗಳನ್ನು ಹೊಂದಿದೆ.

## ೨.೨.೫.೪ : A.A.C.R. - 2

೧೯೭೮ ರಲ್ಲಿ ಪ್ರಕಟವಾದ ಎ. ಎ. ಸಿ. ಆರ್. - ೨. ೨ನೇ ಆವೃತ್ತಿಯು ಅಮೆರಿಕ ಗ್ರಂಥಾಲಯ ಸಂಘದಿಂದ ಪ್ರಕಟಿಸಲಾಯಿತು.

ಕೆಳಗಿನ ಸಂಸ್ಥೆಗಳ ಜಂಟಿ ಯೋಜನೆಯಲ್ಲಿ ಹೊಸ ಸಂಸ್ಥೆಯೊಂದು ರೂಪ ತಾಳಿತು. ಕಾಂಗ್ರೆಸ್ ಗ್ರಂಥಾಲಯ (Library of Congress) ಎಂಬ ವಿನೂತನ ಸಂಸ್ಥೆ ಕೆನಡಾ ಸೂಚೀಕರಣದ ಕಮೀಟಿ ಮತ್ತು ಗ್ರಂಥಾಲಯ ಸಂಸ್ಥೆಗಳ ಒಕ್ಕೂಟಗಳ ಸಹಾಯದಿಂದ ಸ್ಥಾಪಿಸಲಾಯಿತು.

**ಮುಖ್ಯ ಧ್ಯೇಯಗಳು :**

i) ಉತ್ತರ ಅಮೇರಿಕಾ ಮತ್ತು ಆಂಗ್ಲ ಪಠ್ಯಗಳನ್ನು ಏಕೀಕರಿಸುವದು.

ii) ಯಾಂತ್ರಿಕ ಬದಲಾವಣೆಗಳನ್ನು ಒಂದೇ ಪಠ್ಯದಲ್ಲಿ ಅಳವಡಿಸುವದು.

iii) ಯು. ಎಸ್., ಬ್ರಿಟನ್, ಕೆನಡಾ ಮತ್ತು ಯು. ಕೆ. ಗಳಲ್ಲದೆ ಜಗತ್ತಿನ ದೇಶಗಳಿಗೆ ಈ ಸೂತ್ರಗಳನ್ನು ಅನ್ವಯಿಸುವದು.

iv) ISBD(M) ISBD(S) ISBD(G) ಎಲ್ಲ ಸೂತ್ರಗಳ ಮೂಲ ಉದ್ದೇಶಗಳನ್ನು ಅನುಸರಿಸುವದು.

v) ೧೯೬೧ ರಲ್ಲಿ ಪ್ಯಾರಿಸ್ಸಿನಲ್ಲಿ ನಡೆದ ಸಮ್ಮೇಳನ ಸೂತ್ರಗಳನ್ನು ದೀರ್ಘ ಚರ್ಚೆಯ ನಂತರ ಅಳವಡಿಸಿಕೊಳ್ಳುವದು.

ಇದೇನಿದ್ದರೂ ಕೂಡ ಪೂರ್ಣ ದೋಷಮುಕ್ತ ಎಂದು ಹೇಳುವಂತಿಲ್ಲ. ಕಾಲಕ್ಕೆ ತಕ್ಕಂತೆ ಹುಟ್ಟಿ ಬೆಳವಣಿಗೆಗಳಿಗೆ ದಾರಿಯನ್ನು ರೂಪಿಸಿವೆ.

## ೨.೩ : ಗ್ರಂಥಸೂಚಿಯ ಉಗಮದ ಕಲ್ಪನೆಗಳು :

ಮುದ್ರಣ ಕಲೆ ಇಟಲಿಯಲ್ಲಿ ಅಭಿವೃದ್ಧಿ ಪಡೆಯುತ್ತಿದ್ದ ಕಾಲದಲ್ಲಿ ಜರ್ಮನಿಯಲ್ಲಿ ಅದರಲ್ಲೂ ಮುಖ್ಯವಾಗಿ ಜರ್ಮನಿಯ ಹ್ಯಾಂಬರ್ಗ್. ಸ್ಪ್ರಾನ್ ಮತ್ತು ಕೊಲಗ್ನೆ ಪಟ್ಟಣಗಳಲ್ಲಿ ಬೆಳೆಯುತ್ತಿದ್ದಿತು. ಆಲ್‌ಬರ್ಟ್ ಫಿಸ್ಟರ್ ಎಂಬುವನು ಬಾಂಬರಿನಲ್ಲಿ ಮೊಟ್ಟಮೊದಲು ಮರದ ಪಡಿಯಚ್ಚುಗಳನ್ನು ಬಳಸಿ ಪುಸ್ತಕವನ್ನು ಮುದ್ರಿಸಿದನು. ಆದರೆ ಅವನು ಮುದ್ರಿಸಿದ ಚಿತ್ರಗಳು ಉತ್ತಮವಾದ ಚಿತ್ರಗಳಾಗಿರಲಿಲ್ಲ.

ಕ್ರೈಸ್ತಮತ ಧರ್ಮಶಾಸ್ತ್ರ ಕೆಲಸಗಳಲ್ಲಿ ನುರಿತ ಜಾನ್ ಮೆಂಟಲಿನ್ ಎಂಬುವನು ಕ್ರಿ. ಶ. ೧೪೬೦ ರಲ್ಲಿ ಮೊಟ್ಟ ಮೊದಲು ಬೈಬಲ್ಲನ್ನು ಮುದ್ರಿಸಿದನು. ಅವನು ಪುಸ್ತಕಗಳ ಮಾರಾಟವನ್ನು ಹೆಚ್ಚಿಸುವ ಸಲುವಾಗಿ ಪುಸ್ತಕಗಳ ವಿವರಣಾತ್ಮಕ ಪಟ್ಟಿಯನ್ನು ಪ್ರಕಟಿಸಿದನು.[೧೫] ಇದೇ ಗ್ರಂಥಸೂಚಿಗೆ ಪ್ರಪ್ರಥಮ ಪ್ರಯತ್ನ ಮತ್ತು ಬುನಾದಿ ಎಂದು ಗುರುತಿಸಲಾಗಿದೆ. ಇದಕ್ಕಿಂತಲೂ ಮುಂಚೆ ಎಲ್ಲಿಯೂ ವ್ಯವಸ್ಥಿತ ಪ್ರಯತ್ನಗಳು ದಾಖಲಾಗಿಲ್ಲ.

ಒಂದು ಗ್ರಂಥದ ಸರ್ವ ಸಮಗ್ರ ಪರಿಚಯವನ್ನು ವಿವರಿಸುವದು ಸೂಚೀಕರಣ. ಈ ವಿವರಗಳನ್ನೊಳಗೊಂಡುದೇ ಸೂಚಿ ಯಂತ್ರ ಪ್ರತಿ. ಒಂದು ಕ್ರಮಬದ್ಧ ಗ್ರಂಥ. ಆದುದರಿಂದ ಯಂತ್ರಪ್ರತಿಯ ಸೂಚೀಕರಣಕ್ಕಿಂತ ಹಸ್ತಪ್ರತಿಯ ಸೂಚೀಕರಣ ಜಟಿಲವೆಂದೇ ಹೇಳಬೇಕು. ಹಸ್ತಪ್ರತಿಗಳಿಗೆ ಸೂಚಿ ರಚಿಸುವ ಕ್ರಿಯೆ ಭಾರತದಲ್ಲಿ ಸರ್. ವಿಲಿಯಂ ಜೋನ್ಸ್ ಅವರಿಂದ ಪ್ರಾರಂಭವಾಯಿತು (೧೮೦೭). ಕನ್ನಡಕ್ಕೆ ಬಂದರೆ ೧೮೩೮ ರಲ್ಲಿ ಪ್ರಕಟವಾದ " ಮೆಕೆಂಝಿ ಕಲೆಕ್ಷನ್ : ಎ ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ದಿ. ಮ್ಯಾನ್ಯುಸ್ಕ್ರಿಪ್ಟ್ " ಎಂಬುದು ಪ್ರಥಮ ಸೂಚಿಯಾಗಿದೆ. ಆಮೇಲೆ ಮದ್ರಾಸ್. ಮೈಸೂರು. ಧಾರವಾಡಗಳಲ್ಲಿಯ ಸರಕಾರಿ ಸಂಸ್ಥೆಗಳು, ಮೈಸೂರು, ಧಾರವಾಡ, ಬೆಂಗಳೂರು. ಹಂಪಿಯ ಕನ್ನಡ ವಿಶ್ವವಿದ್ಯಾಲಯ, ಹೈದ್ರಾಬಾದ್ ವಿಶ್ವವಿದ್ಯಾಲಯಗಳು, ಕರ್ನಾಟಕದ ಒಳಹೊರಗಿನ ವೈಯಕ್ತಿಕ ಸಂಸ್ಥೆಗಳು ಹಸ್ತಪ್ರತಿ ಸೂಚಿಯನ್ನು ಪ್ರಕಟಿಸಿವೆ.

ಹೀಗೆಯೇ ವ್ಯಾಪಾರಿ ಗ್ರಂಥಸೂಚಿಯೊಂದು ೧೫ ನೇ ಶತಮಾನದಲ್ಲಿ ಮೈದಳೆದು ಪುಸ್ತಕಗಳ ಮಾರಾಟವನ್ನು ಹೆಚ್ಚಿಸಿದುದು ಇತಿಹಾಸದಲ್ಲಿ ಕಂಡುಬರುತ್ತದೆ. ಖಾಸಗಿ ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು ಮತ್ತು ಗ್ರಂಥ ವ್ಯಾಪಾರದಲ್ಲಿ ನಿರತರಾದವರಿಂದ ರಚಿತಗೊಂಡು ಪ್ರಕಟವಾದ ಅರ್ಥಸೂಚಿಗಳಾಗಿವೆ. ಸಾಮಾನ್ಯವಾಗಿ ಇವು ಒಂದು ದೇಶಕ್ಕೆ ಮಾತ್ರ ಸೀಮಿತವಾಗಿರುತ್ತವೆ. ಆದರೆ ಕೆಲವೊಮ್ಮೆ ಅಂತರ್‌ರಾಷ್ಟ್ರೀಯ ವ್ಯಾಪ್ತಿಯನ್ನೊಳಗೊಂಡಥ ವ್ಯಾಪಾರಿ ಗ್ರಂಥಸೂಚಿಗಳಿವೆ. ಸಾಮಾನ್ಯವಾಗಿ ಇವುಗಳಲ್ಲಿ ಮಹಾಪ್ರಬಂಧಗಳ, ವರದಿಗಳ, ಸಂಸ್ಥೆಗಳ ಪ್ರಕಟಣೆಗಳನ್ನು ಒಳಗೊಂಡಿರುವುದಿಲ್ಲ. ಇವು ಗ್ರಂಥಗಳನ್ನು ಕಿರುಹೊತ್ತಿಗೆಗಳನ್ನು ಮಾತ್ರ ಒಳಗೊಂಡಿರುತ್ತವೆ.

ಜನಪ್ರಿಯ ಪುಸ್ತಕ ಮಾಲೆ

ಸಿರಿಗನ್ನಡ

# ಗ್ರಂಥಕರ್ತರ ಚರಿತ್ರಕೋಶ

(ಪ್ರಥಮ ಸಂಪುಟ: ೧೮೫೦-೧೯೨೦)

ವೆಂಕಟೇಶ ಸಾಂಗಲಿ

ಕರ್ನಾಟಕ ಸರ್ಕಾರ
**ಕನ್ನಡ ಪುಸ್ತಕ ಪ್ರಾಧಿಕಾರ**
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು 560 018

## ಪರಿವಿಡಿ

### ಕೋಶವಿಭಾಗ



## ಸೂಚಿ

('ಕೋಶವಿಭಾಗ'ದಲ್ಲಿಯ ಗ್ರಂಥಗಳನ್ನು ಅಕಾರಾದಿಯಾಗಿ ಕೆಳಗೆ ಉಲ್ಲೇಖಿಸಿದೆ)

**ನಾರಾಯಣ (ನಾಗಪ್ಪಾ), ಭೀಮಪ್ಪಾ, ಮಿಸಲಕರ**

ಜ : ೧೭೮೯ ಮ : ೧೮೮೫

ವಿಜಾಪುರ ಜಿಲ್ಲೆಯ ನಿಂಬರಗಿ. ವೃತ್ತಿಯಿಂದ ನೀಲಗಾರರು. ಕೆಲಕಾಲ ಅದನ್ನೇ ನಡೆಸಿ ಆ ಬಳಿಕ ಕುರಿಗಾವಲನ್ನು ಆರಂಭಿಸಿದರು. ಅಡವಿಯಲ್ಲಿ ಕುರಿಗಳನ್ನು ಮೇಯಬಿಟ್ಟು, ತಾವು ಒಂದು ಗಿಡದಡಿಯಲ್ಲಿ ಕುಳಿತು ಏಕಾಂತದಿಂದ ಆತ್ಮಚಿಂತನೆಯಲ್ಲಿ ಕಾಲ ಕಳೆಯುತ್ತಿದ್ದ. ಇವರು ಕೊನೆಗೆ ಆತ್ಮಸಿದ್ಧಿಯನ್ನು ಪಡೆದು 'ಗುರುಲಿಂಗಜಂಗಮ' ಎಂಬ ಮಹಾಸಾಧುಪುರುಷರಾದರು. ನಿಂಬರಗಿ ಮಹಾರಾಜರೆಂದು ಖ್ಯಾತಿಪಡೆದ ಇವರ ಪರಮಾರ್ಥಬೋಧೆಯ ವಚನಗಳನ್ನು ರಘುನಾಥಾಚಾರ್ಯ ಅಗರಖೇಡ (ಮ: ೧೮೯೬) ಎಂಬ ಶಿಷ್ಯರು ಬರೆದಿಡುತ್ತಿದ್ದರು. ಬಾಳಾಚಾರ್ಯ ಕಾವ್ಯ ಎಂಬವರು ಅವುಗಳನ್ನು ಪ್ರಕಟಿಸಿದ್ದಾರೆ.

**ಗ್ರಂಥಗಳು** : ಬೋಧಸುಧೆ (ದೇವನಾಗರಿ ಲಿಪಿ) (ಪ.೧೯೪೮), ಶ್ರೀಸದ್ಗುರು ಸಮರ್ಥ ಶ್ರೀಸದ್ಗುರು ಮಹಾರಾಜರವರು ನಡತೆಯ ಕುರಿತು ಮಾಡಿದ ಉಪದೇಶ(ಪ. ೧೯೦೮)

**ಕೃಷ್ಣರಾಜ, ಒಡೆಯರು, ಮುಮ್ಮಡಿ**

ಜ : ೧೭೯೪ ಮ : ೧೮೬೮

ಮೈಸೂರು ದೊರೆಗಳು. ಆರನೆಯ ವಯಸ್ಸಿನಲ್ಲಿಯೇ ಪಟ್ಟಾಭಿಷಿಕ್ತರಾಗಿ ದಿವಾನ್ ಪೂರ್ಣಯ್ಯನವರ ರಾಜಭಕ್ತಿಯಲ್ಲಿ ಬೆಳೆದರು. ಕನ್ನಡ, ಸಂಸ್ಕೃತ ಭಾಷಾವಿಶಾರದರೂ ಕಾವ್ಯ, ಸಂಗೀತ, ಶಿಲ್ಪ ಮುಂತಾದ ಕಲೆಗಳಲ್ಲಿ ಪಾರಂಗತರೂ ಆಗಿದ್ದರು. ಮರಾಠಿ, ಪರ್ಶಿಯನ್ ಭಾಷೆ ಬಲ್ಲವರು. ಜ್ಯೋತಿಷ್ಯಶಾಸ್ತ್ರದಲ್ಲಿ ವಿಶೇಷವಾದ ಆಸಕ್ತಿ ಇತ್ತು. ಕರ್ನಾಟಕ ಸಿಂಹಾಸನಾಧೀಶ್ವರರಾದ ಕೃಷ್ಣರಾಜರು ನವಕರ್ನಾಟಕದ ಅರುಣೋದಯದ ಶುಭಸಮಯದಲ್ಲಿ ಕನ್ನಡ ಸರಸ್ವತಿಯ ಆರಾಧಕರಾಗಿ ನಿಂತುದು ನಾಡಿನ ಭಾಗ್ಯವೇ ಸರಿ. ಅರಾಜಕತೆಯಿಂದ ರಾಜ್ಯವು ಅಸ್ತವ್ಯಸ್ತಗೊಂಡಾಗಲೂ ಇವರ ವಿದ್ಯಾಭಿಮಾನ, ಪ್ರಜಾವಾತ್ಸಲ್ಯ, ಲೋಕಕಲ್ಯಾಣ, ನ್ಯಾಯನಿಷ್ಠುರತೆ ಮುಂತಾದ ಸದ್ಗುಣಗಳು ಕನ್ನಡ ಸಂಸ್ಕೃತಿಯನ್ನು ಕಾಪಾಡಿ ಬೆಳೆಸಿದವು. ದೇವಾಲಯ, ಅಗ್ರಹಾರ, ಅನ್ನಛತ್ರ, ಕೆರೆ-ಕಾಲುವೆಗಳನ್ನು ಕಟ್ಟಿಸಿ ಜನಹಿತ ಸಾಧಿಸಿದರು. 'ರಾಜಾಸ್ ಸ್ಕೂಲ್' (ಇಂದಿನ ಮಹಾರಾಜಾ ಕಾಲೇಜು), ಓರಿಯಂಟಲ್ ಗ್ರಂಥಭಾಂಡಾರ ಇತ್ಯಾದಿ ಸಂಸ್ಥೆಗಳನ್ನು ಸ್ಥಾಪಿಸಿ ಸಂಸ್ಕೃತಿಸಂವರ್ಧನೆ ಮಾಡಿದರು. ದಕ್ಷಿಣಕನ್ನಡದಿಂದ ಯಕ್ಷಗಾನಮಂಡಲಿಯನ್ನು ಬರಮಾಡಿಕೊಂಡು ಗೌರವಿಸಿದರು. ಅರಮನೆ ನಾಟಕಮಂಡಲಿಯನ್ನು ಪೋಷಿಸಿದರು. ಸಾರ್ವಭೌಮ ಸರಕಾರದಿಂದ ಜಿ.ಸಿ.ಎಸ್.ಆಯ್. ಮನ್ನಣೆ ಪಡೆದವರಾಗಿದ್ದರು.

**ಗ್ರಂಥಗಳು** : ಅರ್ಕಪುಷ್ಕರಿಣೀಮಹಾತ್ಮ್ಯ (ಧ), ಅಖಂಡ ಕಾವೇರಿಮಹಾತ್ಮ್ಯ (ಧ), ಅಧ್ಯಾತ್ಮ ರಾಮಾಯಣ, ಉತ್ತರಗೀತೆ, ಉತ್ತರರಾಮಚರಿತಕಥೆ (ಇ), ಉಷಾಪರಿಣಯ

ಪ್ರಾಚೀನ ಕಾಲದಲ್ಲಿ ಗ್ರಂಥಗಳು ಅಪೂರ್ವವೆನಿಸಿದ್ದವು. ಅವುಗಳ ನಕಲು ಪ್ರತಿಯನ್ನು ಆಗ ಕೈಯಿಂದಲೇ ಮಾಡಬೇಕಿತ್ತು. ಇದು ಹೆಚ್ಚು ಶ್ರಮ, ಸಮಯಗಳನ್ನು ಬಯಸುತ್ತಿತ್ತು. ಹೀಗಾಗಿ ಹಸ್ತಪ್ರತಿಗಳ ರೂಪದಲ್ಲಿದ್ದ ಅವುಗಳು ಸಾಮಾನ್ಯ ಜನರಿಗೆ ಎಟುಕುತ್ತಿರಲಿಲ್ಲ. ಇವುಗಳ ಪ್ರತಿ ಮೂಡಿಸಿ ಕೊಡುವುದು ಧರ್ಮದ ಪುಣ್ಯದ ಕೆಲಸವೆಂದೇ ಹಿಂದೆ ಜನರು ಭಾವಿಸಿದ್ದರು. ಇದಕ್ಕೆ ದಾನಚಿಂತಾಮಣಿ ಅತ್ತಿಮಬ್ಬೆಯನ್ನು ಉದಾಹರಣೆಯಾಗಿ ಕೊಡಬಹುದು. ಈಕೆ ರನ್ನನ ಶಾಂತಿನಾಥ ಪುರಾಣದಲ್ಲಿ ಸಾವಿರ ಪ್ರತಿಗಳನ್ನು ಆಗ ಮಾಡಿಸಿದಳೆಂದು ಹೇಳಿ ರನ್ನನು ತನ್ನ ಕೃತಿಯಲ್ಲಿ ಈಕೆಯನ್ನು ಸ್ತುತಿಸಿದ್ದಾನೆ, ಹೊಗಳಿದ್ದಾನೆ.

ಈಗಾಗಲೇ ಚರ್ಚಿಸಿದಂತೆ ಜಾನ್ ಗೂಟೆನ್‌ಬರ್ಗ್ ಮುದ್ರಣಾ ಯಂತ್ರ ಶೋಧನೆಯಿಂದ ೧೬ ನೇ ಶತಮಾನದಲ್ಲಿ ಯುರೋಪ್ ಖಂಡದಲ್ಲಿ ಗ್ರಂಥಗಳ ಉತ್ಪಾದನೆಯಲ್ಲಿ ಮಹಾಕ್ರಾಂತಿಯನ್ನೆ ಮಾಡಿತು. ಸುಮಾರು ೧೬ ನೇ ಶತಮಾನದಲ್ಲಿಯೇ ಮುದ್ರಣ ಯಂತ್ರವೂ ಭಾರತಕ್ಕೆ ಆಗಮಿಸಿ ತನ್ನ ಕಾರ್ಯವನ್ನು ಪ್ರಾರಂಭಿಸಿತು. ಹೀಗೆ ಅಭಿವೃದ್ಧಿಗೊಂಡ ಮುದ್ರಣ ಯಂತ್ರಗಳಿಂದಾಗಿ ವಿಶ್ವದಲ್ಲಿ ಅನೇಕ ಗ್ರಂಥಗಳು, ನಿಯತಕಾಲಿಕೆಗಳು, ಶರವೇಗದಲ್ಲಿ ಪ್ರಕಟವಾಗತೊಡಗಿದವು. ಇದು ಮಾಹಿತಿ ಸ್ಫೋಟಕ್ಕೆ (Information expoision) ಕಾರಣವಾಯಿತು. ಇದರಿಂದ ಬೇಕಾದ ಗ್ರಂಥಗಳನ್ನು ಪಡೆಯುವಲ್ಲಿ ತೊಂದರೆಯಾಗಿ; ಒಂದು ವಿಷಯದ ಮೇಲೆ ಪ್ರಕಟಗೊಂಡ ಎಲ್ಲ ಗ್ರಂಥಗಳನ್ನು ಅರಿಯುವದು ಸಾಧ್ಯವಾಗದಾಯಿತು. ಈ ಸಮಸ್ಯೆಯ ನಿರ್ವಾಹಣೆಗೆ ಗ್ರಂಥಸೂಚಿಗಳು ಬೆಳೆದುಬಂದವು. ಇವು ಕರ್ತೃವಿನ ಹೆಸರು, ಗ್ರಂಥದ ಶೀರ್ಷಿಕೆ, ಪ್ರಕಟಿತ ಸ್ಥಳ ಪ್ರಕಾಶಕರು, ಗ್ರಂಥದ ಬೆಲೆ, ಒಟ್ಟು ಪುಟ ಇತ್ಯಾದಿ ಮಾಹಿತಿಯನ್ನು ಒದಗಿಸುತ್ತವೆ.

## ೨.೪ : ಹಿನ್ನೆಲೆ

ಗ್ರಂಥಸೂಚಿಗಳ ರಚನೆಯ ಇತಿಹಾಸ, ಗ್ರಂಥರಚನೆಯ ಇತಿಹಾಸದಷ್ಟೇ ಲೇಖಕನ ಕಲೆಯ ಚರಿತ್ರೆಯಷ್ಟೇ ಪುರಾತನವಾದುದು. ಬೆಬಿಲೋನಿಯ, ಆಸ್ಸೀರಿಯಾಗಳಲ್ಲಿ ಪ್ರಾಚೀನ ಗ್ರಂಥಾಲಯಗಳಲ್ಲಿ ಇಟ್ಟಂಗಿ ರೂಪದ ಗ್ರಂಥಗಳಿದ್ದವು. ಅವುಗಳನ್ನು ಸರಿಯಾಗಿ ವರ್ಗೀಕರಿಸಿ, ಸೂಚಿ ಪಟ್ಟಿಕೆಗಳ ಸಹಿತ ಪೆಟ್ಟಿಗೆಗಳಲ್ಲಿ ಇರಿಸಲಾಗಿರುತ್ತಿತ್ತು. ನಲಂದಾ, ತಕ್ಷಶಿಲೆ, ನಾಗಾಯಿಗಳಲ್ಲಿನ ಪ್ರಾಚೀನ ಭಾರತೀಯ ಗ್ರಂಥಕಾರರು ವರ್ಗೀಕರಣ, ಸೂಚೀಕರಣಗಳಲ್ಲಿ ಪಾರಂಗತರಿದ್ದರು.

ಆದರೆ ಆಗಿನ ಜ್ಞಾನ ಸಾಮ್ರಾಜ್ಯ ಈಗಿನಂತೆ ಇಷ್ಟೊಂದು ಶಾಖೋಪಶಾಖೆಯಾಗಿ ವಿರಾಟ್ ಸ್ವರೂಪ ತಳೆದಿರಲಿಲ್ಲ. ಧರ್ಮ, ದರ್ಶನ, ಜ್ಯೋತಿಷ್ಯ, ಆಯುರ್ವೇದ, ಕಾವಶಾಸ್ತ್ರ, ರಾಜ್ಯಶಾಸ್ತ್ರ, ಇವು ಕೆಲವು ವಿಷಯಗಳಿಗೆ

ಮಾತ್ರ ಸೀಮಿತವಾಗಿತ್ತು. ಈಗಲೋ ! ಜ್ಞಾನದ ವಿಸ್ತಾರ ಅಪಾರವಾಗಿದೆ. ಕ್ಷಣಕ್ಷಣಕ್ಕೂ ಹೊಸ ಸಂಶೋಧನೆಗಳು ಆಗುತ್ತಿವೆ. ತನ್ಮೂಲಕ ಹೊಸ ಜ್ಞಾನ ಸಂಚಯವಾಗುತ್ತ ನಡೆದಿದೆ. ದಿನದಿನವೂ ಬೆಳೆಯುತ್ತಿರುವ ಈ ಜ್ಞಾನ ಗ್ರಂಥರಾಶಿಯಲ್ಲಿ ರಕ್ಷಿತವಾಗಿರುತ್ತದೆ. ಅಂತೆಯೇ ಗ್ರಂಥದ ವರ್ಗೀಕರಣ ಸೂಚೀಕರಣಗಳೂ ಮಹತ್ವಪೂರ್ಣವೂ ಸೂಕ್ಷ್ಮವೂ ಆದ ಕೆಲಸಗಳಾಗಿವೆ. ಆಧುನಿಕ ಭಾರತದಲ್ಲಿನ ಗ್ರಂಥಸೂಚಿಗಳ ರಚನೆಯ ಕಲೆ ಬಹು ಸ್ವಾರಸ್ಯಮಯವಾಗಿದೆ.

೧೮೬೩ ರ ಸುಮಾರಿಗೆ ಲಂಡನ್ ಮಹಾನಗರದಲ್ಲಿರುವ ರಾಯಲ್ ಎಷಿಯಾಟಿಕ್ ಸೊಸೈಟಿಯ ಆಗಿನ ಡೈರೆಕ್ಟರ್ ಆಗಿದ್ದ ಹೆಚ್. ಹ್ಯಾಂಪಟನ್ ಅವರು ಹಾಗೂ ಉಪಾಧ್ಯಕ್ಷರುಗಳಾಗಿದ್ದ ಮೆಕೆಂಝಿ ಮುಂತಾದವರು ಆಗಿನ ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ ಆಗಿದ್ದ ಸರ್ ಚಾರ್ಲಸ್ ವುಡ್ ಅವರಿಗೆ ಈ ಮುಂದಿನ ಅಭಿಪ್ರಾಯದ ಕಾಗದ ಬರೆದು ವಿನಂತಿ ಮಾಡಿಕೊಂಡರು.

" ಭಾರತದಲ್ಲಿ ಒಳ್ಳೆಯ ಗ್ರಂಥಗಳ ರಚನೆಯ ಹಾಗೂ ಪ್ರಕಟನೆಯ ಕಾರ್ಯ ದಿನೇ ದಿನೇ ವರ್ಧಿಸುತ್ತಿದೆ. ಈ ಗ್ರಂಥಗಳ ಅವಲೋಕನ, ವ್ಯಾಸಂಗ, ಬ್ರಿಟಿಷ್ ವಿದ್ವಾಂಸರಿಗೂ ಹಾಗೂ ಭಾರತಕ್ಕೂ ಸರಕಾರಿ ಅಧಿಕಾರಿಗಳಾಗಿ ಹೋಗುವ ಬ್ರಿಟಿಷ್ ತರುಣರಿಗೂ ತುಂಬ ಉಪಯುಕ್ತವಾಗಿ ಪರಿಣಮಿಸುತ್ತದೆ. ಇಂಥ ಗ್ರಂಥಗಳನ್ನು ಇಲ್ಲಿ ಯಾವುದೇ ಒಂದು ಗ್ರಂಥಾಲಯದಲ್ಲಿ ಸಂಗ್ರಹಿಸುವದು ಅತ್ಯವಶ್ಯ. ಕೊನೆಯ ಪಕ್ಷ ಭಾರತದಲ್ಲಿ ಪ್ರಕಟವಾದ ಹಾಗೂ ಆಗುವ ಗ್ರಂಥಗಳ ವರ್ಗೀಕೃತ ಸೂಚಿಯು ನಮಗೆ ದೊರೆಯುವಂತಾದರೆ ಮಹದುಪಕಾರವಾದೀತು " [೧೮]

ಸರ್ ಚಾರ್ಲಸ್ ವುಡ್ ಅವರು ಭಾರತದ ಆಗಿನ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಎಲ್ಗಿನ್ ಅವರ ಗಮನವನ್ನು ಈ ವಿಷಯದ ಕಡೆ ಸೆಳೆದರು. ಭಾರತ ಸರಕಾರ ತಕ್ಷಣ ಎಲ್ಲ ಪ್ರಾಂತೀಯ ಸರಕಾರಗಳಿಗೆ ಆಯಾ ಪ್ರಾಂತಗಳಲ್ಲಿ ಪ್ರಕಟವಾಗುವ ಗ್ರಂಥಗಳ ಸೂಚಿಗಳ ರಚನೆಯ ಬಗ್ಗೆ ಹಾಗೂ ಇಂಡಿಯಾ ಆಫೀಸಿಗೆ ಗ್ರಂಥಗಳನ್ನು ಪುಕ್ಕಟೆಯಾಗಿ ಕಳಿಸುವ ಬಗ್ಗೆ ಸೂಕ್ತ ಆದೇಶವಿತ್ತಿತು. ಈ ಆದೇಶದ ಪ್ರಕಾರ ಆಗಿನ ಮುಂಬಯಿ ಪ್ರಾಂತದ ಶಿಕ್ಷಣಾಧಿಕಾರಿಯಾಗಿದ್ದ ಸರ್. ಎ. ಗ್ರಾಂಟ ಅವರು ತಮ್ಮ ಪ್ರಾಂತದಲ್ಲಿ ೧೮೬೪ ರ ವರೆಗೆ ಪ್ರಕಟವಾದ ವರ್ಗೀಕೃತ ಸೂಚಿಯೊಂದನ್ನು ತಯಾರಿಸಿದರು. ಮತ್ತು ಅದನ್ನು ಸರಕಾರಕ್ಕೆ ಸಾದರಪಡಿಸುತ್ತ ಎಲ್ಲ ಪ್ರಕಾಶಕರೂ, ಮುದ್ರಣಕಾರರವೂ ಅವರು ಪ್ರಕಟಿಸಿದ ಮುದ್ರಿಸಿದ ಗ್ರಂಥಗಳ ಎರಡೆರಡು ಪ್ರತಿಗಳನ್ನು ಸರಕಾರವು ಕೊಂಡುಕೊಳ್ಳುವ ಬಗ್ಗೆ ಕಾಯಿದೆಯೊಂದನ್ನು ಪಾಸು ಮಾಡಬೇಕೆಂದು ಸೂಚಿಸಿದರು. ಈ ಎರಡು ಪ್ರತಿಗಳಲ್ಲಿ ಒಂದು ಇಂಡಿಯಾ ಆಫೀಸ್ ಲೈಬ್ರರಿಗೂ, ಇನ್ನೊಂದು ಮುಂಬೈ ವಿಶ್ವವಿದ್ಯಾಲಯದ ಗ್ರಂಥಾಲಯಕ್ಕೂ ಮೀಸಲಾಗಿರಬೇಕೆಂದೂ ಸೂಚಿಸಿದರು.

ಈ ಸೂಚನೆ ೧೮೬೭ ರಲ್ಲಿ ಅಂಶತಃ ಕೃತಿಯಲ್ಲಿಳಿಯಿತು. ಆ ವರುಷ ಪಾಸಾದ Press and Registration of Books Act ಪ್ರಕಾರ ದೇಶದಲ್ಲಿ ಪ್ರಕಟವಾಗುವ ಗ್ರಂಥಗಳ ಕೆಲವು ಪ್ರತಿಗಳು ಪ್ರಾಂತೀಯ ಸರಕಾರಗಳಿಗೆ ನೇರವಾಗಿ ಉಚಿತವಾಗಿ ಬರುವಂತಾಯಿತು. ಈ ರೀತಿ ಬಂದ ಗ್ರಂಥಗಳ ವ್ಯವಸ್ಥೆಗೆಂದು ಪ್ರತಿಯೊಂದು ಪ್ರಾಂತೀಯ ಸರಕಾರವು Registrar of Native Publication ಎಂಬ ಹಿರಿಯ ಹುದ್ದೆಯನ್ನು ನಿರ್ಮಿಸಿ ಯೋಗ್ಯ ಅಧಿಕಾರಿಯೊಬ್ಬನನ್ನು ನೇಮಿಸಿಕೊಂಡಿತು.

ಈ ಅಧಿಕಾರಿಯ ಹಿರಿತನದಲ್ಲಿಯೇ ದೇಶೀಯ ಪ್ರಕಟನೆಗಳಿಗೆ ಸೂಚಿಯೊಂದನ್ನು (Catalogue of Native Publications) ನಿಯತಕಾಲಿಕವಾಗಿ ಪ್ರಕಟನೆಗೊಳ್ಳಹತ್ತಿತು.

**ಸರಕಾರದ ಪ್ರಯತ್ನಗಳು :**

೧೮೭೧ ರಲ್ಲಿ ಮುಂಬೈ ಸರಕಾರ ತನಗೆ ಅಲ್ಲಿಯವರೆಗೆ ಬಂದ ಎಲ್ಲ ದೇಶೀಯ ಗ್ರಂಥಗಳನ್ನು ಮುಂಬೈ ವಿಶ್ವವಿದ್ಯಾಲಯದವರಿಗೆ ಒಪ್ಪಿಸಿಕೊಟ್ಟಿತು. ಹಾಗೂ ಮುಂದೆ ಪ್ರತಿವರ್ಷ ಬರುವ ಗ್ರಂಥಗಳನ್ನು ಸೂಚಿಗಳು ತಯಾರಾದ ಬಳಿಕ ವಿಶ್ವವಿದ್ಯಾಲಯದವರಿಗೆ ಕೊಡಬೇಕೆಂದು ತೀರ್ಮಾನಿಸಿದರು. ಹೀಗೆ ಇಪ್ಪತ್ತು ವರುಷಗಳು ಉರುಳಿ ಹೋದ ಬಳಿಕ ೧೮೯೧ ರಲ್ಲಿ ವಿಶ್ವವಿದ್ಯಾಲಯಕ್ಕೆ ತಾನು ಪುಕ್ಕಟೆಯಾಗಿ ಕೊಟ್ಟ ಗ್ರಂಥಗಳ ಗತಿಯೇನ ಾಗಿರಬಹುದೆಂಬ ಯೋಚನೆ ಬಂದು ಪುನಃ ಯೋಚಿಸಿ ಆ ಕುರಿತು ವಿಶ್ವವಿದ್ಯಾಲಯದ ರಜಿಸ್ಟ್ರಾರರನ್ನು ಸರಕಾರ ವಿಚಾರಿಸಿತು. ಪ್ರತ್ಯುತ್ತರವಾಗಿ ಆಗಿನ ರಜಿಸ್ಟ್ರಾರರಾಗಿದ್ದ ಮ್ಯಾಕ್‌ಡೊನಾಲ್ಡ್ ಅವರು, ಅಲ್ಲಿಯ ವರೆಗೆ ಸರಕಾರ ಕಳಿಸಿದ್ದ ೨೨.೫೨೪ ಗ್ರಂಥಗಳಲ್ಲಿ ೫.೧೬೪ ಗ್ರಂಥಗಳು ಗೆದ್ದಲಿನಿಂದ ನಾಶವಾಗಿ ಹೋದವೆಂದೂ, ಉಳಿದವುಗಳನ್ನು ಇಟ್ಟುಕೊಳ್ಳಲು ತಮಗೆ ಸ್ಥಳಾವಕಾಶವಿದೆಯೆಂದೂ, ತಿಳಿಸಿ ಗ್ರಂಥಗಳನ್ನು ಸರಕಾರಕ್ಕೆ ವಾಪಸ್ಸು ಮಾಡಿ ಬಿಟ್ಟರು! ನಾಶವಾದ ಗ್ರಂಥಗಳಲ್ಲಿ ಕನ್ನಡ ಗ್ರಂಥಗಳೆಷ್ಟಿದ್ದವೋ ತಿಳಿಯದು. ಆಗ ಭಾರತದಲ್ಲಿ ನೆಲೆಸಿದ್ದ ಕ್ರಿಶ್ಚಿಯನ್ ಮಿಶಿನರಿಗಳೂ ಕ್ರೈಸ್ತ ಮತಕ್ಕೆ ಸಂಬಂಧಪಟ್ಟ ಗ್ರಂಥಗಳ ಸೂಚಿಗಳನ್ನು ಕಾಲ ಕಾಲಕ್ಕೆ ತಯಾರಿಸಿದ ಪರದೇಶಗಳಲ್ಲಿರುವ ತಮ್ಮ ತಮ್ಮ ಮುಖ್ಯ ಕಚೇರಿಗಳಿಗೆ ವರದಿ ಕಳಿಸುತ್ತಿದ್ದರು.

ಈ ದಿಸೆಯಲ್ಲಿ ಪ್ರಯತ್ನವಾಗಿ ೧೯೬೭ ರಲ್ಲಿ ಮೈಸೂರು ವಿಶ್ವವಿದ್ಯಾಲಯ ಕನ್ನಡ ಗ್ರಂಥಗಳ ವರ್ಗೀಕೃತ ವಿವರಣಾತ್ಮಕ ಸೂಚಿಯ ರಚನೆಯ ಯೋಜನೆಯೊಂದನ್ನು ಹಮ್ಮಿಕೊಂಡಿತು. ಅಂದರೆ ೧೮೧೭ ರಿಂದ ೧೯೬೮ ರ ವರೆಗೂ ಪ್ರಕಟವಾದ ಕನ್ನಡ ಗ್ರಂಥಗಳ ಸಶಾಸ್ತ್ರೀಯ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸಿ ಹಲವು ಸಂಪುಟಗಳ ಯೋಜನೆಯೊಂದನ್ನು ಪ್ರೊ. ದೇಜಗೌ, ಮೈಸೂರು ವಿಶ್ವವಿದ್ಯಾಲಯದ ಗ್ರಂಥಪಾಲಕರಾಗಿದ್ದ ಕೆ. ಎಸ್. ದೇಶಪಾಂಡೆ ಅವರು, ಡಾ. ಪ್ರಭುಶಂಕರ್ ಅವರು ಸಂಪಾದಕ ಸಮಿತಿಯಾಗಿದ್ದುಕೊಂಡು ಕನ್ನಡಗ್ರಂಥಸೂಚಿಯ ೫ ಸಂಪುಟಗಳು ಹೊರಬರಲಿಕ್ಕೆ ಕಾರಣಕರ್ತರಾಗಿದ್ದರು.

ಕನ್ನಡದಲ್ಲಿ ಮೊಟ್ಟ ಮೊದಲು ಸಿರಾಂಪುರದಲ್ಲಿ ಅಚ್ಚಾದ ಪುಸ್ತಕ ಡಾ. ಲಿವಿಯಂ ಕ್ಯಾರಿ ಅವರ "ಗ್ರಾಮರ್ ಆಫ್ ದಿ ಕರ್ನಾಟಕ ಲಾಂಗ್ವೇಜ್" ದಿಂದ ಪ್ರಾರಂಭ ಮಾಡಿ ೧೯೬೮ ರ ವರೆಗೆ ಅಚ್ಚಾದ ಎಲ್ಲ ಗ್ರಂಥಗಳನ್ನು ಈ ಸೂಚಿಯಲ್ಲಿ ಸೇರಿಸುವ ಉದ್ದೇಶದಿಂದ ೪ ಜನ ಸಹಾಯಕ ಸಂಶೋಧಕರನ್ನು ನೇಮಿಸಿಕೊಂಡಿತು.

ಈ ದಿಸೆಯಲ್ಲಿಯ ಇನ್ನೊಂದು ಹೆಜ್ಜೆ ಬಾರ್ನೆಟ್ ತಯಾರಿಸಿದ "ಕ್ಯಾಟಲಾಗ್ ಆಫ್ ದಿ. ಕನ್ನಡ ಬಡಗ ಆ್ಯಂಡ್ ಕೂರ್ಗ ಬುಕ್ಸ್ ಇನ್ ದಿ ಲೈಬ್ರರಿ ಆಫ್ ದಿ ಬ್ರಿಟಿಷ್ ಮ್ಯೂಜಿಯಂ" ಇನ್ನೊಂದು ಮಹತ್ವದ ಪ್ರಕಟನೆ. (೧೯೧೦)

ಪ್ರಾಂತೀಯ ಸರಕಾರಗಳು ತಯಾರಿಸಿದ ದೇಶೀ ಗ್ರಂಥಗಳ ಸೂಚಿಗಳನ್ನು ಪ್ರಕಾಶಕರ, ಪುಸ್ತಕ ವ್ಯಾಪಾರಿಗಳ, ಇನ್ನುಳಿದ ಗ್ರಂಥಾಲಯಗಳ ಕ್ಯಾಟಲಾಗುಗಳನ್ನು ತರಿಸಿಕೊಂಡು, ವೀಕ್ಷಿಸಿ, ಪಟ್ಟಿಗಳನ್ನು ತಯಾರಿಸಿದರು. ಲೇಖಕರು, ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು ಇವರೊಡನೆ ಪುಸ್ತಕಗಳ ಬಗ್ಗೆ ವಿವರಗಳನ್ನು ತಿಳಿದುಕೊಳ್ಳಲು ವೈಯಕ್ತಿಕವಾಗಿ ಪತ್ರವ್ಯವಹಾರವನ್ನು ನಡೆಸಿದರು. ವರ್ತಮಾನ ಪತ್ರಗಳಲ್ಲಿ ಈ ಬಗ್ಗೆ ಮನವಿಗಳನ್ನು ಪ್ರಕಟಿಸಿ, ತಮ್ಮ ಗಮನಕ್ಕೆ ಅದುವರೆಗೆ ಬಾರದೆ ಇದ್ದ ಹೆಚ್ಚಿನ ಗ್ರಂಥಗಳ ಬಗ್ಗೆ ಮಾಹಿತಿ ಕಲೆ ಹಾಕಿದರು. ನಿಯತಕಾಲಿಕೆಗಳಲ್ಲಿ ವಿಮರ್ಶಿತವಾದ ಗ್ರಂಥಗಳ ಯಾದಿಗಳನ್ನು ತಯಾರಿಸಿದರು. ಈ ಎಲ್ಲ ಪರಿಶ್ರಮದ ಫಲ ಸುಮಾರು ೫೦ ಸಾವಿರ ಪಟ್ಟಿಕೆಗಳ ಸಂಗ್ರಹ.

ಬರೋಡಾ ಮಹಾರಾಜರು ಲಕ್ಷ್ಮೀವಿಲಾಸ ಅರಮನೆಯಲ್ಲಿ ಖಾಸಗಿಯಾಗಿ ಹೊಂದಿದ್ದ ಗ್ರಂಥಾಲಯವನ್ನು ೧೯೧೨ ರಲ್ಲಿ ಕೇಂದ್ರ ಗ್ರಂಥಾಲಯಕ್ಕೆ ಕೊಟ್ಟರು. ೧೮೬೬, ೧೮೬೭ ಮತ್ತು ೧೯೧೦ ರಲ್ಲಿ ಈ ಅರಮನೆ ಗ್ರಂಥಾಲಯ ಇಂಗ್ಲೀಷ್ ಪುಸ್ತಕ ಸೂಚಿಗಳು ಪ್ರಕಟವಾದುವು. ಈ ರಾಜ್ಯ ಗ್ರಂಥಾಲಯ ಕೇಂದ್ರ ಗ್ರಂಥಾಲಯಕ್ಕೆ ವರ್ಗಾವಣೆಯಾದ ಅನಂತರ ಕೇಂದ್ರ ಗ್ರಂಥಾಲಯ ತಾನು ಶೇಖರಿಸಿದ ಹೊಸ ಪುಸ್ತಕಗಳಿಗೆ ಸೂಚಿಗಳನ್ನು ವರ್ಗೀಕೃತ ರೀತಿಯಲ್ಲಿ ಟಿಪ್ಪಣಿಗಳೊಡನೆ ಪ್ರಕಟಿಸಿ ಇಂಗ್ಲೀಷ್ ಪುಸ್ತಕಸೂಚಿಗೆ ಪುರವಣಿಗಳನ್ನು ಹೊರಡಿಸಿತು. ಇದಲ್ಲದೆ ಕೆಲವು ವಿಶಿಷ್ಟ ವಿಷಯಗಳಲ್ಲಿ ಕೇಂದ್ರ ಗ್ರಂಥಾಲಯ ನಾಲ್ಕು ಗ್ರಂಥಸೂಚಿಗಳನ್ನು ತಯಾರಿಸಿ ಪ್ರಕಟಿಸಿತು.[೨೧]

ರಾಜ್ಯ ಗ್ರಂಥಾಲಯ ಶಾಖೆಯೊಡನೆ ಸಹಕರಿಸಲು ಬರೋಡಾ ರಾಜ್ಯ ಗ್ರಂಥಾಲಯ ಸಂಘ ೧೯೨೪ ರಲ್ಲಿ ಸ್ಥಾಪಿತವಾಯಿತು. ಅದು ಗ್ರಂಥಾಲಯಗಳಿಗೆ ಬೇಕಾಗುವ ಪುಸ್ತಕಗಳು, ನಿಯತಕಾಲಿಕೆಗಳು, ಮತ್ತಿತರ ಸಾಧನಗಳನ್ನು ಸುಲಭ ಬೆಲೆಯಲ್ಲಿ ಒದಗಿಸಲು ಒಂದು ಸಹಕಾರ ಸಂಘವನ್ನು ಸ್ಥಾಪಿಸಿತು. ಇದಲ್ಲದೆ ಈ ಸಂಸ್ಥೆ ಪುಸ್ತಕ ಪ್ರಕಟನೆ ಆರಂಭಿಸಿ ಕೆಲವೇ ವರ್ಷಗಳಲ್ಲಿ ೮,೦೦೦ ಗುಜರಾತಿ ಪುಸ್ತಕಗಳ ವರ್ಗೀಕೃತ ಸೂಚಿಯನ್ನು, ಬಹುಶಃ ಭಾರತದಲ್ಲೆ ಮೊದಲ ಬಾರಿಗೆ ಪ್ರಕಟಿಸಿತು. ಇದಲ್ಲದೆ ಇದು ಗುಜರಾತಿನಲ್ಲಿರುವ ಗ್ರಂಥಾಲಯಗಳ ವಿಳಾಸಪುಸ್ತಕವನ್ನೂ ಗುಜರಾತೀ ಪುಸ್ತಕಗಳ ವರ್ಗೀಕರಣಕ್ಕೆ ಪರಿಷ್ಕೃತ ವರ್ಗೀಕರಣ ವ್ಯವಸ್ಥೆಯನ್ನೂ ಪ್ರಕಟಿಸಿತು.[೨೨]

ಅಮೇರಿಕದ ಲೈಬ್ರರಿ ಆಫ್ ಕಾಂಗ್ರೆಸ್‌ನಲ್ಲಿ ನಡೆಯುವ ಗ್ರಂಥಾಲಯ ಚಟುವಟಿಕೆಗಳನ್ನು ಬರೋಡಾ ಗ್ರಂಥಾಲಯ ವ್ಯವಸ್ಥೆಯ ಆಡಳಿತಗಾರರು ಗಮನವಿಟ್ಟು ನೋಡುತ್ತಿದ್ದರು. ಸಣ್ಣ ಪ್ರಮಾಣದಲ್ಲಾದರೂ ಕೇಂದ್ರ ಗ್ರಂಥಾಲಯದ ಪರಾಮರ್ಶನ ಹಾಗೂ ಎರವಲು ಶಾಖೆಯಲ್ಲಿನ ಮರಾಠಿ ಹಾಗೂ ಗುಜರಾತಿ ಪುಸ್ತಕಗಳ ಪಟ್ಟಿಯನ್ನು ಪ್ರಕಟಿಸಿ ಇವುಗಳಿಂದಾಗಿ ಮುದ್ರಿತ ಪತ್ರಕಗಳನ್ನು ತಯಾರಿಸಿ, ದೊಡ್ಡ ಗ್ರಂಥಾಲಯಗಳಿಗೆ ಮಾರಿದರು.[೨೩]

ಭಾರತದಲ್ಲಿ ಇಪ್ಪತ್ತನೆಯ ಶತಮಾನದ ಮೊದಲ ದಶಕ ನಾನಾ ಕಾರಣಗಳಿಂದ ಬಹುಮುಖ್ಯವಾದದ್ದು. ರಾಷ್ಟ್ರೀಯ ಶಿಕ್ಷಣಕ್ಕಾಗಿ ಚಳುವಳಿ ಆರಂಭವಾದುದಲ್ಲದೆ ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿಯೂ ಕಡ್ಡಾಯವಾಗಿಯೂ ಮಾಡಬೇಕೆಂದು ಗೋಖಲೆಯವರ ಯತ್ನ ನಡೆದುದು ಆಗಲೇ. ಈ ದಶಕದಲ್ಲಿ ಭಾರತೀಯ ವಿಶ್ವವಿದ್ಯಾಲಯಗಳ ಆಯೋಗ ಹಾಗೂ ಕಲ್ಕತ್ತಾ ವಿಶ್ವವಿದ್ಯಾಲಯಗಳ ಆಯೋಗ ನೇಮಕವಾದುವು. ೧೯೦೪ ಹಾಗೂ ೧೯೧೩ ರಲ್ಲಿ ಸರಕಾರ ತನ್ನ ಶಿಕ್ಷಣ ನೀತಿಯನ್ನು ಬದಲಾಯಿಸಿತು. ಇದರಿಂದ ಶಿಕ್ಷಣ ಪ್ರಗತಿ ಹೊಂದಿತು. ಭಾರತದ ಅನೇಕ ಮೇದಾವಿಗಳು ಜಗದ್ವಿಖ್ಯಾತರಾದರು. ದೇಶದಲ್ಲಿ ನವೋತ್ಸಾಹ ಮೂಡಿತು.

ಕಲ್ಕತ್ತಾ, ಮದ್ರಾಸ್, ಬೊಂಬಾಯಿ– ಈ ಪ್ರೆಸಿಡೆನ್ಸಿ ರಾಜಧಾನಿಗಳಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾಗಿ, ಪಾಶ್ಚಾತ್ಯ ದೇಶಗಳಲ್ಲಿ ತರಬೇತಿ ಹೊಂದಿದ ವಿದ್ವಾಂಸರು ವಿಶ್ವವಿದ್ಯಾನಿಲಯ ಗ್ರಂಥಾಲಯಗಳ ಹಾಗೂ ಸಾರ್ವಜನಿಕ ಗ್ರಂಥಾಲಯಗಳ ವ್ಯವಸ್ಥೆಗೆ ಗಮನವಿತ್ತರು. ಬ್ರಿಟಿಷ್ ಮ್ಯೂಜಿಯಂ, ಬ್ಲಾಡಿಯನ್ ಗ್ರಂಥಾಲಯ ಅವರಿಗೆ ಮಾದರಿಗಳಾಗಿದ್ದುವು. ಬ್ರಿಟಿಷ್ ಮ್ಯೂಜಿಯಂ ಗ್ರಂಥಾಲಯದ ಮಾದರಿಯಲ್ಲಿ ೧೯೦೨ ರಲ್ಲಿ ಕಲ್ಕತ್ತದಲ್ಲಿ ಇಂಪೀರಿಯಲ್ ಗ್ರಂಥಾಲಯದ ಸ್ಥಾಪನೆಗೆ ಭಾರತದ ಮಿತ್ರನೂ ಬುದ್ಧಿಶಾಲಿಯೂ ಆದ ಲಾರ್ಡ್ ಕರ್ಜನ್ ಬೆಂಬಲವಿತ್ತರು. ಸರಕಾರಿ ಗೆಜೆಟ್‌ನಲ್ಲಿ ತಿಳಿಸಿರುವಂತೆ " ಈ ಗ್ರಂಥಾಲಯ ವಿದ್ಯಾರ್ಥಿಗಳಿಗೆ ಪರಾಮರ್ಶನಕ್ಕಾಗಿ ಅಭ್ಯಾಸ ಸ್ಥಳವಾಗಿರುವದಲ್ಲದೆ, ಭಾರತದ ಮುಂದಿನ ಚರಿತ್ರಕಾರರು ವೀಕ್ಷಿಸಲು, ಓದಲು ಬೇಕಾದ ಎಲ್ಲ ಸಾಮಗ್ರಿಗಳನ್ನು ಒಳಗೊಂಡ ಆಕರ ಶಾಲೆಯಾಗಿರುವಂತೆ ಭಾರತವನ್ನು ಕುರಿತು ಪ್ರತಿಯೊಂದು ಕೃತಿಯನ್ನೂ ಎಲ್ಲ ಕಾಲದಲ್ಲೂ ಇಲ್ಲಿ ಶೇಖರಿಸಲಾಗುವದು. "[೨೪]

ಭಾರತದಲ್ಲಿ ತಂಜಾವೂರು - ಸರಸ್ವತಿ ಮಹಲ್ ಗ್ರಂಥಾಲಯ, ಪಾಟ್ನಾದ ಖುದಾಬಕ್ಷ ಗ್ರಂಥಾಲಯ, ಬೊಂಬಾಯಿಯಲ್ಲಿನ ರಾಯಲ್ ಏಷ್ಯಾಟಿಕ್ ಸೊಸೈಟಿ ಗ್ರಂಥಾಲಯ, ಕಲ್ಕತ್ತಾದಲ್ಲಿನ ಏಷ್ಯಾಟಿಕ್ ಸೊಸೈಟಿಯಲ್ಲಿಯ ಗ್ರಂಥಾಲಯ ಹಾಗೂ ಇಂಪೀರಿಯಲ್ ಗ್ರಂಥಾಲಯ ಹಾಗೂ ಸರಕಾರಿ ಗ್ರಂಥಾಲಯಗಳಲ್ಲಿ ಅಮೂಲ್ಯವಾದ ಕೈಬರಹದ ಪತ್ರಿಕೆಗಳು, ಪುಸ್ತಕಗಳು ಮತ್ತಿತರ ಪ್ರಕಟನೆಗಳು ಹೇರಳವಾಗಿವೆ. ದುರದೃಷ್ಟವಶಾತ್ ಈ ಗ್ರಂಥಾಲಯಗಳ ವಿಳಾಸ ಪುಸ್ತಕವಿಲ್ಲ, ಕೈಪಿಡಿಗಳಿಲ್ಲ. ಪುಸ್ತಕ ಸೂಚಿಗಳಿಲ್ಲ ಸರಿಯಾದ ವ್ಯವಸ್ಥಿತ ಆಡಳಿತವಿಲ್ಲ. ಗ್ರಂಥಾಲಯಗಳ

ನಡುವೆ ಸಹಕಾರವಂತೂ ಕೇಳರಿಯದ ಮಾತು. ಇದರಿಂದಾಗಿ ಸಂಶೋಧಕರು ದೇಶದ ಗ್ರಂಥಾಲಯಗಳಲ್ಲಿನ ಪುಸ್ತಕ ಮತ್ತಿತರ ಸಾಮಗ್ರಿಗಳ ಪೂರ್ಣ ಉಪಯೋಗ ಪಡೆಯದಂತೆ ಆಗಿದೆ. ಈ ತೊಂದರೆಗಳನ್ನು ಪರಿಹರಿಸಲು ಭಾರತ ಸರಕಾರದ ಶಿಕ್ಷಣ ಕಮೀಶನರ್ ಹೆನ್ರಿ, ಶಾರ್ಪ್ ಕೆಲವು ಆಸಕ್ತ ಜನರ ಸಭೆಯನ್ನು ಕರೆದರು. ಲಾಹೋರಿನಲ್ಲಿ ೧೯೧೮ ರಲ್ಲಿ ನಡೆದ ಈ ಸಭೆಯಲ್ಲಿ ಖ್ಯಾತಿವೆತ್ತ ಗ್ರಂಥಪಾಲರು, ಶಿಕ್ಷಣವೇತ್ತರು ಮತ್ತು ಆಡಳಿತಗಾರರು ಭಾಗವಹಿಸಿದ್ದರು. ಗ್ರಂಥಾಲಯಗಳ ತರಬೇತು, ವಿಜ್ಞಾನದ ನಿಯತಕಾಲಿಕೆಗಳ ಸಂಯುಕ್ತ ಸೂಚಿಯ ರಚನೆ, ಗ್ರಂಥಾಲಯಗಳ ನಡುವಣ ಸಹಕಾರ ಇವುಗಳನ್ನು ಚರ್ಚಿಸಲಾಯಿತು. ಭಾರತದಲ್ಲಿ ಈ ರೀತಿ ಸಮ್ಮೇಳನ ನಡೆದುದು ಇದೇ ಮೊದಲು. ಇದರಿಂದ ಉಪಯುಕ್ತ ಫಲಿತಾಂಶ ಹೊರಹೊಮ್ಮಲಿಲ್ಲ. ಆದರೆ ಪ್ರಚಲಿತ ಗ್ರಂಥಾಲಯಗಳಲ್ಲಿನ ಆಕರಗಳು, ಅನುಕೂಲಗಳ ಬಗ್ಗೆ ಸಮಾಚಾರ ವಿನಿಮಯವಾಯಿತು. [೨೫]

೧೯೩೦ ರಲ್ಲಿ ಏಷ್ಯದ ಶಿಕ್ಷಣ ಸಮ್ಮೇಳನ ಕಾಶಿಯಲ್ಲಿ ಸೇರಿತು. ಇದರ ಅಂಗವಾಗಿ ನೆರೆದ ಗ್ರಂಥಾಲಯದ ಸೇವಾ ವಿಭಾಗದ ಗ್ರಂಥಾಲಯಗಳಿಗೂ ಗ್ರಂಥಾಲಯದ ಉಪಯೋಗ ಮಾಡುವವರಿಗೂ ಭಾಗವಹಿಸುವ ಅವಕಾಶವಿದ್ದಿತು. ಬರೋಡದ ಗ್ರಂಥಾಲಯಗಳ ಮುಖ್ಯಾಧಿಕಾರಿ ನೂಟನ್ ಮೋಹನದತ್ ಅಧ್ಯಕ್ಷರಾಗಿದ್ದರು. ಹಾಗೂ ಮದ್ರಾಸ್ ವಿಶ್ವವಿದ್ಯಾನಿಲಯ ಗ್ರಂಥಾಲಯದಿಂದ ಎಸ್. ಆರ್. ರಂಗನಾಥನ್ ಕಾರ್ಯದರ್ಶಿಯಾಗಿಯೂ, ಕಾಶಿ ಹಿಂದೂ ವಿಶ್ವವಿದ್ಯಾನಿಲಯ ಗ್ರಂಥಾಲಯದ ಡಿ. ಸುಬ್ರಹ್ಮಣ್ಯಂ ಸ್ಥಳೀಯ ಕಾರ್ಯದರ್ಶಿಯಾಗಿಯೂ ಆಯ್ಕೆಯಾದರು. [೨೬]

ರಂಗನಾಥನ್‌ರವರು "ದಕ್ಷಿಣ ಏಷ್ಯಾದಲ್ಲಿ ಪಾಂಡಿತ್ಯಪೂರ್ಣ ನಿಯತಕಾಲಿಕೆಗಳ ಸಂಯುಕ್ತ ಸೂಚಿ" [Union Catalogue of Learned Periodical Publications in South Asia] ಯ ಮುನ್ನುಡಿಯಲ್ಲಿ, ಆ ಸಮ್ಮೇಳನದಲ್ಲಿ ಭಾರತ ಸಂಯುಕ್ತ ಪುಸ್ತಕ ಸೂಚಿಯನ್ನು ಕುರಿತು ನಿರ್ಣಯ ಮಂಡಿಸಲು ತಮಗೆ ಅವಕಾಶ ಮೊಟ್ಟ ಮೊದಲನೇ ಬಾರಿಗೆ ಬಂದಿತೆಂದು ತಿಳಿಸಿದ್ದಾರೆ.

ಇಲ್ಲಿ ಯೋಚಿಸಲಾದ ಸಂಯುಕ್ತ ಸೂಚಿ ಆಧಾರ ಸ್ವರೂಪವುಳ್ಳದ್ದು. ಅದು ರಾಷ್ಟ್ರದ ಎಲ್ಲಾ ಪುಸ್ತಕ ಸಂಪತ್ತನ್ನೂ ಒಳಗೊಂಡಿರಬೇಕು. (ಪುಸ್ತಕಗಳು, ನಿಯತಕಾಲಿಕೆಗಲು) ಮೊದಲನೆಯ ಅಖಿಲ ಭಾರತ ಗ್ರಂಥಾಲಯ ಸಮ್ಮೇಳನದಲ್ಲಿ ಸಹ ಇದೇ ರೀತಿಯ ನಿರ್ಣಯ ಸ್ವೀಕಾರವಾಗಿ ಪುಸ್ತಕ ಸೂಚಿಯ ವ್ಯಾಪ್ತಿಯನ್ನು ಭಾರತದ ಗ್ರಂಥಾಲಯಗಳಲ್ಲಿನ ವಿಜ್ಞಾನದ ನಿಯತಕಾಲಿಕೆಗಳು ಹಾಗೂ ವಾರ್ಷಿಕಗಳಿಗೆ ಮಾತ್ರ ಸೀಮಿತವಾಗಿರಬೇಕೆಂದು ನಿರ್ಧರಿಸಲಾಯಿತು. ಎಲ್ಲಾ ವಿಧದಲ್ಲೂ ಇದನ್ನು ಪ್ರಾಯೋಗಿಕ ದೃಷ್ಟಿಯಿಂದ ನೋಡಲಾಗಿದೆ.

ಈ ನಿರ್ಣಯದಂತೆ ಭಾರತದ ಗ್ರಂಥಾಲಯ ಸಂಸ್ಥೆ ಅಂತರ್ ವಿಶ್ವವಿದ್ಯಾನಿಲಯ ಸಮಿತಿಯನ್ನು ಸಂಯುಕ್ತ ಪುಸ್ತಕ ಸೂಚಿಯನ್ನು ತಯಾರಿಸುವಂತೆ ಪ್ರಾರ್ಥಿಸಿತು. ಅದರಂತೆ ಆ ಸಮಿತಿ ಮಾಹಿತಿಗಳನ್ನು ಕಲೆ ಹಾಕಲು ಆರಂಭಿಸಿ. ಪುಸ್ತಕ ಸೂಚಿಯ ಸಂಕಲನಕ್ಕೆ ಮತ್ತು ಪ್ರಕಟಣೆಗೆ ಹಲವು ಖ್ಯಾತ ಗ್ರಂಥಾಲಯಗಳ ಅಭಿಪ್ರಾಯವನ್ನು ಕೇಳಿತು ಕಡೆಯದಾಗಿ ಸಮಿತಿ ಪುಸ್ತಕ ಸೂಚಿಯ ಸಂಕಲನ ಹಾಗೂ ಪ್ರಕಟಣೆಯನ್ನು ಭಾರತದ ಗ್ರಂಥಾಲಯ ಸಂಸ್ಥೆಗೆ ವಹಿಸಿತು. ಈ ಸಂಸ್ಥೆ ಕೂಡಿ ಹಾಕಿದ್ದ ಮಾಹಿತಿಗಳನ್ನೆಲ್ಲ ಪಂಜಾಬ ವಿಶ್ವವಿದ್ಯಾನಿಲಯದ ಗ್ರಂಥಾಲಯ ಶ್ರೀ ಎಸ್. ಎಸ್. ಸೇಟ್‌ರವರಿಗೆ ವಹಿಸಿತು. ೧೯೪೭ ರ ವರೆಗೆ ಏನೂ ಪ್ರಗತಿ ಸಾಧ್ಯವಾಗಲಿಲ್ಲ. ಭಾರತ ವಿಭಜನೆಯಾದಾಗ ಲಾಹೋರಿನಲ್ಲಿ ನಡೆದ ಗಲಭೆಗಳಲ್ಲಿ ಆ ಮಾಹಿತಿಗಳೆಲ್ಲಾ ಕಳೆದು ಹೋದುವೆಂದು ವರದಿಯಾಯಿತು. ಕಡೆಗೆ ೧೯೪೯ ರಲ್ಲಿ ಈ ಸಂಕಲನ ಹಾಗೂ ಪ್ರಕಟನಾ ಕಾರ್ಯವನ್ನು ರಂಗನಾಥನ್‌ರವರಿಗೆ ವಹಿಸಲಾಯಿತು. ಆಗ ದೆಹಲಿಯಲ್ಲಿ ಯುನೆಸ್ಕೋ ವಿಜ್ಞಾನ ಸಹಕಾರಿ ಕಚೇರಿಯ ದೆಹಲಿ ಶಾಖೆಯ ಅಧಿಕಾರಿ ಡಾ. ವುಲ್ಫ್‌ಸ್ಕಿಯವರ ಆಸಕ್ತಿಯ ಫಲವಾಗಿ ಯುನೆಸ್ಕೋದಿಂದ ಧನಸಹಾಯ ಪಡೆದು ಈ ಪುಸ್ತಕ ಸೂಚಿ ಪ್ರಕಟವಾಯಿತು. ಅನೇಕ ಸಂಯುಕ್ತ ಸೂಚಿಗಳಿಗೆ ವಿಭಾಗಿತ ಸೂಚಿಗಳಿಲ್ಲ. Union Catalogue of Learned Periodical Publications in South Asia ದಲ್ಲಿ ಲೇಖನಗಳು ವರ್ಗೀಕೃತವಾಗಿ ಕೋಲನ್ ವರ್ಗೀಕರಣ ಪದ್ಧತಿಯ ರೀತಿಯಲ್ಲಿ ಜೋಡಿಸಲ್ಪಟ್ಟಿವೆ. ೧೯೫೩ ರಲ್ಲಿ ಪ್ರಕಟವಾದ ಮೊದಲನೆಯ ಭಾಗ ಭೌತ ಹಾಗೂ ಜೀವ ವಿಜ್ಞಾನದ ನಿಯಕಾಲಿಕೆಗಳನ್ನು ಮಾತ್ರ ಒಳಗೊಂಡು. ಭಾರತ ಹಾಗೂ ದಕ್ಷಿಣ ಏಷ್ಯಾದ ಗ್ರಂಥಾಲಯಗಳಲ್ಲಿ ಈ ನಿಯತಕಾಲಿಕೆಗಳ ಯಾವ ಸಂಪುಟಗಳು ದೊರೆಯುತ್ತವೆ ಎಂಬುದನ್ನು ಸೂಚಿಸುತ್ತದೆ. ಪ್ರಕೃತಿ ವಿಜ್ಞಾನದ ನಿಯತಕಾಲಿಕೆಗಳ ಸಂಯುಕ್ತ ಸೂಚಿ ಹಲವಾರು ಇದ್ದರೂ ಅವುಗಳ ವ್ಯಾಪ್ತಿ ಮತ್ತು ಅವುಗಳು ಕೊಡುವ ಮಾಹಿತಿ ಕೆಲವೇ ಭೌಗೋಳಿಕ ಪ್ರದೇಶಗಳಿವೆ. ಹಾಗೂ ವಿಷಯಕ್ಕೆ ಸೀಮಿತವಾಗಿವೆ.

ಗ್ರಂಥಾಲಯ ಸೇವೆಯಲ್ಲಿ ಆಸಕ್ತಿ ತಳೆದ ಆಂಧ್ರರು. ಜನರಲ್ಲಿ ಗ್ರಂಥಾಲಯ ಚಳುವಳಿಯನ್ನು ಕುರಿತು ಪ್ರಚಾರ ಮಾಡಲು ಸೂಕ್ತ ವಾತಾವರಣವಿರುವುದನ್ನು ಕಂಡು ೧೯೧೪ ರಲ್ಲಿ ಆಂಧ್ರಪ್ರದೇಶ ಗ್ರಂಥಾಲಯ ಸಂಘವನ್ನು ಸ್ಥಾಪಿಸಿದರು. ಬರೋಡಾ ಸಂಸ್ಥಾನದಲ್ಲಿ ಗ್ರಂಥಾಲಯಗಳ ಬೆಳವಣಿಗೆಗೆ ಸ್ಫೂರ್ತಿ ದೊರೆತಿದ್ದು ಮಹಾರಾಜರಿಂದ ಆದರೆ ಆಂಧ್ರದಲ್ಲಿ ಗ್ರಂಥಾಲಯ ಚಳುವಳಿಗೆ ಜನಗಳ ಬೆಂಬಲವಿತ್ತು. ಆಂಧ್ರ ಗ್ರಂಥಾಲಯ ಸಂಸ್ಥೆಯೇ ಭಾರತದಲ್ಲಿ ಸ್ಥಾಪಿತವಾದ ಮೊದಲ ಗ್ರಂಥಾಲಯ ಸಂಘ. ಈ ಸಂಘ ಇದುವರೆಗೆ ೧೩ ಪುಸ್ತಕಗಳನ್ನು ಪ್ರಕಟಿಸಿದೆ; ಹಾಗೂ ಗ್ರಂಥಾಲಯ ಸ್ವಸ್ವಮು ಎಂಬ ನಿಯತಕಾಲಿಕೆಯನ್ನು ಪ್ರಕಟಿಸುತ್ತಿದೆ. ೧೯೨೪ ರಿಂದ ೧೯೩೭ ರ ವರೆಗೆ ಇಂಡಿಯನ್ ಲೈಬ್ರರಿ ಜನರಲ್ ಎಂಬ ನಿಯತಕಾಲಿಕೆಯನ್ನು ಅನಿಯಮಿತ ಕಾಲದ ಅಂತರದಲ್ಲಿ ಪ್ರಕಟಿಸಿತು. ಎರಡು ಪತ್ರಿಕೆಗಳ ಧ್ಯೇಯ ಗ್ರಂಥಾಲಯ ಚಳುವಳಿಗೆ ಉತ್ತೇಜನ. [೨೭]

ಪ್ರಾದೇಶಿಕ ಸಂಘಗಳಲ್ಲಿ ಅತ್ಯಂತ ಚಟುವಟಿಕೆಯದು ೧೯೨೮ ರಲ್ಲಿ ರಂಗನಾಥನ್ ರವರು ಸ್ಥಾಪಿಸಿದ ಮದ್ರಾಸ್ ಗ್ರಂಥಾಲಯ ಸಂಘ. [೨೭] ಈ ಸಂಘ ನಾನಾ ಮಾಲೆಗಳನ್ನು ಆರಂಭಿಸಿ ಅನೇಕ ಪುಸ್ತಕಗಳನ್ನು ಪ್ರಕಟಿಸಿತು. ಇದಲ್ಲದೆ ಸಂಘ ವಿದ್ಯಾಭ್ಯಾಸ ಇಲಾಖೆಯ ಡೈರೆಕ್ಟರ್‌ರ ಸಹಕಾರದೊಂದಿಗೆ ಪುಸ್ತಕ ಪಟ್ಟಿಗಳನ್ನು ಶ್ರೀಕುಮಾರ ರಾಜಾ ಮುತ್ತಯ್ಯ ಚೆಟ್ಟಿಯಾರರ ನೆರವಿನಿಂದ ತಮಿಳು ಪುಸ್ತಕಗಳ ಸಮಗ್ರ ಸೂಚಿಯನ್ನೂ ಪ್ರಕಟಿಸಿತು. [೨೮]

ಉಳಿದ ಪ್ರಾದೇಶಿಕ ಗ್ರಂಥಾಲಯಗಳ ಸಂಘಗಳಲ್ಲಿ ಮುಖ್ಯವಾದುದು ಬಂಗಾಳ ಗ್ರಂಥಾಲಯ ಸಂಘ. ಬಂಗಾಳದಲ್ಲಿ ಗ್ರಂಥಾಲಯ ಚಳುವಳಿಯಲ್ಲಿ ಆಸಕ್ತರಾದ ಮಣೀಂದ್ರದೇವರಾಯ್ ೧೯೨೫ ರಲ್ಲಿ ಈ ಸಂಘವನ್ನು ಸ್ಥಾಪಿಸಿದರು. [೨೯] ಈ ಸಂಘ ಸಾರ್ವಜನಿಕ ಹಾಗೂ ಶಾಲಾ ಗ್ರಂಥಾಲಯಗಳಿಗೆ ಕೊಳ್ಳಲು ಯೋಗ್ಯವಾದ ಪುಸ್ತಕಗಳ ಪಟ್ಟಿಯನ್ನು ಪ್ರಕಟಿಸುತ್ತಿದೆ. ೧೯೩೫ ರಲ್ಲಿ ಈ ಸಂಘ ಬಂಗಾಳದ ನಾನಾ ಭಾಗಗಳಲ್ಲಿ ಗ್ರಂಥಾಲಯಗಳ ಸ್ಥಿತಿಯನ್ನು ಕುರಿತು ಸಮೀಕ್ಷೆ ನಡೆಸಿತು. ೧೯೪೨ ರಲ್ಲಿ ಬಂಗಾಳದ ಗ್ರಂಥಾಲಯಗಳ ವಿಳಾಸ ಪುಸ್ತಕವನ್ನು ಪ್ರಕಟಿಸಿತು. ಈ ಪುಸ್ತಕದ ಎರಡನೆಯ ಆವೃತ್ತಿಯ ತಯಾರಿಕೆ ನಡೆದಿದೆ. ಬಂಗಾಳ ನಿಯತಕಾಲಿಕೆಗಳ ಲೇಖನಸೂಚಿಯನ್ನು ಗ್ರಂಥಾಗಾರ ಎಂಬ ನಿಯತಾಲಿಕೆಯ ಮೂಲಕ ನಡೆಸುತ್ತಿದೆ. ಈ ಕೆಲಸ ಮುಂದುವರಿದರೆ ಬಂಗಾಳಿ ಮಾತನಾಡುವ ಪಂಡಿತರಿಗೆ ಮಹದುಪಕಾರ ಮಾಡಿದಂತೆ. [೩೦]

ಈ ಸಂಘಗಳ ಮಾಲೆಯಲ್ಲಿ ಮುಂದಿನದು ೧೯೩೩ ರಲ್ಲಿ ಅಣ್ಣಾಮಲೈ ವಿಶ್ವವಿದ್ಯಾನಿಲಯದ ಎಂ. ಓ. ಥಾಮಸ್ ಮತ್ತು ಕಲ್ಕತ್ತದ ಇಂಪೀರಿಯಲ್ ಲೈಬ್ರರಿಯ ಅಧಿಕಾರಿ ಖಾನ್ ಬಹಾದೂರ್ ಅಸಾದುಲ್ಲಾರವರ ಯತ್ನದಿಂದಾಗಿ ರೂಪಗೊಂಡ ಅಖಿಲ ಭಾರತ ಗ್ರಂಥಾಲಯ ಸಂಘ. ಮಾಡರ್ನ್ ಲೈಬ್ರರಿ ಪತ್ರಿಕೆಯ ೧೯೩೩ ರ ಜನೆವರಿ ಸಂಚಿಕೆಯಲ್ಲಿ ಥಾಮಸ್‌ರವರು ತೀಕ್ಷ್ಣವಾದ ಲೇಖನವೊಂದನ್ನು ಬರೆದು ಅದರಲ್ಲಿ ಬ್ರಿಟಿಷ್ ಗ್ರಂಥಾಲಯ ಸಂಘದ ಮುಖ್ಯ ಕಾರ್ಯಗಳನ್ನು ವಿವರಿಸಿ ಭಾರತ ಗ್ರಂಥಾಲಯ ಸಂಘ ಸ್ಥಾಪಿತವಾಗಬೇಕೆಂದು ಆಗ್ರಹ ಮಾಡಿದರು. ಅದರಲ್ಲಿ ಅವರು ಈ ರೀತಿ ಬರೆದರು : "ನಾವು ಒಗ್ಗಟ್ಟಾಗುವದು ನಮ್ಮ ಕ್ಷೇಮ ಸಾಧನೆಗಾಗಿ ಅಲ್ಲ, ಅದು ಪ್ರಾಸಂಗಿಕವಾಗಿರಬಹುದು. ನಮ್ಮ ಮುಖ್ಯ ಉದ್ದೇಶ ಗ್ರಂಥಾಲಯ ಚಳುವಳಿಯನ್ನು ಉತ್ತೇಜಿಸಿ ಮುಂದುವರಿಸುವುದು." [೩೧]

೧೯೨೨ ರ ಸಪ್ಟೆಂಬರ್ ೧೨ ರಂದು ಕಲ್ಕತ್ತಾದ ಏಷ್ಯಾಟಿಕ್ ಸೊಸೈಟಿ ಹಾಲಿನಲ್ಲಿ ಅಖಿಲ ಭಾರತ ಗ್ರಂಥಾಲಯ ಸಮ್ಮೇಳನ ಮೊದಲನೆಯ ಸಾರಿ ನೆರೆಯಿತು. ಆರಂಭ ಹಾಗೂ ಮುಕ್ತಾಯ ಸಭೆಗಳ ಅಧ್ಯಕ್ಷತೆಯನ್ನು ಥಾಮಸ್ ರವರು ವಹಿಸಿದ್ದರು. ವಿಷಯ ನಿಯಾಮಕ ಸಮಿತಿಯ ಸಭೆಗಳ ಅಧ್ಯಕ್ಷತೆ ವಹಿಸಿದ್ದವರು ಪಂಜಾಬ್ ವಿಶ್ವವಿದ್ಯಾಲಯದ ಉಪಕುಲಪತಿ ಡಾ. ಎ. ಸಿ ವುಲ್ನರ್.

ಥಾಮಸ್‌ರವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಗ್ರಂಥಾಲಯ ಸಂಘ ಯೋಚಿಸಿರುವ ಕಾರ್ಯಗಳ ಸ್ಥೂಲವಿವರಣೆಯನ್ನಿತ್ತರು. ಭಾರತದಲ್ಲಿ ಗ್ರಂಥಾಲಯ ಚಳುವಳಿಯನ್ನು ಪ್ರೋತ್ಸಾಹಿಸುವದು; ತರಬೇತಿ ಹೊಂದಿದ ಗ್ರಂಥಾಲಯಗಳಿಗೆ ಉತ್ತೇಜನ, ಗ್ರಂಥಾಲಯ ಶಾಸ್ತ್ರದಲ್ಲಿ ಸಂಶೋಧನೆ, ಗ್ರಂಥಾಲಯಗಳ ಸ್ಥಾನ ಮಾನಗಳ ಅಭಿವೃದ್ಧಿ ಇವುಗಳನ್ನು ಕುರಿತು ಸಲಹೆ ಮಾಡಿದರು. ಅಲ್ಲದೆ ಹಸ್ತಪ್ರತಿಗಳು, ಪುಸ್ತಕಗಳಿಗೆ ಗ್ರಂಥಸೂಚಿಗಳು, ಗ್ರಂಥಾಲಯಗಳಿಂದ ಪುಸ್ತಕಗಳನ್ನು ಎರವಲು ಪಡೆಯುವದು, ಸಂಯುಕ್ತ ಸೂಚಿಗಳ ರಚನೆ ಮುಂತಾದ ಸಹಕಾರಿ ಚಟುವಟಿಕೆಗಳನ್ನು ಆದಷ್ಟು ಹೆಚ್ಚಿಸುವದನ್ನೂ ಸೂಚಿಸಿದರು. [೩೨]

ಎರಡು ವರ್ಷಗಳ ನಂತರದ ಲಕ್ನೋದಲ್ಲಿ ಏಪ್ರಿಲ್ ೧೯ - ೨೧ ರಲ್ಲಿ ಎರಡನೆಯ ಅಖಿಲ ಭಾರತ ಗ್ರಂಥಾಲಯ ಸಮ್ಮೇಳನ ಡಾ. ಎ. ಸಿ. ವುಲ್ನರ್ ರವರ ಅಧ್ಯಕ್ಷತೆಯಲ್ಲಿ ಸೇರಿತು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಸಂಘದ ಕೆಲಸವನ್ನು ಒತ್ತಿ ಹೇಳಿ, ಸಾಂಪ್ರದಾಯಿಕ ಹಾಗೂ ಅಸಾಂಪ್ರದಾಯಿಕ ಶಿಕ್ಷಣದಲ್ಲಿ ಗ್ರಂಥಾಲಯಗಳ ಪಾತ್ರವನ್ನು ವಿವರಿಸಿದರು. ದೇಶದಲ್ಲಿ ಸಣ್ಣ ಗ್ರಂಥಾಲಯಗಳ ಜಾಲವೇ ಇರಬೇಕೆಂದೂ ರಾಜ್ಯದ ವಿಶ್ವವಿದ್ಯಾನಿಲಯಗಳು ಬೆಳೆಯಬೇಕೆಂದೂ ದೇಶದ ರಾಜಧಾನಿಯಲ್ಲಿ ಅಖಿಲ ಭಾರತಕ್ಕೆ ರಾಷ್ಟ್ರೀಯ ಗ್ರಂಥಾಲಯವಿರಬೇಕೆಂದೂ ಹೇಳಿ ಇವುಗಳು ಗ್ರಂಥಾಲಯ ಚಳವಳಿಯ ಉಗಮ ಹಾಗೂ ಸ್ಫೂರ್ತಿ ಸ್ಥಾನಗಳಾಗಬೇಕೆಂದೂ ಪ್ರತಿ ರಾಜ್ಯದಲ್ಲೂ ಅಗತ್ಯವೆಂದೂ ಒತ್ತಿ ಹೇಳಿ ಗ್ರಂಥಾಲಯಗಳ ನಡುವಣ ಸಹಕಾರವನ್ನು ಹಾರೈಸಿದರು. [೩೩]

ಇದುವರೆಗೂ ಈ ರೀತಿಯ ೧೮ ಸಮ್ಮೇಳನಗಳು ನಡೆದಿವೆ. ಅಂತಹ ಸಮ್ಮೇಳನ ೧೯೬೮ ರಲ್ಲಿ ತಿರುಪತಿಯಲ್ಲಿ ನಡೆಯಿತು. ಈ ಸಮ್ಮೇಳನಗಳು ದೇಶದ ಎಲ್ಲಾ ಗ್ರಂಥಾಲಯಗಳು ಒಂದೆಡೆ ಸೇರಿ ತಮ್ಮ ಸಮಸ್ಯೆಗಳನ್ನು ಚರ್ಚಿಸಲು ಪರಿಹಾರವನ್ನು ಹುಡುಕಲೂ ಅವಕಾಶವನ್ನು ಮಾಡಿಕೊಡುತ್ತವೆಯಾದರೂ, ಸಂಘ ಬಹಳ ವರ್ಷದಿಂದ ಕಾರ್ಯವಿಮುಖವಾಗಿದ್ದು ಸರಿಯಾದ ಮಾರ್ಗದರ್ಶನ ತೋರದೆ, ಆಲಸ್ಯದಿಂದ ಇದೆ. ಆಗಾಗ್ಗೆ ನಿಯತಕಾಲಿಕೆಯನ್ನು ಪ್ರಕಟಿಸುತ್ತದೆ. ಹಿಂದಿಯಲ್ಲಿ ಒಂದು ಇಂಗ್ಲಿಷ್‌ನಲ್ಲಿ ಒಂದು ಪುಸ್ತಕ ಪ್ರಕಟಿಸಿದೆ. ಇವು ರಂಗನಾಥನ್‌ರವರೇ ಬರೆದವು.

ಅಖಿಲ ಭಾರತ ಗ್ರಂಥಾಲಯ ಸಂಘ ಸ್ಥಾಪನೆಯಾದ ೨೭ ವರ್ಷಗಳ ನಂತರ ಭಾರತ ಸರಕಾರ ನೇಮಿಸಿದ ಗ್ರಂಥಾಲಯ ಸಲಹಾ ಸಮಿತಿ ಈ ರೀತಿ ಹೇಳಿದೆ.

" ಹೆಚ್ಚು ಕಡಿಮೆ ಗ್ರಂಥಾಲಯ ಸಂಸ್ಥೆಗಳು ರಕ್ತಹೀನವಾಗಿ ಬಿಳಚಿಕೊಂಡಿದೆ. ದೇಶದಲ್ಲಿ ಗ್ರಂಥಾಲಯ ಚಳವಳಿ ಸರಿಯಾಗಿ ಬೆಳೆಯದೆ ಇರುವದು ಇದಕ್ಕೆ ಕಾರಣ. ಹೌದು, ಈ ಪರಿಸ್ಥಿತಿ ಗ್ರಂಥಾಲಯ ಸಂಘದ ಆಲಸ್ಯ ಪ್ರವೃತ್ತಿಯ ಫಲವೂ ಹೌದು. ಗ್ರಂಥಾಲಯ ಚಳವಳಿಗೆ ಶಕ್ತಿಯುತವಾದ ಗ್ರಂಥಾಲಯ ಸಂಸ್ಥೆಗಳ ನೆರವು ಮುಖ್ಯ. "

ಗ್ರಂಥಗಳು ನಾಡಿನ ಸಾಂಸ್ಕೃತಿಕ ರಾಯಭಾರಿಗಳು. ಒಂದು ದೇಶದ ಕಲೆ, ಇತಿಹಾಸ, ಸಂಸ್ಕೃತಿ, ವೈಜ್ಞಾನಿಕ ಬೆಳವಣಿಗೆ, ಶೈಕ್ಷಣಿಕ ಪ್ರಗತಿ ಇತ್ಯಾದಿಗಳನ್ನು ಆ ನಾಡಿನಲ್ಲಿ ಪ್ರಕಟವಾಗುವ ಕೃತಿಗಳ ಆಧಾರದ ಮೇಲೆ ಗುರುತಿಸಬಹುದು. ಜಗತ್ತಿನಲ್ಲಿ ಪ್ರತಿವರ್ಷ ಇಪ್ಪತ್ತೆರಡು ಲಕ್ಷಕ್ಕೂ ಹೆಚ್ಚು ಪುಸ್ತಕಗಳು ಪ್ರಕಟವಾಗುತ್ತವೆ. ಭಾರತ ದೇಶ ಒಂದರಲ್ಲಿಯೇ ಸುಮಾರು ಹದಿನೈದು ಸಾವಿರಕ್ಕಿಂತಲೂ ಹೆಚ್ಚಿಗೆ ಗ್ರಂಥಗಳು ಪ್ರಕಟವಾಗುತ್ತಿವೆ. ಈ ಎಲ್ಲಾ ಗ್ರಂಥಗಳನ್ನು ಯಾವುದೇ ಒಂದು ಗ್ರಂಥಾಲಯ ಹೊಂದುವದು ಕಷ್ಟಸಾಧ್ಯದ ಕೆಲಸ. ಹಾಗೆಯೇ ತಮಗೆ ಆಸಕ್ತಿ ಇರುವ ವಿಷಯದ ಬಗೆಗೆ ಪ್ರಕಟವಾಗುವ ಕೃತಿಗಳ ವಿವರಗಳನ್ನು ತಿಳಿಯುವುದು ಕಷ್ಟದ ಕೆಲಸ. ಇಂತಹ ಸಂದರ್ಭದಲ್ಲಿ ಗ್ರಂಥಸೂಚಿಗಳು ನೆರವಿಗೆ ಬರುತ್ತವೆ. ಗ್ರಂಥಸೂಚಿಯೆಂದರೆ, " ಗ್ರಂಥದ ಹೆಸರು, ಕರ್ತೃ, ಪ್ರಕಾಶನದ ಸ್ಥಳ, ಪ್ರಕಾಶನ ಹೆಸರು. ಪ್ರಕಾಶನ ವರ್ಷ, ಬೆಲೆ, ಪುಟಸಂಖ್ಯೆ, ಅಳತೆ ಇತ್ಯಾದಿ ವಿವರಗಳನ್ನು ಯಾವುದಾದರೊಂದು ಕ್ರಮಬದ್ಧ ಜೋಡಣೆಯಲ್ಲಿ ನೀಡುವ ಗ್ರಂಥ " ಈ ಗ್ರಂಥಸೂಚಿಗಳು ಯಾವುದಾದರೂ ವ್ಯಕ್ತಿ, ಲೇಖಕ, ವಿಷಯ, ಅಥವಾ ಪ್ರದೇಶ ಇತ್ಯಾದಿಗಳಿಗೆ ಸೀಮಿತಗೊಂಡಿರಬಹುದು. ಹೀಗೆ ಗ್ರಂಥಸೂಚಿಗಳು ನೀಡುವ ಮಾಹಿತಿಯ ಆಧಾರದ ಮೇಲೆ ಅವುಗಳನ್ನು ವೈಯಕ್ತಿಕ, ಸಾಮಾನ್ಯ, ವಿಷಯವಾರು ಇತ್ಯಾದಿ ಬಗೆಗಳಾಗಿ ವಿಂಗಡಿಸಬಹುದು.

" ಯಾವುದೇ ಒಂದು ದೇಶದಲ್ಲಿ ಪ್ರಕಟವಾಗುವ ಎಲ್ಲಾ ಬಗೆಯ ಗ್ರಂಥಗಳ ವಿವರಗಳನ್ನು ಒದಗಿಸುವ ಗ್ರಂಥಸೂಚಿಗಳಿಗೆ ರಾಷ್ಟ್ರೀಯ ಗ್ರಂಥಸೂಚಿಗಳೆಂದು ಹೆಸರು " ಈ ಬಗೆಯ ಗ್ರಂಥಸೂಚಿಗಳು ಕೇವಲ ಪುಸ್ತಕಗಳನ್ನಲ್ಲದೆ ನಕಾಶೆ, ಭೂಪಟ, ಧ್ವನಿಸುರುಳಿ (Tapes), ದೃಕ್ ಶ್ರವಣ ಮಾಧ್ಯಮಗಳು ಇತ್ಯಾದಿ ಮಾಹಿತಿ ಮೂಲಗಳ (Information Sources) ವಿವರಗಳನ್ನು ಒಳಗೊಳ್ಳಬಹುದು.

ಪಾಂಡಿತ್ಯಪೂರ್ಣ ಯತ್ನದ ಫಲವಾಗಿ ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಇತ್ತೀಚೆಗೆ ಮಾತ್ರ ಬೆಳೆದಿದೆ. ಭಾರತ ಸ್ವತಂತ್ರವಾಗುವ ಮುನ್ನ ಹಲವೇ ಗ್ರಂಥಸೂಚಿ ಸಾಧನಗಳಿದ್ದುದು ಗ್ರಂಥಸೂಚಿಗಳ ಪ್ರಮಾಣ ವರ್ಷಗಳನ್ನು ನೋಡಿದರೆ ತಿಳಿಯುತ್ತದೆ. ಸಾಧಾರಣ ಮಾತುಗಳಲ್ಲಿ ಹೇಳುವದಾದರೆ ಗ್ರಂಥಸೂಚಿಗಳೆಂದು ಕರೆಯುವ ಈ ಪುಸ್ತಕಗಳು ಪುಸ್ತಕಗಳ ಪಟ್ಟಿಗಳಾಗಿದ್ದು ಗ್ರಂಥಸೂಚಿ ಸಾಧನಗಳಾಗಿ ಹೆಚ್ಚು ಉಪಯೋಗಾರ್ಹವಾಗಿರಲಿಲ್ಲ. ಅವು ಸಮಗ್ರವಾಗಿಲ್ಲ. ಇತ್ತೀಚಿನ ಮಾಹಿತಿಯನ್ನು ಪಡೆದಿಲ್ಲ. ಆದರೆ ಅವು ಪೂರ್ವ ವ್ಯಾಪ್ತಿಯುಳ್ಳ ಗ್ರಂಥಸೂಚಿಗಳ ರಚನೆಗೆ ಮುಖ್ಯ ಆಧಾರ ಸಾಮಗ್ರಿಗಳಾಗಿರುತ್ತವೆ. ಗ್ರಂಥಸೂಚಿಗಳ ರಚನೆಗೆ ಮುಖ್ಯ ಆಧಾರ ಸಾಮಗ್ರಿಗಳಾಗಿರುತ್ತವೆ. ಗ್ರಂಥಸೂಚಿಗಳ ವ್ಯವಸ್ಥೆ ಹಾಗೂ ಹತೋಟಿಗೆ ಸರಕಾರ ನಡೆಸಿದ ಪ್ರಥಮ ವ್ಯವಸ್ಥಿತ ಯತ್ನವೆಂದರೆ ೧೮೬೭ ರಲ್ಲಿ ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಆರಂಭವಾಯಿತೆನ್ನಬಹುದು.

## ವ್ಯಾಖ್ಯೆಗಳು

ಪ್ರಖ್ಯಾತ ಸಂಶೋಧಕರಾದ ಕಲಬುರ್ಗಿ ಅವರ ಅಭಿಪ್ರಾಯದಂತೆ: "ಒಂದು ಗ್ರಂಥದ ಸರ್ವಸಮಗ್ರ ಪರಿಚಯವನ್ನು ವಿವರಿಸುವದು ಸೂಚೀಕರಣ. ಈ ವಿವರಗಳನ್ನೊಳಗೊಂಡುದೆ ಸೂಚಿ."[೩೫] ಯಾವುದೇ ಭಾಷೆಯಲ್ಲಿ ರಚಿತವಾಗಿರುವ ಎಲ್ಲಾ ಬಗೆಯ ಬರವಣಿಗೆಗಳನ್ನು ಕುರಿತ ಎಲ್ಲ ಅಂಶಗಳ ಶಾಸ್ತ್ರೀಯ ನಿರೂಪಣೆಯೇ ಗ್ರಂಥಸೂಚಿ. ಆ ನಿರೂಪಣೆ ಲೇಖನ, ಕೃತಿ ಕಾಗದ, ಶಾಹಿ, ಅಲಂಕಾರ, ಅಚ್ಚುಮೊಳೆಯ ಮಾದರಿ, ರಟ್ಟಿನ ಬಗೆ ಈ ಯಾವುದನ್ನೇ ಕುರಿತದ್ದಾಗಿರಬಹುದು. ಕೊನೆಗೆ ಮುದ್ರಕರು ಉಪಯೋಗಿಸುವ ಸಂಕೇತಗಳು, ಕಾಗದ ತಯಾರಕರು ಹಾಕುವ ಜಲಚಿಹ್ನೆ (ವಾಟರ್ ಮಾರ್ಕ್) ಕೂಡ ಆಗಬಹುದು. ಒಂದು ಕೃತಿಯ ಪ್ರಕಟಣ ವರ್ಷ, ಸ್ಥಳ, ಆವೃತ್ತಿ, ಪುಟಸಂಖ್ಯೆ, ಆಕಾರ ಇತ್ಯಾದಿ ಅಂಶಗಳು ಆಗಬಹುದು. ಸಂಶೋಧಕನಿಗೆ ಒಂದಲ್ಲ ಒಂದು ರೀತಿಯಲ್ಲಿ ಅಮೂಲ್ಯವೆನಿಸುವ ಈ ಅಂಶಗಳನ್ನು ಸಂಗ್ರಹಿಸಿ ಶಾಸ್ತ್ರೀಯವಾಗಿ ವಿಭಾಗಿಸಿ ವ್ಯವಸ್ಥೆಗೊಳಿಸಿ ಪ್ರಕಟಗೊಳಿಸುತ್ತದೆ. ಗ್ರಂಥಸೂಚಿ ಉದ್ದೇಶಕ್ಕೆ ತಕ್ಕಂತೆ ಒಂದೋ ಹಲವೋ ಅಂಶಗಳನ್ನು ಒಳಗೊಂಡ ಗ್ರಂಥಸೂಚಿಯ ಬೇರೆ ಬೇರೆ ಬಗೆಗಳಾಗುತ್ತವೆ."[೩೬]

ಗ್ರಂಥಸೂಚಿ ಎಂದರೆ "ಯಾವುದೇ ವ್ಯಕ್ತಿ ಅಥವಾ ವಿಷಯಗಳ ಬಗ್ಗೆ ಪ್ರಕಟವಾಗಿರುವ ಗ್ರಂಥಗಳ ಪಟ್ಟಿ" ಎಂದು ಸ್ಥೂಲವಾಗಿ ಹೇಳಬಹುದು. ಯಾವುದೇ ವಿಷಯವನ್ನು ತಿಳಿದುಕೊಳ್ಳಲು ಒಂದಕ್ಕಿಂತ ಹೆಚ್ಚು ಗ್ರಂಥಗಳ ಅಧ್ಯಯನ ಬಹಳಷ್ಟು ಸಹಕಾರಿ. ಲೇಖಕನೂ ಸಹ ಅನೇಕ ಬಾರಿ ಹಲವಾರು ಪುಸ್ತಕಗಳನ್ನು ಪರಾಮರ್ಶಿಸಿ ಕೃತಿ ರಚನೆ ಮಾಡಿರುತ್ತಾನೆ. ಪುಸ್ತಕದ ಕೊನೆಯಲ್ಲಿ ಆ ಪುಸ್ತಕ ಯಾವ ವಿಷಯದ ಬಗೆಗೆ ಇದೆಯೋ ಆ ವಿಷಯದ ಅಧ್ಯಯನಕ್ಕೆ ಪೂರಕವಾಗುವ ಗ್ರಂಥಗಳ ಪಟ್ಟಿಯನ್ನು ನೀಡಿದಲ್ಲಿ ಓದುಗನು ಸುಲಭವಾಗಿ ಬೇರೆ ಬೇರೆ ಗ್ರಂಥಗಳ ಬಗ್ಗೆ ತಿಳಿದುಕೊಳ್ಳಲು ಮತ್ತು ಆ ಗ್ರಂಥಗಳನ್ನು ಪರಾಮರ್ಶಿಸಲು ಅನುಕೂಲವಾಗುತ್ತದೆ.

**ಸೂಚಿ:** ಸೂಚಿ ಎಂದರೆ "ನಿರ್ದಿಷ್ಟ ಗ್ರಂಥದಲ್ಲಿರುವ ವ್ಯಕ್ತಿ, ವಿಷಯ ಅಥವಾ ಪಾರಿಭಾಷಿಕ ಪದಗಳು ಉಲ್ಲೇಖವಾಗಿರುವ ಪುಟಗಳ ಸಂಖ್ಯೆಯನ್ನು ನಿರ್ದೇಶಿಸುವ ಆಲೇಖ (Entry) ಗಳ ಪಟ್ಟಿ"[೩೭] ಸಾಮಾನ್ಯವಾಗಿ ಇದು ಆಕಾರಾದಿಯಲ್ಲಿ ಇರುತ್ತದೆ. ಈ ಸೂಚಿಗಳ ಸಹಾಯದಿಂದ ಯಾವುದೇ ವ್ಯಕ್ತಿ ಅಥವಾ ವಿಷಯದ ವಿಚಾರ ಆ ಗ್ರಂಥದ ಯಾವ ಪುಟಗಳಲ್ಲಿ ಬಂದಿದೆ ಎನ್ನುವದನ್ನು ಬಹಳ ಸುಲಬವಾಗಿ ಬಹಳ ಕಡಿಮೆ ಸಮಯದಲ್ಲಿ ಗುರುತಿಸಬಹುದು. ಇದು ವೇಗದ ಅಧ್ಯಯನಕ್ಕೆ ಹಾಗೂ ಪರಾಮರ್ಶನೆಗೆ ಸಹಕಾರಿಯಾಗುತ್ತದೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಪ್ರಕಾಶಕರು, ತಮ್ಮ ಗ್ರಂಥಗಳಲ್ಲಿ ಗ್ರಂಥಕ್ಕೆ ಸಂಬಂಧಿಸಿದ ಎಲ್ಲಾ ವಿವರಗಳನ್ನು ನೀಡಿದರೆ ಓದುಗರಿಗೆ ಹಾಗೂ ಗ್ರಂಥಪಾಲಕರಿಗೆ, ಸಂಶೋಧಕರಿಗೆ, ಹೆಚ್ಚಿನ ಸಹಾಯ ಮಾಡಿದಂತಾಗುತ್ತದೆ. **ಶೀರ್ಷಿಕೆ ಪುಟದ** ಹಿಂಭಾಗದಲ್ಲಿ (back of the title page) ವಿವರ ಇರುತ್ತದೆ.

ಉದಾ : ಮೆಹತಾ, ಹಂಸ ಸಂಜೀವ ರಾಜ, ೧೯೮೬ – ಅಯೋಧ್ಯೆಯ ರಾಜಕುಮಾರ, ಇಂಗ್ಲೀಷಿನಿಂದ ಅನುವಾದ ಎಲ್. ಎಸ್. ಶೇಷಗಿರಿರಾವ್, ನವದೆಹಲಿ, ನ್ಯಾಶನಲ್ ಬುಕ್ ಟ್ರಸ್ಟ್, ೧೯೭೬, ೯೪ ಪುಟಗಳು, ರೂ. ೧.೫೦. ಇಂಗ್ಲೀಷ್ ಶೀರ್ಷಿಕೆ ' The prince of Ayodhya '

ಗ್ರಂಥಾಲಯದಲ್ಲಿರುವ ವಿವಿಧ ಗ್ರಂಥಗಳ ಬಗ್ಗೆ ಓದುಗರಿಗೆ ಸಂಕ್ಷಿಪ್ತ ಮಾಹಿತಿಗಳನ್ನು ಕ್ರಮಬದ್ಧವಾಗಿ ಒಂದೆಡೆ ಕಲೆ ಹಾಕುವ ವಿಧಾನ. (ಕ್ಯಾಟಲಾಗಿಂಗ್) ಹೀಗೆ ರೂಪುಗೊಂಡ ಗ್ರಂಥವಿವರಣಾ ಪಟ್ಟಿಗಳೇ ಗ್ರಂಥಸೂಚಿಗಳು. ಉತ್ತಮ ಸೂಚಿ ಸಾಹಿತ್ಯದ ನಿರ್ಮಾಣ ಎಲ್ಲ ಆಧುನಿಕ ಗ್ರಂಥಾಲಯಗಳ ಮುಖ್ಯ ಕರ್ತವ್ಯಗಳಲ್ಲೊಂದಾಗಿದೆ. ಇದು ಗ್ರಂಥಾಲಯ ವಿಜ್ಞಾನದ ಮುಖ್ಯ ಭಾಗವೂ ಹೌದು. ಗ್ರಂಥಸೂಚಿಗಳು ಕಾರ್ಡುಗಳ ರೂಪದಲ್ಲಿರಬಹುದು. ಇಲ್ಲವೇ ಪುಸ್ತಕ ರೂಪದಲ್ಲಿರಬಹುದು. ಈ ರೂಪು ಯಾವುದೇ ಆದರೂ ಗ್ರಂಥಸೂಚಿಯಲ್ಲಿ ಸಾಮಾನ್ಯವಾಗಿ ಈ ಎಲ್ಲ ವಿವರಗಳೂ ಇರಬೇಕಾಗುತ್ತದೆ.

೧. ಲೇಖಕನ ಪೂರ್ಣ ಹೆಸರು;

೨. ಗ್ರಂಥದ ಪೂರ್ಣ ಶೀರ್ಷಿಕೆ;

೩. ಪ್ರಕಾಶಕರ ವಿಳಾಸ;

೪. ಪ್ರಕಾಶನ ವರ್ಷ;

೫. ಗ್ರಂಥದ ಆವೃತ್ತಿ;

ಪುಟ ಸಂಖ್ಯೆಗಳು, ಬೆಲೆ, ಗಾತ್ರ, ಮಾಲೆ (seroes) ಇತ್ಯಾದಿ;

೬. ಭಾಷಾಂತರಗೊಂಡದ್ದೊ ಇಲ್ಲವೇ ಸಂಪಾದಿತವಾದದ್ದೋ ಆಗಿದ್ದರೆ ಭಾಷಾಂತರಕಾರರ ಇಲ್ಲವೆ ಸಂಪಾದಕರ ಪೂರ್ಣ ಹೆಸರು;

೭. ಗ್ರಂಥಕ್ಕೆ ಟೀಕೆ ಬರೆದವರ ಹೆಸರು;

೮. ಆ ವಿಷಯದ ಮೇಲೆ ಲಭ್ಯವಿರಬಹುದಾದ ಇತರ ಗ್ರಂಥಗಳು ಹಾಗೂ ಲೇಖನಗಳು;

೯. ವೈಯಕ್ತಿಕ ಲೇಖಕರ ಗ್ರಂಥಗಳು, ಲೇಖನಗಳು, ಮತ್ತು ಇಂಥ ಲೇಖಕರನ್ನು ಕುರಿತು ಇತರರು ಬರೆದ ಗ್ರಂಥಗಳು, ಲೇಖನಗಳು.

ಕೆಲವು ಸೂಚಿಯಲ್ಲಿ ಇಷ್ಟು ವಿವರಗಳು ದೊರೆಯದಿದ್ದರೂ ಮೊದಲು ಐದಾರು ಅಂಶಗಳು ಇದ್ದೇ ಇರುತ್ತವೆ.

ಸೂಚಿ ಎಂಬ ಪದವು ಆಂಗ್ಲ ಭಾಷೆಯ catalogue ಎಂಬುದರ ಪರ್ಯಾಯ ನಾಮ. ಈ catalogue ಶಬ್ದದ ಮೂಲ ಗ್ರೀಕ್ ಭಾಷೆಯ ಕೂಡು ನುಡಿಯಾದ Katalogos ದಲ್ಲಿದೆ. Kata ಇದು ಇಂದ (By) ಅಂತೆ (According to) ಎಂಬ ಪ್ರತ್ಯಯ ಸೂಚಿಯಾಗಿದೆ. Logos ಇದಕ್ಕೆ ' ಶಬ್ದ ' ' ಹೊಂದಾಣಿಕೆ ', ' ತರ್ಕಯುಕ್ತ ' ಹೀಗೆ ಅನೇಕಾನೇಕ ಅರ್ಥಗಳಿರುವದರಿಂದ ನಿಶ್ಚಿತಾರ್ಥ ನಿರ್ಣಯ ಕಷ್ಟಸಾಧ್ಯವಾಗಿದೆ. ಆದರೂ ವಸ್ತುನಾಮಗಳನ್ನು ವರ್ಣಾನುಕ್ರಮ, ಶಬ್ದಾನುಕ್ರಮದಿಂದ ತರ್ಕಬದ್ಧವಾಗಿ ಹೊಂದಿಸಿದುದೇ ' ಸೂಚಿ '; ಈ ಹೊಂದಿಸುವ ಕ್ರಮವೇ ' ಸೂಚೀಕರಣ ' ಎಂದು ವ್ಯಾಖ್ಯೆ ಮಾಡಬಹುದು. Katalogo ಅಥವಾ catalogue ಶಬ್ದವನ್ನೇ ಹಿಂಜಿ ನೋಡುವುದಕ್ಕಿಂತ ಸಿದ್ಧಪಡಿಸಿದ ಸೂಚಿಯನ್ನೇ ದೃಷ್ಟಿಯಲ್ಲಿಟ್ಟಕೊಂಡು ನೋಡುವುದರಿಂದ ಅರ್ಥ ನಿರ್ಣಯ ಮಾಡುವುದು ಹೆಚ್ಚು ಸೂಕ್ತವೆಂದು ವಿದ್ವಾಂಸರ ಅಭಿಮತ.

ಈ ಎಲ್ಲ ವಿಚಾರಗಳಿಂದ ತಿಳಿದುಬರುವುದೇನೆಂದರೆ ' ಸೂಚಿ ' ಎಂದರೆ ವಸ್ತುಗಳ ನಾಮ ಪಟ್ಟಿ ಅಥವಾ ಯಾದಿ (list) ಎಂದರ್ಥವಾಗುತ್ತದೆ. ಇದೇ ವ್ಯಾಖ್ಯೆಯನ್ನು ಗ್ರಂಥಗಳ ಯಾದಿಗೆ ಅನ್ವಯಿಸಿದಲ್ಲಿ ಅದು ' ಗ್ರಂಥಸೂಚಿ '[೪೦] ಎಂದಾಗುತ್ತದೆ.

ಗ್ರಂಥಸೂಚಿ ಸಿದ್ಧವಾದುದು ವಾಚಕರ, ಪಂಡಿತರ ಸೌಕರ್ಯಕ್ಕಾಗಿ, ಗ್ರಂಥ ಭಂಡಾರಿಗರ ಸಂದರ್ಭಸೇವೆಯ ಸೌಲಭ್ಯಕ್ಕಾಗಿ, ಸಂಶೋಧಕರ ಸಹಾಯಕ್ಕಾಗಿ ವೇಳೆಯ ಉಳಿತಾಯವಾಗುವದು. ಓದುಗನ ಶಕ್ತಿ ಉಳಿತಾಯವಾಗುತ್ತದೆ. ಶಕ್ತಿಯ ಅಪವ್ಯಯ ತಪ್ಪಿಸುತ್ತದೆ.

ಗ್ರಂಥಾಲಯದ ಪಂಚಸೂತ್ರಗಳಲ್ಲಿ ಮೊದಲನೆಯದಾದ " ಗ್ರಂಥಗಳು ಉಪಯೋಗಕ್ಕಾಗಿವೆ " (Books are for use) ಎಂಬ ಸೂತ್ರವನ್ನು ಜ್ಞಾಪಕದಲ್ಲಿಟ್ಟುಕೊಂಡು ಗ್ರಂಥಾಲಯ ಸಿಬ್ಬಂದಿ ಕಾರ್ಯೋನ್ಮುಖವಾಗಬೇಕಾಗುತ್ತದೆ. ಗ್ರಂಥಗಳು ಉಪಯೋಗವಾಗಬೇಕಾದರೆ ದಕ್ಷ ಆಡಳಿತ, ಸರಿಯಾದ ವರ್ಗೀಕರಣ ಮತ್ತು ಸೂಚೀಕರಣದ ಆವಶ್ಯಕತೆಯಿದೆ. ಸೂಚೀಕರಣವು ಗ್ರಂಥಾಲಯದ ಗ್ರಂಥರಾಶಿಯನ್ನು ತೆರೆದು ತೋರಿಸುವ ಉತ್ತಮ ಸಾಧನ. ಒಂದು ಗ್ರಂಥಾಲಯದ ಮಹತ್ವ ಅದು ಸುಂದರವಾದ ಕಟ್ಟಡ, ಹೇರಳವಾದ ಗ್ರಂಥ ಸಂಗ್ರಹ, ಹೆಚ್ಚಿನ ಸಿಬ್ಬಂದಿ ಮತ್ತು ಹೊರನೋಟದ ಸೌಂದರ್ಯದಿಂದಲ್ಲ. ಅದರಲ್ಲಿ ಗ್ರಂಥರಾಶಿ ಓದುಗರಿಗೆ ಹೇಗೆ ಉಪಯೋಗವಾಗುತ್ತದೆ. ಎಂಬುದರಿಂದ ನಿರ್ಧರಿಸಲ್ಪಡುತ್ತದೆ. ಗ್ರಂಥಗಳು ಉಪಯೋಗವಾಗದಿದ್ದಲ್ಲಿ ವೇಳೆ, ಶ್ರಮ, ಹಣ ಮತ್ತು ಸಿಬ್ಬಂದಿಯ ಶ್ರಮ ವ್ಯರ್ಥವೆಂದು ಹೇಳಬಹುದು.

' ಗ್ರಂಥಸೂಚಿ '[೪೧] ಎಂದರೆ ' ಒಂದು ಗ್ರಂಥಾಲಯದಲ್ಲಿರುವ ಪುಸ್ತಕಗಳ ಯಾದಿ ' ಎನ್ನುವದಾದರೆ : ಅದರ ವಿವರಗಳನ್ನು ಈ ರೀತಿಯಾಗಿ ವಿವರಿಸಬಹುದು.

i) ಯಾದಿ (list); ii) ಗ್ರಂಥಗಳು (Documents); and iii) ಹಿಡುವಳಿಗಳು (Holdings of library / Group of Libraries).

ಯಾದಿ (list) ಏನನ್ನು ಸೂಚಿಸುತ್ತದೆ ಎನ್ನುವದನ್ನು ನಿರ್ದಿಷ್ಟವಾಗಿ ಹೇಳುವದಿಲ್ಲ. ಇದು ಸಾಮಾನುಗಳ ಪಟ್ಟಿಯಾಗಿರಬಹುದು. ಉದಾ : ಕಿರಾಣಿ ಸಾಮಾನುಗಳ ಪಟ್ಟಿ; ಪುಸ್ತಕಗಳ ಪಟ್ಟಿಯಾಗಿರಬಹುದು. ಒಂದು ವಿಧದ ಯಾದಿಯನ್ನು ಇದು ನಿರ್ದಿಷ್ಟಪಡಿಸಬಹುದು ಗುರುತರವಾಗಿ ಪುಸ್ತಕಗಳೇ ಆಗಿರುವದಿಲ್ಲ. ಆದ್ದರಿಂದ ಯಾದಿ (List) ಯನ್ನು ಪುಸ್ತಕಗಳ ಪಟ್ಟಿಯೆನ್ನುವುದಾದರೆ ಸಾಧಾರಣವಾಗಿ ಒಂದು ಪಟ್ಟಿ, (List) ಯಾದಿಯಾಗಿರುತ್ತದೆ. ನಿರ್ದಿಷ್ಟವಾಗಿ ಹೇಳಿದಂತಾಗುವುದಿಲ್ಲ. ಮುದ್ರಿತ ಬರವಣಿಗೆ ಹೊಂದಿದ ಕಾಗದಪತ್ರ, ದಸ್ತಾವೇಜು, ಮಾಹಿತಿ ತುಂಬಿದ ತುಣುಕು (Document) ಇತ್ಯಾದಿಯಾಗಿ ವಿವರಣೆ ನೀಡಬಹುದು. ನಿರ್ದಿಷ್ಟವಾಗಿ ಒಂದು ವಸ್ತುವನ್ನು ಹೇಳದೆ ಮುದ್ರಿತ ಮಾಹಿತಿಯಿಂದ ಹಿಡಿದು, ಪುಸ್ತಕ, ನಕಾಶೆ, ಭಾವಚಿತ್ರ, ಗ್ರಾಮೋಫೋನ್, ಪ್ರತಿಗಳಾಗಿರಬಹುದು. ಯಾವುದು ಕಣ್ಣಿಗೆ ಕಾಣಲ್ಪಡುತ್ತದೆಯೋ; ಸ್ಪರ್ಶ ಅನುಭವವನ್ನು ನೀಡುತ್ತದೆಯೋ; ಸ್ಥಳ (Space) ವನ್ನು ಆಕ್ರಮಿಸಿರುತ್ತದೆಯೋ; ಎಲ್ಲಾ ಕಾಲದಲ್ಲೂ ಸಂಗ್ರಹಿಸಿಡಬಹುದಾದ ವಸ್ತು; ಇದು ಮಾಹಿತಿಯ ವಿವರವನ್ನು ನೀಡುತ್ತದೆ. ಸಂಗ್ರಹಣೆಗಾಗಿ ಸ್ಥಳವನ್ನು ಬೇಡುತ್ತದೆ. ಪುಸ್ತಕದಿಂದ ಹಿಡಿದು ಸೂಜಿ ಮೊನೆಯವರೆಗೂ, ಜಗತ್ತಿನಲ್ಲಿ ಕಣ್ಣಿಗೆ ಕಾಣಸಿಗುವಂತಹ ವಸ್ತುವನ್ನು ಹಿಡಿದಿಟ್ಟುಕೊಳ್ಳುವ ಸಾಧನ ಎಂದು ಅರ್ಥೈಸಿಕೊಳ್ಳಬಹುದು ಇದು ಮಾಹಿತಿ ! ಮಾಹಿತಿ !! ಮಾಹಿತಿ !!! ಮಾಹಿತಿಯಲ್ಲಿ ಮಾಂತ್ರಿಕತೆ ಇದೆ. ಅದನ್ನು ಸಂಗ್ರಹಿಸುವುದು ಭೂತ, ಭವಿಷ್ಯವನ್ನು ಬಿಂಬಿಸುವ ಕಣಜವೆಂದು ಮುದ್ರಿತ ಪ್ರತಿ (Document) ಗೆ ವಿಶಾಲ ಅರ್ಥವನ್ನು ಕಲ್ಪಿಸಲು ಸಾಧ್ಯವಾಗಿದೆ. ಹೀಗೆ ಗ್ರಂಥಾಲಯ ವ್ಯಾಪ್ತಿ ಬಹಳ ದೊಡ್ಡದು. ಹಿಡುವಳಿ (Land holding) ಅದರಂತೆ Library holdings ಗ್ರಂಥಾಲಯದಲ್ಲಿರುವ ಸಮಸ್ತ ಆಸ್ತಿಯನ್ನು ಒಳಗೊಂಡಿರತಕ್ಕಂತಹುದು.

**ಮೇಲಿನ ವಿವರಗಳಿಂದ ಸೂಚೀಕರಣ ಎನ್ನುವುದು :**

' ಸೂಚಿ ' (ನಾ) ನಾಮಪದವಾಗಿ ಉಪಯೋಗಿಸಿದರೆ ' ಗ್ರಂಥದಲ್ಲಿ ಕೊಡುವ ಅಕಾರಾದಿ ಪಟ್ಟಿ ', (an Index); ' ಸೂಚಿಸು ', ಎನ್ನುವ ಕ್ರಿಯೆಯನ್ನು ನಾವು ಹೀಗೂ ಅರ್ಥೈಸಬಹುದು:

೧. ತಿಳಿಸು; ಹೇಳು To inform, To notify; To Indicate, To Intimate; To hint; To suggest

೨. ಮಾರ್ಗದರ್ಶನ ಮಾಡು; ನಿರ್ದೇಶಿಸು To guide; To direct; To instruct ಮುಂತಾಗಿ ಹೊಳವುಗಳನ್ನು ನೀಡುತ್ತದೆ.[೪೨]

ಸೂಚಿ[೪೩] ಎನ್ನುವುದು ವಿವರಣ ಪಟ್ಟಿ discriptive List, ಯಾದಿ, ಪುಸ್ತಕದ ಪಟ್ಟಿ, ವಿಷಯ ಪಟ್ಟಿ, ನಾಮಾವಳಿ ಎನ್ನುವ ಅರ್ಥಗಳನ್ನು ಸೂಚಿಸುತ್ತದೆ.

ಕಾರಣ; ಕೆಲಸ ಮಾಡಲು ಬೇಕಾದ ಸಾಧನ, ಇಂದ್ರಿಯ, ದೇಹ; ಕ್ಷೇತ್ರ, ಭೂಮಿ; ಕಾಯ[೪೪] ಸ್ಥ; ವೈಶ್ಯನಿಂದ ಶೂದ್ರಳಲ್ಲಿ ಹುಟ್ಟಿದವ.

ಮೇಲಿನ ಅರ್ಥವಿವರಣೆಗಳೊಂದಿಗೆ ಸೂಚಿಯನ್ನು ಹೀಗೆ ಸಮೀಕರಿಸಿ ಹೇಳಬಹುದೆನಿಸುತ್ತದೆ– ಒಂದನೆಯದಾಗಿ ಗ್ರಂಥಗಳ / ಮುದ್ರಿತ ಪ್ರತಿಗಳ / ಗುಂಪನ್ನು ಸೂಚಿಸುವ ಕ್ರಿಯೆ ಮಾಡುವಂತಹದು. ಜೊತೆಗೆ ಮಾರ್ಗದರ್ಶನ / ನಿರ್ದೇಶನ / ಓದುಗನಿಗೆ ಬೇಕಾದ ಸಲಕರಣೆಗಳನ್ನು ಸಂಗ್ರಹಿಸಲು ಸಲಹೆ ನೀಡುತ್ತದೆ. ಎರಡನೆಯದಾಗಿ ವಿವರಣಾ ಪಟ್ಟಿಯನ್ನು ನೀಡುವುದು / ಪುಸ್ತಕದ ಪಟ್ಟಿಯನ್ನು / ವಿಷಯ ಪಟ್ಟಿಯನ್ನು ನೀಡುವಂತಹದು. ಮೂರನೆಯದಾಗಿ ಕೆಲಸ ಮಾಡಲು ಬೇಕಾದ ಸಾಧನ ಮತ್ತು ಭೂಮಿಕೆಯನ್ನು ಒದಗಿಸುವ ಸಾಧನ ಮುಂತಾದ ಅರ್ಥಗಳನ್ನು ಪರಿಶೀಲಿಸಬಹುದು.

ಗ್ರಂಥಸೂಚಿಯಲ್ಲಿ ಜ್ಞಾನದ ಎಲ್ಲಾ ರೀತಿಯ ದಾಖಲೆಗಳ ಪಟ್ಟಿ ಇರುತ್ತದೆ. ಇವುಗಳು ಪ್ರಕಟವಾಗಿರಬಹುದು ಅಥವಾ ಇಲ್ಲದಿರಬಹುದು. ಪುಸ್ತಕಗಳು ನಿಯತಕಾಲಿಕ ಲೇಖನಗಳು, ಸರಕಾರಿ, ವ್ಯಾಪಾರಿ, ಕೈಗಾರಿಕಾ ಮತ್ತಿತರ ಸಂಸ್ಥೆಗಳ ಪ್ರಕಟಣೆಗಳು, ಸಮ್ಮೇಳನದ ವರದಿಗಳು, ಮಾನಕಗಳು (Standards) ಸ್ವಾಮ್ಯಗಳು (Patents). ಮೈಕ್ರೋ ಬರಹಗಳು, ಗ್ರಾಮೋಫೋನ್ ರೆಕಾರ್ಡುಗಳು, ಟೇಪುಗಳು, ಫಿಲಂ, ಮತ್ತಿರ ಶ್ರವಣ - ದೃಶ್ಯ ಸಾಧನಗಳು ಮುಂತಾದವುಗಳು ಸೇರಿರುತ್ತವೆ. ಇವು ಒಂದು ಭಾಷೆಯಲ್ಲಿ ಅಲ್ಲದೆ ಜಗತ್ತಿನ ಎಲ್ಲಾ ಭಾಷೆಗಳಲ್ಲಿಯೂ ಇರುತ್ತವೆ. ಈ ರೀತಿ ದೊರೆಯುವ ಬರೆದ ಸಾಮಗ್ರಿಗಳ ಸಮಗ್ರ ಮಾಹಿತಿ (Information) ಗಳನ್ನು ತರ್ಕಬದ್ಧವಾಗಿ, ಉಪಯುಕ್ತವಾಗುವ ರೀತಿಯಲ್ಲಿ ಅಂದರೆ ನಿಕಟವಾಗಿರುವ ವಿಷಯ ಭಾಗಗಳು ಒಂದೆಡೆ ಬರುವಂತೆ ವಿಷಯವನ್ನು ವರ್ಗೀಕರಿಸಿ ಪಟ್ಟಿ ಮಾಡಿದರೆ ಅದು ' ವ್ಯವಸ್ಥಾತ್ಮಕ ಗ್ರಂಥಸೂಚಿ ' (Systematic Bibliography) ಎನಿಸುತ್ತದೆ. ಇದರಿಂದ ನಿರ್ದಿಷ್ಟ ವಿಷಯದಲ್ಲಿರುವ ದಾಖಲೆಗಳೆಲ್ಲದರ ಬಗ್ಗೆ ಮಾಹಿತಿಯನ್ನು ತಿಳಿಯಲು ಸಹಾಯವಾಗುತ್ತದೆ.

ಸಂಶೋಧಕನು ತನ್ನ ನಿರ್ದಿಷ್ಟ ವಿಷಯದಲ್ಲಿ ಈಗಾಗಲೇ ಏನು ಕೆಲಸ ನಡೆದಿದೆಯೆಂದು ತಿಳಿಯಲು ಗ್ರಂಥಸೂಚಿ ಆವಶ್ಯಕ. ಇದರಿಂದ ಹಾಗೆ ತಿಳಿಯದೆ ನಡೆಯುವ ಕೆಲಸದ ಪುನರಾವರ್ತನೆ, ಖರ್ಚು, ಅನಾವಶ್ಯಕ ಕಾಲಹರಣವನ್ನು ತಪ್ಪಿಸಲು ಸಾಧ್ಯ. ಇದರಿಂದ ಸಂಶೋಧನೆಗೆ ತಗಲುವ ವೆಚ್ಚದಲ್ಲಿ ಶೇಕಹಾ ಹತ್ತು ಭಾಗವನ್ನು ಉಳಿಸಲು ಸಾಧ್ಯವಿದೆ. ಅಲ್ಲದೆ ಕೆಲವು ವೇಳೆ ಪ್ರಯೋಗ ವಿಧಾನವನ್ನು, ಫಲಿತಾಂಶಗಳ (Result) ಪರಿಣಾಮವನ್ನು

ತುಲನಾತ್ಮಕವಾಗಿ ತಿಳಿಯಲು ಮಾಹಿತಿ ಪಡೆದು ಸಂಶೋಧನೆಗಳನ್ನು ತಾಳೆ ನೋಡಬಹುದು. ವ್ಯವಸ್ಥಾತ್ಮಕ ಗ್ರಂಥಸೂಚಿ ನಿರ್ದಿಷ್ಟ ವಿಷಯದ ನಾನಾ ಮುಖಗಳನ್ನು ತಿಳಿಸುವದರಿಂದ ವಿದ್ಯಾರ್ಥಿಯ ಅಭ್ಯಾಸಕ್ಕೆ ತುಂಬಾ ಅನುಕೂಲ. ಗ್ರಂಥಾಲಯದಲ್ಲಿ ನಿರ್ದಿಷ್ಟ ದಾಖಲೆಗಳನ್ನು ಗುರುತಿಸಲು ಅವುಗಳ ವಿವರಗಳನ್ನು ತಾಳೆ ನೋಡಲು ಗ್ರಂಥಸೂಚಿ ಬಹು ಉಪಯುಕ್ತ. ಪುಸ್ತಕಗಳನ್ನು ಕೊಳ್ಳುವಾಗ ಗ್ರಂಥಸೂಚಿಗಳು ಆಯಾ ವಿಷಯದಲ್ಲಿ ಮುಖ್ಯ ಕೃತಿಗಳು ಯಾವುವು ಎಂಬುದನ್ನು ತಿಳಿಸುತ್ತದೆ. ಇದರಿಂದ ಇವುಗಳ ಅಧಿಕೃತ ಸಲಹೆಗಾರರಂತಿದ್ದು ಉತ್ತಮ ಪುಸ್ತಕಗಳ ಸಂಗ್ರಹಣೆಗೆ ಸಹಾಯವಾಗುತ್ತದೆ.

ಗ್ರಂಥಸೂಚಿಗೆ ಇಂಗ್ಲೀಷಿನಲ್ಲಿ ' ಬಿಬ್ಲಿಯೋಗ್ರಫಿ ' (Bibliography) ಎಂದು ಕರೆಯಲಾಗುತ್ತದೆ. ಈ ಶಬ್ದವನ್ನು ಮೊಟ್ಟಮೊದಲಿಗೆ ಲೂಯಿಸ್ ಜಾಕೋಬ್ ಡಿ ಸೇಂಟ್. ಚಾರ್ಲಸ್. ಎಂಬುವನು ತನ್ನ ' ಬಿಬ್ಲಿಯೋಗ್ರಫಿಯಾ ಪರಿಸಿಯಾನಾ ' (Bibliographia Persiana) ೧೬೪೫ - ೫೦ ದಲ್ಲಿ ಬರೆದ ತನ್ನ ಗ್ರಂಥದಲ್ಲಿ ಬಳಸಿದ್ದಾನೆ. ಮುಂದೆ ೧೮ ನೆಯ ಶತಮಾನದಲ್ಲಿ ಈ ಶಬ್ದ ಹೆಚ್ಚು ಜನಪ್ರಿಯತೆಯನ್ನು ಗಳಿಸಿತು. ಈ ಶಬ್ದವಾದರೂ ಗ್ರೀಕ್ ಭಾಷೆಯ ' Biblion ' ಮತ್ತು ' Graphen ' ಎಂಬ ಎರಡು ಶಬ್ದಗಳಿಂದ ಹುಟ್ಟಿ ಬಂದಿದೆ. ' Biblion ಎಂದರೆ ಗ್ರಂಥಗಳು ಎಂದೂ ' Graphein ' ಎಂದರೆ ಬರೆ ಎಂದು ಅರ್ಥ [೪೫] ಕ್ರಿ. ಶ. ೧೭ ನೆಯ ಶತಮಾನದವರೆಗೆ ಇದೇ ಅರ್ಥ ಇಂಗ್ಲೀಷಿನಲ್ಲಿತ್ತು. ಅನಂತರ ಅರ್ಥ ಬದಲಾಗಿ ' ಗ್ರಂಥಸೂಚಿ ' ಅಥವಾ ಗ್ರಂಥಗಳ ಯಾದಿ ಎಂಬ ಅರ್ಥವನ್ನು ಪಡೆಯಿತು.

ಗ್ರಂಥಸೂಚಿಗೆ ವಿವಿಧ ವಿದ್ವಾಂಸರು ವ್ಯಾಖ್ಯೆಗಳನ್ನು ಕೊಟ್ಟಿದ್ದಾರೆ ಗಿರಿಜಾಕುಮಾರ ಕ್ರಿಶನ್‌ಕುಮಾರರು " ಇದೊಂದು ಗ್ರಂಥಗಳ ಸಂಪೂರ್ಣವಾದ ಮತ್ತು ವಿಮರ್ಶಾರಹಿತ ಯಾದಿಯಾಗಿದೆ. ಇದು ವಿಮರ್ಶಾತ್ಮಕ ಅಭಿಪ್ರಾಯಗಳನ್ನು ಒಳಗೊಳ್ಳುವ ಉದ್ದೇಶವನ್ನು ಹೊಂದಿರುವುದಿಲ್ಲ. " [೪೬] ಎಂದು ಹೇಳಿದ್ದಾರೆ.

ಲೂಯಿಸ್ ಶೋರ್ ಮತ್ತು ರಿಚರ್ಡ್ ಕ್ರಿಝ್ಯೇಸ್‌ರವರು ಗ್ರಂಥಸೂಚಿಯನ್ನು ' ಬರವಣಿಗೆಯ, ಮುದ್ರಣ ಅಥವಾ ನಾಗರಿಕತೆಯು ತಯಾರಿಸಿದ ದಾಖಲುಗಳ ಯಾದಿ " [೪೭] ಎಂದು ಹೇಳಿದ್ದಾರೆ. ಕನ್ನಡ ಗ್ರಂಥಸೂಚಿಯ ಪ್ರಥಮ ಸಂಪುಟದ ಮುನ್ನುಡಿಯಲ್ಲಿ ಸಂಪಾದಕರು " ಯಾವುದೇ ಭಾಷೆಯಲ್ಲಿ ರಚಿತವಾಗಿರುವ ಎಲ್ಲ ಬಗೆಯ ಬರವಣಿಗೆಗಳನ್ನು ಕುರಿತ ಎಲ್ಲ ಅಂಶಗಳ ಶಾಸ್ತ್ರೀಯ ನಿರೂಪಣೆಯೇ ಗ್ರಂಥಸೂಚಿ, ಆ ನಿರೂಪಣೆ, ಲೇಖನ, ಕೃತಿ, ಕಾಗದ, ಶಾಯಿ, ಅಲಂಕಾರ, ಅಚ್ಚು ಮೊಳೆಯ ಮಾದರಿ, ರಟ್ಟಿನ ಬಗೆ ಈ ಯಾವುದನ್ನೇ ಕುರಿತದ್ದಾಗಿರಬಹುದು. ಕೊನೆಗೆ ಮುದ್ರಕರು ಉಪಯೋಗಿಸುವ ಸಂಕೇತಗಳು, ಕಾಗದ ತಯಾರಕರು ಹಾಕುವ ಜಲಚಿಹ್ನೆ (ವಾಟರ್ ಮಾರ್ಕ್) ಕೂಡ ಆಗಬಹುದು. ಒಂದು ಕೃತಿಯ ಪ್ರಕಟನೆಯ ವರ್ಷ, ಸ್ಥಳ ಆವೃತ್ತಿ, ಪುಟಸಂಖ್ಯೆ, ಆಕಾರ

ಇತ್ಯಾದಿ ಅಂಶಗಳೂ ಆಗಬಹುದು. ಸಂಶೋಧಕನಿಗೆ ಒಂದಲ್ಲ ಒಂದು ರೀತಿಯಲ್ಲಿ ಅಮೂಲ್ಯವೆನಿಸುವ ಈ ಅಂಶಗಳನ್ನು ಶಾಸ್ತ್ರೀಯವಾಗಿ ವಿಭಾಗಿಸಿ ವ್ಯವಸ್ಥೆಗೊಳಿಸಿ ಪ್ರಕಟಿಸುತ್ತದೆ ಗ್ರಂಥಸೂಚಿ "[೪೮] ಎಂದು ಗ್ರಂಥಸೂಚಿ ಎಂದರೇನು ? ಎಂಬುದಕ್ಕೆ ವ್ಯಾಖ್ಯೆಯನ್ನು ಕೊಟಿದ್ದಾರೆ. ಒಟ್ಟಾರೆ ಗ್ರಂಥಸೂಚಿಯೊಂದು ಪ್ರಕಟಿತ ಗ್ರಂಥಗಳ ವ್ಯವಸ್ಥಿತ ಯಾದಿಯಾಗಿದ್ದು ಪ್ರತಿಯೊಂದು ಗ್ರಂಥದ ಕರ್ತೃ, ಹೆಸರು, ಪ್ರಕಾಶನ, ಪ್ರಕಟನೆಯ ಸ್ಥಳ, ಪ್ರಕಟನೆಯ ವರ್ಷ, ಬೆಲೆ, ಅಳತೆ, ಪುಟ ಇತ್ಯಾದಿ ಮಾಹಿತಿಯನ್ನು ಒದಗಿಸುವ ಒಂದು ಸಂದರ್ಭ ಗ್ರಂಥವಾಗಿದೆ.

"ಯಾವುದೇ ಭಾಷೆಯಲ್ಲಿ ರಚಿತವಾಗಿರುವ ಎಲ್ಲ ಬಗೆಯ ಬರವಣಿಗೆಗಳನ್ನು ಕುರಿತ ಎಲ್ಲ ಅಂಶಗಳ ಶಾಸ್ತ್ರೀಯ ನಿರೂಪಣೆಯೇ ಗ್ರಂಥಸೂಚಿ "[೪೯]

ಈ ಎಲ್ಲ ಅಂಶಗಳಿಂದ ಒಂದು ನಿರ್ಧಾರಕ್ಕೆ ಬರುವದಾದರೆ ಯಾವುದೇ ಭಾಷೆಗೆ, ಯಾವುದೇ ದೇಶಕ್ಕೆ, ಒಂದು ಭಾಷೆ, ಒಂದು ಪ್ರಾದೇಶಿಕ ಹಿನ್ನೆಲೆ ಇರುವಂತೆ ಗ್ರಂಥಾಲಯಕ್ಕೆ ಬರುವ ಸಂಶೋಧಕರಿಗೆ, ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ, ಸಿಬ್ಬಂದಿಗೆ ಗ್ರಂಥಸೂಚಿ (Bibliographical Details) ಗಳ ಆವಶ್ಯಕತೆ ಇದ್ದೇ ಇದೆ ಎನ್ನುವದು ಸಾಬೀತಾಗಿದ್ದರೂ ಈ ಕ್ಷೇತ್ರ ಇನ್ನೂ ಬೆಳೆಯಬೇಕು. ಅಲಕ್ಷ್ಯಕ್ಕೆ ತುತ್ತಾಗಿದೆ ಎಂದರೆ ಅತಿಶಯೋಕ್ತಿಯಲ್ಲ. ನಾವು ಜಗತ್ತಿನಲ್ಲಿ ಎಲ್ಲೇ ಹೋದರೂ ಬಂದರೂ ಒಂದು ಸೂಚಿಯ ಆವಶ್ಯಕತೆ ಇರುವಂತೆಯೇ ಗ್ರಂಥಾಲಯಕ್ಕೊಂದು ಗ್ರಂಥಸೂಚಿ ಎನ್ನುವುದಾದರೆ ಒಂದೊಂದು ಸಾಹಿತ್ಯದ ಬಗ್ಗೆ ಗ್ರಂಥಸೂಚಿಗಳು ತಯಾರಾಗಬೇಕು. ಈಗಾಗಲೆ ಈ ನಿಟ್ಟಿನಲ್ಲಿ ಆದ ಕೆಲಸಗಳು ಸಾಲದು ಎನಿಸುತ್ತವೆ. ಇದರಿಂದ ಸಾಹಿತ್ಯದ ಒಂದು ಸಮಗ್ರ ನೋಟ ಸಿಗಬಹುದು. ಈ ಬೆಳವಣಿಗೆಗಳಿಂದ ಯಾವುದೇ ಕ್ಷೇತ್ರದಲ್ಲಿ ಆದ ಬೆಳವಣಿಗೆಗಳನ್ನು ಸಮಗ್ರವಾಗಿ ನೋಡಲು ಸಿಗುತ್ತದೆ. ಇಂತಹ ಬೆಳವಣಿಗೆ ಪಾಶ್ಚಾತ್ಯರಲ್ಲಿ ಕಂಡಂತೆ ನಮ್ಮಲ್ಲಿ ಸಾಧ್ಯವಾಗುವದಕ್ಕೆ ಅನೇಕ ಅಡೆತಡೆಗಳು ಇವೆ ಎಂಬುದು ವಿಷಾದದ ಸಂಗತಿ.

## ೨.೭ : ಗುರಿಗಳು

ಗ್ರಂಥಸೂಚಿಯೆಂದೊಡನೆ ಅದೊಂದು ಕೆಟಲಾಗ್ ಎಂಬ ಭಾವನೆ ಬಹಳ ವಿದ್ವಾಂಸರ ಅಭಿಮತವಾಗಿದೆ. ಅದರಲ್ಲೇನು ಮಹಾ ಇದೆ ? ಆದರೆ ಅದರ ಮಹತ್ವ ಮತ್ತು ಉಪಯುಕ್ತತೆಯನ್ನು ಅದನ್ನು ಸಿದ್ಧಪಡಿಸುವುದರಲ್ಲಿ ಇರುವ ತೊಂದರೆ ಪರಿಶ್ರಮಗಳನ್ನು ಗಮನಿಸಬೇಕು.

೧. ಮುಂದೆ ಸಾಗುವುದಕ್ಕೆ ಹಿಂದಿನ ಕಾರ್ಯಸಾಧನೆಯನ್ನು ತಿಳಿದಿರಬೇಕು.

೨. ನಿರ್ದಿಷ್ಟ ವಿಷಯದ ಮೇಲೆ ವಾಚನ ಸಾಮಗ್ರಿ ಗುರುತಿಸುವಿಕೆಯಿಂದ ಮುಂದಿನ ಕೆಲಸದ ಸುಲಭತೆಗೆ ಅನುಕೂಲ; ಅಣಿಗೊಳಿಸಿಕೊಳ್ಳುವದು.

೩. ಅಧ್ಯಯನ, ಸಂಶೋಧನೆ ಕಾರ್ಯಗಳಿಗೆ ಇದುವೆ ತಳಹದಿ.

೪. ವಾಙ್ಮಯ ದರ್ಶಿಕೆಗಳನ್ನು ಪ್ರಕಟಣೆಗೆ ಸಿದ್ಧಪಡಿಸಬೇಕು.

೫. ಪ್ರಕಟಿತ ಎಲ್ಲಾ ಕೃತಿಗಳ ಬಗ್ಗೆ ಮಾಹಿತಿ ತಯಾರಿಸುವದು.

೬. ಸಾಮಾನ್ಯವಾಗಿ ವೇಳೆಯ ಅಪವ್ಯಯ ಆಗದಂತೆ ಇನ್ನೊಬ್ಬನು ಅದೇ ಕಾರ್ಯ (Duplicate) ಮಾಡುವದನ್ನು ತಪ್ಪಿಸುವುದು.

೭. ಪುಸ್ತಕಗಳ ಸಾರಸಂಗ್ರಹ, ವಿಮರ್ಶೆ, ಮೌಲ್ಯಮಾಪನಗಳ ಸಂಗ್ರಹ ಮತ್ತು ಜೋಡಣೆ.

೮. ವಿಷಯಗಳ ಶಬ್ದಸಂಪತ್ತು ಮತ್ತು ನಿರೂಪಣೆ ವಿಧಾನಗಳನ್ನು ಲಭ್ಯವಾಗಿಸುವುದು.

೯. ಗ್ರಂಥಗಳ ವಿವರಗಳನ್ನು ಕಲೆ ಹಾಕಿ ವ್ಯವಸ್ಥಿತವಾಗಿ ಹೊಂದಿಸಿ ಓದುಗರಿಗೆ ಅಣಿಗೊಳಿಸಿ ನೀಡುವುದು.

೧೦. ಪುಸ್ತಕ / ಯಂತ್ರ ಪ್ರತಿಗಳನ್ನು ಒಂದೆಡೆ ಸಂಗ್ರಹಣೆ ಮಾಡಿ ವಿಂಗಡಿಸುವುದು.

ಲಭ್ಯವಿರತಕ್ಕ ಮಾಹಿತಿಯನ್ನು ತಕ್ಷಣವೇ ನೀಡಿ ಓದುಗನನ್ನು ಖುಷಿಗೊಳಿಸಬೇಕು. ಯಾಕೆಂದರೆ ಓದುಗನಿಗೆ ಮಾಹಿತಿಯು ಎಲ್ಲಿ ಸಿಗುತ್ತದೆ. ಹೇಗೆ ಪಡೆಯಬಹುದೆಂಬುದನ್ನು ತಿಳಿಸುವುದು ಮುಖ್ಯವಾಗಿದೆ. ಯಾಕೆಂದರೆ ಮಾಹಿತಿಯು ತುಂಬಾ ದುಬಾರಿಯಾದ ಕೆಲಸ. ಅದರ ಸುಲಭ ಕೆಲಸವೆಂದರೆ ಇಂತಹ ಕೆಲಸಗಳಿಂದ ಸರಳೀಕರಣಗೊಳ್ಳುತ್ತದೆ. ಸಮಯವನ್ನು ವ್ಯಯಿಸದೆ ಅತ್ಯಲ್ಪ ಸಮಯದಲ್ಲಿ ಓದುಗ, ಸಂಶೋಧಕ, ವಿದ್ವಾಂಸರಿಗೆ, ತಕ್ಷಣವೇ ಮಾಹಿತಿ ನೀಡುವುದು ಸರಳವಾಗಿ ಮತ್ತು ತಕ್ಷಣವೇ ಮಾಹಿತಿ ಸಿಕ್ಕರೆ ಓದುಗರಿಗೆ ಅಂಗೈಯಲ್ಲಿ ಆಕಾಶ ತೋರಿಸಿದಂತಾಗುತ್ತದೆ. ಯಾರಿಗೆ ಅದರ ಆವಶ್ಯಕತೆ ಜರೂರು ಇರುತ್ತದೆ ಅಂತಹವರು ಈ ಮಾಹಿತಿಯಿಂದ ಸಂಶೋಧನಾ ಕಾರ್ಯಕ್ಕೆ ನೆರವಾದ ಸಂತೋಷ ಗ್ರಂಥಾಲಯದ ಗ್ರಂಥಪಾಲಕರು, ಸಿಬ್ಬಂದಿಗಳಿಂದಾಗಬಹುದು. ಹೀಗೆ ಆಧುನಿಕ ಗ್ರಂಥಾಲಯದ ವಾಙ್ಮಯ ದರ್ಶಿಕೆಗಳು ಉಪಯೋಗದ ದೃಷ್ಟಿಯಿಂದ ಅತ್ಯುತ್ತಮ ಮಾಹಿತಿಯನ್ನು ಸರಿಯಾದ ವೇಳೆಯಲ್ಲಿ ಸರಿಯಾದ ಸಮಯಕ್ಕೆ ಸರಿಯಾದ ಓದುಗನಿಗೆ ನೀಡುವ ಉದ್ದೇಶಗಳು ಮುಖ್ಯವಾದವುಗಳು.

## ೨.೮ : ಉದ್ದೇಶಗಳು

೧. ಸಂಶೋಧಕ ಅಥವಾ ಓದುಗನಿಗೆ ಬೇಕಾದ ಗ್ರಂಥಗಳು ಗ್ರಂಥಾಲಯದಲ್ಲಿ ಯಾವ ಸ್ಥಳದಲ್ಲಿ ಯಾವ ಶೆಲ್ಫಿನಲ್ಲಿ ಸಿಗುತ್ತವೆ ಎಂದುನ್ನು ತಿಳಿಸುವದಕ್ಕೆ ಸೂಚಿಗಳು ಸೀಮಿತವಾಗಿರುತ್ತವೆ.

೨. ಅದರಲ್ಲಿ ಏನಿದೆ / ಏನಿಲ್ಲ ಎಂಬುದನ್ನು ಓದುಗನ ಸ್ವಪ್ರಯತ್ನಕ್ಕೆ ಬಿಡಬೇಕು ಎಂಬುದು ಕೆಲವರ ಅಭಿಪ್ರಾಯವಾದರೆ, ಸೂಚಿಗಳು ಆವಶ್ಯಕವಾದ ವಿವರಗಳನ್ನು / ಸುದೀರ್ಘ ಚರ್ಚೆಗಳನ್ನು ಓದುಗರಿಗೆ ನೀಡುತ್ತದೆ.

೩. ವಿವರಣಾತ್ಮಕ ಮತ್ತು ಪಾಂಡಿತ್ಯಪೂರ್ಣ ಸೂಚಿಗಳನ್ನು ಕೂಡ ಸಂಶೋಧಕನು ಸಂಶಯದ ದೃಷ್ಟಿಯಿಂದ ನೋಡುವ ಸಂಭವನೀಯತೆ ಕಡಿಮೆಯಾಗುತ್ತದೆ.

೪. ಅನೇಕ ಮಹತ್ವದ ಅಂಶಗಳನ್ನು ಸೂಚೀ ತಯಾರಿಸುವಾಗ ಬಿಟ್ಟಿರುವ ಸಂಭವವಿದೆ.

೫. ಸಂಶೋಧಕನು ಹಸ್ತಪ್ರತಿಗಳನ್ನು ಸ್ವತಃ ಪರಿಶೀಲಿಸಬೇಕಾಗುತ್ತದೆ.

೬. ಸಂಶೋಧಕನಿಗೆ ಬೇಕಾಗಿರುವ ಗ್ರಂಥ ಎಲ್ಲಿದೆ ಹಾಗೂ ಆ ಗ್ರಂಥವನ್ನು ಸುಲಭವಾಗಿ ಕಂಡುಹಿಡಿಯಬಹುದು.

೭. ಒಬ್ಬ ಲೇಖಕನ ಒಟ್ಟು ಶೀರ್ಷಿಕೆಗಳು, ಪುಸ್ತಕಗಳು, ಪ್ರಕಾಶಕ, ಬೆಲೆ, ಪ್ರಕಾಶನ ಸ್ಥಳ, ವರ್ಷ, ಒಟ್ಟು ಪುಟಗಳು ಇತ್ಯಾದಿ ಪರಿಶೀಲನೆ.

೮. ಒಂದು ವಿಷಯದ ಸಮಗ್ರ ಮಾಹಿತಿಯ ನೋಟ.

೯. ಒಬ್ಬ ಲೇಖಕ / ಕೃತಿಕಾರನ ಸಮಗ್ರ ಬರವಣಿಗೆಗಳ ಬಗ್ಗೆ ಸಂಪೂರ್ಣ ಮಾಹಿತಿ.

೧೦. ಸೂಚಿಗಳಲ್ಲಿಯ ವಿಷಯವನ್ನು ಕಂಡುಕೊಳ್ಳುವದು ಸಂಶೋಧಕನ ಆದ್ಯ ಕರ್ತವ್ಯಗಳಲ್ಲೊಂದು.

೧೧. ಸಮಗ್ರ ದಾಖಲೆಗಳ ಮಾಹಿತಿಯನ್ನು ವ್ಯವಸ್ಥಿತ ರೀತಿಯಲ್ಲಿ ಗ್ರಂಥಸೂಚಿ ಒದಗಿಸುತ್ತದೆ.

ಬೇರೆ ಬೇರೆ ಎಂದು ತಿಳಿದಿದ್ದ ಹಲವಾರು ವಿಷಯಗಳೂ ಇಂದು ನಿಕಟವರ್ತಿಯಾಗಿರುವುದರಿಂದ ಅವುಗಳನ್ನು ಜೋಡಿಸುವ ಕಷ್ಟ ಮತ್ತು ಜವಾಬ್ದಾರಿಗಳು ಸೂಚಿಗಳಲ್ಲಿ / ಸೂಚೀಕಾರರಲ್ಲಿ ಇರಬೇಕು.

ಸಮಗ್ರ ಗ್ರಂಥಸೂಚಿಗಳ ಮಾಹಿತಿಗೆ ಸಂಶೋಧಕರು, ಓದುಗರು, ವಿದ್ಯಾರ್ಥಿಗಳು, ಪ್ರಾಧ್ಯಾಪಕರು ಒತ್ತಾಯಿಸಬೇಕಾಗಿದೆ. ಇದನ್ನೊಂದು ಚಳುವಳಿ (Movement) ಯ ಮಾದರಿಯಲ್ಲಿ ಗ್ರಂಥಸೂಚಿಗಳ ರಚನೆ, ವಿನ್ಯಾಸ, ನಡೆಯಬೇಕಾದುದನ್ನು ಇಲ್ಲಿ ಒತ್ತಿ ಒತ್ತಿ ಹೇಳಲಾಗಿದೆ.

## ೨.೯ : ಸ್ಪಷ್ಟನೆ

ಇಲ್ಲಿ ಒಂದು ವಿಷಯವನ್ನು ಸ್ಪಷ್ಟಪಡಿಸಬೇಕು. ಇಡೀ ಗ್ರಂಥಸೂಚಿಯ ಇತಿಹಾಸ ಮತ್ತು ಬೆಳವಣಿಗೆಗಳೆಂದರೆ ಸೂಚಿಯಿಂದ ಹಿಡಿದು ಗ್ರಂಥಸೂಚಿ ಮತ್ತು ನಿರ್ದೇಶಿಗಳ ವರೆಗೆ ಈ ವಿಷಯಗಳು ಒಂದರ ಬೆಳವಣಿಗೆಗೆ ಒಂದು ಪೂರಕ (Supplementary) ವಿಷಯಗಳಾಗಿವೆ. ಕಾರಣ ಇಲ್ಲಿ ಇಟ್ಟಿಗೆಯಲ್ಲಿಯ (ಪ್ರಾಚೀನ ಯುಗದ) ಬೆಳವಣಿಗೆಗಳಿಂದ ಹಿಡಿದು ಗ್ರಂಥಸೂಚಿ ಬೆಳೆಯುವ ವರೆಗೆ ಅದರ ಬೆಳವಣಿಗೆಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ಈ ಎಲ್ಲ ವಿಷಯಗಳು ಪೂರಕ (Complementary) ವಿಷಯಗಳಾಗಿದ್ದು ಸೂಚಿಗಳ ಬೆಳವಣಿಗೆಗಳನ್ನು ಇಲ್ಲಿ ವಿವರಿಸಲಾಗಿದೆ.

ಸೂಚಿಗಳ ಆಧಾರದಿಂದ ಗ್ರಂಥಸೂಚಿಗಳ ಬೆಳವಣಿಗೆ ಅದರ ಅಧ್ಯಯನವು ಕೂಡ ಇಲ್ಲಿ ಅಡಕಗೊಂಡಿದೆ. ಹೀಗಾಗಿ ಸೂಚಿ, ಗ್ರಂಥಸೂಚಿ, ನಿರ್ದೇಶಿಗಳನ್ನು ತಪ್ಪಾಗಿ ತಿಳಿಯುವ ಅವಕಾಶಗಳಿರುತ್ತವೆ. ಅದನ್ನು ಗಮನದಲ್ಲಿಟ್ಟುಕೊಂಡು ಈ ಪೂರ್ಣ ಅಧ್ಯಾಯವನ್ನು ವಿವರಿಸಲಾಗಿದೆ. ಪ್ರಾರಂಭಿಕ ಪ್ರಯತ್ನಗಳೆಂದರೆ ಮಣ್ಣು, ಕಲ್ಲು, ಗೋಡೆ ಬರಹ, (ಶಿಲಾಯುಗದ ಬೆಳವಣಿಗೆಗಳು) ಇತ್ಯಾದಿಗಳಲ್ಲಿ ಕೂಡ ಸೂಚಿಯನ್ನು ನೋಡಬಹುದಾಗಿದೆ. ಹೀಗೆ ಪ್ರಾಚೀನದಿಂದ ಆಧುನಿಕದವರೆಗಿನ ಗ್ರಂಥಸೂಚಿಯ ಬೆಳವಣಿಗೆಯೆಂದರೆ ಸೂಚಿಯಿಂದ ಗ್ರಂಥಸೂಚಿಯ ಬೆಳವಣಿಗೆಯೇ ಆಗಿದೆ. ಆದ್ದರಿಂದ ಇಲ್ಲಿ ಸೂಚಿ ಬೆಳೆದು ಬಂದ ವಿವರಗಳನ್ನು ಪ್ರಾರಂಭದಲ್ಲಿ ವಿವರಿಸಿ ಮುಂದೆ ಗ್ರಂಥಸೂಚಿಯ ಇತಿಹಾಸ ಮತ್ತು ಬೆಳವಣಿಗೆಗಳನ್ನು ವಿವರಿಸಲಾಗಿದೆ. ಸೂಚಿ ಅಥವಾ ಸೂಚೀಕಲ್ಪ ಇರದಿದ್ದರೆ ಗ್ರಂಥಸೂಚಿ ಬೆಳವಣಿಗೆ ಸಾಧ್ಯವಿತ್ತೊ / ಇಲ್ಲವೋ ? ಆ ಚರ್ಚೆ ಇಲ್ಲಿ ಅವಶ್ಯವಿಲ್ಲ. ನಾನು ಗಮನಿಸಿದ್ದು ಇದೊಂದು ಪೂರಕ (Supplimentary) ಅಭ್ಯಾಸವೆಂದು ಗಣನೆಗೆ ತೆಗೆದುಕೊಂಡಿದ್ದೇನೆ.

ಸೂಚಿ, ಸೂಚೀಕಾರ, ಗ್ರಂಥಸೂಚಿ ಇವೆಲ್ಲವುಗಳು ಒಂದಕ್ಕೊಂದು ಅವಿನಾಭಾವ ಸಂಬಂಧ ಹೊಂದಿವೆ. ಒಂದನ್ನೊಂದು ಬಿಟ್ಟು ವಿವರಣೆ ನೀಡಿದರೆ ಸಮಗ್ರ ಮಾಹಿತಿ ನೀಡಿದಂತಾಗುವುದಿಲ್ಲ. ಅದಕ್ಕಾಗಿ ಮೇಲಿನಂತೆ ಸ್ಪಷ್ಟನೆ ನೀಡಬೇಕಾಯಿತು.

## ೨.೯.೧ : ಗ್ರಂಥಸೂಚಿ

**ಪುಸ್ತಕ ಪಟ್ಟಿ - ನಿರ್ದೇಶಿಗಳಿಗೆ ಇರುವ ವ್ಯತ್ಯಾಸ :**

ಗ್ರಂಥಸೂಚಿ ಬೇರೆ ಬೇರೆ ವಿಧಗಳನ್ನು ಹೊಂದಿರುತ್ತದೆ. ಇದರಿಂದ **ಗ್ರಂಥಸೂಚಿ** ಎಂದರೆ ಯಾವುದಾದರೊಂದು ನಿರ್ದಿಷ್ಟ ವಿಷಯದ ಬಗ್ಗೆ ಇರುವ ಎಲ್ಲಾ ಬರೆದ ಪ್ರಕಾರಗಳ ವ್ಯವಸ್ಥಿತ ಪಟ್ಟಿ ಅಂದರೆ ಯಾವುದೇ ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ಇರುವ ಪುಸ್ತಕಗಳು, ನಿಯತಕಾಲಿಕೆ ಲೇಖನಗಳು, ಸಮ್ಮೇಳನದ ವರದಿಗಳು, ಸಂಸ್ಥೆಗಳ ವರದಿಗಳು, ಸರಕಾರದ ದಾಖಲೆಗಳು, ಪ್ರಕಟಣೆ ಪಟ್ಟಿಗಳು, ಕರಪತ್ರಗಳು, ಗ್ರಾಮೋಫೋನ್ ರಿಕಾರ್ಡುಗಳು, ಟೇಪ್ ರಿಕಾರ್ಡುಗಳು, ಚಿತ್ರಗಳು, ನಕಾಶೆಗಳು, ಇತರ ದೃಕ್‌ಶ್ರವಣ ದಾಖಲೆಗಳು, ಈ ಎಲ್ಲಾ ರೀತಿಯ ಸಾಮಗ್ರಿಗಳನ್ನು ಒಂದಕ್ಕೊಂದು ಸಂಬಂಧವಿರುವಂತೆ ವರ್ಗೀಕರಿಸಿ, ಪೂರ್ಣ ಮಾಹಿತಿ ಕೊಡುವ ಪಟ್ಟಿ.

ಗ್ರಂಥಸೂಚಿ ಯಾವುದೋ ಒಂದು ನಿರ್ದಿಷ್ಟ ವಿಷಯದಲ್ಲಿರುವ ಎಲ್ಲಾ ಬರೆದ ಪ್ರಕಾರಗಳನ್ನು ಸೂಚಿಸುತ್ತದೆ. ಇದು ಒಂದು ಗ್ರಂಥಾಲಯದಲ್ಲಿ ಅಥವಾ ಒಂದು ದೇಶದಲ್ಲಿ ದೊರಕುವ ಬರೆದ ಪ್ರಕಾರಗಳಿಗೆ ಸೀಮಿತವಾಗಿಲ್ಲ.

ಇದು ವಿಶ್ವವ್ಯಾಪಿ. ತಾತ್ವಿಕವಾಗಿ ಇದಕ್ಕೆ ಕಾಲ, ಭಾಷೆಯ ನಿರ್ಬಂಧವೂ ಇಲ್ಲ. ಇದೊಂದು ಸಂಶೋಧನ ಸಾಧನ. ಇದರಲ್ಲಿ ನಿಯತಕಾಲಿಕೆಯ ಲೇಖನಗಳ ಮತ್ತಿತರ ಪ್ರಕಾರಗಳ ಬಗ್ಗೆ ಪೂರ್ಣವಾದ, ಕರಾರುವಕ್ಕಾದ ದಾಖಲೆ ಇರುತ್ತದೆ.

## ೨.೯.೨ : ಪುಸ್ತಕ ಪಟ್ಟಿ

ಗ್ರಂಥಾಲಯದಲ್ಲಿರುವ ಎಲ್ಲಾ ಪುಸ್ತಕಗಳ ಮತ್ತಿತರ ದಾಖಲೆಗಳ ಮಾಹಿತಿಯನ್ನು ಕೊಡುವದು ಪುಸ್ತಕ ಪಟ್ಟಿ ಇದನ್ನು ಯಾವುದಾದರೊಂದು ವರ್ಗೀಕರಣ ವ್ಯವಸ್ಥೆಯನ್ನು ಅನುಸರಿಸಿ ವಿಷಯವನ್ನು ವಿಭಜಿಸಿ ಅದರಂತೆಯೇ ಅಥವಾ ಲೇಖಕರ ಹೆಸರಿನ ಅಕಾರಾದಿಯಾಗಿಯೋ ಜೋಡಿಸುತ್ತಾರೆ. ಕೆಲವು ವೇಳೆ ವಿಷಯ, ಲೇಖಕನ ಹೆಸರು ಮತ್ತು ಪುಸ್ತಕದ ಶೀರ್ಷಿಕೆ ಇವೆಲ್ಲವನ್ನೂ ಒಂದೇ ಅಕಾರಾದಿಯಾಗಿ ಜೋಡಿಸಿರುವದೂ ಉಂಟು.

ಪುಸ್ತಕ ಪಟ್ಟಿಯು ಗ್ರಂಥಾಲಯದಲ್ಲಿ ದೊರಕುವ ಪುಸ್ತಕ ಮತ್ತಿತರ ಬರೆದ ಸಾಧನಗಳಿಗೆ ಸೀಮಿತವಾಗಿರುತ್ತದೆ. ಇದೊಂದು ಗ್ರಂಥಾಲಯದ ಅತ್ಯವಶ್ಯ ಸಾಧನ. ಪುಸ್ತಕಗಳನ್ನು ಕೊಂಡ ಒಡನೆಯೇ ಅವುಗಳ ಬಗ್ಗೆ ಮಾಹಿತಿಗಳನ್ನು ತಿಳಿದು ಪುಸ್ತಕ ಪಟ್ಟಿಯನ್ನು ತಯಾರು ಮಾಡುತ್ತಾರೆ. ಇದರಲ್ಲಿ ನಿಯತಕಾಲಿಕೆಯ ಲೇಖನಗಳು ಸೇರುವುದಿಲ್ಲ.

## ೨.೯.೩ : ನಿರ್ದೇಶಿ

ಎಂದರೆ ಪುಸ್ತಕದ ಕಡೆಯಲ್ಲಿ ಪುಸ್ತಕದ ನಾನಾ ವಿಷಯ ವಿಭಾಗಗಳನ್ನು ಅಕಾರಾದಿಯಾಗಿ ಜೋಡಿಸಿ ಅವುಗಳ ಬಗ್ಗೆ ಪುಸ್ತಕದಲ್ಲಿ ಯಾವ ಪಟಗಳಲ್ಲಿ ವಿವರಗಳು ದೊರೆಯುವುವೆಂಬುದನ್ನು ತೋರಿಸುವ ಅಕಾರಾದಿ ಶಬ್ದಪಟ್ಟಿ

ಭಾರತದಲ್ಲಿ ಗ್ರಂಥಾಲಯಗಳ ವ್ಯವಸ್ಥೆ, ಗ್ರಂಥಾಲಯದ ಅಧ್ಯಯನಕ್ಕೆ ಕಾರಣಪುರುಷರಾದ ಡಾ. ರಂಗನಾಥನ್‌ರವರು ಇಂಗ್ಲೀಷ್ ಪದಗಳಾದ 'ಬಿಬ್ಲಿಯೋಗ್ರಫಿ', 'ಕ್ಯಾಟಲಾಗ್', 'ಇಂಡೆಕ್ಸ್' ಎಂಬ ಪದಗಳಿಗೆ ಕ್ರಮವಾಗಿ 'ಗ್ರಂಥಸೂಚಿ', 'ಸೂಚಿ' ಮತ್ತು 'ನಿರ್ದೇಶಿ' ಎಂಬ ಸಂಸ್ಕೃತ ಪರ್ಯಾಯ ಪದಗಳನ್ನು ಸೂಚಿಸುತ್ತಾರೆ. ಗ್ರಂಥಸೂಚಿ ಎಂಬ ಪದವನ್ನೇ ಇಲ್ಲಿ ಉಪಯೋಗಿಸಲಾಗಿದೆ. ಪುಸ್ತಕದ ವಿಷಯದ ಪೂರ್ಣ ವಿಶ್ಲೇಷಣೆಯಿರುವ ಸೂಚಿ ಅತ್ಯಗತ್ಯ. ಇದು ಪುಸ್ತಕದ ವಿಷಯದ ನಾನಾ ಭಾಗಗಳಿಗೆ ಕೈಮರ. ಸಮಾನಾರ್ಥ ಪದಗಳು, ಸಂಬಂಧಿಸಿದ ಪದಗಳು, ಕಾಗುಣಿತ ಬೇಧಗಳು ಇವುಗಳಿಂದ ಅಂತರ್‌ವಿಷಯ ನಿರ್ದೇಶಕ (Cross Reference Entry) ಗಳಿರಬೇಕು.

ನಿರ್ದೇಶಿಯಲ್ಲಿರುವ ನಿರ್ದಿಷ್ಟ ಪದಗಳ ಎದುರಿಗೆ ಆಯಾ ಪದಗಳಿರುವ ಪುಟ ಸಂಖ್ಯೆಯನ್ನು ಕೊಡಬೇಕು. ಶೀರ್ಷಿಕೆಯ ಅಡಿಯಲ್ಲಿ ಅದರ ಉಪಶೀರ್ಷಿಕೆಗಳಿದ್ದು, ಅದಕ್ಕೆ ಪುಟಸಂಖ್ಯೆ ಸೂಚಿಸಿದರೆ ಅನುಕೂಲ. ವಿಷಯಭಾಗವು ಒಂದು ಪುಟದಿಂದ ಆರಂಭವಾಗಿ ಬಿಡದೆ ಮುಂದುವರಿದಾಗ ಎರಡೂ ಪುಟಸಂಖ್ಯೆಗಳನ್ನು ಉದಾ (4 - 12) ಎಂದು ಸೂಚಿಸುವದು ಉತ್ತಮ. (ಒಂದೇ ವಿಷಯವು ಬೇರೆ ಬೇರೆ ಪುಟಗಳಲ್ಲಿ ನಮೂದಿಸಿರುವಾಗ ಪುಟಸಂಖ್ಯೆಗಳನ್ನು ಅರ್ಧವಿರಾಮದಿಂದ ಪ್ರತ್ಯೇಕಿಸಬೇಕು. ಯಾವುದಾದರೊಂದು ವಿಷಯದ ಪ್ರಾಮುಖ್ಯತೆಯನ್ನು ಒತ್ತಿ ಹೇಳಲು ಅದನ್ನು ದಪ್ಪಕ್ಷರಗಳಲ್ಲಿ, ಅಥವಾ ಅತಿ ಕಪ್ಪು ಅಕ್ಷರಗಳಲ್ಲಿ ಅಥವಾ ಉಪಶೀರ್ಷಿಕೆಗಳಲ್ಲಿ ಮೊದಲು ನಮೂದಿಸಬೇಕು.

ನಿರ್ದೇಶಿಯನ್ನು ಸಾಧಾರಣವಾಗಿ, ಪುಟದಲ್ಲಿ ಎರಡು ಅಂಕಣ (Column) ಗಳಲ್ಲಿ, ಪುಸ್ತಕದ ಪಾಠವನ್ನು ಮುದ್ರಿಸಿರುವ ಅಚ್ಚುಮೊಳೆಯ ಆಕಾರಕ್ಕಿಂತ ಚಿಕ್ಕದಾದ ಆಕಾರದಲ್ಲಿ ಮುದ್ರಿಸಿರುತ್ತಾರೆ. ಈ ನಿರ್ದೇಶಿ ಗ್ರಂಥದ ಕೊನೆಯಲ್ಲಿ ಅಥವಾ ನಿಯತಕಾಲಿಕೆಗಳಲ್ಲಿ ಮೊದಲು ಇರುತ್ತದೆ.

ನಿರ್ದೇಶಿಯಿಲ್ಲದ ಪುಸ್ತಕದ ಉಪಯೋಗ ಕಡಿಮೆ. ಅಂತಹ ಪುಸ್ತಕವನ್ನು ಓದುವದು ಕಾಡಿನಲ್ಲಿ ಕತ್ತಲೆಯಲ್ಲಿ ದಾರಿ ಹುಡುಕಿದಂತೆ. ಪುಸ್ತಕಗಳಿಗೆ ಕೊನೆಯಲ್ಲಿ ನಿರ್ದೇಶಿ ಇದ್ದಾಗ ಅದರ ಉಪಯೋಗ ಹೆಚ್ಚುತ್ತದೆ.

ಈಗ ಉದಯಿಸಿದ ಹೊಸ ಆಲೋಚನೆಯೆಂದರೆ ಪುಸ್ತಕಗಳು ಹಾಗೂ ನಿಯತಕಾಲಿಕೆಗಳ ಲೇಖನಗಳ ವಿಷಯದ ನಾನಾ ಭಾಗಗಳಿಂದ ಕೂಡಿವೆ. ನಾನಾ ಮೂಲವಸ್ತುಗಳು ಒಂದು ನಿಯಮದಲ್ಲಿ ಸೇರಿ ಸಂಯುಕ್ತ ವಸ್ತುವಾಗುವಂತೆ ಜ್ಞಾನದ ನಾನಾ ತುಣುಕುಗಳು ತರ್ಕಬದ್ಧವಾಗಿ ಸೇರಿ ಲೇಖನಗಳು, ಪುಸ್ತಕಗಳೂ ಆಗಿವೆ. ಪುಸ್ತಕಗಳಲ್ಲಿರುವ ನಿರ್ದೇಶಿ (Index) ಗಳ ಸಹಾಯದಿಂದ ಈ ತುಣುಕುಗಳನ್ನು ವರ್ಗೀಕರಿಸಿ ಪಟ್ಟಿ ಮಾಡುವುದಾದರೆ ಜ್ಞಾನದ ಆಳ ಇನ್ನೂ ಹೆಚ್ಚಿ ನಮಗೆ ಬೇಕಾದ ಸಮಾಚಾರ ಕ್ಷಣಾರ್ಧದಲ್ಲಿ ಸಿಗುತ್ತದೆ. ಈ ರೀತಿ ಕೋಟಿ ಕೋಟಿ ತುಣುಕುಗಳನ್ನು ಶೇಖರಿಸಿಟ್ಟು ಬೇಕೆನಿಸಿದಾಗ ಒಂದಾಗಿ ತೆಗೆದು ಪ್ರಕಟಮಾಡುವದು ಗಣಕಯಂತ್ರದಿಂದ ಮಾತ್ರ ಸಾಧ್ಯ. ಅಲ್ಲದೆ ಗಣಕಯಂತ್ರ ನಿರ್ದಿಷ್ಟ ಪದಗಳು ಒಂದು ಗ್ರಂಥದಲ್ಲಿ ಎಲ್ಲಿ ಉಪಯೋಗಿಸಿದೆ ಎಂಬುದನ್ನು ತಿಳಿಯಲು ಸಹಾಯ ಮಾಡುತ್ತದೆ.

೧೯೬೫ ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯ ಗ್ರಂಥಾಲಯವು ತನ್ನಲ್ಲಿದ್ದ ಕ್ರಿಶ್ಚಿಯನ್ ಧರ್ಮಯುದ್ಧಕ್ಕೆ ಸಂಬಂಧಿಸಿದ ಪುಸ್ತಕಗಳ ಸೂಚಿ ಮತ್ತು ನಿರ್ದೇಶಿಯನ್ನು ಗ್ರಂಥಾಲಯ ಸಿಬ್ಬಂದಿಯು ಬಹು ಪ್ರಯಾಸದಿಂದ ತಯಾರಿಸಿದ್ದಿತು. ಇಂತಹ ಅನೇಕ ಅನೇಕ ಕೆಲಸಗಳು ವಿವಿಧ ವಿಷಯಗಳಲ್ಲಿ ತಯಾರಾಗಬೇಕು. ಇದು ವಿದ್ವಾಂಸರ ಆಸ್ಥೆ ಮತ್ತು ತಾಳ್ಮೆಯನ್ನು ಅವಲಂಬಿಸಿದೆ.

## ೨.೧೦ : ಸಮಾರೋಪ

ಮುದ್ರಣ ಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ ಮಾನವ ಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು ಅನನ್ಯ ಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವ ಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯ ಕೃತಿಗಳನ್ನು ಪ್ರತಿ ಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾಗಿಯೇ ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು ಪ್ರತಿ ಲಿಪೀಕರಿಸುವದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವದನ್ನು ಪುಣ್ಯ ಕಾರ್ಯವೆಂದು ಬಗೆದು, ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ, ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ - ಶಾಸ್ತ್ರ - ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾ ಚರಿತ್ರೆ, ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ ರಚನೆಗೆ, ಗ್ರಂಥಸೂಚಿಗಳ ರಚನೆಗೆ ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು ಐತಿಹಾಸಿಕ ಪುನರ್‌ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ.

"ಕಾವ್ಯಪ್ರಯೋಗ ಪರಿಣತಮತಿಗಳಾಗಿದ್ದ ಕನ್ನಡ ಜನತೆಯ ಬಳಿ, ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತಮಾನಗಳವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶ, ಕಾಲ, ಪರಿಸರಗಳ ಪ್ರಭಾವದಿಂದ, ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆಗುಂಪಾಗಿ, ನಾಶವಾಗುವ ಭೀತಿ ಆವರಿಸಿತು. ಅಥವಾ ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸಲಾರದೆ ನದಿಯ ಪಾಲೋ, ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳು ಅಸಂಖ್ಯೆಯಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕು ಕಂಡು ಪೂಜಾರ್ಹವಾಗಿ, ಹಾಲುಂಡು ಮತ್ತೆ ಕತ್ತಲ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತುಟಿತವಾಗಿ ಹೋಗಿವೆ.[೫೨]

ಇಂಥ ಮೌಢ್ಯವನ್ನು ದೂರ ಮಾಡಿ, ಹಸ್ತಪ್ರತಿಗಳನ್ನು ಹೊರಗೆಳೆದು / ಅಚ್ಚಾದ ಪುಸ್ತಕಗಳನ್ನು ಶೋಧಿಸಿ ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರಿಷ್ಕರಿಸಿ, ಸಂಪಾದಿಸುವ ಹೊಣೆಯನ್ನು, ಗ್ರಂಥಸೂಚಿಗೆ ಅಣಿ ಮಾಡುವ ಜವಾಬ್ದಾರಿಯನ್ನು ಈ ಸಂಸ್ಥೆ ಹೊತ್ತಿದೆ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಷ್ಕಾರ ನೀಡಲು ಹಸ್ತಪ್ರತಿಗಳ ಸಂಗ್ರಹ ಕಾರ್ಯ ಸತತವಾಗಿ ನಡೆಯಲೇಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಮಠಗಳಲ್ಲಿ, ಕವಿಗಳ ಕೀರ್ತಿ ಹರಡಿದ ಪ್ರದೇಶಗಳಲ್ಲಿ, ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದು ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕಗಳು, ದೇವಸ್ಥಾನಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. **ಇವೆಲ್ಲ ಸಂಶೋಧಕರ, ಆಸಕ್ತರ ಕೈ ಸೇರಬೇಕಾದರೆ ಗ್ರಂಥಸೂಚಿಯೆಂಬ - ಸೂಚಿ / ದಿಕ್ಸೂಚಿ ರಚನೆಯಾಗದೆ** ವಿಧಿಯಿಲ್ಲ. ಕೈಗೆಟುಕದೆ ಉಳಿದು ಹೋಗಿರುವುದಕ್ಕಿಂತಲೂ ಅವು ಎಲ್ಲಿವೆ ? ಹೋಗಿವೆ ? ಎಂಬುದನ್ನು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೇ ಈ ಗ್ರಂಥಸೂಚಿಗೆ ಮೂಲ ಆಧಾರವಾಗುತ್ತದೆ. ಇಂಥ ಗ್ರಂಥಸೂಚಿಗಳು ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ, ಸಂಶೋಧಕರಿಗೂ, ಶಿಕ್ಷಕ ವರ್ಗಕ್ಕೂ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗಿರುತ್ತದೆ. ಸಂದರ್ಭ ಸಾಹಿತ್ಯದ ಸಂದರ್ಭದಲ್ಲಿ ಆಧಾರಸ್ತಂಭಗಳಾಗುತ್ತವೆ.

ಮಾನವನ ಜ್ಞಾನವಿಕಸನಕ್ಕೆ ಗ್ರಂಥಭಂಡಾರಗಳು ಬಹುಮುಖ್ಯವಾದ ಸಾಧನಗಳಾಗಿವೆ. ಈ ಗ್ರಂಥಭಂಡಾರಗಳು ಮುದ್ರಿತ ಗ್ರಂಥಗಳನ್ನು ಅಮುದ್ರಿತ ಗ್ರಂಥಗಳನ್ನು ಒಳಗೊಂಡಿರುತ್ತವೆ. ಮುದ್ರಿತ ಗ್ರಂಥಗಳು ವಾಚಕರಿಗೆ ಸುಲಭ ಗಮ್ಯವಾದುವು. ಅಮುದ್ರಿತ ಗ್ರಂಥಗಳು ಪರಿಶೀಲನೆಗೆ ದುರ್ಲಭವೂ ದುಸ್ತರವೂ ಆದುವು. ಹಸ್ತಪ್ರತಿಗಳು ಸುಲಭಸಾಧ್ಯವಾಗಬೇಕೆದರೆ, ಗ್ರಂಥಗಳು ಸುಲಭವಾಗಿ ಸಿಕ್ಕಂತೆಯೇ ಗ್ರಂಥಸೂಚಿಗಳು ಸಿದ್ಧವಾಗಬೇಕು. ಇವುಗಳ ಸೂಚಿಗಳು ವರ್ಣನಾತ್ಮಕ ಸೂಚಿಗಳು ಅತ್ಯಂತ ಅವಶ್ಯವಾಗುತ್ತವೆ. ಯಾವುದೇ ಗ್ರಂಥಭಂಡಾರದಲ್ಲಿ ಎಲ್ಲ ಕೃತಿಗಳನ್ನೂ ಸಮಗ್ರವಾಗಿ ಪರಿಶೀಲಿಸುವದು ಸಾಧ್ಯವಾಗದ ಕೆಲಸ. ಆದರೆ ವರ್ಣನಾತ್ಮಕ ಸೂಚಿಯಿಂದ (Descriptive Catalogue) ಎಲ್ಲ ಕೃತಿಗಳು ಒಂದೆಡೆ ಸಿಕ್ಕು, ಎಲ್ಲ ಕೃತಿಗಳ ಒಂದು ಸಂಕ್ಷಿಪ್ತ ಮಾಹಿತಿ ಪಡೆದುಕೊಳ್ಳುವದು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಗ್ರಂಥಭಂಡಾರಗಳಲ್ಲಿನ ಹಸ್ತಪ್ರತಿಗಳಲ್ಲಿನ, ಓಲೆಗರಿಗಳ, ಪುಸ್ತಕ ಸಮಗ್ರ ಪರಿಶೀಲನೆ ಮಾಡಲು ಆಗದ ಕೆಲಸ. ಸೂಚೀಕರಣದಿಂದ ಗ್ರಂಥಾಲಯದಲ್ಲಿನ ಇಡೀ ಪುಸ್ತಕ ಪರಿಚಯವು ವ್ಯರ್ಥ

ಸಮಯದ ಪೋಲಾಗುತ್ತದೆ. ಆದ್ದರಿಂದ ಗ್ರಂಥಸೂಚಿ ನಿರ್ಮಾಣ ಆವಶ್ಯಕವಾಗುತ್ತದೆ. ಅದರಲ್ಲೂ ವರ್ಣನಾತ್ಮಕ ಸೂಚಿ (Descriptive Catalogue) ಯಿಂದ ಯಾವುದೇ ಒಂದು ಕೃತಿಯ ಸಂಕ್ಷಿಪ್ತ ಸಮಗ್ರ ಮಾಹಿತಿ ದೊರಕಿದಂತಾಗುತ್ತದೆ. ಒಬ್ಬ ಲೇಖಕನ, ವಿದ್ವಾಂಸನ, ವೈಯಕ್ತಿಕ ಕೃತಿಗಳ ಪರಿಶೀಲನೆಯೂ ಆದೀತು. ತಮಗೆ ಸರಿ ಎನಿಸಿದ ರೀತಿಯಲ್ಲಿ ಕೃತಿಗಳ ಪರಿಶೀಲನೆ ಸಾಧ್ಯವಾಗುವದಕ್ಕೆ 'ಗ್ರಂಥಸೂಚಿ' ಯೆಂಬ ದಿಕ್ಸೂಚಿ ಕನ್ನಡ ಸಾಹಿತ್ಯಕ್ಕೆ ಅವಶ್ಯವಾಗಿ ಬೇಕಾಗಿದೆ. ಅಲ್ಲಲ್ಲಿ ಬಿಡಿ ಪ್ರಯತ್ನಗಳು ನಡೆದಿವೆ. ಇಡಿಯಾಗಿ ಸಮಗ್ರವಾಗಿ ಗ್ರಂಥಸೂಚಿ ಕಾರ್ಯ ನಡೆದದ್ದಾದರೆ ಕನ್ನಡದಲ್ಲಿ ಅಚ್ಚಾದ ಒಟ್ಟು ಪುಸ್ತಕಗಳ ಸಮಗ್ರ ನೋಟ ಸಿಕ್ಕಂತಾಗಿ ವಿದ್ವಾಂಸರಿಗೂ, ಸಂಶೋಧಕರಿಗೂ ಈ ಸೂಚಿಗಳು ಕೈಪಿಡಿಗಳಂತಿರುತ್ತವೆ. ಇವುಗಳಿಂದ ಯಾವ ಯಾವ ಭಂಡಾರದಲ್ಲಿ ಯಾವ ಯಾವ ಕೃತಿಗಳು ಉಪಲಬ್ಧವಿವೆ. ಅವುಗಳ ಸ್ವರೂಪ ಸ್ಥಿತಿ-ಗತಿ ಎಂತಹುದು ಎಂಬುದನ್ನು ಅರಿತುಕೊಳ್ಳಬೇಕಾಗಿದೆ. ಒಟ್ಟಿನಲ್ಲಿ ಸೂಚಿಗಳು ಮೂಲಕೃತಿಗಳ ಒಂದು ಸಂಕ್ಷಿಪ್ತ ನೋಟವನ್ನು ನೀಡಬಲ್ಲವು. ಈ ಸೂಚಿಗಳ ಅವಲೋಕನದಿಂದ ಮೂಲಕೃತಿಗಳ ಅವಲೋಕನವನ್ನೇ ಮಾಡಿದಂತಾಗುತ್ತದೆ. ಗ್ರಂಥಭಂಡಾರವನ್ನು ಸೂರೆ ಹೊಡೆದು ತೋರುವಂತಹ ಕಾರ್ಯ ಇದು.

### • ಅಡಿಟಿಪ್ಪಣಿಗಳು •

೧. Girijakumar and Krishan Kumar : Bibliography : p. 3
೨. Chakraborti M. L. : Bibliography in theory and practive : p. 2 - 3
೩. Datta D. N. : Introduction to Library Cataloging, Calcutta, World Press, 1980
೪. Sangam S. L. : Cataloging, ನಿರ್ಮಲ ಪ್ರಕಾಶನ, ಗುಲಬರ್ಗಾ ೧೯೮೭
೫. Sengupta B. : Cataloging, 3rd edn., Calcutta World Press, 1974
೬. Sangam S. L. : Cataloging, ನಿರ್ಮಲ ಪ್ರಕಾಶನ, ಗುಲಬರ್ಗಾ ೧೯೮೭
೭. ಎಚ್. ನರಸಣ್ಣ : ಮುದ್ರಣ ಸಮೀಕ್ಷೆ, ಮೈಸೂರು : ಮೈಸೂರು ವಿಶ್ವವಿದ್ಯಾಲಯ, ೧೯೭೦, ಪು. ೧ - ೨
೮. ಎಚ್. ನರಸಣ್ಣ : ಮುದ್ರಣ ಸಮೀಕ್ಷೆ, ಮೈಸೂರು : ಮೈಸೂರು ವಿಶ್ವವಿದ್ಯಾಲಯ, ೧೯೭೦, ಪು. ೩
೯. ಎಚ್. ನರಸಣ್ಣ : ಮುದ್ರಣ ಸಮೀಕ್ಷೆ, ಮೈಸೂರು : ಮೈಸೂರು ವಿಶ್ವವಿದ್ಯಾಲಯ, ೧೯೭೦, ಪು. ೪
೧೦. ಎಚ್. ನರಸಣ್ಣ : ಮುದ್ರಣ ಸಮೀಕ್ಷೆ, ಮೈಸೂರು : ಮೈಸೂರು ವಿಶ್ವವಿದ್ಯಾಲಯ, ೧೯೭೦, ಪು. ೪
೧೧. ಎಚ್. ನರಸಣ್ಣ : ಮುದ್ರಣ ಸಮೀಕ್ಷೆ, ಮೈಸೂರು : ಮೈಸೂರು ವಿಶ್ವವಿದ್ಯಾಲಯ, ೧೯೭೦, ಪು. ೪
೧೨. Ranganathan S. R. : Classified Catalogue Code, 5th edn., Bombay Asia, 1964
೧೩. Ranganathan S. R. : Classified Catalogue Code, 5th edn., Bombay Asia, 1964
೧೪. Anglo American Catalogue Rules, 2nd Edn., London, L. A. 1978
೧೫. ಎಚ್. ನರಸಣ್ಣ : ಮುದ್ರಣ ಸಮೀಕ್ಷೆ, ಮೈಸೂರು : ಮೈಸೂರು ವಿಶ್ವವಿದ್ಯಾಲಯ, ೧೯೭೦, ಪು. ೧೦
೧೬. ಎಂ. ಎಂ. ಕಲಬುರ್ಗಿ : ಕನ್ನಡ ಹಸ್ತಪ್ರತಿಸೂಚಿಗಳು : ಗ್ರಂಥಾಲಯ ರಜತದೀಪ್ತಿ; ಬೆಂಗಳೂರು : ಸಾರ್ವಜನಿಕ ಗ್ರಂಥಾಲಯ ಇಲಾಖೆ, ೧೯೯೪, ಪು. ೧೩೦
೧೭. ಕೆ. ಎಸ್. ದೇಶಪಾಂಡೆ : ಕನ್ನಡ ಗ್ರಂಥಸೂಚಿ ರಚನೆಯ ಸಾಹಸ; ಗ್ರಂಥಾಲಯ ಒಂದು ಅಧ್ಯಯನ, ಪು. ೭೩
೧೮. ಕೆ. ಎಸ್. ದೇಶಪಾಂಡೆ : ಕನ್ನಡ ಗ್ರಂಥಸೂಚಿ ರಚನೆಯ ಸಾಹಸ; ಗ್ರಂಥಾಲಯ ಒಂದು ಅಧ್ಯಯನ, ಪು. ೭೩
೧೯. ಕೆ. ಎಸ್. ದೇಶಪಾಂಡೆ : ಕನ್ನಡ ಗ್ರಂಥಸೂಚಿ ರಚನೆಯ ಸಾಹಸ; ಗ್ರಂಥಾಲಯ ಒಂದು ಅಧ್ಯಯನ, ಪು. ೭೪

೨೦. ಕನ್ನಡ ಗ್ರಂಥಸೂಚಿ : ಒಂದನೆ ಸಂಪುಟ
೨೧. ಪಿ. ಕೆ. ಪಾಟೀಲ : ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಮತ್ತು ವಿಕಾಸ : ಮಾನವಿಕ ಕರ್ನಾಟಕ
೨೨. ಪಿ. ಕೆ. ಪಾಟೀಲ : ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಮತ್ತು ವಿಕಾಸ : ಮಾನವಿಕ ಕರ್ನಾಟಕ
೨೩. ಪಿ. ಕೆ. ಪಾಟೀಲ : ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಮತ್ತು ವಿಕಾಸ : ಮಾನವಿಕ ಕರ್ನಾಟಕ
೨೪. ಬಿ. ಎಸ್. ಕೇಶವನ್ : ಇಂಡಿಯಾ - ನ್ಯಾಶನಲ್ ಲೈಬ್ರರಿ (ಕಲ್ಕತ್ತಾ : ನ್ಯಾಶನಲ್ ಲೈಬ್ರರಿ, ೧೯೬೧), ಪು. ೧೪
೨೫. ಪಿ. ಕೆ. ಪಾಟೀಲ : ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಮತ್ತು ವಿಕಾಸ : ಮಾನವಿಕ ಕರ್ನಾಟಕ ಸಂ.............. ಸಂ.................
೨೬. ಪಿ. ಕೆ. ಪಾಟೀಲ : ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಮತ್ತು ವಿಕಾಸ : ಮಾನವಿಕ ಕರ್ನಾಟಕ ಸಂ.............. ಸಂ.................
೨೭. G. Sarvothama Rao : "The Andhra Desu Library Association" Granthalaya, 1 December, 1955, p. 56
೨೮. K. V. Krishnaswamy Aiyar, Ourselves, Looking Backwards and Forwards, Memoris of the Modern Library Association, (Madras : Madrass Library Association, 1940), p. 5
೨೯. Indira : ministry of Education, Report Advisory Committee for Libraries (Delhi : Manager of Publication, 1961), p. 5
೩೦. Pramila Chaudra Bose : "Bengal Library Association, A short account of its origin and activities" Bengal Library Association Bullitin, IX, p. 2
೩೧. An Ideal Wbrary Association, Modern Librarian, III (January 1933), p. 65
೩೨. M. O. Thomos : "Presidential Address" Proceedings of the first All India Library Conference (Calcutta : Indian Library Association, 1935), p. 9
೩೩. M. O. Thomos : "Presidential Address" Proceedings of the first All India Library Conference (Calcutta : Indian Library Association, 1935), p. 9
೩೪. A. L. Wootner : "Presidential Address" Proceedings of the second All India Library Conference (Calcutta : Indian Library Association, 1936), p. 5
೩೫. ಎಂ. ಎಂ. ಕಲಬುರ್ಗಿ : ಕನ್ನಡ ಹಸ್ತಪ್ರತಿಸೂಚಿಗಳು : ಗ್ರಂಥಾಲಯ ರಜತದೀಪ್ತಿ; ಬೆಂಗಳೂರು : ಸಾರ್ವಜನಿಕ ಗ್ರಂಥಾಲಯ ಇಲಾಖೆ, ೧೯೯೪, ಪು. ೧೩೦
೩೬. ಸಂಪಾದಕ ಮಂಡಳಿ : ಮುನ್ನುಡಿ : ಕನ್ನಡ ಗ್ರಂಥಸೂಚಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೧
೩೭. ಜಿ. ಕುಮಾರಪ್ಪ : ಗ್ರಂಥ ಮಾಹಿತಿ : ಗ್ರಂಥಲೋಕ, ಸಂ. : ೧೦, ಸಂ. : ೩, ಮಾರ್ಚ್ ೧೯೮೬, ಪು. ೩ - ೪
೩೮. ವಿಶ್ವಕೋಶ : ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೩, ಪು. ೭೮೫ - ೭೮೬
೩೯. ಗುಂಜಾಳ ಎಸ್. ಆರ್. : ಸೂಚೀಕರಣ : ಜ್ಞಾನ ಮತ್ತುಕ ಕ್ರಿಯೆ : ಗ್ರಂಥಾಲಯ ವಿಜ್ಞಾನ ಪ್ರಕಾಶನ, ಧಾರವಾಡ, ೧೯೭೬, ಪು. ೧
೪೦. ಗುಂಜಾಳ ಎಸ್. ಆರ್. : ಸೂಚೀಕರಣ : ಜ್ಞಾನ ಮತ್ತುಕ ಕ್ರಿಯೆ : ಗ್ರಂಥಾಲಯ ವಿಜ್ಞಾನ ಪ್ರಕಾಶನ, ಧಾರವಾಡ, ೧೯೭೬, ಪು. ೧ - ೨
೪೧. Girijakumar and Krishan Kumar : Theory of Cataloging : Vikas Publishing House Pvt. Ltd., Delhi, 1975, p. 1
೪೨. ಎಲ್. ಎಸ್. ಶೇಷಗಿರಿರಾವ್ : ಕನ್ನಡ - ಕನ್ನಡ - ಇಂಗ್ಲಿಷ್ ನಿಘಂಟು : IBH ಪ್ರಕಾಶನ, ಬೆಂಗಳೂರು, ೧೯೯೫, ಪು. ೭೨೮
೪೩. ಭಾರದ್ವಾಜ : Standard Dictionary : Sankeshwar Printers Ltd., Gadag, 2001, ಪು. ೧೨೬
೪೪. ಶಿವರಾಮ ಕಾರಂತ (ಸಂ.) : ಸಿರಿಗನ್ನಡ ಅರ್ಥಕೋಶ : IBH ಪ್ರಕಾಶನ, ಬೆಂಗಳೂರು, ೧೯೮೧, ಪು. ೯೬
೪೫. Oxford English Dictionary : Oxford clarendon Press, 1961, Vol. 1, p. 846
೪೬. Girijakumar and Krishan Kumar : Bibliography, New Delhi : Vikas, 1979
೪೭. Encyclopedia of Library and Information Science, Newyork : Marcel Dekker, 1978, Vol 25, p. 152
೪೮. ಕನ್ನಡ ಗ್ರಂಥಸೂಚಿ : ಮೈಸೂರು : ಮೈಸೂರು ವಿಶ್ವವಿದ್ಯಾಲಯ, ೧೯೭೧, ಸಂಪುಟ ೧, ಮುನ್ನುಡಿ ಪು. IX
೪೯. ಎಂ. ಚಿದಾನಂದಮೂರ್ತಿ : ಕನ್ನಡ ಗ್ರಂಥಸೂಚಿ : ಸಂಪುಟ ೧ : ಒಂದು ವಿಮರ್ಶೆ : ಸಾಧನೆ ಸಂ. ೨, ೧೯೭೩ ಪು. ೫೫ - ೭೦
೫೦. Packa H. H. : Arranging and Catalouging Mannscripts in Willium L elements Library American Archivist, Oct. 1938, p. 215 - 229
೫೧. ಶಿರಹಟ್ಟಿ ಎಸ್. ಜಿ. : ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ : ಗ್ರಂಥಾಲಯ ರಜತದೀಪ್ತಿ : ಪು. ೧೪೪ - ೧೫೦
೫೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ : ಮುನ್ನುಡಿ : ಮೈಸೂರು, ಕನ್ನಡ ಅಧ್ಯಯನ ಸಂಸ್ಥೆ : ಮೈಸೂರು ವಿಶ್ವವಿದ್ಯಾಲಯ, ೧೯೮೦

## ಅಧ್ಯಾಯ : ಮೂರು

# ಗ್ರಂಥಸೂಚಿಯ ರಚನೆಗಳು

## ಅಧ್ಯಾಯ : ಮೂರು

# ಗ್ರಂಥಸೂಚಿಯ ರಚನೆಗಳು

### ೩.೧ : ಪರಿಚಯ

ವಿಜ್ಞಾನ ಹಾಗೂ ತಾಂತ್ರಿಕ ಜ್ಞಾನ ಜಗತ್ತಿನ ಎಲ್ಲ ದೇಶಗಳಲ್ಲಿ ವಿಶೇಷತಃ ಐರೋಪ್ಯ ಮತ್ತು ಅಮೆರಿಕದಂಥ ಮುಂದುವರಿದ ದೇಶಗಳಲ್ಲಿ ಅತ್ಯಂತ ತೀವ್ರ ಗತಿಯಲ್ಲಿ ಬೆಳೆಯುತ್ತಿರುವುದು ಎಲ್ಲರಿಗೂ ತಿಳಿದ ಮಾತಾಗಿದೆ. ಹೀಗೆಂದ ಮಾತ್ರಕ್ಕೆ ಭಾರತದಂತಹ ಮುಂದುವರಿಯುತ್ತಿರುವ ದೇಶದಲ್ಲಿ ವಿಜ್ಞಾನದ ಬೆಳವಣಿಗೆ ಕುಂಠಿತವಾಗಿದೆಯೆಂದೂ ಭಾವಿಸಲಿಕ್ಕಾಗದು. ಭಾರತ, ಚೀನ, ಈಜಿಪ್ತ, ಗ್ರೀಸ್ ಹಾಗೂ ರೋಮ್ ದೇಶಗಳು ಮಾನವನ ಇತಿಹಾಸದಲ್ಲಿ ಅತ್ಯಂತ ಪುರಾತನ ರಾಷ್ಟ್ರಗಳೆಂದು ಹೆಸರುವಾಸಿಯಾಗಿವೆ. ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಮಹೋನ್ನತಿ ಸಾಧಿಸಿದ ಈ ಎಲ್ಲ ದೇಶಗಳಲ್ಲಿ ಇತ್ತೀಚಿನ ವರ್ಷಗಳಲ್ಲಿ ಇತಿಹಾಸಕಾರರು, ಉತ್ಖನನ ಹಾಗೂ ಸಂಶೋಧನೆ ನಡೆಸಿ ಸಂಗ್ರಹಿಸಿದ ಪುರಾತನ ಅವಶೇಷಗಳು ಮತ್ತು ದೊರೆತ ಹಸ್ತಪ್ರತಿಗಳು ಅಂದಿನ ಉಜ್ವಲ ನಾಗರಿಕತೆಯ ಮೇಲೆ ಸಾಕಷ್ಟು ಬೆಳಕು ಚೆಲ್ಲುತ್ತಿರುವದು ಬೇರೆ ಹೇಳಬೇಕಾಗಿಲ್ಲ. ಈ ಪುರಾತನ ಉತ್ಖನನ ಅವಶೇಷಗಳು ಮತ್ತು ಹಸ್ತಪ್ರತಿಗಳೇ ಅಂದಿನ ಮತ್ತು ಇಂದಿನ ನಾಗರಿಕತೆಯ ನಡುವೆ ಇರುವ ಬಲವಾದ ಕೊಂಡಿಗಳು. ಈ ಸಂಪತ್ತನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಕಂಡುಹಿಡಿದು ಸಂಗ್ರಹಿಸಿ, ರಕ್ಷಿಸಿ ಇಟ್ಟುಕೊಳ್ಳುವುದೇ ಇಂದಿನ ಆದ್ಯ ಕರ್ತವ್ಯ. ಈ ಉಜ್ವಲ ಸಂಪತ್ತನ್ನು ಕಡೆಗಣಿಸಿದರೆ ಮಾನವ ತಾನು ಸಾಧಿಸಬೇಕಾದ ಉನ್ನತ ನಾಗರಿಕತೆಗೆ ಕೊಡಲಿ ಪೆಟ್ಟು ಬಿದ್ದಂತಾಗುತ್ತದೆ. ಈ ಹಿನ್ನೆಲೆಯಲ್ಲಿ ಹಸ್ತಪ್ರತಿಗಳು, ಹಸ್ತಪ್ರತಿ ಸೂಚಿ, ಗ್ರಂಥಸೂಚಿ, ಶೋಧ, ರಕ್ಷಣೆ, ಮಾದರಿಗಳು, ಈ ಬಗೆಯ ರಚನೆಗಳು ಈಗಾಗಲೆ ರಚಿತಗೊಂಡಿವೆ. ಅವುಗಳ ಅಭ್ಯಾಸ ಅತ್ಯಂತ ಮಹತ್ವದ್ದಾಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ಅಧ್ಯಾಯದಲ್ಲಿ ಈ ಎಲ್ಲವುಗಳ ಚರ್ಚೆಯನ್ನು ವಿವರಿಸಲಾಗಿದೆ.

### ೩.೨ : ಗ್ರಂಥಸೂಚಿಯ ರಚನೆ :

ಕೇವಲ ಗ್ರಂಥ ಸಂಗ್ರಹ ಪಟ್ಟಿಯನ್ನು ಅಥವಾ ಗ್ರಂಥಸೂಚಿಯನ್ನು ಸಿದ್ಧಪಡಿಸಿ ಅದನ್ನು ಓದುಗರಿಗೆ ಒದಗಿಸುವುದು ಒಂದು ಪ್ರಭೇದ. ಗ್ರಂಥಸೂಚಿಯೊಂದಿಗೆ ಗ್ರಂಥಗಳ ಸವಿವರವಾದ ಟಿಪ್ಪಣಿ ಮತ್ತು ಇತರ ಮುಖ್ಯ

ವಿಷಯಗಳ ಅಂಶಗಳನ್ನು ಸೇರಿಸಿ ಗ್ರಂಥಗಳ ಆಂತರಿಕ ತಿರುಳನ್ನು ಬೆಳಕಿಗೆ ತರುವದು ಎರಡನೇ ರೀತಿಯ ಶೋಧನೆ. ಇವೆರಡನ್ನೂ ಒಂದುಗೂಡಿಸಿ ಮೂರನೆಯ ರೀತಿಯ ನಿರೂಪಣೆಯನ್ನು ಈ ಗ್ರಂಥಸೂಚಿಯಲ್ಲಿ ನೀಡಲಾಗಿದೆ. ಇದನ್ನು ಅನುಸರಿಸಿ ಕನ್ನಡ ಭಾಷೆಯಲ್ಲಿ ಲಭ್ಯವಿರುವ ವಿವಿಧ ರೀತಿಯ ಸಂದರ್ಭ ಗ್ರಂಥಗಳನ್ನು ಶೇಖರಿಸಿ ಮತ್ತು ಅವುಗಳ ವಿವರಗಳನ್ನಾಧರಿಸಿದ ಒಂದು ವಿಮರ್ಶಾತ್ಮಕ ಸಂಕ್ಷಿಪ್ತ ಸಮೀಕ್ಷೆ ಸಹ ಇಲ್ಲಿ ನೀಡಲಾಗಿದೆ.

ಸಂದರ್ಭ ಗ್ರಂಥಗಳು ಸಾಮಾನ್ಯ ಓದುಗನಿಂದ ಮೊದಲುಗೊಂಡು ಸಂಶೋಧನೆಯಲ್ಲಿ ತೊಡಗಿರುವವರಿಗೆ ಸರ್ವಕಾಲದಲ್ಲಿ ಪರಾಮರ್ಶನೆಗೆ ಬೇಕಾದ ಆಕರ ಗ್ರಂಥಗಳು. ಇವುಗಳ ಆಂತರಿಕ ಸಂಯೋಜನೆಯ ರೂಪರೇಖೆ ನಿಖರವಾದ ಮಾಹಿತಿಯನ್ನು ನಿಗದಿತವಾಗಿ ಪಡೆಯಲು ಅಥವಾ ಅವಲೋಕಿಸಲು ಉಪಯುಕ್ತ ಮತ್ತು ಅಷ್ಟೇ ಪ್ರಯೋಜನಶೀಲ. ಇಂತಹ ಲಾಭಾಂಶಗಳನ್ನು ಮನಗಂಡು, ಆ ಎಲ್ಲ ಲಕ್ಷಣಗಳನ್ನು ಇಲ್ಲಿ ಅಳವಡಿಸಲು ಪ್ರಯತ್ನ ಮಾಡಲಾಗಿದೆ.

ಸಂದರ್ಭ ಗ್ರಂಥಗಳು ಕೇವಲ ಪರಾಮರ್ಶನಕ್ಕೆ ಉಪಯುಕ್ತವಲ್ಲದೆ, ಜನಸಾಮಾನ್ಯರಿಗೆ ತಮ್ಮ ಬಹುಮೂಲ್ಯ ಸಮಯವನ್ನು ಸದುಪಯೋಗ ಪಡಿಸಿಕೊಳ್ಳಲು ಅಷ್ಟೇ ಸಹಕಾರಿಯಾಗಿವೆ. ತನ್ಮೂಲಕ ಈ ಎಲ್ಲ ವಿಶೇಷಗಳನ್ನು ಸೃಜನಾತ್ಮಕವಾಗಿ ಪ್ರಚುರಪಡಿಸಲು ಈ ಸಂಪ್ರಬಂಧ ರಚಿತವಾಗಿದೆ. ಇದರಲ್ಲಿ ಅಳವಡಿಸಿದ ನಿರೂಪಣೆ ಮತ್ತು ವಿವರಣೆ ಬಹುಮುಖ ಉಪಯುಕ್ತತೆ ಹೊಂದಿದೆ.

### ೩.೩ : ಗ್ರಂಥಸೂಚಿಗಳು ಏಕೆ ಬೇಕು ?

ಗ್ರಂಥಸೂಚಿಗಳು ಈಗಾಗಲೇ ತಿಳಿದಂತೆ ಆಧುನಿಕ ಸಾಹಿತ್ಯ ಬೆಳವಣಿಗೆಯ ಮೈಲುಗಲ್ಲುಗಳೆಂದು ಭಾವಿಸಬಹುದು. ಆದಕಾರಣ ಸೂಚಿಗಳು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅತ್ಯಂತ ಮಹತ್ವದ ಸಂಪನ್ಮೂಲ (Resources) ಗಳೆಂದು ಪರಿಗಣಿಸಲಾಗಿದೆ. ಮಾಹಿತಿಯು ಅತ್ಯಂತ ವೇಗದಲ್ಲಿ ಬೆಳೆಯುತ್ತ ಗಾತ್ರ, ಗುಣಗ್ರಾಹಿ, ಮೊತ್ತದ ರೂಪದಲ್ಲಿಯ ಬೆಳವಣಿಗೆಯು ನಮ್ಮನ್ನು ದಿಗ್ಭ್ರಮೆಗೊಳಿಸುತ್ತಿದೆ. ಈ ಬೆಳವಣಿಗೆಯನ್ನು ' ಮಾಹಿತಿ ಸ್ಫೋಟ ' (Infornation explosion) ವೆಂದು ಕರೆಯುತ್ತಾರೆ. ಈ ಮಾಹಿತಿ ಸ್ಫೋಟ ಅನೇಕ ಸಂಶೋಧನೆಗಳಿಗೆ ಮೂಲವಾಗಿ ಸಂಶೋಧಕರ ಗಮನ ಸೆಳೆದಿದೆ. ಮಾಹಿತಿ ಸ್ಫೋಟ ಸಂಶೋಧಕರ ವಿಷಯ, ವೇಳೆ, ಮತ್ತಿತರ ವಿಷಯಗಳೊಂದಿಗೆ ಆ ಮಾಹಿತಿ ತಂತ್ರಜ್ಞರನ್ನು ಕಾಡುತ್ತಿದೆ. ಈ ದಿಶೆಯಲ್ಲಿ ಕನ್ನಡದಲ್ಲಿ ಬರುತ್ತಿರುವ ಬೆಳವಣಿಗೆಗಳನ್ನು ಅನುಲಕ್ಷಿಸಬಹುದು. ಆದ್ದರಿಂದ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇತ್ತೀಚೆಗೆ ಅನೇಕ ಸಂಶೋಧನೆಗಳಿಗೆ ಆಹಾರವನ್ನು ಒದಗಿಸುತ್ತಿದೆ. ಅಲ್ಲದೆ ಇಡೀ ಕನ್ನಡ ಸಾಹಿತ್ಯ ಸೂಚಿಯನ್ನು ಸೂಚಿಸುವ ಕನ್ನಡ ಸಂದರ್ಭ ಗ್ರಂಥಗಳ ಬೆಳವಣಿಗೆ, ಅವುಗಳ

ವರ್ಗೀಕರಣ, ಬೆಳವಣಿಗೆ, ಸೂಚಿಗಳ ಬೆಳವಣಿಗೆ, ಅವಲೋಕನಗಳ ಸಂಕಲನ, ಇತ್ಯಾದಿಗಳನ್ನು ಈ ವಿಭಾಗವು ಅಭ್ಯಾಸ ಮಾಡುವವರಿಗೆ ಅತ್ಯಂತ ಆಶ್ಚರ್ಯಕಾರಕ ಸಂಗತಿಗಳನ್ನು ಒಳಗೊಂಡು ಅಭ್ಯಾಸಪೂರ್ಣ ಮಾಹಿತಿಯನ್ನು ನೀಡಬಲ್ಲುದು. ಆಸಕ್ತರು ತಮ್ಮ ಗಮನವನ್ನು ಈ ಕಡೆ ನೀಡಿದ್ದಾದರೆ, ಅತ್ಯಂತ ನಿಗೂಡವಾದ ವಿಷಯದ ಪರಿಪೂರ್ಣ ಅಭ್ಯಾಸ ಸಾಧ್ಯವಾದೀತು.

ಗ್ರಂಥಸೂಚಿಯ ಸಂಬಂಧಿತ ರಾಷ್ಟ್ರದ ಬೌದ್ಧಿಕ ಹುಟ್ಟುವಳಿಯ ನಿರ್ದೇಶಿ. ತಾತ್ವಿಕವಾಗಿ ರಾಷ್ಟ್ರೀಯ ಗ್ರಂಥಸೂಚಿಯು ಒಂದು ರಾಷ್ಟ್ರದಲ್ಲಿನ ಎಲ್ಲಾ ಪ್ರಕಟಿತ ಅಥವಾ ಅಪ್ರಕಟಿತ, ಎಲ್ಲಾ ಸಂಸ್ಥೆಗಳ, ಎಲ್ಲಾ ಸ್ವರೂಪದ ಎಲ್ಲಾ ವಿಷಯಗಳ ಹಾಗೂ ಎಲ್ಲಾ ಕಾಲದಲ್ಲಿನ ಗ್ರಂಥಗಳ ದಾಖಲೆ. ಆದರೆ ವಾಸ್ತವದಲ್ಲಿ, ಒಂದು ರಾಷ್ಟ್ರೀಯ ಗ್ರಂಥಸೂಚಿಯು ಸಾಮಗ್ರಿಗಳ ಸ್ವರೂಪ, ಭೌಗೋಳಿಕ ವ್ಯಾಪ್ತಿ, ಕಾಲಾವಧಿ ಪರಿವಿಡಿ ಹಾಗೂ ಉಗಮದ ನಿರ್ಬಂಧಕ್ಕೆ ಒಳಪಟ್ಟಿರುತ್ತದೆ.

## ೩.೪ : ಮುಂದಿನ ತಲೆಮಾರುಗಳ ಕೈಗನ್ನಡಿ

ಗ್ರಂಥಸೂಚಿಗಳು ಆಧುನಿಕ ಯುಗಕ್ಕೆ ಸಂಶೋಧಕರಿಗೆ, ವಿದ್ವಾಂಸರಿಗೆ, ಗ್ರಂಥಪಾಲಕರಿಗೆ ಅತ್ಯವಶ್ಯವೆನಿಸಿವೆ. ಹೇರಳವಾದ ಪ್ರಕಟಿತ ಗ್ರಂಥಗಳಲ್ಲಿ ಒಂದು ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳು ಎಷ್ಟು ಪ್ರಕಟವಾಗಿವೆಯೆಂಬುದನ್ನು ಇವು ಸೂಚಿಸುತ್ತವೆ. ಅಲ್ಲದೆ ಆಧುನಿಕ ಗ್ರಂಥಗಳ ಬಗ್ಗೆಯೂ ಇವು ಮಾಹಿತಿಯನ್ನು ಒದಗಿಸುತ್ತವೆ. ಗ್ರಂಥಪಾಲಕರಿಗಂತೂ ಇವು ಅವಶ್ಯ. ಏಕೆಂದರೆ ಗ್ರಂಥಾಲಯಕ್ಕೆ ಬೇಕಾದ ಗ್ರಂಥಗಳ ಆಯ್ಕೆಗೆ, ಅವುಗಳನ್ನು ಪಡೆಯುವುದಕ್ಕೆ ಬೇಕಾದ ವಿವರಗಳನ್ನು ಗ್ರಂಥಸೂಚಿಗಳು ಒದಗಿಸುತ್ತವೆ. ಒಂದು ಗ್ರಂಥಕ್ಕೆ ಸಂಬಂಧಿಸಿದ್ದನ್ನು ಲೇಖಕ, ಪ್ರಕಾಶಕ, ಇತ್ಯಾದಿ ವಿವರಗಳನ್ನು ಗ್ರಂಥಸೂಚಿಗಳು ಒದಗಿಸುತ್ತವೆ. ಕೆಲವು ಗ್ರಂಥಸೂಚಿಗಳು ಗ್ರಂಥವಿರುವ ಸ್ಥಳದ (ಯಾವ ಗ್ರಂಥಾಲಯದಲ್ಲಿದೆಯೆಂಬುದರ) ಮಾಹಿತಿಯನ್ನು ಕೊಟ್ಟಿರುತ್ತವೆ. ಇದರಿಂದ ಗ್ರಂಥಗಳಲ್ಲಿ ಅಂತರ್ ಗ್ರಂಥಾಲಯ ಎರವಲು ಸೌಲಭ್ಯವನ್ನು ಪಡೆಯುವಲ್ಲಿ ಸಹಾಯಕವಾಗುತ್ತದೆ. ಇವುಗಳ ಸಹಾಯದಿಂದ ಪ್ರತಿವರ್ಷ ಪ್ರಕಟವಾಗುವ ಗ್ರಂಥಗಳ ಸಂಖ್ಯೆಗಳನ್ನು ಹೇಳಬಹುದು. ಒಟ್ಟಾರೆ ಗ್ರಂಥಸೂಚಿಗಳು ಸಂಶೋಧಕರಿಗೆ ಹಾಗೂ ಗ್ರಂಥಪಾಲರಿಗೆ ಕೈಗನ್ನಡಿಯಾಗಿವೆ, ಮೈಲುಗಲ್ಲುಗಳಾಗಿವೆ.

ಅಚ್ಚಾದ ಎಲ್ಲ ಪುಸ್ತಕಗಳನ್ನೂ ಇಡುವದು ಬಹು ಅಪೇಕ್ಷಣೀಯವಾದ ಕೆಲಸವೇ ಆದರೂ ಅದು ಕೇವಲ ಆದರ್ಶದ ಮಾತೇ ಆಗಿ ಉಳಿಯುತ್ತದೆ. ಅಚ್ಚಾದ ಪುಸ್ತಕಗಳ ಪಟ್ಟಿಯೊಂದಿದ್ದರೆ ಕೊನೆಯ ಪಕ್ಷ ಕನ್ನಡದಲ್ಲಿ ಏನು ಬಂದಿದೆ, ಏನು ಬಂದಿಲ್ಲವೆಂಬುದಾದರೂ ತಿಳಿದೀತು. ಅಂತಹ ವಿವರಣಾತ್ಮಕ ಗ್ರಂಥಸೂಚಿಯಿಂದ ಪಂಡಿತರಿಗೆ, ಸಂಶೋಧಕರಿಗೆ, ವಿದ್ಯಾರ್ಥಿಗಳಿಗೆ, ಬೋಧಕರಿಗೆ, ಎಲ್ಲ ತರದ ಜ್ಞಾನೋಪಾಸಕರಿಗೂ ಅನುಕೂಲವಾಗುತ್ತದೆ.

"ಯಾವುದೇ ಭಾಷೆಯಲ್ಲಿ ರಚಿತವಾಗಿರುವ ಎಲ್ಲ ಬಗೆಯ ಬರವಣಿಗೆಗಳನ್ನು ಕುರಿತ ಎಲ್ಲ ಅಂಶಗಳ ಶಾಸ್ತ್ರೀಯ ನಿರೂಪಣೆಯೇ ಗ್ರಂಥಸೂಚಿ." [೩]

ಯಾವುದಾದರೂ ಕ್ಷೇತ್ರದಲ್ಲಿ ಏನು ಕೆಲಸವಾಗಿದೆ ಎಂದು ತಿಳಿಯಲು ಯತ್ನಿಸುವ ಪ್ರಾರಂಭಿಕ ಸಂಶೋಧಕನಿಗೆ ಈ ಗ್ರಂಥಸೂಚಿಗಳು ಕೈದೀವಿಗೆಯಿದ್ದಂತೆ. ಗ್ರಂಥಸೂಚಿಗಳ ಗ್ರಂಥಸೂಚಿಗಳು ಹುಟ್ಟಿವೆ. ಭಾರತದಲ್ಲಿ ಬಂಗಾಳಿ, ಮರಾಠಿಯಲ್ಲಿ, ಹಿಂದಿಯಲ್ಲಿ, ತೆಲುಗಿನಲ್ಲಿ ಗ್ರಂಥಸೂಚಿಗಳು ಬಂದಿವೆ. ಕನ್ನಡ ಗ್ರಂಥಗಳ ಕುರಿತು ಅಲ್ಲಲ್ಲಿ ಬಿಡಿ ಪ್ರಯತ್ನಗಳೊಂದಿಗೆ ಸಾಂಸ್ಥಿಕ ಪ್ರಯತ್ನಗಳು ನಡೆದಿವೆ.

## ೩.೫ : ಕನ್ನಡದಲ್ಲಿ ಗ್ರಂಥಸೂಚಿಗಳು

ಆಂಗ್ಲ ಭಾಷೆಯಲ್ಲಿ ವಿಪುಲವಾದ ಗ್ರಂಥಸೂಚಿಗಳು ಆಸಕ್ತರಿಗೆ, ಸಂಶೋಧಕರಿಗೆ ಅಪಾರವಾದ ವಿಷಯಗಳ ಹರವು ನೀಡಿದರೆ, ಕನ್ನಡ ಸಾಹಿತ್ಯ ಸಂದರ್ಭಗಳಲ್ಲಿ ಅವುಗಳ ರಚನೆ ತುಂಬಾ ನಿರಾಸೆಯನ್ನು ಹುಟ್ಟಿಸುತ್ತದೆ. ಹಿಂದಿನ ಕಾಲದಲ್ಲಿ ಅಗ್ರಹಾರಗಳು, ಮಠಗಳು ಲಿಪಿಗಾರರಿಗೆ ಆಶ್ರಯ ನೀಡಿ ಪ್ರಾಚೀನ ಗ್ರಂಥಗಳನ್ನು ಓಲೆಗರಿಗಳಲ್ಲಿ ಬರೆಯಿಸಿ ಸಂಗ್ರಹಿಸುವ ರೂಢಿ ಮಾಡಿಕೊಂಡಿದ್ದರು. ಮಧ್ಯಯುಗದಲ್ಲಿ ಕಲ್ಲಿನಲ್ಲಿ, ತಾಮ್ರಪತ್ರಗಳಲ್ಲಿ, ಶಾಸನಗಳ ರೂಪದಲ್ಲಿ, ಸಂಗ್ರಹಿಸಿಟ್ಟು ಮುಂದಿನ ಪೀಳಿಗೆಗೆ ಅನುಕೂಲವಾಗಲೆಂದು ಅವರು ತಿಳಿದುಕೊಂಡಿದ್ದರು. ಹೀಗೆ ಪ್ರಾಚೀನ ಗ್ರಂಥಗಳ ಯಾದಿಯನ್ನು ಮಾಡಿಡುವ ರೂಢಿಯು ಇದ್ದಿರಬಹುದೆಂದು ನಂಬಲಾಗಿದೆ. ಆದ್ದರಿಂದ ಪ್ರಾಚೀನ ಗ್ರಂಥದ ಆಕರಗಳು ಈಗಲೂ ಕೆಲವು ಮಠಗಳಲ್ಲಿ, ಅಗ್ರಹಾರಗಳಲ್ಲಿ, ಜಾಮೀನ್ದಾರರ ಮನೆಗಳಲ್ಲಿ, ದೇಸಾಯಿಗಳ ಮನೆಯಲ್ಲಿ ಕುತೂಹಲಕರ ಅಂಶಗಳೊಂದಿಗೆ ಸಿಗುವ ಘಟನೆಗಳು ಇಲ್ಲದಿಲ್ಲ. ಶಿಲಾಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ದೇವಸ್ಥಾನ ಮಂದಿರಗಳು, ಪುರಾತನ ಕಾಲದ ಎಲ್ಲ ಚರಿತ್ರೆಯನ್ನು ತಿಳಿದುಕೊಳ್ಳಲು ಅವಶ್ಯಕ ಆಕರಗಳಾಗಿವೆ. ಅದರಂತೆ ಸೂಚೀಕಾರ್ಯವು ಇವೆಲ್ಲವುಗಳಲ್ಲಿ ಒಂದು ಕಡೆ ಎಲ್ಲೋ ನಡೆದಿರಬೇಕು. ಅವನ್ನು ಹೆಕ್ಕಿ ನೋಡಿ, ಪರಿಶೀಲಿಸುವ ಮನಸ್ಸು / ಹುಡುಕುವ ಮನಸ್ಸಿಗೆ ಅವೆಲ್ಲ ಸಾಧ್ಯವೆಂದು ಊಹಿಸೋಣ.

ಹಾಗೆ ನೋಡಿದರೆ, ೧೮೨೮ ರಲ್ಲಿ ಪ್ರಕಟವಾದ ಎಚ್. ಎಚ್. ವಿಲ್ಸನ್ ಸಂಪಾದಕತ್ವದಲ್ಲಿ Mackanzie collection : A Descriptive catalogue of the oriental manuscripts (Vol. I) ಎಂಬ ಸೂಚಿ ಸಂಪುಟವೇ ಸೂಚಿಯನ್ನು ಕುರಿತ ಮೊದಲ ಸಂಪಾದಿತ ಕೃತಿ. ಇದು ಶಾಸ್ತ್ರೀಯವಾಗಿ ಕನ್ನಡದಲ್ಲಿ ಪ್ರಕಟವಾಗಿರುವ ಹಲವಾರು ಕೃತಿಗಳ ಬಗೆಗೆ ವಿವರಗಳನ್ನು ನೀಡುತ್ತದೆ. ನಂತರ ಮದ್ರಾಸ್, ಮೈಸೂರು, ಧಾರವಾಡ ಮುಂತಾದ ನಾನಾ ಭಾಗಗಳಲ್ಲಿ ಈ ವಿಷಯವನ್ನು ಕುರಿತಂತೆ ಹತ್ತು ಹಲವು ಕೃತಿಗಳು, ಲೇಖನಗಳು, ಸೂಚೀಸಂಪುಟಗಳು ಪ್ರಕಟಗೊಂಡಿವೆ. ಕನ್ನಡದಲ್ಲಿ ಪ್ರಕಟಗೊಂಡ ಪುಸ್ತಕಗಳಿಗೆ ಇದು ಮೊದಲ ಸೂಚಿಯಾಗಿರಬಹುದೆಂದು ಊಹಿಸಲಾಗುತ್ತದೆ. [೪]

## ೩.೬ : ಕನ್ನಡದಲ್ಲಿ ಗ್ರಂಥಸೂಚಿಗೆ ಪ್ರೇರಣೆಗಳು

" ಕನ್ನಡ ಭಾಷೆಯಲ್ಲಿ ಸಂದರ್ಭ ಗ್ರಂಥಗಳು " ಶೀರ್ಷಿಕೆಯಲ್ಲಿ ಇಂಗ್ಲೀಷ ಭಾಷೆಯಲ್ಲಿ ಒಂದು ಪ್ರಬಂಧ ಡಾ. ಅಶೋಕ ಯ. ಅಸುಂಡಿ ಮತ್ತು ಆನಂದರಾವ್ ಎನ್. ಇವರಿಂದ ಭಾರತೀಯ ವಿಶಿಷ್ಟ ಗ್ರಂಥಾಲಯ ಮತ್ತು ಮಾಹಿತಿ ಕೇಂದ್ರಗಳ ಸಂಘದ ೯ ನೇ ಸಮ್ಮೇಳನ ಕಲ್ಕತ್ತಾದಲ್ಲಿ ಮಂಡಿಸಲ್ಪಟ್ಟಿತು. ಬಹುಶಃ ಇದೇ ಗ್ರಂಥಸೂಚಿಯ ಸಂಬಂಧ ನಡೆದ ಪ್ರಥಮ ವ್ಯವಸ್ಥಿತ ಪ್ರಯತ್ನವಾಗಿರಬಹುದು. ಸದರಿ ಪ್ರಬಂಧ ಈ ವಿಷಯದ ಮೇಲೆ ಮಾಡಿದ ಮೊದಲ ಪ್ರಯತ್ನ ಮತ್ತು ಮೊಟ್ಟಮೊದಲ ಲೇಖನವೆಂದರೂ ತಪ್ಪಾಗಲಾರದು. ತದನಂತರ ರಾಘವನ್ ಅವರು ೧೯೭೨ ರಲ್ಲಿ ಪ್ರಕಟಿಸಿದ ಲೇಖನ ಈ ಸರಣಿಯಲ್ಲಿ ಎರಡನೆಯ ಪ್ರಯತ್ನ. ೧೯೬೦ ರ ದಶಕದಲ್ಲಿ ಈ ಎರಡು ಪ್ರಯತ್ನಗಳ ವಿನಃ ಇತರ ಉದಾಹರಣೆ ಬಹುಶಃ ಇಲ್ಲವೆಂದೇ ಹೇಳಬಹುದು. ಆದ್ದರಿಂದ ಕನ್ನಡದ ಸಂದರ್ಭ ಗ್ರಂಥಗಳ ವ್ಯಾಪಕ ಸಮೀಕ್ಷೆ ಅವಶ್ಯವಾಗಿ ಕಂಡುಬಂದಿದೆ.[೫] ಇಲ್ಲಿಂದ ೧೯೮೦ ರ ವರೆಗೆ ಈ ಹಾದಿಯಲ್ಲಿ ನೀರವತೆ ಉಂಟಾಗಿತ್ತು ಎಂದರೆ ಅತಿಶಯೋಕ್ತಿಯಲ್ಲ.

೧೯೮೦ ರಲ್ಲಿ ಡಾ. ಸಿ. ಆರ್. ಕರಿಸಿದ್ದಪ್ಪ ಈ ವಿಷಯವನ್ನು ಸಂಶೋಧನೆಗೆ ಆಯ್ದುಕೊಂಡು ಒಂದು ಪ್ರಮುಖ ಕಾರ್ಯ ಮಾಡಿದ್ದಾರೆ. ಅವರು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಂದರ್ಭ ಗ್ರಂಥಗಳ ಕುರಿತು ಸಲ್ಲಿಸಿದ ಪ್ರೌಢ ಪ್ರಬಂಧ ಈ ವರೆಗಿನ ಪ್ರಕಟಿತ / ಅಪ್ರಕಟಿತ ಲೇಖನ ಮತ್ತು ಪ್ರಬಂಧ ಮತ್ತಿತರ ಬರವಣಿಗೆಗಳಲ್ಲಿ ಪ್ರಮುಖವಾದ ಕೊಡುಗೆ. ಇವರದೇ (೨) ಲೇಖನ ಈ ವಿಷಯಕ್ಕೆ ಸಂಬಂಧಿಸಿದಂತೆ ' ಕರ್ನಾಟಕ ಗ್ರಂಥಾಲಯ ' ಪತ್ರಿಕೆಯಲ್ಲಿ ಪ್ರಕಟವಾಗಿದೆ. ಡಾ. ಸಿ. ಆರ್. ಕರಿಸಿದ್ದಪ್ಪ ಅವರ ಸಂಪ್ರಬಂಧ ಸಂದರ್ಭ ಸಾಹಿತ್ಯದಲ್ಲಿ ತೊಡಗಿಸಿಕೊಳ್ಳುವವರಿಗೆ ಒಂದು ಮಾರ್ಗದರ್ಶಿಯಂತೆ ಕೆಲಸ ನಿರ್ವಹಿಸಿದೆ. ಈ ಸಂಪ್ರಬಂಧವನ್ನು ಮಾದರಿಯಾಗಿಟ್ಟುಕೊಂಡು ಭಾರತೀಯ ಇತರೆ ಏಳು ಭಾಷೆಗಳಲ್ಲಿ ೭ ಸಂಪ್ರಬಂಧಗಳು ಹೊರಬಂದಿವೆ ಎಂದರೆ ಇದರ ಮಹತ್ವದ ಪರಿಣಾಮವನ್ನು ಅರಿಯಬಹುದು. ಈ ಪ್ರಬಂಧದಲ್ಲಿ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖ ಕೃತಿಗಳ ಬಗ್ಗೆ ವಿವರ, ಸೂಚಿಗಳನ್ನು ನೀಡಿದ್ದಾರೆ. ಅಲ್ಲದೆ ಲೇಖನ ರೂಪವಾಗಿ ಪ್ರಕಟವಾದ ಅನೇಕ ಪತ್ರಿಕೆಗಳಲ್ಲಿನ ಲೇಖನ ಸೂಚಿಗಳನ್ನು ತಮ್ಮ ಅಧ್ಯಯನಕ್ಕೆ ಅಳವಡಿಸಿಕೊಂಡಿದ್ದು ಇನ್ನೊಂದು ವಿಶೇಷತೆಯೆನ್ನಬಹುದು. ಕನ್ನಡ ಸಾಹಿತ್ಯ ಸಂದರ್ಭದಲ್ಲಿಯ ಎಲ್ಲ ಮಹತ್ವದ ಅವಶ್ಯ ಗ್ರಂಥಗಳ ವಿವರಗಳನ್ನು ತಮ್ಮ ಸಂದರ್ಭದಲ್ಲಿ ದಾಖಲಿಸಿದ್ದಾರೆ. ಜೊತೆಗೆ ಅವುಗಳು ಪ್ರಕಟಗೊಂಡ ಸ್ಥಳ, ಪುಟ, ಪ್ರಕಟಣೆಯ ವರ್ಷ, ಪ್ರಕಾಶಕರು, ಆಕಾರ ಇತ್ಯಾದಿ ಗ್ರಂಥಸೂಚಿಯ ಆಕರ (Bibliographical details) ಗಳನ್ನು ಅಧ್ಯಾಯದ ಕೊನೆಗೆ ಸವಿವರವಾದ ಗ್ರಂಥಸೂಚಿಯನ್ನು ನೀಡಿ ಅಭ್ಯಾಸಪೂರ್ಣ, ಅಧ್ಯಯನಗಳನ್ನು ನೀಡಿದ್ದಾರೆ. ಬಹುಶಃ ಗ್ರಂಥಸೂಚಿಗಳಿಗೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇಲ್ಲಿಂದ ಮೂಲ ಆಕರಗಳನ್ನು ಪಡೆಯಬಹುದು ಎನ್ನುವ ಸೂಚನೆ ನೀಡಿದ್ದಾರೆ.

ಅಲ್ಲದೆ ರೂಗಿಯವರ ಕಿರುಹೊತ್ತಿಗೆಯೊಂದು ಇದೇ ಅವಧಿಯಲ್ಲಿ ಪ್ರಕಟವಾಗಿದೆ. ಕೇವಲ ಈ ನಾಲ್ಕು ಅಥವಾ ಐದು ಲೇಕಖನ ಹೊತ್ತಿಗೆಗಳನ್ನು ಹೊರತುಪಡಿಸಿದರೆ, ಕನ್ನಡದಲ್ಲಿ ಸಂದರ್ಭ ಗ್ರಂಥಗಳ ಬಗೆಗೆ ನಡೆಸಿದ ಸಮೀಕ್ಷೆ ಅಥವಾ ಬರವಣಿಗೆ ತೀರ ಅಲ್ಪ. ಅದರಲ್ಲೂ ಕನ್ನಡ ಮಾಧ್ಯಮದಲ್ಲಿ ಪ್ರಸ್ತುತ ಈ ವಿಸ್ತೃತ ಗ್ರಂಥವೇ ಮೊದಲನೆಯದೆಂದು ಹೇಳಬಹುದು. ಈ ವಿಷಯದ ಬಗ್ಗೆ ಬಂದ ಅಲ್ಪ ಪ್ರಮಾಣದ ಬರವಣಿಗೆಯನ್ನು ಅವಲೋಕಿಸಿ ಮತ್ತು ಈ ದಿಶೆಯಲ್ಲಿ ಕೊರತೆಯನ್ನು ನೀಗಿಸಲು ಪೂರಕ (Supplementary) ವಾಗಿ ಡಾ. ಅಶೋಕ ಯ. ಅಸುಂಡಿ ಯವರು ಪ್ರಯತ್ನಿಸಿದ್ದಾರೆ. ಸದರಿಯವರ ಪ್ರಯತ್ನವಾದ ಗ್ರಂಥಸೂಚಿ ಪ್ರಯತ್ನ ಈ ದಿಶೆಯಲ್ಲಿ ಪ್ರಮುಖವಾದ ಪ್ರಯತ್ನವೆಂದೇ ಹೇಳಬಹುದು. ಈ " ಗ್ರಂಥಸೂಚಿ " ವಿವಿದೋದ್ದೇಶ ಹೊಂದಿ, ಗ್ರಂಥಪಾಲಕರಿಗೆ, ಸಂಶೋಧಕರಿಗೆ, ಕೋಶ ರಚನಾಕಾರರಿಗಲ್ಲದೆ, ಜನಸಾಮಾನ್ಯರಿಗೂ ಉಪಯೋಗವಾಗುವಂತೆ ಹೊಂದಿಸಿ ಬರೆಯಲಾಗಿದೆ. ಈ ಬಹುದ್ದೇಶವಿಟ್ಟುಕೊಂಡೇ ವಿವರಣಾತ್ಮಕ ಗ್ರಂಥಸೂಚಿಯನ್ನು ನಿರೂಪಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.[೧೨]

ಇಲ್ಲಿ ರನ್ನಕಂದ (ಕ್ರಿ. ಶ. ೯೦೦) ದಿಂದ ಆರಂಭಗೊಂಡು ೧೯೯೧ ರ ವರೆಗೆ ರಚಿತವಾದ, ಮತ್ತು ಅವುಗಳ ವಿವರಗಳನ್ನು ಕಲೆ ಹಾಕುವ ಸುಮಾರು ೭೮೦ ಶೀರ್ಷಿಕೆಗಳ ಸಂಗ್ರಹ ಇದಾಗಿದೆ. ಇಲ್ಲಿ ಸಂದರ್ಭ ಗ್ರಂಥಗಳ ವಿಶ್ಲೇಷಣಾತ್ಮಕ ಸಮೀಕ್ಷೆಯಲ್ಲದೆ, ವಿವರಣಾತ್ಮಕ ಸೂಚಿ ಒದಗಿಸಲಾಗಿದೆ. ಕನ್ನಡವನ್ನೇ ಪ್ರಧಾನ ಅಧ್ಯಯನ ಕ್ಷೇತ್ರವಾಗಿ ಆರಿಸಿಕೊಂಡು ಉನ್ನತ ತರಗತಿಗಳಲ್ಲಿ ವ್ಯಾಸಂಗನಿರತವಾದ ಜಿಜ್ಞಾಸುಗಳಿಗೆ ಮಾತ್ರವಲ್ಲದೆ ಬೋಧಕ ವರ್ಗದವರಿಗೂ, ಸಾಹಿತ್ಯಾಸಕ್ತರಾದ ಜ್ಞಾನಪಿಪಾಸುಗಳಿಗೂ ಈ ಸಂದರ್ಭ ಗ್ರಂಥಗಳ ವಿವರಣಾತ್ಮಕ ಸೂಚಿ ನೆಚ್ಚಿನ ನೇಹಿಗನಂತೆ ನೆರವಾಗುತ್ತದೆಂದು ನಂಬಿದ್ದೇನೆ ಸಂಶೋಧಕರಿಗಂತೂ ಇದು ವಿಶ್ವಾಸಾರ್ಹ ಕೈಪಿಡಿ.

ಇದು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ತೊಡಗಿಸಿಕೊಳ್ಳುವವರಿಗೆ.

೧) ಇತ್ತೀಚಿನವರೆಗಿನ ಲಭ್ಯ, ಅಲಭ್ಯ, ಪ್ರಕಟಿತ, ಅಪ್ರಕಟಿತ ಕನ್ನಡ ಭಾಷೆಯ ಸಂದರ್ಭ ಗ್ರಂಥಗಳ ವ್ಯಾಪಕ ಸಮೀಕ್ಷೆ.

೨) ಎಲ್ಲ ಶೀರ್ಷಿಕೆಗಳ ವಿವರಣಾತ್ಮಕ ಗ್ರಂಥಸೂಚಿಯ ರಚನೆ.

ಹೀಗೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಗ್ರಂಥಸೂಚಿಯ ಅಭ್ಯಾಸಕ್ಕೆ, ಸಂಶೋಧನೆಗೆ, ಅಧ್ಯಯನಕ್ಕೆ ತೊಡಗುವವರಿಗೆ ಅಶೋಕ ಅಸುಂಡಿಯವರ ಈ ಗ್ರಂಥ ಒಂದು ಮೈಲುಗಲ್ಲು ವ್ಯವಸ್ಥಿತ ಪ್ರಯತ್ನ ಇದಾಗಿದೆ. ದಿಕ್ಸೂಚಿಯೆಂದರೂ ಅತಿಶಯೋಕ್ತಿಯಾಗಲಾರದು. ಅವರು ಸುಮಾರು ಇಪ್ಪತ್ತು ವರ್ಷಗಳ ಶ್ರಮ, ಅಧ್ಯಯನ, ವೇಳೆಯನ್ನು ವ್ಯಯಿಸಿ ಈ ಗ್ರಂಥವನ್ನು ಪ್ರಕಟಿಸಿ ಗಮನಾರ್ಹ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿದ್ದಾರೆ.

ಭಾರತೀಯ ವಿಶಿಷ್ಟ ಗ್ರಂಥಾಲಯ ಮತ್ತು ಮಾಹಿತಿ ಕೇಂದ್ರಗಳ ಸಮ್ಮೇಳನದ ಅನಂತರ, ಭಾರತದ ಭಾಷೆಗಳಲ್ಲಿಯ ಸಂದರ್ಭ ಗ್ರಂಥಗಳ ಅಧ್ಯಯನಕ್ಕೆ ಒಂದು ರೀತಿಯ ಚಾಲನೆ ದೊರಕಿತು. ಇದಕ್ಕೆ ಉದಾಹರಣೆಯಾಗಿ, ಗಿಡವಾಣಿ ಮತ್ತು ಶ್ರೀಮತಿ ನವಲಾಣಿ ಇವರು ರಚಿಸಿದ ಭಾರತದ ಭಾಷೆಗಳಲ್ಲಿ ಸಂದರ್ಭ ಗ್ರಂಥಗಳ ಲೇಖನಗಳನ್ನು ನೋಡಬಹುದು.

ರೂಗಿ. ಎಸ್. ಎಮ್.: ಮಾಹಿತಿ ಮೂಲಗಳು ಆಯ್ದ ಕನ್ನಡ ಪರಾಮರ್ಶನ ಗ್ರಂಥಗಳ ಸಂಕ್ಷಿಪ್ತ ಪರಿಚಯ ಅನಿಗೊಳ, ಬೈಲಹೊಂಗಲ ತಾಲೂಕು, ದೀಪಾ ಶರ್ಮಾ ಇವರು ಸಂಪಾದಿಸಿದ " ಭಾರತೀಯ ಭಾಷೆಗಳ ಸಂದರ್ಭ ಗ್ರಂಥಗಳು." ಸಮ್ಮೇಳನದ ನಂತರ, ಎಲ್ಲ ಭಾರತೀಯ ಭಾಷೆಗಳನ್ನೊಳಗೊಂಡಂತಹ ಲಭ್ಯವಿರುವ ಸಂದರ್ಭ ಗ್ರಂಥಗಳನ್ನು ಒಂದುಗೂಡಿಸಿದ ಕೆಲವು ಇಂತಹ ಗ್ರಂಥಸೂಚಿಗಳನ್ನು (೮.೯) ರಚಿಸಲು ಅವಕಾಶವಾಯಿತೆಂದೇ ಹೇಳಬೇಕಾಗುತ್ತದೆ. ಇಂತಹ ಹಲವು ಪ್ರಮುಖ ರಚನೆಗೆ ಆ ಸಮ್ಮೇಳನ ಚಾಲನೆ ನೀಡಿತು. ಸಮ್ಮೇಳನದ ಪರ್ಯಾಪ್ತ ಪ್ರಾಪ್ತಿ ಮತ್ತು ಸಫಲ ಫಲಿತಾಂಶ ಇದೆಂದು ಹೇಳಿದರೂ ತಪ್ಪಾಗಲಾರದು. ಪ್ರಸ್ತುತ ಗ್ರಂಥಸೂಚಿಗಳು ಇಂಗ್ಲೀಷ ಭಾಷಾ ಮಾಧ್ಯಮದಲ್ಲಿದ್ದು ಪ್ರಾದೇಶಿಕ ಭಾಷೆಯ ಓದುಗರಿಗೆ ಹೆಚ್ಚು ಪ್ರಯೋಜನಕವಾಗಿಲ್ಲ. ಇದಲ್ಲದೆ, ಆ ಕೃತಿಗಳು ಇನ್ನೂ ಪರಿಪೂರ್ಣತೆಯೆಡೆಗೆ ಮುಂದುವರಿಯಬೇಕಾಗಿವೆ. ಇದು ಕೇವಲ ಊಹೆಯಾಗಿರದೆ, ಪ್ರತ್ಯಕ್ಷವಾಗಿ ಆ ಗ್ರಂಥಗಳನ್ನು ಅವಲೋಕಿಸಿ ಅನಿಸಿಕೆಗಳನ್ನು ಇಲ್ಲಿ ಪ್ರಚುರಪಡಿಸಲಾಗಿದೆ. ಏಕೆಂದರೆ ಪ್ರಾದೇಶಿಕ ಭಾಷೆ ಮಾಧ್ಯಮವಾಗಿ ಆಯಾ ಭಾಷೆಯಲ್ಲಿ ಲಭ್ಯವಿರುವ ಸಂದರ್ಭ ಗ್ರಂಥಗಳನ್ನೊಳಗೊಂಡ ಪ್ರತ್ಯೇಕ ಗ್ರಂಥಸೂಚಿಗಳ ರಚನೆ ಆಗಬೇಕಾದದ್ದು ಆವಶ್ಯಕ ಮತ್ತು ಹೆಚ್ಚು ಪ್ರಯೋಜನಕಾರಿ ಎಂದು ವೇದ್ಯವಾಗುತ್ತದೆ. ಇದೇ ಉದ್ದೇಶವನ್ನು ಇಲ್ಲಿ ಅಳವಡಿಸಲಾಗಿದೆ.

ಕನ್ನಡ ಸಂದರ್ಭ ಗ್ರಂಥಗಳ ವಿವರಗಳನ್ನೊಳಗೊಂಡ ಪ್ರಕಟಿತ ಮತ್ತು ಅಪ್ರಕಟಿತ ಲೇಖನಗಳ ಮತ್ತು ಪ್ರಬಂಧಗಳ ಸಮೀಕ್ಷೆಯನ್ನು ಮಾಡಲಾಗಿದೆ. ಆ ಸಮೀಕ್ಷೆಯಿಂದ ಎರಡು ಅಂಗಗಳನ್ನಾಗಿ ಎತ್ತಿ ತೋರಿಸಬೇಕಾಗುತ್ತದೆ. ಅವಾವುವೆಂದರೆ :

೧) ಇತ್ತೀಚಿನವರೆಗೆ ಲಭ್ಯ, ಅಲಭ್ಯ, ಪ್ರಕಟಿತ ಮತ್ತು ಅಪ್ರಕಟಿತ ಕನ್ನಡ ಭಾಷೆಯ ಸಂದರ್ಭ ಗ್ರಂಥಗಳ ವ್ಯಾಪಕ ಸಮೀಕ್ಷೆ.

೨) ಎಲ್ಲ ಶೀರ್ಷಿಕೆಗಳ ವಿವರಣಾತ್ಮಕ ಗ್ರಂಥಸೂಚಿಯ ರಚನೆ.

ಪ್ರಸ್ತುತ ಎರಡನೆಯ ಅಗತ್ಯವನ್ನು ಮನಗಂಡು ಈ ಗ್ರಂಥಸೂಚಿಯ ರಚನೆಯ ಕಾರ್ಯವಾಗಿ ಮುಂದಿನ ಹೆಜ್ಜೆ ಇಡಲಾಗಿದೆ. ಗ್ರಂಥಸೂಚಿಯ ರಚನೆಯ ಕಾರ್ಯ ಕೈಗೊಂಡಾಗ, ಅದರ ಒಳರಚನೆಯ ರೂಪರೇಷೆಗಳ ಬಗೆಗೂ ವಿವೇಚಿಸುವುದು ಸಹ ಅಷ್ಟೇ ಅವಶ್ಯ. ಯಾವುದೇ ಗ್ರಂಥಸೂಚಿಯ ಬಹುಮುಖ ಆವಶ್ಯಕತೆಗಳನ್ನು ಪೂರೈಸುವಂತಾಗಬೇಕಾದರೆ ಅದರ ಒಳರಚನೆಗೆ ಹೆಚ್ಚಿನ ಮಹತ್ವ ನೀಡುವುದು ಸಮಂಜಸ. [೧೩]

ಇದರ ಉದ್ದೇಶದಿಂದಲೇ ಇಲ್ಲಿ ಪ್ರತಿ ಶೀರ್ಷಿಕೆಯ ಗ್ರಂಥಸ್ಥ ವಿವರವಲ್ಲದೆ, ಉಪಯುಕ್ತ ಮಾಹಿತಿ, ಟೀಕೆ, ಟಿಪ್ಪಣಿ ಮತ್ತು ಇತರ ಸಮರ್ಪಕ ಅಂಶಗಳನ್ನು ಈ ಗ್ರಂಥಸೂಚಿಯಲ್ಲಿ ಅಳವಡಿಸಲಾಗಿದೆ. ಈ ದೃಷ್ಟಿಯಿಂದ ಪ್ರಸ್ತುತ ಗ್ರಂಥಸೂಚಿಯ ರಚನೆ ಒಂದು ವಿಶಿಷ್ಟ ರೀತಿಯದಾಗಿದೆ. ಕಾಲಗರ್ಭದಲ್ಲಿ ಅಡಗಿಹೋದ ಅನೇಕ ವಿಷಯ ವಿಶೇಷಗಳನ್ನು ಎತ್ತಿ ತೋರಿಸುವಲ್ಲಿ ಈ ವಿವರಣಾತ್ಮಕ ಗ್ರಂಥಸೂಚಿ ಪ್ರಯತ್ನಪಟ್ಟಿದೆ.

ಈ ಪ್ರಯತ್ನ ಗ್ರಂಥಪಾಲಕರಿಗೆ, ಕನ್ನಡ ಸಂಶೋಧನಾರ್ಥಿಗಳಿಗೆ ಕೋಶ ರಚನಾಕಾರ್ಯದಲ್ಲಿ ತೊಡಗಿದವರಿಗೆ ಮತ್ತು ಸಾಮಾನ್ಯ ಓದುಗರಿಗೆ ಉಪಯುಕ್ತ ಹಾಗೂ ಪ್ರಯೋಜನಕಾರಿಯಾಗಬೇಕೆಂಬುದು ರಚನಾಕಾರರ ದೃಢ ನಂಬಿಕೆ. ಇದರ ರಚನೆ ೧೯೭೭ ರಲ್ಲಿ ಪ್ರಾರಂಭವಾದರೂ ೨೦ ವರ್ಷಗಳ ನಂತರ ಸಿದ್ಧವಾಗಿದೆ. ಆಗ ರಚಿಸಿದ್ದಕ್ಕಿಂತಲೂ ಈಗ ಹೆಚ್ಚು ಸಮಂಜಸವಾದ ಮತ್ತು ಪ್ರೌಢ ಉಲ್ಲೇಖಗಳನ್ನು ಸೇರಿಸಲು ಅನುವು ಆಯಿತೆನ್ನಬಹುದು.

ಸಂದರ್ಭ ಗ್ರಂಥಗಳ ಈ ಗ್ರಂಥಸೂಚಿಯ ಆದಿಯಾಗಿ, ಅನೇಕ ವಿಷಯಗಳು ಸಹ ಸಮರ್ಪಕವೆಂದರಿತು, ಕೆಳಗಿನ ಶೀರ್ಷಿಕೆಗಳಡಿಯಲ್ಲಿ ನಿರ್ದಿಷ್ಟ ವೃತ್ತಾಂತ ನೀಡಲಾಗಿದೆ. ಇದನ್ನು ಪ್ರತ್ಯೇಕ ಸಮೀಕ್ಷೆ ಮತ್ತು ಸಂಕ್ಷಿಪ್ತ ವಿಶ್ಲೇಷಣೆಯಂತೆ ಸಹ ಗ್ರಹಿಸಬಹುದು. ಈ ಗ್ರಂಥದ ಒಳಗಡೆಯ ರಚನೆಯನ್ನು ಮೇಲೆ ಹೇಳಿದಂತೆ, ಕೆಳಗಿನ ಶೀರ್ಷಿಕೆಗಳಡಿಯಲ್ಲಿ ವಿವಿಧ ಭಾಗಗಳಾಗಿ ವಿಂಗಡಿಸಲಾಗಿದೆ.

೧) ಗ್ರಂಥಗಳ ಸಂಗ್ರಹ ಕಾರ್ಯಕ್ಕೆ ಅನುಸರಿಸಿದ ವಿಧಾನ.

೨) ಸಂದರ್ಭ ಗ್ರಂಥಗಳ ಉಗಮ ಮತ್ತು ವಿವಿಧತೆ.

೩) ಸಂದರ್ಭ ಗ್ರಂಥಗಳ ಮೌಲ್ಯಗಳು.

೪) ಭಾರತೀಯ ಭಾಷೆಗಳಲ್ಲಿ ಸಂದರ್ಭ ಗ್ರಂಥಗಳು :
ವಿಶ್ಲೇಷಣೆ

೫) ಕನ್ನಡದಲ್ಲಿ ಸಂದರ್ಭ ಗ್ರಂಥಗಳು : ಅವಲೋಕನ

೬) ಸಂದರ್ಭ ಗ್ರಂಥಗಳ ವಿವರಣಾತ್ಮಕ ಸೂಚಿ :
ದಾಖಲೆ ರೂಪ ಮತ್ತು ವಿವರ.

ಈ ಶೀರ್ಷಿಕೆಗಳಡಿಯಲ್ಲಿ ಕೊಡಲಾದ ವಿವರಗಳನ್ನು ಬೇರೆ ಬೇರೆ ಗ್ರಂಥಗಳಿಂದ ಸಂಗ್ರಹ ಮಾಡಲಾಗಿರುವದಲ್ಲದೆ, ಗ್ರಂಥಕರ್ತರ ಕೆಲವು ಸ್ವಂತ ಅನಿಸಿಕೆಗಳ ಆಧಾರದ ಮೇಲೆ ಕೊಡಲಾಗಿದೆ. ಇದು ಕೇವಲ ಐತಿಹಾಸಿಕ ಅಥವಾ ತುಲನಾತ್ಮಕ ವಿವರವಾಗಿದೆ.

ಸಂದರ್ಭ ಗ್ರಂಥಗಳ ಒಟ್ಟು ಸಂಗ್ರಹದ ಸಂಕ್ಷೇಪ್ತ, ಆದರೆ ಪೂರಕ ಮೌಲ್ಯಮಾಪನವೆಂದರೂ ತಪ್ಪಾಗಲಾರದು. ತಾಂತ್ರಿಕ ಮತ್ತು ವೈಜ್ಞಾನಿಕ ಬೆಳವಣಿಗೆಯಾದರೂ ಸಂದರ್ಭ ಗ್ರಂಥಗಳು ಮಹತ್ವದ ಮಾಹಿತಿ ನೀಡುವಲ್ಲಿ ಪ್ರಮುಖ ಪಾತ್ರ ವಹಿಸಿಕೊಂಡಿವೆ. ಆದ್ದರಿಂದ ಅವು ಸದಾಕಾಲ ಮತ್ತು ಸರ್ವಕಾಲ ಉಪಯುಕ್ತ ಮಾಹಿತಿ ಮೂಲಗಳು.

## ೩.೭ : ಸೂಚಿ ಸಾಹಿತ್ಯ

ವ್ಯವಸ್ಥಿತ ನಿರ್ಮಿತಿಯಿಂದಾಗಿ ' ಸೂಚಿ ಸಾಹಿತ್ಯ 'ಕ್ಕೆ ಇಂದು ವಿಜ್ಞಾನದ ಮರ್ಯಾದೆ ಪ್ರಾಪ್ತವಾಗಿದೆ. ಅದರ ಪ್ರಯೋಜನ, ಮಹತ್ವ ಹೆಚ್ಚುತ್ತ ನಡೆದಂತೆ ಅಗತ್ಯಕ್ಕೆ ತಕ್ಕ ತಂತ್ರಗಳು ಆವಿಷ್ಕಾರಗೊಂಡು, ಅದು ವೈವಿಧ್ಯಪೂರ್ಣವಾಗಿ ಬೆಳೆಯತೊಡಗಿದೆ. ೧೯೪೦ ರಷ್ಟು ಪೂರ್ವದಲ್ಲಿಯೇ ' ಥಿಯೋಡೋರ್ ಬೆಸ್ಟರ್‌ಮನ್ ' ಅವರು ರಚಿಸಿದ " ಗ್ರಂಥಸೂಚಿಗಳ ಗ್ರಂಥಸೂಚಿ " ಈ ಕ್ಷೇತ್ರದ ವ್ಯಾಪ್ತಿ, ವಿಕಾಸಗಳನ್ನು ವ್ಯಕ್ತಪಡಿಸುತ್ತದೆ.

ಈ ' ಸೂಚಿ ಸಾಹಿತ್ಯ 'ದ ಒಂದು ಅಂಗವಾದ ' ಹಸ್ತಪ್ರತಿ ಸೂಚಿ ' ರಚನೆಯ ಕಾರ್ಯ, ಕರ್ನಾಟಕದಲ್ಲಿ ಬಹುದಿನಗಳಿಂದಲೂ ನಡೆದಿದೆ. ಇತ್ತೀಚೆಗೆ ' ಮುದ್ರಿತ ಗ್ರಂಥಸೂಚಿ ' ಗಳು ಅಚ್ಚಾಗುತ್ತಲಿವೆ. ಆದರೆ ' ಶಾಸನಸೂಚಿ ' ಗಳ ರಚನೆ ಮಾತ್ರ ಕರ್ನಾಟಕದಲ್ಲಿ ತುಂಬ ಅಲಕ್ಷಿತವಾಗುತ್ತಿದೆ. ೧೮೯೮ - ೯೯ ರಷ್ಟು ಪೂರ್ವದಲ್ಲಿನೇ ಎಫ್. ಕೀಲಹಾರ್ನ್ ಅವರು " ಇನ್‌ಸ್ಕ್ರಿಪ್ಷನ್ಸ್ ಆಫ ನಾರ್ಥನ್ ಇಂಡಿಯಾ " (EI. V, Appendix) ಎಂಬ ಸೂಚಿಯನ್ನು ಪ್ರಕಟಿಸಿದರು. ಆಮೇಲೆ ಅದೇ " ಎಫ್. ಕೀಲಹಾರ್ನ್ " ಅವರ " ಇನ್‌ಸ್ಕ್ರಿಪ್ಷನ್ಸ್ ಆಫ ಸೌಥ್ ಇಂಡಿಯಾ " (EI. VII, Appendix, 1902-3), ಎಚ್. ಲ್ಯೂಡರ್ಸ್ ಅವರ " ಲಿಸ್ಟ್ ಆಫ್ ಬ್ರಾಹ್ಮಿ ಇನ್‌ಸ್ಕ್ರಿಪ್ಷನ್ಸ್ " (EI. X, Appendix, 1912), ವಿ. ರಂಗಾಚಾರ್ಯರ " ಇನ್‌ಸ್ಕ್ರಿಪ್ಷನ್ಸ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ " ಸಂಪುಟ ೧, ೨, ೩ (೧೯೧೯), ಎನ್. ವಿ. ಮುಜುಂದಾರ ಅವರ " ಲಿಸ್ಟ್ ಆಫ್ ಖರೋಷ್ಠಿ ಇನ್‌ಸ್ಕ್ರಿಪ್ಷನ್ಸ್ " (JASB, 1942), ಆಯ. ಶಿವೆಲ್ ಅವರ " ದಿ ಹಿಸ್ಟಾರಿಕಲ್ ಇನ್‌ಸ್ಕ್ರಿಪ್ಷನ್ಸ್ ಆಫ್ ಸೌಥ್ ಇಂಡಿಯಾ " (೧೯೩೨), ಎ. ವಿ. ನಾಯಕ ಅವರ " ಇನ್‌ಸ್ಕ್ರಿಪ್ಷನ್ಸ್ ಆಫ್ ಡೆಕ್ಕನ್ " BDCR, Vol., (IX, 1947-48), ಸಿ. ಆರ್. ಕೆ. ಚಾರ್ಲು ಅವರ " ಲಿಸ್ಟ್ ಆಫ್ ಇನ್‌ಸ್ಕ್ರಿಪ್ಷನ್ಸ್ ನೋಟೀಸ್ಡ್ ಇನ್ ದಿ ಆ್ಯನುವೆಲ್ ರಿಪೋರ್ಟ್ಸ್ ಆ್ಯಂಡ್ ದೇಅರ ಸಬ್ಜೆಕ್ಟ್ ಇಂಡೆಕ್ಸ್ ", ಎಚ್. ಎನ್. ಡೇವಿಡ್ ಅವರ " ಗ್ವಾಲಿಯರ ರಾಜ್ಯ ಕೆ ಅಭಿಲೇಖ್ " – ಇತ್ಯಾದಿ ಶಾಸನಸೂಚಿಗಳು ಬೆಳಕು ಕಂಡಿವೆ. ಇವುಗಳಲ್ಲಿ ಕರ್ನಾಟಕವನ್ನು ಗುರಿಯಿಟ್ಟು ರಚಿಸಿದ ಸೂಚಿ ಒಂದೂ ಇಲ್ಲ. ಈ ಕೊರತೆಯನ್ನು ಪ್ರಥಮ ಬಾರಿ ತುಂಬಿಕೊಡುತ್ತದೆ. ಕನ್ನಡ ಅಧ್ಯಯನ ಪೀಠ ಕೈಗೆತ್ತಿಗೊಂಡಿರುವ " ಕರ್ನಾಟಕದಜಿಲ್ಲಾ ಸೀಮಿತ ಶಾಸನಸೂಚಿ ಯೋಜನೆ ". ಈ ಮೊದಲು " ಧಾರವಾಡ ಜಿಲ್ಲೆಯ ಶಾಸನ ಸೂಚಿಯು " ಪ್ರಕಟವಾಗಿದೆ.

## ೩.೮ : ದೇಶೀಯ ಪ್ರಕಟಣೆಗಳು

೧೮೬೪ ನೇ ಡಿಸೆಂಬರ್ ವರೆಗೆ ಬೊಂಬಾಯಿ ಪ್ರಾಂತದಲ್ಲಿ ಪ್ರಕಟವಾಗಿರುವ **ದೇಶೀಯ ಪ್ರಕಟಣೆಗಳು** ಎಂಬ ಪುಸ್ತಕ ಪಟ್ಟಿಯನ್ನು ಸರ್. ಎ. ಗ್ರ್ಯಾಂಟ್ ಅವರು ೧೮೬೫ ರಲ್ಲಿ ತಯಾರಿಸಿ ಪ್ರಕಟಿಸಿದರು.[೧೫] ಇದರಲ್ಲಿ ೬೯೮ ನಮೂದುಗಳು ದಾಖಲಾಗಿವೆ. ಕನ್ನಡ ಗ್ರಂಥಸೂಚಿಯ ಮೊದಲ ಪ್ರಯತ್ನ ಇದಾಗಿದ್ದು, ಗ್ರ್ಯಾಂಟ್ ಅವರ ಸೂಚನೆಯ ಮೇರೆಗೆ ಅಂದಿನ ಸರಕಾರವು ೧೮೬೭ ರಲ್ಲಿ ಒಂದು ಕಾನೂನನ್ನು ರಚಿಸಿತು. ಅದರ ಪ್ರಕಾರ ಬ್ರಿಟಿಷ್ ಮ್ಯೂಜಿಯಂನಲ್ಲಿ ಸಂಗ್ರಹಗೊಂಡ ಕನ್ನಡ ಪುಸ್ತಕಗಳ ಪಟ್ಟಿಯನ್ನು " ಎ ಕ್ಯಾಟಲಾಗ್ ಆಫ್ ದಿ ಕನ್ನಡ ಬಡಗ ಆ್ಯಂಡ್ ಕೂರ್ಗ್ ಬುಕ್ಸ್ ಇನ್ ದಿ ಲೈಬ್ರರಿ ಆಫ್ ದಿ ಬ್ರಿಟಿಷ್ ಮ್ಯೂಜಿಯಂ " ಎಂಬ ಆಕರ ಗ್ರಂಥವನ್ನು ಎಲ್. ಡಿ. ಬಾರ್ನೆಟ್ ೧೯೧೦ ರಲ್ಲಿ ಪ್ರಕಟಿಸಿದನು. ದಿ. ನರಸಿಂಹಾಚಾರ್ಯರು ಮತ್ತು ಜೆ. ಎಫ್. ಫ್ಲೀಟ್ ಎಂಬ ವಿದ್ವಾಂಸರು ಕನ್ನಡದ ಈ ಕೆಲಸಕ್ಕಾಗಿ ನೆರವು ನೀಡಿದರಂತೆ. ಇದು ಬಹಳ ಉಪಯುಕ್ತ ಗ್ರಂಥ. ಅಲ್ಲದೆ ಆಸಕ್ತರೆಲ್ಲರಿಗೂ ಇದು ಆಕರವಾಗಲಿದೆ.

ಇದಕ್ಕೆ ಪೂರಕವಾಗಿ ' ಸಪ್ಲಿಮೆಂಟರಿ ಕ್ಯಾಟಲಾಗ್ ಆಫ ದಿ. ಕನ್ನಡ ಬುಕ್ಸ್ ಇನ್ ಬ್ರಿಟಿಷ್ ಲೈಬ್ರರಿ ' ಸೂಚಿಯನ್ನು ಡಾ. (ಶ್ರೀಮತಿ) ಅಲಬರ್ಟನ್ ಗೌರ್ ತಯಾರಿಸಿದ್ದಾರೆ. ಲಂಡನ್ ಬ್ರಿಟಿಷ್ ಲೈಬ್ರರಿಯವರು ಇದನ್ನು ೧೯೮೫ ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ೧೯೧೦ - ೧೯೮೦ ರ ವರೆಗೆ ಬ್ರಿಟಿಷ್ ಮ್ಯೂಜಿಯಂ ಮತ್ತು ಆಫೀಸ್ ಲೈಬ್ರರಿಗಳಲ್ಲಿ ಸಂಗ್ರಹಗೊಂಡ ಪುಸ್ತಕಗಳ ಪಟ್ಟಿಯನ್ನು ನೋಡಬಹುದು. ಇದರ ಪೂರ್ವ ತಯಾರಿಗೆ ಡಾ. ಶ್ರೀನಿವಾಸ ಹಾವನೂರ್ ಅವರು ಗೌರ್ ಅವರಿಗೆ ಸಹಾಯ ಮಾಡಿದ್ದಾರೆ. ಈ ಪ್ರಕಟಣೆಯಿಂದ ಇಂಗ್ಲೆಂಡಿನಲ್ಲಿರುವ ಕನ್ನಡ ಪುಸ್ತಕಗಳ ಎರಡು ದೊಡ್ಡ ಸಂಗ್ರಹಣೆಯನ್ನು ಕನ್ನಡಿಗರಿಗೆ ಪರಿಚಯಿಸಿದಂತಾಗಿದೆ. ಈಗ ಭಾರತ ಸರಕಾರದ ೧೮೬೭ ರ ಶಾಸನದ ಪ್ರಕಾರ ಇಂಡಿಯಾ ಆಫೀಸ್ ಲೈಬ್ರರಿಗೆ ತಲುಪಿದ ಭಾರತೀಯ ಪ್ರಕಟಣೆಗಳ ತ್ರೈಮಾಸಿಕ ಪಟ್ಟಿಗಳು ಪ್ರಕಟಗೊಂಡವು. ಇವುಗಳಲ್ಲಿ ಕನ್ನಡ ಗ್ರಂಥಗಳು ಅವುಗಳ ಸೂಚಿಯು ಸಿದ್ಧಗೊಂಡಂತಾಗಿದೆ. ಕನ್ನಡದಲ್ಲಿ ಮೊದ ಮೊದಲು ಪ್ರಕಟವಾದ ಕನ್ನಡ ಗ್ರಂಥಗಳ ಬಗೆಗೆ ತಿಳಿಯಬೇಕಾದರೆ ಇವನ್ನು ಅಲಕ್ಷಿಸುವಂತೆಯೇ ಇಲ್ಲ.

### ೩.೮.೧ : ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ (ಪ್ರಥಮ ಸಂಪುಟ ೧೮೫೦ - ೧೯೨೦) (A dictionary of Kannada Wirters)

ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸುವವರಿಗೆ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರ ಕರ್ನಾಟಕ ಕವಿಚರಿತ್ರೆಯ ಮೂರು ಸಂಪುಟಗಳು ಆಕರ ಗ್ರಂಥಗಳಾಗಿರುವದು ಸರ್ವವಿದಿತವಾದುದು. ಕವಿಚರಿತ್ರೆಯ

ತೃತೀಯ ಸಂಪುಟದಲ್ಲಿ ಉಕ್ತರಾದ ಇತರ ಕವಿಗಳು ಮತ್ತು ಗ್ರಂಥಕರ್ತರು ಇವರಿಂದ ಆರಂಭಿಸಿ ಕ್ರಿ. ಶ. ೧೯೨೦ ರ ವರೆಗಿನ ಸುಮಾರು ೭೦ ವರ್ಷಗಳ ಅವಧಿಯಲ್ಲಿ ಗ್ರಂಥಕರ್ತರೆಂದು ಪ್ರಸಿದ್ಧರಾದವರ ಚರಿತ್ರೆ ಪ್ರಸ್ತುತ ಸಂಪುಟದಲ್ಲಿ ಸಮಾವೇಶವಾಗಿದೆ. ಹೀಗಾಗಿ ಕನ್ನಡ ಸಾಹಿತ್ಯದ ಪ್ರಾರಂಭದ ಕವಿಯಿಂದ ಹಿಡಿದು ೧೯೨೦ ರ ವರೆಗಿನ ಕವಿಗಳ ಚರಿತ್ರೆಯನ್ನು ಅರಿತುಕೊಳ್ಳಲು ಅವಕಾಶವಾದಂತಾಗಿದೆ. ಇದರಲ್ಲಿ ೩೪೯ ಗ್ರಂಥಕರ್ತರ ಪರಿಚಯ ಮತ್ತು ಕೃತಿಗಳ ಪಟ್ಟಿ ಇದೆ. ಪುಸ್ತಕ ೧೯೯೯ ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಮತ್ತೆ ಎರಡನೇ ಮುದ್ರಣ ಕಂಡಿದೆ.

### ೩.೮.೨ : ಕವಿ, ಭಾಷೆ ಮತ್ತು ಸಾಹಿತ್ಯ ಚರಿತ್ರೆಗಳು

ಆರ್. ನರಸಿಂಹಾಚಾರ್ಯರ ಕರ್ನಾಟಕ ಕವಿ ಚರಿತ್ರೆಯ ಮೂರು ಸಂಪುಟಗಳು ಕವಿಯ ಕಾಲ, ದೇಶಾದಿ ವಿವರ, ಓಲೆಗರಿ, ಅಥವಾ ಕಾಗದ ಪ್ರತಿಯ ಆಕಾರ, ಸ್ವರೂಪ ಮೊದಲಾದ ವಿವರಗಳನ್ನು ಕೊಡುತ್ತವೆ. ಪ್ರತಿ ಸಂಪುಟದ ಕೊನೆಯಲ್ಲಿ ಕವಿಗಳ, ಗ್ರಂಥಗಳ, ಸ್ಥಳಗಳ, ಮತ್ತು ರಾಜರು, ಮಂತ್ರಿಗಳು ಮುಂತಾದವರ ಅಂಕಿತನಾಮಗಳು ಇತ್ಯಾದಿ ಅಕಾರಾದಿ ಪಟ್ಟಿಗಳನ್ನು ಅನುಬಂಧಗಳನ್ನಾಗಿ ಕೊಟ್ಟಿದ್ದಾರೆ. ರಂ. ಶ್ರೀ. ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ಕೇಂದ್ರದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾಲಯ ಸಾಹಿತ್ಯ ಸಂಪುಟಗಳು ಈ ದಿಶೆಯಲ್ಲಿ ನಡೆದ ಇತರ ಪ್ರಯತ್ನಗಳು ಮತ್ತು ಸಂಕೀರ್ಣ ಎಂಬುದಾಗಿ ಭಾಗ ಮಾಡಿ ಪ್ರತಿ ಭಾಗದಲ್ಲಿಯೂ ಗ್ರಂಥಗಳನ್ನು ಅಕಾರಾದಿಯಾಗಿ ಪಟ್ಟಿ ಮಾಡಿದ್ದಾರೆ. ಕೃತಿಗಳ, ಕೃತಿಕಾರರ ಹಾಗೂ ಪ್ರಕಾಶಕರ ಸೂಚಿಗಳನ್ನು, ಉಲ್ಲೇಖಿತ ಕೃತಿಗಳ ಕೃತಿಕಾರರ ಸೂಚಿಯನ್ನೂ ಪ್ರತ್ಯೇಕವಾಗಿ ಕೊಟ್ಟಿದ್ದಾರೆ. ಪ್ರತಿಯೊಂದು ಪುಸ್ತಕದ ವಿಷಯವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

### ೩.೮.೩ : ಏಕ ವ್ಯಕ್ತಿಯ ಸಾಹಿತ್ಯ ಸೂಚಿಗಳು

ಈ ಬಗೆಯ ಸೂಚಿಗಳಲ್ಲಿ ಡಾ. ಎಸ್. ಆರ್. ಗುಂಜಾಳ್ ಅವರ ' ಬಸವ ಸಾಹಿತ್ಯದರ್ಪಣ ' (ಭಾಗ - ೧) ವು ಉಲ್ಲೇಖನೀಯ ಕೃತಿ. ಇದರಲ್ಲಿ ಕನ್ನಡ, ತೆಲುಗು, ತಮಿಳು, ಸಂಸ್ಕೃತ, ಹಿಂದಿ, ಮರಾಠಿ, ಉರ್ದು, ಇಂಗ್ಲೀಷ ಮತ್ತು ಫ್ರೆಂಚ್ ಭಾಷೆಗಳಲ್ಲಿ ಬಸವಣ್ಣನವರನ್ನು ಕುರಿತು ರಚಿತವಾದ ೪೧೫ ಗ್ರಂಥಗಳ ವಿವರಣಾತ್ಮಕ ಸೂಚಿಗಳಿವೆ. ಪ್ರತಿಯೊಂದು ಗ್ರಂಥದ ಶೀರ್ಷಿಕೆ ಪ್ರಭೇದ, ಕರ್ತೃವಿನ ಹೆಸರು ಮತ್ತು ಕಾಲ, ಅನುವಾದಕ - ಸಂಪಾದಕ - ವಿಮರ್ಶಕನ ಹೆಸರು ಮತ್ತು ಕಾಲ, ಗ್ರಂಥದ ಶಾರೀರಿಕ ಸಾಮಗ್ರಿ, ಅಳತೆ ಮತ್ತು ಪ್ರಕಾಶಕರ ಹೆಸರು, ಸ್ಥಳ, ವರುಷ, ಪುಸ್ತಕದ ಬೆಲೆ ಮತ್ತು ಸಾರಾಂಶಗಳನ್ನು ಒದಗಿಸಿದ್ದಾರೆ. ಈ ದರ್ಪಣವನ್ನು ಬೆಂಗಳೂರಿನ ಬಸವ ಸಮಿತಿಯವರು ಪ್ರಕಟಿಸಿದ್ದಾರೆ. ಇದರ ದ್ವಿತೀಯ ಭಾಗದಲ್ಲಿ ವಿವಿಧ ಭಾಷೆಗಳಲ್ಲಿಯ ಪ್ರಮುಖ ಪತ್ರಿಕೆಗಳಲ್ಲಿ

ಬಸವಣ್ಣನವರನ್ನು ಕುರಿತು ಪ್ರಕಟವಾದ ಸಂಶೋಧನಾತ್ಮಕ ಲೇಖನಗಳ ಸೂಚಿಯನ್ನು ಸಾರಾಂಶಗಳೊಂದಿಗೆ ಕೊಡುವ ವಿಚಾರವಿದೆಯೆಂದು ಹೇಳಿದ್ದಾರೆ. ಅದು ಇನ್ನೂ ಪ್ರಕಟವಾಗಿಲ್ಲ.

**೩.೮.೪ : ಪ್ರಬುದ್ಧ ಕರ್ನಾಟಕ ೫೧ ನೇ ಸಂಪುಟದ ನಾಲ್ಕನೇ** ಸಂಚಿಕೆ ' ಗಾಂಧಿ ' ಸಂಚಿಕೆಯಾಗಿ ಹೊರಬಂದಿತು. ಅದರಲ್ಲಿ ಗಾಂಧೀಜಿಯವರ ಮತ್ತು ಅವರನ್ನು ಕುರಿತು ಬಂದ ಗ್ರಂಥಗಳ ಕೋಶವೊಂದನ್ನು ಶ್ರೀ ಟಿ. ವಿ. ಸುಬ್ರಹ್ಮಣ್ಯ ಮತ್ತವರ ಶ್ರೀಮತಿ ಲೀಲಾ ಸುಬ್ರಹ್ಮಣ್ಯ ರಚಿಸಿದ್ದಾರೆ.

**೩.೮.೫ : ಈ ಬಗೆಯ ಇನ್ನೊಂದು ಸೂಚಿಗಳಲ್ಲಿ ಡಾ. ಸಿ. ಆರ್. ಕರಿಸಿದ್ದಪ್ಪ** ಅವರ ' ಸಂಕ್ರಮಣ ಶತಕ ' ಇನ್ನೊಂದು ಮಹತ್ವದ ಸೂಚಿಗಳಲ್ಲಿ ಒಂದು. ಇದರಲ್ಲಿ ಅರವತ್ತರ ದಶಕದ ಮಧ್ಯಭಾಗದಲ್ಲಿ ದ್ವೈಮಾಸಿಕವಾಗಿ ಈಗ ಮತ್ತೆ ದ್ವೈಮಾಸಿಕವಾಗಿ ಪ್ರಕಟವಾಗುತ್ತಿರುವ ' ಸಂಕ್ರಮಣ ' ಕಳೆದ ಮೂರು ದಶಕಗಳಿಗಿಂತಲೂ ಹೆಚ್ಚಾಗಿ ಇಂದಿನವರೆಗೂ ಕನ್ನಡ ಸಮಕಾಲೀನ ಸಾಹಿತ್ಯದ ಆಗುಹೋಗುಗಳಿಗೆ ಕನ್ನಡಿಯಾಗಿರುವುದರ ಜೊತೆಗೆ ಸಾಹಿತ್ಯದ ಗತಿಯನ್ನು ಪರಿಣಾಮಕಾರಿಯಾಗಿ ನಿರ್ದೇಶಿಸುತ್ತಿರುವುದು ಒಂದು ಚಾರಿತ್ರಿಕ ದಾಖಲೆ. ಇಂಥ ಸಾಹಿತ್ಯ ಪತ್ರಿಕೆಯ ಮೊದಲ ನೂರು ಸಂಚಿಕೆಗಳು ಈ ಸೂಚಿ ಸಾಹಿತ್ಯದ ಅಭ್ಯಾಸಿಗಳಿಗೆ ಸಹಕಾರಿಯಾಗಿದೆ. ಪ್ರಸ್ತುತ ಸೂಚಿಯು ಸಾಕಷ್ಟು ವಿವರಣಾತ್ಮಕವಾಗಿದೆ. ಇದರಲ್ಲಿ ಅಡಕವಾಗಿರುವ ಭಾಗಗಳೆಂದರೆ :

– ವಿಷಯದ ಶಿರೋನಾಮೆ;

– ಲೇಖಕರ ಹೆಸರು;

– ಲೇಖನದ ಶೀರ್ಷಿಕೆ;

– ಸಂಕ್ರಮಣ ಸಂಪುಟ (ಸಂಚಿಕೆ) ಕ್ರಮಸಂಖ್ಯೆ;

– ತಿಂಗಳು;

– ವರ್ಷ;

– ಪುಟ ಸಂಖ್ಯೆಗಳು.

ಸಾಮಾನ್ಯವಾಗಿ ಸಾಹಿತ್ಯ ಪ್ರಕಾರಗಳಾದ ಕವನ, ನಾಟಕ, ಕಾದಂಬರಿ, ಕತೆ, ಪ್ರಬಂಧ, ಸಿನೇಮಾ, ಜಾನಪದ, ಅಲ್ಲದೆ ವ್ಯಕ್ತಿಪರಿಚಯ, ಸಂದರ್ಶನ, ಪುಸ್ತಕ ವಿಮರ್ಶೆ, ಸಂಪಾದಕೀಯ – ಹೀಗೆ ಹಲವು ವಿಷಯಗಳ ನಾಮೆಯ (Heading) ಕೆಳಗೆ ಕ್ರಮವಾಗಿ ಲೇಖಕರ ಅಕಾರಾದಿ ರೂಪದಲ್ಲಿ ಲೇಖಿ (Entry) ಗಳನ್ನು ಹೊಂದಿಸಲಾಗಿದೆ.

ಕೆಲವು ವಿವಾದಾತ್ಮಕ ಲೇಖನಗಳಿಗೆ ವ್ಯಕ್ತಪಡಿಸಿದ ಪ್ರತಿಕ್ರಿಯೆ, ಮತ್ತು ಉತ್ತರ -ಮಾರುತ್ತರಗಳನ್ನು ಸಂಬಂಧಿಸಿದ ಲೇಖಿಯ ಸಂಗಡವೇ ಅ, ಬ, ಕ, ಡ..... ಸಂಕೇತಗಳ ಮೂಲಕ ತಿಳಿಯಪಡಿಸಿದೆ. ಸೂಚಿಯ ಎಲ್ಲ ಲೇಖಿಗಳು ಕ್ರಮಸಂಖ್ಯೆಯನ್ನು ಹೊಂದಿರುತ್ತವೆ.

**ಲೇಖಕ ನಿರ್ದೇಶಿ :**

ಇನ್ನೂ ವಿಶೇಷವೆಂದರೆ ಲೇಖಕ ನಿರ್ದೇಶಿಯು ಸಂಕ್ರಮಣ ಲೇಖಕರ ಸ್ವಂತ ಬರವಣಿಗೆಗಳನ್ನು ಮತ್ತು ಇತರೆಯವರು ಅವರ ಬಗ್ಗೆ ಮತ್ತು ಅವರ ಕೃತಿಗಳ ಬಗ್ಗೆ ಬರೆದಿರುವ ಎಲ್ಲಾ ಲೇಖನಗಳನ್ನು ಒಂದು ಕಡೆ ಕೂಡಿಡುತ್ತದೆ. ಸಂಕ್ರಮಣ ಶತಕ ಸೂಚಿಯ ಕ್ರಮಸಂಖ್ಯೆಗಳನ್ನು ಈ ನಿರ್ದೇಶಿಯ ಸಂದರ್ಭ ಸಂಖ್ಯೆ (Reference Number) ಗಳನ್ನಾಗಿ ಮಾಡಿಕೊಂಡಿದೆ. ಸಂದರ್ಭ ಸಂಖ್ಯೆಯು ಸಾದಾ ರೂಪದಲ್ಲಿ ಮುದ್ರಿತವಾಗಿದ್ದರೆ ಅದು ಲೇಖಕನ ಸ್ವಂತ ಬರವಣಿಗೆಯೆಂದೂ ಮತ್ತು ಆವರಣದಲ್ಲಿ ಮುದ್ರಿತವಾಗಿದ್ದರೆ ಅದು ಲೇಖಕನ ಬಗ್ಗೆ ಮತ್ತು ಅವನ ಕೃತಿಗಳ ಬಗ್ಗೆ ಇತರರು ಬರೆದ ಲೇಖನವೆಂದೂ ತಿಳಿದುಕೊಳ್ಳಬೇಕು.

## ೩.೯ : ಭಾರತೀಯ ರಾಷ್ಟ್ರೀಯ ಗ್ರಂಥಸೂಚಿಯ ಕಾಯಿದೆ . ೧೯೫೪

ಸ್ವಾತಂತ್ರ್ಯಾನಂತರ ಘಟಿಸಿದ ಅನೇಕ ಸಾಂಸ್ಕೃತಿಕ ಘಟನೆಗಳಲ್ಲಿ ೧೯೫೪ ನೇ ಇಸವಿಯಲ್ಲಿ ಸಂಸತ್ತು ಅನುಮೋದಿಸಿದ " ಭಾರತೀಯ ಭಾಷೆಗಳಲ್ಲಿ ಪ್ರಕಟಣೆಗಳನ್ನು ವಹಿಸಿಕೊಡುವುದಕ್ಕೆ ಸಂಬಂಧಿಸಿದ ಕಾಯಿದೆ " ಯು ಪ್ರಮುಖವಾದುದು. ಈ ಕಾಯಿದೆಯು ಭಾರತೀಯ ಪ್ರಕಟಣೆಗಳ ಕುರಿತ ನಿಯಂತ್ರಣದ ದಿಕ್ಕಿನಲ್ಲಿ ಪ್ರಮುಖ ಮೈಲುಗಲ್ಲಾಗಿದೆ. ಈ ಕಾಯಿದೆಯ ಪ್ರಕಾರ ಭಾರತೀಯ ಭಾಷೆಗಳಲ್ಲಿನ ಪ್ರಕಟಣೆಗಳ ಪ್ರಕಾಶಕರು ತಾವು ಪ್ರಕಟಿಸಿದ ಒಂದು ತಿಂಗಳೊಳಗೆ ಗ್ರಂಥಗಳ ಒಂದೊಂದು ಪ್ರತಿಗಳನ್ನು ಕಲ್ಕತ್ತಾದ ರಾಷ್ಟ್ರೀಯ ಗ್ರಂಥಾಲಯಕ್ಕೂ ಹಾಗೂ ಮತ್ತೊಂದು ಪ್ರತಿಯನ್ನು ಮುಂಬೈ ಟೌನ್ ಹಾಲ್ ಗ್ರಂಥಾಲಯಕ್ಕೂ, ಮೂರನೆಯದನ್ನು ಮದ್ರಾಸಿನ ಕನ್ನೆಮರಾ ಸಾರ್ವಜನಿಕ ಗ್ರಂಥಾಲಯಕ್ಕೂ ಹಾಗೂ ಮತ್ತೊಂದು ಪ್ರತಿಯೊಂದನ್ನು ದೆಹಲಿಯಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ರಾಷ್ಟ್ರೀಯ ಕೇಂದ್ರ ಪರಾಮರ್ಶನ ಗ್ರಂಥಾಲಯಕ್ಕೂ ಕಳುಹಿಸತಕ್ಕದ್ದು. ಈ ಕಾಯಿದೆಯನ್ನು ಮೀರಿದ ಪ್ರಕಾಶಕರಿಗೆ ರೂ. ೫೦/- ದಂಡ ವಿಧಿಸತಕ್ಕದ್ದೆಂದು ನಿರ್ಣಯಿಸಲಾಯಿತು. ಈ ಕಾಯಿದೆಯನ್ನು ೧೯೫೬ ರಲ್ಲಿ ತಿದ್ದುಪಡಿ ಮಾಡಿ, ವೃತ್ತಪತ್ರಿಕೆಗಳನ್ನು ನಿಯತಕಾಲಿಕೆಗಳನ್ನು ಸೇರಿಸಲಾಯಿತು. ಹೀಗೆ ಕಾಯಿದೆಯು ರಾಜ್ಯಾಂಗವು ಮಾನ್ಯ ಮಾಡಿರುವ ಭಾರತೀಯ ಭಾಷೆಗಳಲ್ಲಿ ಪ್ರಕಟಣೆಗಳ ಸಮಗ್ರ ರಾಷ್ಟ್ರೀಯ ಗ್ರಂಥಸೂಚಿಯನ್ನು ಸಿದ್ಧಪಡಿಸಲು ನೆರವಾಯಿತು. [೧೯]

ಈ ಯೋಜನೆಯನ್ನು ದೆಹಲಿಯಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ರಾಷ್ಟ್ರೀಯ ಕೇಂದ್ರ ಪರಾಮರ್ಶನ ಗ್ರಂಥಾಲಯಕ್ಕೆ ವಹಿಸಲು ಯೋಚಿಸಲಾಯಿತು. ಆದು ಕಾರ್ಯಗತವಾಗುವವರೆಗೆ ಗ್ರಂಥಸೂಚಿ ಕಾರ್ಯವನ್ನು ಕಲ್ಕತ್ತೆಯ ರಾಷ್ಟ್ರೀಯ ಗ್ರಂಥಾಲಯದ ಆವರಣದಲ್ಲಿ ತಾತ್ಕಾಲಿಕವಾಗಿ ನೆಲೆಗೊಳಿಸಿದ ಕೇಂದ್ರ ಪರಾಮರ್ಶನ ಗ್ರಂಥಾಲಯವೇ ರಾಷ್ಟ್ರೀಯ ಗ್ರಂಥಸೂಚಿಯನ್ನು ಸಿದ್ಧಪಡಿಸುತ್ತಿದ್ದು ಪ್ರಕಟಿಸುತ್ತಿದೆ.

ಭಾರತ ಸರಕಾರ ಗ್ರಂಥ ಪೂರೈಕೆ ಕಾಯಿದೆಯಂತೆ (Book Delivery Act) ಭಾರತೀಯ ಗ್ರಂಥ ಪ್ರಕಾಶಕನು ಕಲ್ಕತ್ತೆಯ ರಾಷ್ಟ್ರೀಯ ಗ್ರಂಥಾಲಯದಲ್ಲಿ ಸ್ಥಾಪಿಸಲಾಗಿರುವ ರೆಫರನ್ಸ್ ಲೈಬ್ರರಿಗೆ ಎರಡು ಪ್ರತಿಗಳನ್ನು ಪುಕ್ಕಟೆಯಾಗಿ ಕಳಿಸಬೇಕು. ಹೀಗೆ ಕಳಿಸಿದ ಗ್ರಂಥಗಳ **ರಾಷ್ಟ್ರೀಯ ಗ್ರಂಥಸೂಚಿಯನ್ನು ೧೯೫೮ ರಿಂದ ೧೯೬೨ ರ ವರೆಗೆ ಐದು ವಾರ್ಷಿಕ ಸಂಪುಟಗಳಲ್ಲಿ ಪ್ರಕಟಿಸಲಾಯಿತು. ೧೯೬೩ ರಿಂದ ತ್ರೈಮಾಸಿಕ ಸಂಪುಟಗಳಲ್ಲಿ ೧೯೭೬ ರ ವರೆಗೆ ಪ್ರಕಟಿಸಲಾಯಿತು.** ಅನಂತರ ಅದು ನಿಂತು ಹೋದುದು ದುರ್ದೈವದ ಸಂಗತಿ. ಕರ್ನಾಟಕ ರಾಜ್ಯದ ಸಾರ್ವಜನಿಕ ಗ್ರಂಥಾಲಯ ಇಲಾಖೆಯಿಂದ ಇಂಥದೇ ಕಾರ್ಯವು ಪ್ರಾರಂಭವಾಗಿ ಪುನಃ ಸ್ಥಗಿತಗೊಂಡಿರುವ ವಿಷಯ ಶೋಚನೀಯ.[೨೦]

## ೩.೧೦ : ವ್ಯಾಪ್ತಿ

ರಾಷ್ಟ್ರೀಯ ಗ್ರಂಥಸೂಚಿಯು ರಾಜ್ಯಾಂಗ ಮಾನ್ಯ ಮಾಡಿರುವ ಆಸ್ಸಾಮಿ, ಬಂಗಾಲಿ, ಇಂಗ್ಲೀಷ, ಗುಜರಾತಿ, ಕನ್ನಡ, ಮಲಯಾಳಂ, ಮರಾಠಿ, ಓರಿಯ, ಪಂಜಾಬಿ, ಸಂಸ್ಕೃತ, ತಮಿಳು, ತೆಲುಗು, ಉರ್ದು ಭಾಷೆಗಳಲ್ಲಿಯ ಗ್ರಂಥಸೂಚಿ, ಪ್ರಕಾಶಕರ ಪುಸ್ತಕ ಪ್ರಕಟಣೆಗಳು, ಭಾರತ ಸರಕಾರ ಮತ್ತು ರಾಜ್ಯ ಸರಕಾರದಿಂದ ಹೊರಡಿಸಲಾದ ಪ್ರಕಟಣೆಗಳನ್ನು ಸಹ ಅಳವಡಿಸಬಹುದು.

ಈ ಸೂಚಿಯ ವ್ಯಾಪ್ತಿಯಿಂದ ಈ ಮುಂದೆ ಸೂಚಿಸಿರುವ ಪ್ರಕಟಣೆಗಳನ್ನು ಹೊರತುಪಡಿಸಲಾಗಿದೆ. ಭೂಪಟಗಳು, ಹುರುಳಿಲ್ಲದ ಕಾದಂಬರಿಗಳು, ಪಠ್ಯಪುಸ್ತಕಗಳಿಗೆ ಹೊರಡಿಸಲಾದ ವಿವರಣಾತ್ಮಕ ಕೈಪಿಡಿ ಅಥವಾ ಮಾರ್ಗದರ್ಶಿಗಳು, ವ್ಯಾಪಾರಕ್ಕೆ ಸಂಬಂಧಿಸಿದ ಗ್ರಂಥಸೂಚಿಗಳು, ಲಘು ಸಾಹಿತ್ಯ, ನಿಯತಕಾಲಿಕೆಗಳು ಹೊಸ ನಿಯತಕಾಲಿಕೆಯ ಮೊದಲ ಸಂಚಿಕೆಯನ್ನು ಬಿಟ್ಟು ಇತ್ಯಾದಿಗಳನ್ನು ಈ ವ್ಯಾಪ್ತಿಯಲ್ಲಿ ಅಳವಡಿಸಬಹುದಾಗಿದೆ. ಕಾಲ ಕಾಲಕ್ಕೆ ಬರುವ ಸೂಚಿಗಳು ಕೂಡಾ ಈ ನಿಬಂಧನೆಗೆ ಒಳಪಡುವದರಿಂದ ಸಂಶೋಧಕರಿಗೆ, ಆಸಕ್ತರಿಗೆ ಮಹದುಪಕಾರ ಮಾಡಿದಂತಾಗುತ್ತದೆ.

## ೩.೧೧ : ಕನ್ನಡ ಸಾಹಿತ್ಯದಲ್ಲಿ ಸೂಚಿ ಕಾರ್ಯಾರಂಭ

ಆಧುನಿಕವಾಗಿ, ಕನ್ನಡ ಹಸ್ತಪ್ರತಿಗಳು ಸೂಚಿ ನಿರ್ಮಾಣ ಕಾರ್ಯವು ೧೮೨೮ ರಿಂದ ಮೊದಲಾದಂತಿವೆ. ಕರ್ನಲ್ ಮೆಕೆಂಝಿಯವರ ಸಂಗ್ರಹ ಕುರಿತ, ಕನ್ನಡದ ಸುಮಾರು ೧೫೨ ಹಸ್ತಪ್ರತಿಗಳನ್ನು ಪರಿಚಯಿಸುವ ಎಚ್.

ಎಚ್. ವಿಲ್ಸನ್‌ರವರ ವಿವರಣಾತ್ಮಕ ಸೂಚಿಯೇ ಮೊದಲ ಸೂಚಿಯಾಗಿದೆ. ಅನಂತರದಲ್ಲಿ ಅನೇಕ ವಿಶ್ವವಿದ್ಯಾಲಯಗಳು, ಪ್ರಾಚ್ಯ ವಿದ್ಯಾಸಂಸ್ಥೆಗಳು ಈ ಕಾರ್ಯರಂಗಕ್ಕೆ ಇಳಿದದ್ದು ಕಂಡುಬರುತ್ತದೆ.

ಈ ದಿಸೆಯಲ್ಲಿ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಪ್ರಾಚ್ಯ ವಿದ್ಯಾಸಂಸ್ಥೆ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ, ವರ್ಣಾನಾತ್ಮಕ ಸೂಚಿಯ ಸಂಪುಟವೊಂದನ್ನು ಪ್ರಕಟಿಸಿದ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರಗಳ ಕಾರ್ಯ ಮೇಲ್ಪಂಕ್ತಿಯದಾಗಿದೆ. ಇದೇ ನಿಟ್ಟಿನಲ್ಲಿ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯು ಸ್ವಲ್ಪಮಟ್ಟಿಗೆ ಕಾರ್ಯ ಮಾಡಿದೆ. ಕನ್ನಡ ಅಧ್ಯಯನ ಪೀಠ, ಕನ್ನಡ ಸಾಹಿತ್ಯ ಪರಿಷತ್ತು, ಬಿ. ಎಂ. ಶ್ರೀ. ಪ್ರತಿಷ್ಠಾನ ಮೊದಲಾದ ಸಂಸ್ಥೆಗಳು ಈ ಪಂಕ್ತಿಗೆ ಇನ್ನೂ ಸೇರಬೇಕಾದವುಗಳು.

ಮೇಲೆ ಸೂಚಿಸಲಾದ ಸಂಸ್ಥೆಗಳಲ್ಲಿ ಒಂದಾದ ಕನ್ನಡ ಅಧ್ಯಯನ ಸಂಸ್ಥೆಯ ಸೂಚೀ ನಿರ್ಮಾಣದ ಕಾರ್ಯ ವಿಧಾನವನ್ನು ಗಮನಿಸಿದರೆ ಇದು ೬೩ ವರ್ಷದ ಅವಧಿಯಲ್ಲಿ ೧,೯೭೧ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಲ್ಲದೆ ಅವೆಲ್ಲವುಗಳ ವರ್ಣಾನಾತ್ಮಕ ಸೂಚಿಯನ್ನು ಸಿದ್ಧಪಡಿಸಿ ೧೯೬೨, ೬೩ ರಲ್ಲಿ ನಾಲ್ಕು ಸುಪಟವಾಗಿ ಪ್ರಕಟಿಸಿದೆ. ಮುಂದಿನ ೨೪ ವರ್ಷಗಳಲ್ಲಿ ೩,೩೨೩ ಹಸ್ತಪ್ರತಿಗಳನ್ನು ಸಂಗ್ರಹಿಸಿ ಅವುಗಳ ವರ್ಣಾನಾತ್ಮಕ ಸೂಚೀಯನ್ನು ೧೯೮೦ - ೮೧ ರ ಅವಧಿಯಲ್ಲಿ ೫ ಸಂಪುಟವಾಗಿ ಪ್ರಕಟಿಸಿದ್ದು ಕಂಡುಬರುತ್ತದೆ.

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವು ಮೂರು ವರ್ಷಗಳಲ್ಲಿ ೩,೦೦೦ ಗಳಷ್ಟು ಹಸ್ತಪ್ರತಿಗಳನ್ನು ಸಂಗ್ರಹಿಸಿಡುವಷ್ಟು, ಅದೇ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯು ೪೨ ವರ್ಷಗಳಲ್ಲಿ ೫,೦೦೦ ಹಸ್ತಪ್ರತಿಗಳನ್ನು ಸಂಗ್ರಹಿಸುವಷ್ಟು ಉತ್ಸಾಹವನ್ನು ತೋರಿದ್ದರೂ ಹಸ್ತಪ್ರತಿ ಸೂಚಿಗಳ ಪ್ರಕಟನೆಯಲ್ಲಿ ತೀರ ಮಂದಗತಿಯನ್ನು ತೋರಿವೆ. ಕನ್ನಡ ಅಧ್ಯಯನ ಪೀಠವು ಮೊದಲ ಕಂತಿಗೆ ೧,೦೦೦ ಹಸ್ತಪ್ರತಿಗಳ ವರ್ಣಾನಾತ್ಮಕ ಸೂಚಿಯನ್ನು ಪ್ರಕಟಿಸಲು ಮುಂದಾಗುತ್ತಿದ್ದರೆ, ಕನ್ನಡ ಸಂಶೋಧನ ಸಂಸ್ಥೆಯು ೪೨ ವರ್ಷಗಳ ಅವಧಿಯಲ್ಲಿ ಕೇವಲ ೭೫೫ ಗ್ರಂಥಗಳ ವಿವರಗಳನ್ನು ಕೊಡುವ ೧೩ ಸಂಪುಟಗಳನ್ನು ಪ್ರಕಟಿಸಿದ್ದು ಉತ್ಸಾಹದ ವಿಷಯವೇನಲ್ಲ.

ಹಸ್ತಪ್ರತಿ ಸೂಚಿಯನ್ನು ಪ್ರಕಟಿಸುವಲ್ಲಿ ಜೈನ ಮಠಗಳು ಮಾಡಿದ ಕಾರ್ಯ ಗಣನೀಯವಾಗಿದೆ. ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕ ಮಠವು ೧೯೦೦ ರಷ್ಟು ಹಿಂದೆ ಆರಾಧ್ಯ ಜೈನ ಸಿದ್ಧಾಂತ ಭವನವು ೧೯೧೯ ರಷ್ಟು ಹಿಂದೆಯೇ ಸೂಚಿಗಳನ್ನು (ದೇವನಾಗರಿಯಲ್ಲಿ) ಅಚ್ಚಿಸಿದ್ದು ತಿಳಿಯುತ್ತದೆ. ಮೂಡಬಿದರೆಯ ಜೈನಮಠ, ಜೈನ ಭವನ, ಅನ್ಯಗ್ರಂಥ ಭಂಡಾರ, ಕಾರ್ಕಳದ ಜೈನಮಠ ಮತ್ತು ಆಲಿಯೂರು ಆದಿನಾಥ ದೇವಾಲಯದ ಸಂಗ್ರಹಗಳ ಸಯುಕ್ತ ಸೂಚಿಯೊಂದು ೧೯೪೮ ರಲ್ಲಿ ಪ್ರಕಟವಾಗಿದೆ. ಅದರಂತೆ ಶ್ರವಣಬೆಳಗೊಳದ ಶ್ರೀ ಜೈನ ಮಠವು

ಕನ್ನಡದಲ್ಲಿ ಹಸ್ತಪ್ರತಿ ಸೂಚಿಯೊಂದನ್ನು ಪ್ರಕಟಿಸಿದ್ದು (೧೯೭೭) ಶ್ಲಾಘನೀಯ. ಸ್ವಾದಿ ಮಠದಲ್ಲಿನ ಹಸ್ತಪ್ರತಿಗಳನ್ನು 'ಜಯ ಕರ್ನಾಟಕ' (೧೯೧೯) ಪತ್ರಿಕೆ, ಹುಂಬುಚ ಮಠದ ಗ್ರಂಥಗಳು ಪಟ್ಟಿಯನ್ನು ಜೈನ ಸಿದ್ಧಾಂತ ಭಾಸ್ಕರ (೧೯೪೮) ಪತ್ರಿಕೆ, ಶ್ರೀ ಬಾಹುಬಲಿ ಬ್ರಹ್ಮಚರ್ಯಾಶ್ರಮದ ಗ್ರಂಥಗಳ ಯಾದಿಯನ್ನು ಸನ್ಮತಿ (೧೯೭೮) ಪತ್ರಿಕೆ ಮೂಲಕ ಪ್ರಕಟಿಸಿದ್ದು ಕೂಡ ಗಮನಾರ್ಹವಾದುದು.

ವೀರಶೈವ ಮಠಗಳಲ್ಲಿ ಅನೇಕ ಕಡೆ ಹಸ್ತಪ್ರತಿಗಳ ದೊಡ್ಡ ಸಂಗ್ರಹಗಳಿದ್ದರೂ ಹಸ್ತಪ್ರತಿಗಳ ಸೂಚಿಯನ್ನು ಗ್ರಂಥರೂಪದಲ್ಲಿ ಪ್ರಕಟಿಸಿದ್ದು, 'ಶರಣ ಸಾಹಿತ್ಯ', 'ಹೇಮಕೂಟ' ಮೊದಲಾದ ಪತ್ರಿಕೆಗಳು, ಹಾಗೆಯೇ ವಿಶ್ವವಿದ್ಯಾಲಯದ ಪರಿಷತ್ತುಗಳಿಂದ ಪ್ರಕಟಗೊಳ್ಳುತ್ತಿರುವ ಪತ್ರಿಕೆಗಳು ಶ್ರಮವಹಿಸಿವೆ. ಅಸ್ತವ್ಯಸ್ತಗೊಂಡಿದ್ದ ಮಠದ ಗ್ರಂಥ ಭಂಡಾರವನ್ನು ಅಲ್ಪ ಅವಧಿಯಲ್ಲಿಯೇ ನೇರಗೊಳಿಸಿ ಸುಮಾರು ೧೧೫೦ ಹಸ್ತಪ್ರತಿಗಳ ಸೂಚಿಯೊಂದನ್ನು ಪ್ರಕಟಿಸಿದ ಗದುಗಿನ ಜಗದ್ಗುರು ತೋಂಟದಾರ್ಯ ಮಠವು "ತನ್ನ ವಶದಲ್ಲಿರುವ ಹಸ್ತಪ್ರತಿಗಳ ಸೂಚಿಯನ್ನು ಸಿದ್ಧಪಡಿಸಿ ಪ್ರಕಟಿಸುತ್ತಿರುವ ಪ್ರಥಮ ವೀರಶೈವ ಮಠ" ಎಂಬ ಕೀರ್ತಿಯನ್ನು ಸಂಪಾದಿಸಿಕೊಂಡಿದೆ.

ವೈದಿಕ ಪರಂಪರೆಯ ಮಠಗಳು ದಾಸ ಪರಂಪರೆಯ ಪೀಠಗಳು ಈ ನಿಟ್ಟಿನಲ್ಲಿ ಇನ್ನು ಪ್ರವೃತ್ತವಾದಂತಿಲ್ಲ. ಈ ಶತಮಾನ ಆರಂಭದ ಅವಧಿಯಲ್ಲಿ ವರ್ಷಾಂತ್ಯದ ವರದಿಯಾಗಿ ಪ್ರಕಟವಾಗುತ್ತಲಿದ್ದ 'ಆರ್ಕಿಲೊಜಿಕಲ್ ಸರ್ವೆ ಆಫ್ ಮೈಸೂರು' ಗ್ರಂಥದಲ್ಲಿಯೂ ವರ್ಣನಾತ್ಮಕ ಸೂಚಿಯನ್ನು ಹೋಲುವ ಕೆಲವು ಹಸ್ತಪ್ರತಿಗಳ ಮಾಹಿತಿ ಕೊಡಲಾಗಿದೆ. ಆದರೂ ಇಲ್ಲಿ ಪರಿಚಿತಗೊಂಡ ಹಸ್ತಪ್ರತಿ ಸಂಖ್ಯೆ ತೀರ ಕಡಿಮೆಯೆಂದೇ ಹೇಳಬೇಕು.

ಹಸ್ತಪ್ರತಿ ಸೂಚಿಗಳನ್ನು ತಯಾರಿಸುವಲ್ಲಿ, ಪ್ರಕಟಿಸುವಲ್ಲಿ ಈಗ ಕಂಡುಬರುತ್ತಿರುವ ಗತಿ ಹಸ್ತಪ್ರತಿಗಳ ಪಾಲಿಗಂತೂ ಸುಗತಿಯನ್ನುಂಟು ಮಾಡಲಾರದು. ವಿಶ್ವವಿದ್ಯಾಲಯ, ಸಂಶೋಧನ ಸಂಸ್ಥೆ, ಪ್ರಾಚ್ಯವಸ್ತು ಸಂಗ್ರಹಾಲಯಗಳಂತಹ ಬಲಿಷ್ಠ ಸಂಸ್ಥೆಗಳ ಸೂಚಿಗಳನ್ನು ಸಿದ್ಧಪಡಿಸುವಲ್ಲಿ ಹಿಂದೇಟು ಹಾಕುತ್ತಿರುವಾಗ ವೈಯಕ್ತಿಕ ಸಂಗ್ರಹ ಹೊಂದಿದವರು ಸೂಚಿಗಳನ್ನು ತಯಾರಿಸಿ, ಪ್ರಕಟಿಸುವುದು ದೂರದ ಆಶೆಯೇ. ಇಂತಹ ಸಂದಿಗ್ಧತೆಯಲ್ಲಿ ಸಾಧ್ಯವಾಗುವ ಯಾವುದೇ ಮಾರ್ಗ, ಮಾಧ್ಯಮವನ್ನು ಆಶ್ರಯಿಸಿ, ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗನೆ ಹಸ್ತಪ್ರತಿ ಸೂಚಿಗಳನ್ನು ಪ್ರಕಟಿಸುವುದು ಅಗತ್ಯವಿದೆ ಎಂಬುದನ್ನು ಬೇರೆ ಹೇಳಬೇಕಾದುದಿಲ್ಲ.

ಈ ಸಂದರ್ಭದಲ್ಲಿ ಹಸ್ತಪ್ರತಿ ಸೂಚಿಗಳ ದೀರ್ಘವಾದ ಪಟ್ಟಿಯೊಂದನ್ನು ಕೊಡುತ್ತ ಡಾ. ಎಸ್. ಎಂ. ಕತ್ರೆಯವರು ಬರೆದ Inspite of this progress which was brought home to the Indian national wealth the work of publishing Descriptive catalogue of Mss has not received the attention it deserves. [೨೨] ಎಂಬೀ ಅಭಿಪ್ರಾಯವು ಇಂದಿಗೂ ತನ್ನ ಪ್ರಸ್ತುತತೆಯನ್ನು ಕಳೆದುಕೊಂಡಿಲ್ಲ. ಇದೇ ಸಮಯದಲ್ಲಿ

ಪ್ರೊ. ಚಿಂತಾಹರಣ ಚಕ್ರವರ್ತಿಯವರು ಹಸ್ತಪ್ರತಿಗಳ ಯೋಗ್ಯ ಸಂರಕ್ಷಣೆ ಹಾಗೂ ವೈಜ್ಞಾನಿಕ ಸೂಚಿ ಸಿದ್ಧಪಡಿಸುವುದಕ್ಕೆ ಸರಕಾರವು ಎಪಿಗ್ರಾಫಿ ವಿಭಾಗಗಳಂತೆ ಹಸ್ತಪ್ರತಿ ವಿಭಾಗಗಳನ್ನು ಪ್ರಾರಂಭಿಸಬೇಕು. ಹಾಗೂ ಹಸ್ತಪ್ರತಿಗಳನ್ನು ಅಕ್ರಮವಾಗಿ ಮಾರುವವರನ್ನು ಶಿಕ್ಷಿಸುವ ಶಾಸನವನ್ನು ಜಾರಿಗೆ ತರಬೇಕು ಎಂಬುದಾಗಿ ಸೂಚನೆ ಇತ್ತುದು [೨೩] ತಿಳಿದುಬರುತ್ತದೆ.

ಹಸ್ತಪ್ರತಿಗಳ ಸೂಚಿ ನಿರ್ಮಾಣಕ್ಕೆ ಸಂಬಂಧಿಸಿದಂತೆ ೧೯೪೧ ರಷ್ಟು ಹಿಂದೆ ಮಾಡಲಾದ ಈ ಎರಡೂ ಸೂಚನೆಗಳ ಬಗೆಗೆ ಅನಂತರದ ಅವಧಿಯಲ್ಲಿ ಅಂದರೆ ಇಂದಿನವರೆಗೂ ಸರಕಾರವು ಗಂಭೀರವಾಗಿ ವಿಚಾರಿಸಿದ್ದಾಗಲಿ, ವಿದ್ವತ್ ಲೋಕವು ಗಂಭೀರವಾಗಿ ಕಾರ್ಯಪ್ರವೃತ್ತವಾದುದಾಗಲಿ ಕಂಡುಬರದಿರುವುದು ಅತ್ಯಂತ ಶೋಚನೀಯ. ಈ ಸಂದರ್ಭದಲ್ಲಿ ಹಸ್ತಪ್ರತಿ ಸಂಗ್ರಹ ಹೊಂದಿರುವ ಸಂಸ್ಥೆಗಳು ಹಾಗೂ ವ್ಯಕ್ತಿಗಳು ಪಾಕ್ಷಿಕ, ಮಾಸಿಕ, ತ್ರೈಮಾಸಿಕ ಪತ್ರಿಕೆಗಳಲ್ಲಿ ಧಾರಾವಾಹಿಯಂತೆ ಸೂಚಿಗಳನ್ನು ಪ್ರಕಟಿಸಬೇಕೆಂಬುದುದು ಒಂದು ಸಕಾಲಿಕ ಸೂಚನೆಯಾಗದಿರದು. ಇಂಥ ತುರ್ತು ವ್ಯವಸ್ಥೆಯ ಈ ಕ್ಷೇತ್ರದ ಬರಡುತನವನ್ನು ತಾತ್ಕಾಲಿಕವಾಗಿಯಾದರೂ ನೀಗಿಸಿ ಈ ಕ್ಷೇತ್ರದಲ್ಲಿ ಮುಂದೆ ನಡೆಯಬೇಕಾದ ಕಾರ್ಯಕ್ಕೆ ಸಹಾಯಕವಾಗುವುದರಲ್ಲಿ ಸಂದೇಹವಿರಲಾರದು.

## ೩.೧೨ : ಸೂಚೀ, ವರ್ಣನಾತ್ಮಕ ಸೂಚೀ ಪರಿಷ್ಕರಣದ ಅಗತ್ಯ

ಈ ವರೆಗೆ ಪ್ರಕಟಿಸಿದ ಸೂಚಿಗಳನ್ನು 'ಹಸ್ತಪ್ರತಿ ಸೂಚೀ' ಮತ್ತು 'ಹಸ್ತಪ್ರತಿ ವರ್ಣನಾತ್ಮಕ ಸೂಚೀ' ಎಂಬುದಾಗಿ ವರ್ಗೀಕರಿಸಲಾಗಿದೆ. ಈ ಯಾವುದೇ ಸೂಚಿಯನ್ನು ಸಿದ್ಧಪಡಿಸುವುದು, ಅಚ್ಚು ಹಾಕಿಸುವುದು ತುಂಬಾ ಶ್ರಮದ್ದೂ ವೆಚ್ಚದ್ದೂ ಆಗಿದೆ. ಅಲ್ಲದೆ ಇದು ಆರ್ಥಿಕ ಪ್ರತಿಫಲವಿಲ್ಲದುದು. ಹೀಗಿರುವಾಗ ಹಸ್ತಪ್ರತಿ ಸಂಗ್ರಹವನ್ನು ಹೊಂದಿದ ಸಂಗ್ರಹವೇ ತಲೆನೋವಾಗಿರುವಾಗ ಸ್ವತಃ ತಾವಾಗಿಯೇ ಅಥವಾ ವಿದ್ವಾಂಸರ ಮೂಲಕವೋ ಸ್ವಲ್ಪ ವ್ಯಯಿಸಿ ಸೂಚೀ ಪ್ರಕಟಿಸುವುದು ಆಗದ ಕೆಲಸವೇ. ಇನ್ನು ವಿಶ್ವವಿದ್ಯಾಲಯಗಳಂತಹ ಸಂಸ್ಥೆಗಳಾದರೂ ಯಾವುದೋ ಒಂದು ಯೋಜನೆ, ಅನುದಾನದ ಆಳತೆಗೆ ಅನುಗುಣವಾಗಿ ಸೂಚಿಯನ್ನೋ, ವಿವರಣಾತ್ಮಕ ಸೂಚಿಯನ್ನೋ ಪ್ರಕಟಿಸಿವೆ, ಪ್ರಕಟಿಸುತ್ತಿಲಿವೆ.

ಇಷ್ಟೆಲ್ಲ ತೊಡಕು - ತೊಂದರೆಗಳ ಮಧ್ಯೆ ಸಾವಿರ ಸಾವಿರ ಸಂಖ್ಯೆಯಲ್ಲಿ ಸಂಗ್ರಹಗೊಂಡಿರುವ ಕನ್ನಡ ಹಸ್ತಪ್ರತಿಗಳ ನಷ್ಟದ ದಾರಿ ತುಳಿಯುತ್ತವೆ. ಪರಿಸ್ಥಿತಿ ಹಾಗೂ ತಮಗೆ ಬೇಕಾದ ಹಸ್ತಪ್ರತಿ ಎಲ್ಲಿದೆ? ಯಾವ ಸ್ಥಿತಿಯಲ್ಲಿದೆ? ಎಂಬುದನ್ನರಿಯಲು ಪರದಾಡುವ ಸಂಶೋಧಕ, ಸಂಪಾದಕರ ದುರ್ದೆಸೆ – ಇವುಗಳನ್ನು ಗಮನಿಸಿದರೆ ಹಸ್ತಪ್ರತಿಗಳ ಸೂಚಿಗಳನ್ನು ಸಿದ್ಧಪಡಿಸಿ, ಪ್ರಕಟಿಸಬೇಕಾದುದು ಇಂದು ಅತ್ಯಂತ ಅಗತ್ಯದ ಮತ್ತು ತುರ್ತಾಗಿ ಮಾಡಿ ಪೂರೈಸಬೇಕಾದ ಕಾರ್ಯ ಎನಿಸುತ್ತದೆ.

ಹಸ್ತಪ್ರತಿ ಸೂಚೀ, ವರ್ಣನಾತ್ಮಕ ಸೂಚೀ ಈ ಯಾವುದನ್ನೇ ಸಿದ್ಧಪಡಿಸಲು ಅಂದರೆ ಅವುಗಳಲ್ಲಿ ಯಾವ ಯಾವ ಮಾಹಿತಿ ಇರಬೇಕು ? ಹೇಗಿರಬೇಕು ? ಎಂಬ ಬಗ್ಗೆ ಯೋಜನೆ ಮಾಡಬೇಕಾದ ಸಂದರ್ಭ ಈಗಿಲ್ಲ. ಯಾಕೆಂದರೆ ಶಾಸ್ತ್ರೀಯವಾಗಿ ರಚನೆಗೊಂಡು ಪ್ರಕಟವಾದ ಮಾದರಿಗಳು ನಮಗಿಂದು ಒದಗುತ್ತವೆ. ಆದರೆ, ಮೇಲೆ ವಿವರಿಸಿದ ಸೂಚೀ ಸಿದ್ಧತೆಯ ತುರ್ತು ಅಗತ್ಯದ ಹಿನ್ನೆಲೆಯಲ್ಲಿ ನಮಗೀಗ ಪ್ರಸ್ತುತವಾದದ್ದು ವರ್ಣನಾತ್ಮಕ ಸೂಚಿಯೋ ? ಅಥವಾ ಕೇವಲ ಹಸ್ತಪ್ರತಿ ಸೂಚಿಯೋ ? ಎಂಬ ಪ್ರಶ್ನೆ. ಈ ಪ್ರಶ್ನೆಯನ್ನು ಬಿಡಿಸುವ ಪೂರ್ವದಲ್ಲಿ ಕೆಲವು ಪ್ರಾತಿನಿಧಿಕ ವರ್ಣನಾತ್ಮಕ ಸೂಚಿಗಳಲ್ಲಿನ ವಿವರಗಳನ್ನಷ್ಟು ಪರಿಶೀಲಿಸಬಹುದು.

೩.೧೨.೧ : ಮೊದಲಿಗೆ ಪ್ರಕಟವಾದ ಮದ್ರಾಸ್ ಓರಿಯಂಟಲ್ ಹಸ್ತಪ್ರತಿ ಭಂಡಾರದ ವರ್ಣನಾತ್ಮಕ ಸೂಚೀ ಸಂಪುಟಗಳಲ್ಲಿನ ವಿವರಗಳು ಹೀಗಿವೆ : ೧) ಕ್ರಮಾಂಕ, ೨) ಶಿರೋನಾಮೆ, ೩) ವಸ್ತು, ೪) ಆಕಾರ, ೫) ಪುಟ ಸಂಖ್ಯೆ, ೬) ಪುಟಕ್ಕೆ ಸಾಲುಗಳು, ೭) ಲಿಪಿ, ೮) ಸ್ಥಿತಿ, ೯) ಬರವಣಿಗೆ, ೧೦) ಪೂರ್ಣಾಪೂರ್ಣ, ೧೧) ವಿವರಣೆ, ೧೨) ಪ್ರಾರಂಭ, ೧೩) ಕೊನೆ, ೧೪) ಸಮಾಪ್ತಿ ವಚನ

## ೩.೧೨.೨ : ಅದರಂತೆ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯು ಪ್ರಕಟಿಸಿದ ವರ್ಣನಾತ್ಮಕ ಸೂಚಿಯ ವಿವರಗಳು

೧) ಗ್ರಂಥಗಳ ಕ್ರಮಾಂಕ, ೨) ವಸ್ತು, ೩) ಅಂಕ, ೪) ವಿವರ, ೫) ದೊರೆತ ಸ್ಥಳ, ೬) ಕಾಲ, ೭) ಕರ್ತೃ, ೮) ಪ್ರತಿ ಮಾಡಿದವರು, ೯) ವಿಷಯ, ೧೦) ಶೈಲಿ, ೧೧) ಆರಂಭ, ೧೨) ಮುಕ್ತಾಯ, ೧೩) ಸಂದರ್ಭ, ೧೪) Remarks [೩೦] ಇಂತಿವೆ. ಹಾಗೆಯೇ, ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ವರ್ಣನಾತ್ಮಕ ಸೂಚಿಯ ವಿವರಗಳು ಈ ಕೆಳಗಿನಂತಿವೆ.

೧) ಗ್ರಂಥಗಳ ಕ್ರಮಾಂಕ, ೨) ಗ್ರಂಥದ ಸಾಂಕೇತಿಕ, ಗ್ರಂಥಸಂಖ್ಯೆ, ೩) ಗ್ರಂಥದ ಹೆಸರು, ೪) ಗ್ರಂಥ ಪ್ರಭೇದ, ೫) ಅಳತೆ, ೬) ಕವಿಯ ಹೆಸರು, ೭) ಕವಿಯ ಕಾಲ, ೮) ಗ್ರಂಥ ಪ್ರಾರಂಭವಾಗುವ ಮತ್ತು ಮುಗಿಯುವ ಪತ್ರಸಂಖ್ಯೆ, ೯) ಸಾಲಿನ ಸಂಖ್ಯೆ, ೧೦) ಅಕ್ಷರ ಸಂಖ್ಯೆ, ೧೧) ಆದಿ, ೧೨) ಅಂತ್ಯ, ೧೩) ವಿಷಯ, ೧೪) ವಿಶೇಷ [೩೧]

ಇಲ್ಲಿ ಡಾ. ಕಲಬುರ್ಗಿಯವರು ಲಂಡನ್ ಲೈಬ್ರರಿಗಾಗಿ ತಯಾರಿಸಿದ ವರ್ಣನಾತ್ಮಕ ಸೂಚಿಯ ಮಾದರಿಯನ್ನೂ ಪರಿಶೀಲಿಸಬಹುದು. ಇವರು ಒಂದು ಹಸ್ತಪ್ರತಿಯ ಬಗೆಗೆ ಕೊಡಬೇಕಾದ ವಿವರಗಳನ್ನು ಎರಡು ಭಾಗವಾಗಿ ವಿಂಗಡಿಸಿ ಒಂದನ್ನು 'ಕೃತಿ ಪರಿಚಯ'ವು ೧) ಹೆಸರು, ೨) ಕವಿ, ೩) ಪ್ರಕಾರ, ೪) ಕಾಲ, ೫) ವಿಷಯ ಎಂಬ ಐದಂಶಗಳನ್ನು ಒಳಗೊಂಡಿದ್ದರೆ, 'ಪ್ರತಿ ಪರಿಚಯ'ವು ೬) ವಸ್ತು ೭) ಹಸ್ತಪ್ರತಿಯ ಕ್ರಮಾಂಕ ೮) ಅಕ್ಷರ,

೯) ಆಕಾರ, ೧೦) ಸ್ವರೂಪ, ೧೧) ಗರಿ / ಪುಟ, ೧೨) ಸ್ಥಿತಿ (ಪೂರ್ಣ / ಅಪೂರ್ಣ), ೧೩) ಮಿತಿ, ೧೪) ಪ್ರಾರಂಭ, ೧೫) ಅಂತ್ಯ ಎಂಬ ಹತ್ತು ಅಂಶಗಳನ್ನೊ ಒಳಗೊಳ್ಳುತ್ತದೆ. ಈ ವಿಂಗಡಣೆ ಮತ್ತು ವಿವರಗಳು ಹಿಂದಿನ ವರ್ಣನಾತ್ಮಕ ಸೂಚಿಗಳ ವಿವರಗಳಿಗಿಂತ ಹೆಚ್ಚು ಶಾಸ್ತ್ರೀಯವಾದುದು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಇದು ಒಟ್ಟು ೧೫ ವಿವರಗಳನ್ನು ಒಳಗೊಳ್ಳುವುದಾಗಿದೆ.

ಈ ಎಲ್ಲ ಸೂಚಿಗಳಲ್ಲಿ ಸ್ವಲ್ಪ ವ್ಯತ್ಯಾಸಗಳು ಕಂಡುಬಂದರೂ ಒಟ್ಟು ವಿವರಗಳ ಸಂಖ್ಯೆ ಹದಿನಾಲ್ಕನ್ನು ಮೀರಿದಂತಿಲ್ಲ. ಬಹುಶಃ ಇಷ್ಟು ವಿವರಗಳಿದ್ದುದು ಒಂದು 'ಮಾದರಿಯ ವರ್ಣನಾತ್ಮಕ ಸೂಚಿ' ಎಂದು ಪರಿಗಣಿಸಿದಂತಿದೆ. ಈ ಸೂಚಿಗಳಲ್ಲಿನ ವಿವರಗಳು ಶಾಸ್ತ್ರೀಯವಾದವುಗಳು ಎಂಬುದರಲ್ಲಿ ಎರಡಭಿಪ್ರಾಯಗಳು ಇರಲಾರವು. ಆದರೆ ಇಷ್ಟೆಲ್ಲ ವಿವರಗಳ ಅಗತ್ಯ ಇದೆಯೆ? ಎಂಬ ಪ್ರಶ್ನೆ ಪರಿಶೀಲಿಸಬೇಕಾದುದಾಗಿದೆ. ಒಬ್ಬ ಸಂಪಾದಕ ಇಲ್ಲವೆ ಸಂಶೋಧಕನ ದೃಷ್ಟಿಯಿಂದ ನೋಡಿದಾಗಲೂ ಇಲ್ಲಿನ ಕೆಲ ವಿವರಗಳು ಅನಗತ್ಯವೆನಿಸದಿರಲಾರವು. ಅಂಥವುಗಳನ್ನು ಬಿಟ್ಟುಕೊಟ್ಟು, ಕೇವಲ ಅಗತ್ಯದ ವಿವರಗಳನ್ನು ಬೇರ್ಪಡಿಸಿಕೊಂಡು ತ್ವರಿತಗತಿಯಿಂದ ಸಾಗಬೇಕಾದ ಸಂಪಾದನ, ಸಂಶೋಧನ ಕಾರ್ಯಗಳಿಗೆ ಹೆಚ್ಚು ನೆರವಾಗುವಂತಹ 'ವರ್ಣನಾತ್ಮಕ ಸೂಚಿ'ಯೊಂದರ ಮಾದರಿಯನ್ನು ಹೀಗೆ ಕೊಡಬಹುದೆನಿಸುತ್ತದೆ.

೧) ಗ್ರಂಥಗಳ ಕ್ರಮಾಂಕ, ೨) ಗ್ರಂಥ ಸಂಕೇತಾಕ್ಷರ (ಗ್ರಂಥ ತಾಳೆಯೋಲೆಯದೋ, ಕಾಗದ ಪ್ರತಿಯೋ ಎಂಬುದನ್ನು ಸೂಚಿಸುವಂಥದು) ಗ್ರಂಥ ಸಂಖ್ಯೆ, ೩) ದೊರೆತ ಸ್ಥಳ, ೪) ಗ್ರಂಥದ ಹೆಸರು, ೫) ಕವಿ, ೬) ಕಾಲ, ೭) ಗ್ರಂಥ ಪ್ರಭೇದ, ೮) ಆದಿ, ೯) ಅಂತ್ಯ, ೧೦) ವಿಶೇಷ.

ಇಲ್ಲಿ ಸಾಮಾನ್ಯವಾಗಿ ಅಂತ್ಯದಲ್ಲಿರುವ, ಕ್ವಚಿತ್ತಾಗಿ ಆದಿಯಲ್ಲಿರುವ ಪ್ರತಿಕರಣದ ಕಾಲ, ಪ್ರತಿಕಾರನ ವಿವರಗಳು ಇದ್ದರೆ ಅಂಥದನ್ನು ಆದಿ ಇಲ್ಲವೆ ಅಂತ್ಯ ಎಂಬಲ್ಲಿ ತಪ್ಪದೆ ದಾಖಲುಗೊಳಿಸಬೇಕು.

ಇನ್ನು ಗ್ರಂಥ ಪೂರ್ಣವೋ; ಅಪೂರ್ಣವೋ ಎಂಬುದನ್ನು, ಅದು ಚಿತ್ರಿತ ಹಸ್ತಪ್ರತಿಯೋ ಅಲ್ಲವೋ ಎಂಬುದನ್ನು ಇವುಗಳಲ್ಲದೆ ಸೂಚಿಸಬೇಕಾದ ಯಾವುದಾದರೂ ವಿಶೇಷತೆ ಇದ್ದರೆ ಅವುಗಳನ್ನು 'ವಿಶೇಷ' ಎಂಬಲ್ಲಿ ದಾಖಲುಗೊಳಿಸಿದರೆ ಸಾಕು. ಇಂಥ ವಿಶೇಷ ಮಾಹಿತಿಗಳಿರುವ ಹಸ್ತಪ್ರತಿಗಳ ಸಂಖ್ಯೆ ಕಡಿಮೆ ಎಂಬುದು ಕೂಡ ಇಲ್ಲಿ ಲಕ್ಷಿಸಬೇಕಾದುದು. ಹೀಗೆ ಈ ಹತ್ತು ವಿವರಗಳನ್ನೊಳಗೊಂಡ 'ವರ್ಣನಾತ್ಮಕ ಸೂಚಿ'ಯು ಒಂದು ಮಾದರಿಯ ಸ್ವರೂಪದ್ದೆನಿಸಬಹುದು.

ಇನ್ನು ಮೊದಲಲ್ಲಿ ಎತ್ತಿದ ಪ್ರಶ್ನೆ ಅಂದರೆ, ನಮಗೀಗ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಪ್ರಸ್ತುತವಾಗಿದೆಯೋ ಅಥವಾ ಕೇವಲ ಸೂಚಿಯೋ ಎಂಬ ಪ್ರಶ್ನೆ ಕುರಿತು ವಿಚಾರಿಸಬಹುದು.

' ವರ್ಣನಾತ್ಮಕ ಸೂಚಿ ' ಗಳಲ್ಲಿನ ವಿವರಗಳ ಸಂಖ್ಯೆಗಿಂತ ಸೂಚಿಗಳಲ್ಲಿನ ವಿವರಗಳ ಸಂಖ್ಯೆ ಕಡಿಮೆ ಎಂಬ ಅಂಶವು ಈ ಪ್ರಶ್ನೆಗೆ ಉತ್ತರವಾಗುತ್ತದೆ. ಅಲ್ಲದೆ ಸೂಚಿಯ ವಿವರಗಳ ಸಂಖ್ಯೆಯನ್ನು ಕಡಿಮೆಗೊಳಿಸಬಹುದು! ಎಂಬ ಇನ್ನೊಂದು ಆಲೋಚನೆಗೂ ಆಸ್ಪದ ಮಾಡಿಕೊಡುತ್ತದೆ. ಇಲ್ಲಿ ಒಬ್ಬ ಸಂಪಾದಕ ಅಥವಾ ಸಂಶೋಧನೆಗೆ ಬೇಕಾದ ಹಸ್ತಪ್ರತಿ ಎಲ್ಲಿದೆ ? ಎಂಬ ಮುಖ್ಯ ಮಾಹಿತಿಯೊಡನೆ ಅದಕ್ಕೆ ಸಂಬಂಧಿಸಿದ ಕೆಲ ಅಗತ್ಯದ ಮಾಹಿತಿಗಳನ್ನು ಒದಗಿಸುವುದೇ ಒಂದು ಸೂಚಿಯ ಮುಖ್ಯ ಉದ್ದೇಶವಾಗಿರುತ್ತದೆ ಎಂಬುದನ್ನು ಗಮನಕ್ಕೆ ತಂದುಕೊಂಡಾಗ ಸದ್ಯದ ಅಗತ್ಯ ವರ್ಣನಾತ್ಮಕ ಸೂಚಿಗಳಲ್ಲ; ಸೂಚಿಗಳು ಎಂಬುದು ಸ್ಪಷ್ಟವಾಗುತ್ತದೆ. ಈ ಸೂಚಿಗಳು ಕೂಡ ಸಂಪಾದನೆ ಮತ್ತು ಸಂಶೋಧನೆಯ ದೃಷ್ಟಿಯಿಂದ ಅಗತ್ಯವೆನಿಸಿದ ವಿವರಗಳನ್ನೂ ಹೊಂದಿ ಎಷ್ಟು ಸಾಧ್ಯವೋ ಅಷ್ಟು ಕಡಿಮೆ ವಿವರಗಳ ಸಂಖ್ಯೆಯನ್ನು ಹೊಂದಿರಬೇಕಾಗುತ್ತದೆ ಎಂಬುದನ್ನು ಬೇರೆ ಹೇಳಬೇಕಾದುದಿಲ್ಲ.

೩.೧೨.೩ : ಈ ಬಗ್ಗೆ ಇತ್ತೀಚೆಗೆ (೧೯೮೫) ಪ್ರಕಟಗೊಂಡ " ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಹಸ್ತಪ್ರತಿ ಸೂಚಿ " ಯ ವಿವರಗಳನ್ನು ಮುಂದಿರಿಸಿಕೊಂಡು ಆಲೋಚಿಸಬಹುದು. ಈ ಸೂಚಿಯು :

೧) ಕ್ರಮ, ೨) ಕೃತಿಯ ಹೆಸರು, ೩) ಕೃತಿಕಾರ, ೪) ಕಾಲ, ೫) ಸಂಖ್ಯೆ, ೬) ಗರಿ / ಹಾಳೆ, ೭) ಪ್ರಕಾಶಕ, ೮) ಇತರ ವಿವರ – ಹೀಗೆ ಒಟ್ಟು ಎಂಟು ವಿವರಗಳನ್ನೊಳಗೊಂಡಿದೆ. ಈ ಪಟ್ಟಿಯಲ್ಲಿನ ಪತ್ರ / ಪುಟ ಸಂಖ್ಯೆಗಳನ್ನು ಸೂಚಿಸುವ " ಗರಿ / ಹಾಳೆ "[೩೨] ಮತ್ತು ಸಾಹಿತ್ಯ ಪ್ರಕಾರ (ಚಂಪು, ಷಟ್ಪದಿ, ಇತ್ಯಾದಿ) ವನ್ನು ಸೂಚಿಸುವ ' ಪ್ರಕಾರ ' ಎಂಬಿವುಗಳನ್ನು ಬಿಟ್ಟು ಉಳಿದ ಆರು ವಿವರಗಳನ್ನು ಇಟ್ಟುಕೊಳ್ಳಬಹುದು. ಪ್ರತಿಕರಣದ ಕಾಲ, ಕೃತಿಕಾರನ ಹೆಸರುಗಳಿರುವ ಪ್ರತಿಗಳ ಸಂಖ್ಯೆ ಕಡಿಮೆ. ಆದುದರಿಂದ ಇಂಥ ಮಾಹಿತಿಯನ್ನು ಜೊತೆಗೆ ಕೃತಿ ಪೂರ್ಣವೋ ಅಪೂರ್ಣವೋ ಗ್ರಂಥ ಪ್ರಕಾರ ಚಂಪುವೋ ಷಟ್ಪದಿಯೋ ಈ ಮುಂತಾದ ಅಂಶಗಳನ್ನು ' ಇತರ ವಿವರ ' ಎಂಬಲ್ಲಿ ಸೂಚಿಸಬಹುದಾಗಿದೆ.

ಇನ್ನು, ಒಂದೇ ಸಂಖ್ಯೆಯು ಹಸ್ತಪ್ರತಿಯ ಕ್ರಮ ಅಥವಾ ಕ್ರಮಾಂಕ ಅಥವಾ ಕ್ರಮಸಂಖ್ಯೆಯೂ, ಹಸ್ತಪ್ರತಿಗೆ ಕೊಡಲಾಗುವ ಸಂಖ್ಯೆಯೂ ಆಗುವಂತೆ ಸಂಯೋಜಿಸಿದರೆ ಇನ್ನೂ ಒಂದು ವಿವರವನ್ನು ಕೈ ಬಿಡಲು ಸಾಧ್ಯವಾಗುತ್ತದೆ. ಅದರಂತೆ ತಾಡವೋಲೆ ಮತ್ತು ಕಾಗದ ಪ್ರತಿಗಳ ಸೂಚಿಯನ್ನು ಪ್ರತ್ಯೇಕವಾಗಿಯೇ ಪ್ರಕಟಿಸಿದರೆ (ಕೆ / ಕೆ. ಎ / ಕೆ. ಬಿ.[೩೩] ಈ ಮುಂತಾದ) ಸಂಕೇತಗಳ ಗೊಂದಲವನ್ನು ತಪ್ಪಿಸಬಹುದು. ಒಟ್ಟಿಗೆ ಮಾಡುವುದಾದರೆ ಗ್ರಂಥಸಂಖ್ಯೆಯ ಜೊತೆಗೆ ಕಂಸಿನಲ್ಲಿ (ತಾ) (ಕಾ) ಎಂದು ಸೂಚಿಸಿದರೂ ಸಾಕೆನಿಸುತ್ತದೆ. ಶ್ರಮದ ಉಳಿಕೆ ಹಾಗೂ ಪ್ರಯೋಜನ ದೃಷ್ಟಿಯಿಂದ ಬಹುಶಃ ಯಾವ ಕೊರತೆಯೂ ಕಂಡುಬರದ ಇಂಥ ಸೂಚಿಗಳ ನಿರ್ಮಾಣವು ಇಂದು ಹೆಚ್ಚು ಅಗತ್ಯವೆನಿಸುತ್ತದೆ.

ಇಂದಿನ ಹಸ್ತಪ್ರತಿ ಸಂಗ್ರಹಗಳ ಸ್ಥಿತಿಗತಿಗಳು ಅಂದರೆ ದಿನದಿಂದ ದಿನಕ್ಕೆ ಶಿಥಿಲಗೊಳ್ಳುತ್ತಿರುವ, ಹಲವೆಡೆ ನಾಶಗೊಳ್ಳುತ್ತಿರುವ ದುರ್ದೆಸೆ ಒಂದೆಡೆ. ಬಹಳಷ್ಟು ಸಮಯ, ಶ್ರಮ ಹಾಗೂ ಆರ್ಥಿಕ ನೆರವನ್ನು ಬೇಡುತ್ತಿರುವ, ಬಹಳಷ್ಟು ವಿವರಗಳನ್ನೊಳಗೊಳ್ಳಬೇಕಾದ ವರ್ಣನಾತ್ಮಕ ಮತ್ತು ಸೂಚಿಗಳ ಸಿದ್ಧತೆ ಆಮೆಗತಿಯಲ್ಲಿ ಸಾಗುತ್ತಲಿರುವ ಪರಿಸ್ಥಿತಿ ಇನ್ನೊಂದೆಡೆ. ಅಂತೂ ನಿರೀಕ್ಷಿಸಿದಷ್ಟು ತೀವ್ರಗತಿಯಲ್ಲಿ ಈ ಕಾರ್ಯ ಕೈಗೂಡದಿರುವ ಸಂದರ್ಭ ನಿರ್ಮಿತವಾಗಿದೆ.

ಇಂಥ ಪರಿಸ್ಥಿತಿಯಲ್ಲಿ ಸಂಪಾದನೆ ಮತ್ತು ಸಂಶೋಧನೆ ಈ ಉಭಯ ಉದ್ದೇಶಗಳಿಗೆ ವ್ಯತ್ಯಯ ಬಾರದಂತೆ ಹತ್ತು ಹಲವು ವಿವರಗಳನ್ನೊಳಗೊಳ್ಳುವ " ವರ್ಣನಾತ್ಮಕ ಸೂಚಿ " ಇಲ್ಲವೆ ಆರು ವಿವರಗಳನ್ನೊಳಗೊಳ್ಳುವ " ಸೂಚಿ " ಗಳನ್ನು ಸಿದ್ಧಪಡಿಸಿ ಪ್ರಕಟಿಸುವುದು ಸೂಕ್ತ ಮತ್ತು ಸಕಾಲಿಕವೆನಿಸುತ್ತದೆ. ತುಂಬಾ ಅಗತ್ಯವೆನ್ನಲಾದ ಇಷ್ಟು ಮಾಹಿತಿ ದೊರಕಿದರೆ ಸಾಕು. ಸಾರಿಗೆ, ಸಂಪರ್ಕಗಳು ಸಮರ್ಪಕವಾಗಿರುವ ಇಂದಿನ ದಿನಗಳಲ್ಲಿ ಈ ನಿಟ್ಟಿನಲ್ಲಿ ವಿಶೇಷ ಅಧ್ಯಯನಗೈಯುವ ವಿದ್ವಾಂಸರು ಹಸ್ತಪ್ರತಿಗಳಲ್ಲಿರುವ ನೇರ ಪ್ರಯಾಣ ಕೈಗೊಳ್ಳಬಹುದು. ಅದು ಸಾಧ್ಯವಾಗದ ಪಕ್ಷದಲ್ಲಿ ಝೆರಾಕ್ಸ್, ಫೋಟೋಸ್ಟ್ಯಾಟ್ ಮುಂತಾದ ಪ್ರತೀಕರಣ ಯಂತ್ರಗಳ ಮೂಲಕ ವ್ಯಕ್ತಿಗಳೂ, ಮೈಕ್ರೊ ಫಿಲ್ಮಿಂಗ್ ಮೂಲಕ ಸಂಸ್ಥೆಗಳು ಬೇಕಾದ ಹಸ್ತಪ್ರತಿಯ ನಕಲನ್ನು ಪಡೆಯಬಹುದಾಗಿದೆ.

ಸಂಪಾದಕ / ಸಂಶೋಧಕರಿಗೆ ಇಂಥ ಮೂಲ ಮಾಹಿತಿಯನ್ನು ಒದಗಿಸಿ ಕೊಡಬಲ್ಲ ಹತ್ತು ಮತ್ತು ಆರು ಅಂಶಗಳ ವಿವರಗಳನ್ನೊಳಗೊಳ್ಳುವ ವರ್ಣನಾತ್ಮಕ ಸೂಚಿ ಮತ್ತು ಸೂಚಿಗಳು ' ಮಾದರಿಯ 'ಸೂಚಿಗಳೆನಿಸಬಹುದಾಗಿದೆ. ಅಲ್ಲದೆ ಇವು ಥಿಯೋಡರ್ ಆಫ್ರೆಕ್ಟನ Catalogues Catagarum ಮಾದರಿಯಲ್ಲಿ " ಕನ್ನಡ ಹಸ್ತಪ್ರತಿಗಳ ಸಮಗ್ರ ಸೂಚಿ " ಯನ್ನು ತೀವ್ರವಾಗಿ ರೂಪಿಸಲು ಸಹಾಯಕವಾಗುತ್ತದೆ ಎನ್ನಬಹುದು.

## ೩.೧೩ : ಸೂಚಿ ಮಾದರಿಗಳು

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತೀಯ ಹಸ್ತಪ್ರತಿಗಳು ಸೂಚೀಕರಣ ಕಾರ್ಯ ಪ್ರಾರಂಭವಾಯಿತು. ಈ ಪರಂಪರೆಯಲ್ಲಿಯೇ ಮದ್ರಾಸು ಸರಕಾರದ, ಮೈಸೂರು ಹಾಗೂ ಉಸ್ಮಾನಿಯಾ ವಿಶ್ವವಿದ್ಯಾಲಯಗಳ, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಹಸ್ತಪ್ರತಿ ಸಂಗ್ರಹದ ಸೂಚಿ ತಯಾರಿಕೆ ಕಾರ್ಯವನ್ನು ಭರದಿಂದ ಪ್ರಾರಂಭಿಸಿದವು. ಹೀಗೆ ತಯಾರಿಸಿದ ಸೂಚಿಗಳಲ್ಲಿ ಮದ್ರಾಸು ಸರಕಾರದ ಹಸ್ತಪ್ರತಿ ಗ್ರಂಥಾಲಯದ ಸೂಚಿಯನ್ನು ಪ್ರೊ. ಕುಪ್ಪುಸ್ವಾಮಿ ಶಾಸ್ತ್ರಿ ಹಾಗೂ ಅವರ ಸಹಯೋಗಿ ಪಂಡಿತರು ತಯಾರಿಸಿದ್ದು ಒಂದು ಮಹತ್ವದ ಸೂಚಿಯಾಗಿದೆ. ಆ ಸೂಚಿಯ ಕುರಿತು ಇಲ್ಲಿ ಅವಲೋಕಿಸುವುದು ಉಪಯುಕ್ತವೆಂದು ಭಾವಿಸಬಹುದು. [೨೭]

ಈ ಸೂಚಿ ಸಂಪುಟಗಳಲ್ಲಿ ನಮೂದಿಸಿದ ಪ್ರತಿಯೊಂದು ಹಸ್ತಪ್ರತಿಯ ಕುರಿತು ಈ ಕೆಳಗಿನ ಅಂಶಗಳನ್ನು ಕೊಡಲಾಗಿದೆ.

೧. ಕ್ರಮಾಂಕ

೨. ಶಿರೋನಾಮೆ

೩. ವಿಷಯ (ವಸ್ತು)

೪. ಆಕಾರ

೫. ಪುಟ ಸಂಖ್ಯೆ

೬. ಪುಟಕ್ಕೆ ಸಾಲುಗಳು

೭. ಲಿಪಿ

೮. ಸ್ಥಿತಿ

೯. ಬರವಣಿಗೆ

೧೦. ಪೂರ್ಣಾಪೂರ್ಣ

೧೧. ವಿವರಣೆ

೧೨. ಪ್ರಾರಂಭ

೧೩. ಸಮಾಪ್ತಿ

೧೪. ಸಮಾಪ್ತಿ ವಚನ

ಇನ್ನುಳಿದ ಕೆಲವು ಸೂಚಿಗಳಲ್ಲಿ ಹಸ್ತಪ್ರತಿಗಳು ಎಲ್ಲಿಂದ ಬಂದವು, ಯಾರಿಂದ ಬರೆಯಲ್ಪಟ್ಟವು, ಇತ್ಯಾದಿ ಮಾಹಿತಿಯನ್ನು ಕೊಡಲಾಗಿರುತ್ತದೆ. ಇಂಥ ವಿವರಗಳನ್ನು ನೋಂದಣಿ ದಾಖಲೆಯಲ್ಲಿ Accession Register ದಾಖಲೆ ಮಾಡಿದರೆ ಸಾಕು. ಈ ತೆರನಾದ ವಿವರಗಳು ಸುದೀರ್ಘವಾಗಿದ್ದು, ಕೆಲವೊಂದು ನಮೂದುಗಳು ಹತ್ತು ಪುಟಗಳಷ್ಟು ವಿಸ್ತಾರವಾಗಿವೆ.

ಈ ೧೪ ಅಂಶಗಳಲ್ಲಿ ಕೊನೆಯ ನಾಲ್ಕು ಅಂಶಗಳು ಕೆಳಗೆ ನಮೂದಿಸಿದ ಕಾರಣಗಳಿಗಾಗಿ ಬಹಳಷ್ಟು ವಿಸ್ತಾರವಾಗಿ ಬಂದಿವೆ. ೧೧ ನೇ ಅಂಶವಾದ ವಿವರಣೆ ಎಂಬುದರಲ್ಲಿ ಲೇಖಕನ ಕಾಲ, ಮತ ಹಾಗೂ ಅವನ ಕೃತಿಯ ಬಗ್ಗೆ ವಿವರಗಳು ಬಂದಿವೆ.

೧೨ ನೇ ಅಂಶವಾದ ಪ್ರಾರಂಭ ಎಂಬುದರಲ್ಲಿ ಪ್ರಾಚೀನ ಕಾವ್ಯಗಳ ಪ್ರಾರಂಭದಲ್ಲಿ ಈ ಕೆಳಗಿನ ಅಂಶಗಳು ಅಡಕವಾಗುತ್ತಿದ್ದುದರಿಂದ ಈ ಭಾಗಗಳನ್ನು ವಿಸ್ತೃತವಾಗಿ ಕೊಡಲಾಗಿದೆ.

ಅ) ಕವಿಯ ಕುಲದೇವತಾ ಸ್ತುತಿ;

ಆ) ಆಗಿಹೋದ ಕವಿಗಳ ಸ್ತುತಿ;

ಇ) ಕಾವ್ಯದ ಮಹತಿ, ಪ್ರಯೋಜನ ಹಾಗೂ ಕಾವ್ಯೋದ್ದೇಶ;

ಈ) ಕಥಾವಸ್ತು;

ಉ) ಕವಿ ಪರಿಚಯ... ಇತ್ಯಾದಿ

ಈ ಅಂಶಗಳು ಕವಿಯ ಮತ್ತು ಅವನ ಕಾಲ, ಕಥಾವಸ್ತು, ಮುಂತಾದ ವಸ್ತುವಿಷಯಗಳ ಮೇಲೆ ಹೆಚ್ಚಿನ ಬೆಳಕು ಚೆಲ್ಲುತ್ತವೆ.

**ಸಮಾಪ್ತಿ ವಚನ (Colophon) :**

ಇಲ್ಲಿ ಕಂಡುಬರುವ ಅಂಶಗಳು ಲಿಪಿಕಾರ ಯಾರು ? ಅವನು ಯಾರ ಆದೇಶದ ಮೇರೆಗೆ ಪ್ರತಿ ಮಾಡುವ ಕಾರ್ಯ ಕೈಗೊಂಡ ? ಬರೆದ ಸ್ಥಳ ಹಾಗೂ ಕಾಲ ಮುಂತಾದ ವಿಷಯಗಳ ಬಗ್ಗೆ ವಿವರ ನೀಡುತ್ತವೆ. ಉದಾಹರಣೆಗೆ ರಾಮನಾಥ ವಿಲಾಸದ ಕೊನೆಯನ್ನು ನೋಡೋಣ.

(ರಾಮನಾಥ ವಿಲಾಸ ನಮೂದು ೧೧೪೫)

ಕರಿಗಿರಿ ನಗ ವಾರಿಧಿ ಚಂದ್ರಂ
ನಿರುತಂ ಶಕವರ್ಷ ರಾಕ್ಷಸಾಬ್ದಂ ಶ್ರಾವಣ
ವರ ಕೃಷ್ಣ ಪಂಚಮಿಯೊಳಂ
ಬರೆದಂ ಬ್ರಹ್ಮ ಸದಶಿವಾಖ್ಯಾನ ಕೃತಿಯಂ

(ಈ ಪ್ರತಿಯನ್ನು ಬ್ರಹ್ಮನೆಂದು ಲಿಪಿಕಾರನು ರಾಕ್ಷಸನಾಮ ಸಂವತ್ಸರದ ಶ್ರಾವಣಮಾಸದ ಕೃಷ್ಣಪಂಚಮಿಯಂದೆ ಬರೆದು ಮುಗಿಸಿದನು.)

## ೩.೧೩.೧ : ಭಾರತ ಸರಕಾರದ ಸೂಚಿ ಮಾದರಿ

ಭಾರತ ಸರಕಾರದ ಹಸ್ತಪ್ರತಿಗಳ ಸಂಬಂಧದಲ್ಲಿ ಒಂದು ಸುಲಭ ಪದ್ಧತಿ ಸೂಚಿಸಿದ್ದು ಅದರಲ್ಲಿ ಈ ಕೆಳಗಿನ ಹನ್ನೊಂದು ಅಂಶಗಳಿವೆ.

೧) ಕ್ರಮಾಂಕ ಹಾಗೂ ವಿಷಯ

೨) ಅನುಕ್ರಮಾಂಕ (Accession No.)

೩) ಶಿರೋನಾಮೆ (Title)

೪) ಲೇಖಕನ ಹೆಸರು (Author's Name)

೫) ಭಾಷ್ಯಕಾರ

೬) ವಸ್ತು ಮತ್ತು ವಿಷಯ

೭) ಲಿಪಿ

೮) ಆಕಾರ (ಪುಟ, ಸಾಲು, ಅಕ್ಷರ)

೯) ಪೂರ್ಣವಿದೆಯೊ ಅಥವಾ ಅಪೂರ್ಣವಿದೆಯೊ

೧೦) ಸ್ಥಿತಿ

೧೧) ಇನ್ನಿತರ ವಿವರ

ಈ ಮಾದರಿಯು ಸಂಕ್ಷಿಪ್ತವಾಗಿಯೇನೋ ನಿಜ. ಆದರೆ ಅದರಲ್ಲಿ ಕೆಲವೊಂದು ಕುಂದುಕೊರತೆಗಳು ಕಂಡುಬರುತ್ತವೆ. ಭಾರತ ಸರಕಾರ ಹಸ್ತಪ್ರತಿಗಳ ಈ ಸೂಚಿಯನ್ನು ಒಂದು ಟ್ಯಾಬ್ಯುಲರ್ ಫಾರ್ಮಿನಲ್ಲಿ ಸಿದ್ಧಪಡಿಸಲು ಸಲಹೆ ಮಾಡಿದೆ. ಅದರಿಂದಾಗಿ ಅದರಲ್ಲಿ ಹಸ್ತಪ್ರತಿಗಳ ಬಗ್ಗೆ ಇರಬೇಕಾದ ಕೆಲವು ಅಂಶಗಳಿಗೆ ಸ್ಥಾನವಿಲ್ಲದಂತಾಗಿದೆ. ಅಲ್ಲದೆ ಸೂಚಿಗಳು ಅನೇಕ ಪುಟಗಳ ವಿಸ್ತಾರ ಹೊಂದಿ ಅದರ ಮುದ್ರಣ ಕಾರ್ಯಕ್ಕೆ ಹೆಚ್ಚು ವೆಚ್ಚ ಬರುವದೇನೋ ಎಂದು ಅನಿಸುತ್ತದೆ.

ಹೀಗೆ ಸಂಶೋಧಕ ಸೂಚಿಕಾರರು ೧೯ ನೇ ಶತಮಾನದ ಸೂಚಿಗಳಲ್ಲಿ ಬಹಳಷ್ಟು ಮಾಹಿತಿಯನ್ನು ಕೊಟ್ಟಿದ್ದಾರೆ. ಈ ವಿವರಣಾತ್ಮಕ ಸೂಚಿಗಳನ್ನು ಪ್ರಕಟಿಸಿ ಮಹತ್ತರ ಕಾರ್ಯ ಸಾಧಿಸಿದರೇನೋ ನಿಜ. ಆದರೆ ಈ ಸೂಚಿಗಳ ತಯಾರಿಕೆಯಲ್ಲಿ ಸಮಯ ಹಾಗೂ ಹಣದ ವ್ಯಯ ಮಿತಿಮೀರಿ ಬೆಳೆಯಿತಷ್ಟೇ ಅಲ್ಲ, ಅವುಗಳ ಪ್ರಯೋಜನ ಓದುಗರಿಗೆ ಎಷ್ಟರಮಟ್ಟಿಗೆಯಾಯಿತೆಂಬುದು ಶಂಕಾಸ್ಪದವಾಗಿದೆ. ಹಸ್ತಪ್ರತಿ ಸೂಚಿಗಳಲ್ಲಿ ಮೇಲೆ ಕಾಣಿಸಿದ ೧೪ ಅಂಶಗಳ ಅಷ್ಟೊಂದು ವಿವರಗಳು ಬೇಕೇ ? ಹಸ್ತಪ್ರತಿಗಳ ಬಗ್ಗೆ ಎಷ್ಟೇ ವಿವರಗಳನ್ನು ಗ್ರಂಥಪಾಲಕನು ಸೂಚಿಗಳಲ್ಲಿ ಕೊಟ್ಟರೂ ಸಹ ಸಂಶೋಧಕನು ಸ್ವತಃ ಹಸ್ತಪ್ರತಿಗಳನ್ನು ಪರಿಶೀಲಿಸಲೇ ಬೇಕಾಗುತ್ತದೆ. ವಿವರಣಾತ್ಮಕ ಸೂಚಿಗಳ ಅವಶ್ಯಕತೆ ೧೯ ನೇ ಶತಮಾನದ ಉತ್ತರಾರ್ಧದಲ್ಲಿ ಇತ್ತೇನೋ ? ಆದರೆ ಈಗ ಕಾಲ ಬಹಳ ಬದಲಾಗಿದೆ; ಹೊಸ ಹೊಸ ಯಾಂತ್ರಿಕ ಸಾಧನಗಳು ಗ್ರಂಥಾಲಯದಲ್ಲಿ ಬಳಕೆಗೆ ಬಂದಿವೆ. ಹೀಗಾಗಿ ಅಷ್ಟೊಂದು ವಿವರಗಳನ್ನೊಳಗೊಂಡ ಸೂಚಿಗಳನ್ನು ಉಪಯೋಗಿಸುವ ತಾಳ್ಮೆ ಹಾಗೂ ಸಮಯ ಓದುಗರಿಗೆ ಅಷ್ಟೇ ಏಕೆ ಪಂಡಿತರಿಗೂ ಇದೆಯೇ ಎಂಬ ಶಂಕೆ ಉಂಟಾಗುತ್ತದೆ.

ಡಾ. ಇ. ಆರ್. ಕೃಷ್ಣಶರ್ಮ ಅಡ್ಯಾರ್ ಲೈಬ್ರರಿಯಲ್ಲಿನ ಹಸ್ತಪ್ರತಿಗಳ (ವಿಶ್ವಭಾರತಿ ಸಂಗ್ರಹ) ವಿವರಣಾತ್ಮಕ ಸೂಚಿಯನ್ನು ಹಳೇ ಪದ್ಧತಿಯ ಮೇರೆಗೆ ತಯಾರಿಸಿದರು. ಈ ಪದ್ಧತಿಯ ಮೇರೆಗೆ ಸೂಚಿಗಳಲ್ಲಿ ಬಹಳಷ್ಟು ವಿವರಗಳನ್ನು ಕೊಡುವದು ಇದ್ದುದರಿಂದ ಅವರ ಕಾರ್ಯ ದೀರ್ಘ ಕಾಲ ಉರುಳಿದರೂ ಮುಗಿಯಲೇ ಇಲ್ಲ. ಕೊನೆಗೆ ಡಾ. ಶರ್ಮ ಭಾರತ ಸರಕಾರದವರು ನಿರ್ಧರಿಸಿದ ಸುಲಭ ಮಾದರಿಯ ಸೂಚಿ ತಯಾರಿಕೆಗೆ ಶರಣು ಹೋಗಿ ತಮ್ಮ ಕಾರ್ಯ ಪೂರೈಸಿದರು. ಆದರೂ ಸಂಕಲನಕ್ಕೆ ಕೈಕೊಂಡ ೧೩ ನೇ ಸಂಪುಟದಲ್ಲಿ ಜಪಾನೀ, ಬರ್ಮಿ, ಕನ್ನಡ ಹಾಗೂ ತಮಿಳು ಭಾಷೆಗಳಲ್ಲಿನ ಹಸ್ತಪ್ರತಿಗಳನ್ನು ನಮೂದಿಸುವದು ಸಾಧ್ಯವಾಗದೇ ಹೋಯಿತು.[೩೧]

## ೩.೧೪ : ಸೂಚ್ಯಂಕದ ಪ್ರಭೇದಗಳು

ಸೂಚಿಗಳನ್ನು ಮೂರು ಗುಂಪುಗಳಾಗಿ ವರ್ಗೀಕರಿಸಬಹುದು.

## ೩.೧೪.೧ : ಸಾಮಾನ್ಯ ಸೂಚಿಗಳು (General Indexes)

## ೩.೧೪.೨ : ವಿಷಯ ಸೂಚಿಗಳು (Subject Indexes)

## ೩.೧೪.೩ : ವೈಯಕ್ತಿಕ ನಿಯತಕಾಲಿಕ ಸೂಚಿಗಳು (Individual / Independent Periodical Indexes)

### ೩.೧೪.೧ : ಸಾಮಾನ್ಯ ಸೂಚಿಗಳು

ಈ ಸೂಚಿಗಳು ಹಲವಾರು ನಿಯತಕಾಲಿಕೆಗಳಲ್ಲಿ ವಿಷಯಗಳನ್ನು ಸೂಚಿಸುತ್ತವೆ.

ಉದಾ : — Reader's Guide to periodical literature,

— Guide to Indian periodical literature ಇತ್ಯಾದಿ.....

ಈ ಕೃತಿಗಳಲ್ಲಿ ಕೆಳಕಾಣಿಸಿದ ಸೂಚಿಗಳನ್ನು ಅಕಾರಾದಿಯಾಗಿ ವ್ಯವಸ್ಥೆ ಮಾಡಲಾಗಿದೆ.

### ೩.೧೪.೨ : ವಿಷಯ ಸೂಚಿಗಳು

ಹೆಸರೇ ಸೂಚಿಸುವ ಹಾಗೆ ನಿರ್ದಿಷ್ಟ ವಿಷಯದಲ್ಲಿ ನಿಯತಕಾಲಿಕೆಗಳಲ್ಲಿ ಪ್ರಕಟವಾಗಿರುವ ಲೇಖನಗಳನ್ನು ಅಕಾರಾದಿಯಾಗಿ ಪಟ್ಟಿ ಮಾಡುತ್ತದೆ. ಇದಕ್ಕಾಗಿ ಸಂಬಂಧಪಟ್ಟ ವಿಷಯದ ನಿರ್ದಿಷ್ಟ ನಿಯತಕಾಲಿಕೆಗಳಲ್ಲಿ ಮತ್ತು ನಿರ್ದಿಷ್ಟ ಕಾಲಾವಧಿಯಲ್ಲಿ ಪ್ರಕಟವಾಗಿರುವ ಲೇಖನಗಳ ಪಟ್ಟಿಯನ್ನು ಪ್ರಕಟಿಸುತ್ತವೆ. ಇದರಿಂದಾಗಿ ನಿರ್ದಿಷ್ಟ ಗುಂಪಿನ ಸಂಶೋಧಕರಿಗೆ ಪ್ರಚಲಿತ ಸಂಬಂಧಿಸಿದ ಸಾಹಿತ್ಯದ ಬಗ್ಗೆ ಅರಿವು ಮೂಡಿಸಲು ಸಾಧ್ಯವಾಗುತ್ತದೆ.

ಉದಾ : Agriculture Index, Education Index, Art Index, Social Science and Humanities Index ಇತ್ಯಾದಿ.

## ೩.೧೪.೩ : ವೈಯಕ್ತಿಕ ನಿಯತಕಾಲಿಕೆಗಳ ಸೂಚಿಗಳು

ವೈಯಕ್ತಿಕ ನಿಯತಕಾಲಿಕೆಗಳು ತಮ್ಮ ಪ್ರಕಟಣೆಗೆ ಸಂಚಿತ ಸೂಚಿಯೊಂದನ್ನು ವಾರ್ಷಿಕವಾಗಿ ಪ್ರಕಟಿಸುತ್ತವೆ. ಈ ಸೂಚಿಯು ಆ ನಿಯತಕಾಲಿಕೆಯಲ್ಲಿ ಈ ಅವಧಿಯಲ್ಲಿ ಪ್ರಕಟವಾಗಿರುವ ಲೇಖನಗಳನ್ನು ಸೂಚಿಸುತ್ತವೆ. ಇಂತಹ ಸೂಚಿಗಳ ವ್ಯಾಪ್ತಿ ಮತ್ತು ಪರಿಪೂರ್ಣತೆ ನಿಯತಾಲಿಕೆಯಿಂದ ನಿಯತಕಾಲಿಕೆಗೆ ಬದಲಾಗುತ್ತದೆ.

ಉದಾ : i) Language (Linguistic Society of America, USA)

ii) Bulletin of the School of Oriental and African Studies, University of London, U.K.)

iii) Programme (ASLIB, U.K.)

## ೩.೧೫ : ಭಾರತೀಯ ಸಾಹಿತ್ಯದ ರಾಷ್ಟ್ರೀಯ ಸೂಚಿ

ನವದೆಹಲಿಯಲ್ಲಿರುವ ಭಾರತೀಯ ಸಾಹಿತ್ಯ ಅಕಾಡೆಮಿಯವರು "ನ್ಯಾಶನಲ್ ಬಿಬ್ಲಿಯೋಗ್ರಫಿ ಆಫ್ ಇಂಡಿಯನ್ ಲಿಟರೇಚರ್ : ೧೯೦೧ - ೧೯೫೩" ಎಂಬ ಬೃಹತ್ ಸಂಕಲನವನ್ನು ಹಮ್ಮಿಕೊಂಡು ಎರಡನೆ ಸಂಪುಟದಲ್ಲಿ ೫೩ ವರ್ಷಗಳ ಅವಧಿಯಲ್ಲಿ ಪ್ರಕಟವಾದ ಕನ್ನಡ ಪುಸ್ತಕಗಳ ಸೂಚಿಯನ್ನು ಒದಗಿಸಿದ್ದಾರೆ. ೧೯೬೬ ರಲ್ಲಿ ಪ್ರಕಟವಾದ ಈ ಸಂಪುಟದಲ್ಲಿ ಹಿಂದಿ. ಕಾಶ್ಮೀರಿ ಮತ್ತು ಮಲೆಯಾಳಂ ಪುಸ್ತಕಗಳೂ ಸೂಚೀಕರಿಸಲ್ಪಟ್ಟಿವೆ. ಇವರಲ್ಲಿ ೨೩೫೬ ಕನ್ನಡ ಪುಸ್ತಗಳು ಸೂಚಿಗೊಂಡಿವೆ. ನಾಡಿನ ಹೆಸರಾಂತ ಗ್ರಂಥಪಾಲಕರಾದ ಪದ್ಮಶ್ರೀ ಬಿ. ಎಸ್. ಕೇಶವನ್ ಮತ್ತು ಶ್ರೀ ವೈ. ಎಂ. ಮುಳೆಯವರು ಈ ಸಂಪುಟಗಳ ಪ್ರಧಾನ ಸಂಪಾದಕರು. ಶೀರ್ಷಿಕೆ ಮತ್ತು ಲೇಖಕರ ಹೆಸರುಗಳನ್ನು ರೋಮನ್ ಲಿಪಿಯಲ್ಲಿ ಹಂಟೆರಿಯನ್ ಲಿಪ್ಯಂತರದ ವಿಧಾನಕ್ಕನುಗುಣವಾಗಿ ಕೊಡಲಾಗಿದೆ, ಪುಸ್ತಕಗಳ ವಸ್ತು ಪರಿಚಯವನ್ನು ಸಂಕ್ಷಿಪ್ತವಾಗಿ ಇಂಗ್ಲೀಷಿನಲ್ಲಿ ವಿವರಿಸಲಾಗಿದೆ. ಮಾನವಿಕಗಳ ಪರಿವಿಡಿಯಲ್ಲಿ ಬರುವ ಹಾಗೂ ಸಾಹಿತ್ಯಿಕ ಮೌಲ್ಯವನ್ನು ಹೊಂದಿರುವ ಪುಸ್ತಕಗಳ ಬಗ್ಗೆ ಮಾಹಿತಿಗಳು ಈ ಸೂಚಿಯಲ್ಲಿ ದೊರೆಯುತ್ತವೆ.

## ೩.೧೫.೧ : ಕವಿ, ಭಾಷಾ ಮತ್ತು ಸಾಹಿತ್ಯ ಚರಿತ್ರೆಗಳು

ಶಾಸ್ತ್ರೀಯವಾದ ಅರ್ಥದಲ್ಲಿ ಗ್ರಂಥಸೂಚಿ ಎನಿಸಿಕೊಳ್ಳದಿದ್ದರೂ ಗ್ರಂಥಗಳ ಪರಿಚಯ ಮಾಡಿಕೊಡುವ ಬೇರೆ ರೀತಿಯ ಪ್ರಯತ್ನಗಳು ನಡೆದಿವೆ. ಕವಿಚರಿತೆ ಮತ್ತು ಸಾಹಿತ್ಯಚರಿತೆಗಳಲ್ಲಿ ಅಂತಹ ಪ್ರಯತ್ನಗಳು ನಡೆದಿವೆ. ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರ ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳು ಕವಿಯ ಕಾಲ, ದೇಶಾದಿ ವಿವರ, ಓಲೆಗರಿ ಅಥವಾ ಕಾಗದಪ್ರತಿಯ ಆಕಾರ, ಸ್ವರೂಪ ಮೊದಲಾದ ವಿವರಗಳನ್ನು ಕೊಡುತ್ತವೆ. ಪ್ರತಿ ಸಂಪುಟದ ಕೊನೆಯಲ್ಲಿ ಕವಿಗಳ, ಗ್ರಂಥಗಳ, ಸ್ಥಳಗಳ, ಮತ್ತು ರಾಜರು, ಮಂತ್ರಿಗಳು

ಮುಂತಾದವರ ಅಂಕಿತ ನಾಮಗಳ ಅಕಾರಾದಿ ಪಟ್ಟಿಗಳನ್ನು, ಅನುಬಂಧಗಳನ್ನಾಗಿ ಕೊಟ್ಟಿದ್ದಾರೆ. ಡಾ. ರಂ. ಶ್ರೀ. ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಈ ದಿಶೆಯಲ್ಲಿ ನಡೆದ ಇತರ ಪ್ರಯತ್ನಗಳು.

### ೩.೧೫.೨ : ಏಕ ವಿಷಯಸೂಚಿ

ಏಕ ವಿಷಯಸೂಚಿಗಳು ಕನ್ನಡದಲ್ಲಿಯೂ ಬಂದಿವೆ. ಇವುಗಳಲ್ಲಿ ಪ್ರೊ. ಹಾ. ಮಾ. ನಾಯಕ ಅವರ "ಕನ್ನಡ ಜಾನಪದ ಗ್ರಂಥಸೂಚಿ" ಪ್ರಮುಖವಾದುದು. ಅವರು ಈ ಗ್ರಂಥಸೂಚಿಯಲ್ಲಿ ೧೯೭೪ ರ ವರೆಗೆ ಪ್ರಕಟವಾಗಿರುವ ೫೩೨ ಗ್ರಂಥಗಳನ್ನು ವರ್ಣಿಸಿದ್ದಾರೆ. ಈ ಗ್ರಂಥಗಳ ಕಾವ್ಯ, ಲಾವಣಿ, ಕಥೆ, ಐತಿಹ್ಯ, ಭಾಷಾಂತರ, ರೂಪಾಂತರ, ಗಾದೆ, ಒಗಟು, ನಾಟಕ, ರಂಗಭೂಮಿ, ವಿಚಾರ, ವಿಮರ್ಶೆ, ಸಂಶೋಧನೆ

**I) ಲೇಖಕ ಪತ್ರಕ :** ಇದು ಮುಖ್ಯ ಪತ್ರಕ. ಇದರಲ್ಲಿ ಪ್ರತಿಯೊಂದು ಹಸ್ತಪ್ರತಿಯ ಬಗ್ಗೆ ಈ ಕೆಳಗಿನ ವಿವರಗಳನ್ನು ನಮೂದಿಸಬಹುದು.

a) ಲೇಖಕನ ಹೆಸರು, ಕಾಲ
b) ಶಿರೋನಾಮೆ ಹಾಗೂ ಸಹಲೇಖಕನ, ಟೀಕಾಕಾರನ, ಚಿತ್ರಕಾರನ, ಭಾಷಾಂತರಕಾರನ ಹೆಸರು
c) ಬರೆದ ಸ್ಥಳ, ಲಿಪಿಕಾರ, ಹಾಗೂ ಹಸ್ತಪ್ರತಿಯ ಕಾಲ
d) ವಿಷಯ, ಭಾಷೆ, ಲಿಪಿ ಹಾಗೂ ಶೈಲಿ
e) ಬರೆಯಲು ಉಪಯೋಗಿಸಿರುವ ವಸ್ತು ಮತ್ತು ಬರಹ ಒಂದೇ ಮಗ್ಗಲೋ ಅಥವಾ ಎರಡು ಮಗ್ಗಲೋ
f) ಪುಟಸಂಖ್ಯೆ, ಪುಟಕ್ಕೆ ಸಾಲುಗಳು (ಸಾಲಿಗೆ ಅಕ್ಷರಗಳು ಪೂರ್ಣ, ಅಪೂರ್ಣ, ಗಾತ್ರ, ಬರವಣಿಗೆ ಸ್ಥಿತಿ)
g) ವಿವರಣೆ
h) ಪ್ರಾರಂಭ
i) ಸಮಾಪ್ತಿ
j) ವರ್ಗೀಕರಣ ನಂ.

ಸೂಚಿಗಳನ್ನು ಅಚ್ಚುಗೊಳಿಸುವಾಗ (f) ದಿಂದ (i) ವರೆಗಿನ ವಿವರಗಳನ್ನು ಸಾಕಷ್ಟು ಕಡಿಮೆಗೊಳಿಸಿ ಸಂಶೋಧಕರಿಗೆ ಬೇಕಾದ ಹಸ್ತಪ್ರತಿಯೆಡೆಗೆ ನೇರವಾಗಿ ಲಕ್ಷ್ಯಹರಿಸಲು ಅವಶ್ಯವಿದ್ದ ವಿವರಗಳನ್ನು ಮಾತ್ರ ಮುದ್ರಿಸಬಹುದು.

**II) ವಿಷಯ ಪತ್ರಕ :** ಇದರಲ್ಲೂ ವರ್ಗೀಕರಣ ಸಂಖ್ಯೆ, ಅನುಕ್ರಮಾಂಕ, ಲೇಖಕ, ಶಿರೋನಾಮೆ, ತೋರಿಸಿದರೆ ಸಾಕು.

**III) ಶಿರೋನಾಮೆ ಪತ್ರಕ :** ಇದರಲ್ಲಿ ಶಿರೋನಾಮೆ, ಲೇಖಕನ ಹೆಸರು, ವರ್ಗೀಕರಣ ಸಂಖ್ಯೆ, ಹಾಗೂ ಅನುಕ್ರಮಾಂಕ ಇವನ್ನಷ್ಟೇ ನಮೂದಿಸಿದರೆ ಸಾಕು.

**IV) ಹೆಚ್ಚಿನ ನಮೂದುಗಳು :** ಹಸ್ತಪ್ರತಿಯ ವಿಷಯ ಪತ್ರಕಕ್ಕೆ ಹೆಚ್ಚಿನ ಮಹತ್ವವಿರುತ್ತದೆ. ಆ ವಿಷಯ ಪತ್ರಕವನ್ನು ತಯಾರಿಸಿ ಲೇಖಕ ಹಾಗೂ ಶಿರೋನಾಮೆ ಪತ್ರಕಗಳೊಡನೆ ಸೇರಿಸಿ ಆ ಎಲ್ಲ ಪತ್ರಕಗಳನ್ನು ' ಅ ' ಕಾರಾದಿಯಾಗಿ ಹೊಂದಿಸಿಟ್ಟರೆ ಓದುಗರಿಗೆ ಅನುಕೂಲವಾಗುತ್ತದೆ. ಅದೇ ರೀತಿ ಒಂದು ಹೆಸರಿನಿಂದ ಇನ್ನೊಂದು ಹೆಸರಿಗೆ ಅಥವಾ ಒಂದು ಹೆಸರಿನ ಜೊತೆಗೆ ಇನ್ನೊಂದು ಹೆಸರನ್ನು ನೋಡಲು ಸೂಚಿಸುವ ನೋಡಿರಿ (see) ಹಾಗೂ " ಇದನ್ನೂ ನೋಡಿರಿ " (see also) ಸೂಚನೆಯು ಪತ್ರಗಳನ್ನು ಓದುಗರ ಅನುಕೂಲಕ್ಕಾಗಿ ತಯಾರಿಸಬಹುದು. ಇಂಥ ಪತ್ರಕಗಳು ಲೇಖಕನ ಹೆಸರಿನಲ್ಲಿ ಒಂದು ಹಸ್ತಪ್ರತಿಯಿಂದ ಇನ್ನೊಂದರಲ್ಲಿ ವ್ಯತ್ಯಾಸವಿದ್ದರೆ ಅಥವಾ ಶಿರೋನಾಮೆಯಲ್ಲಿ ವ್ಯತ್ಯಾಸವಿದ್ದರೆ ಆವಶ್ಯಕವಾಗುತ್ತದೆ.

ಉದಾಹರಣೆಗಾಗಿ ಸ್ಕಂದಪುರಾಣದಲ್ಲಿ ಕಾಶೀಖಾಂಡದಲ್ಲಿ ಶಿವ ಮತ್ತು ವಿಷ್ಣು ದೇವತೆಗಳನ್ನು ಕುರಿತು ಹನ್ನೆರಡು ಶ್ಲೋಕಗಳಿವೆ. ಈ ಶ್ಲೋಕಗಳನ್ನು ಯಮಧರ್ಮರಾಯನು ದೇವರ ಸ್ತುತಿರೂಪವಾಗಿ ಹೇಳಿದ್ದಾನೆ. ಆ ಶ್ಲೋಕಗಳನ್ನು ಏಳು ಹೆಸರುಗಳಿಂದ ಗುರುತಿಸಲಾಗುತ್ತಿದೆ. ಅವೆಂದರೆ :

೧) ತ್ರಿಮೂರ್ತಿ ಸ್ತೋತ್ರ

೨) ಧರ್ಮರಾಜ ಸ್ತೋತ್ರ

೩) ಯಮಸ್ತೋತ್ರ

೪) ವಿಷ್ಣು ಶಿವ ಸ್ತೋತ್ರ

೫) ವಿಷ್ಣು ಶಿವಾಷ್ಟೋತ್ತರ ಶತಕ

೬) ಹರಿಹರ ಶತಕ

೭) ಹರಿಹರಾಷ್ಟೋತ್ತರ ಶತನಾಮ ಸ್ತೋತ್ರ

ಈ ಏಳು ಹೆಸರಿನ ಕೆಳಗೆ ಪತ್ರಕಗಳನ್ನು ರಚಿಸಿ, ಸೂಕ್ತ ವಿವರಗಳನ್ನು ಅದರಲ್ಲಿ ದಾಖಲು ಮಾಡಿ ಲೇಖಕ ಹಾಗೂ ಶಿರೋನಾಮೆ ಪತ್ರಗಳೊಡನೆ ಬೆರೆಸಿ ಅಕಾರಾದಿಯಾಗಿ ಹೊಂದಿಸಿ ಸೂಚಿಪತ್ರ ಪೆಟ್ಟಿಗೆಯಲ್ಲಿರಿಸಿದರೆ ಓದುಗರಿಗೆ ಅನುಕೂಲವಾಗುತ್ತದೆ.

## ಕೃತಿ ಪರಿಚಯ

೧. ಕೃತಿ ನಾಮ

೨. ಕವಿನಾಮ – ಕಾಲ

೩. ಕೃತಿ ಭಾಷೆ

೪. ಕೃತಿ ಪ್ರಕಾರ

೫. ಕೃತಿ ವಿಷಯ ........................................................................................................................

೬. ವಿಶೇಷ ...............................................................................................................................

## ಪ್ರತಿ ಪರಿಚಯ

೭. ಕ್ರಮಾಂಕ

೮. ವಸ್ತು

೯. ಆಕಾರ

೧೦. ಹಸ್ತಪ್ರತಿ ಸ್ವರೂಪ

೧೧. ಗರಿ / ಪುಟ

೧೨. ಲಿಪಿ ಸ್ವರೂಪ

೧೩. ಮಿತಿ

೧೪. ಭಾಷಾ ಸ್ವರೂಪ

೧೫. ಆದಿ ..................................................................................................................................

.........................................................................................................................................

೧೬. ಅಂತ್ಯ ...............................................................................................................................

.........................................................................................................................................

೧೭. ವಿಶೇಷ ...............................................................................................................................

.........................................................................................................................................

೧೮. ಈ ಕಟ್ಟಿನಲ್ಲಿರುವ ಕೃತಿಗಳು : ೧) ................................ ೨) ................................

೩) ................................ ೪) ................................

೫) ................................ ೬) ................................

### ೩.೧೫.೩ : ಸ್ಪಷ್ಟತೆಗಳು

ಈ ನಮೂನೆಯ ಬಗ್ಗೆ ಕೆಲವು ಸ್ಪಷ್ಟನೆಗಳು ಅವಶ್ಯವೆಂದು ತೋರುತ್ತದೆ.

೧) ಈ ನಮೂನೆಯನ್ನು ಪ್ರಸ್ತಾವನೆಯಲ್ಲಿ ಮುದ್ರಿಸಿದರೆ ಸಾಕು. ಗ್ರಂಥದ ಒಳಗೆ ಪ್ರತಿಯೊಂದು ಪ್ರತಿಯನ್ನು ಪರಿಚಯಿಸುವಾಗ ಇದನ್ನು ಮುದ್ರಿಸಬಾರದು. ಇಲ್ಲಿಯ ಸೂಕ್ತ ಶೀರ್ಷಿಕೆಗಳ ಸ್ಥಾನದಲ್ಲಿ ಉತ್ತರ ರೂಪದ ವಿವರಗಳನ್ನು ಮಾತ್ರ ಮುದ್ರಿಸಬೇಕು ಅಷ್ಟೇ.

೨) ' ಕೃತಿ ವಿಷಯ ' ಎಂಬ ಶೀರ್ಷಿಕೆಯನ್ನು ಮುದ್ರಿಸಿ, ಅಲ್ಲಿ ಆ ವಿಷಯವನ್ನು ಸಾರವತ್ತಾಗಿ ಹೇಳಬೇಕು.

೩) ಎರಡೂ ವಿಭಾಗಗಳಲ್ಲಿ ವಿಶೇಷತೆ ಇದ್ದರೆ ಮಾತ್ರ ' ವಿಶೇಷ ' ಎಂಬ ಪದವನ್ನು ಮಾತ್ರ ಮುದ್ರಿಸಿ ಅದರ ಮುಂದೆ ಆ ವಿಶೇಷತೆ ಏನೆಂಬುದನ್ನು ನಮೂದಿಸಬೇಕು.

೪) ಎರಡನೆಯ ವಿಭಾಗದಲ್ಲಿ ಆದಿ, ಅಂತ್ಯ ಎಂಬ ಪದಗಳನ್ನು ಮುದ್ರಿಸಿ, ಅಲ್ಲಲ್ಲಿ ಪ್ರತಿಯ ಆದಿಪಾಠ, ಅಂತ್ಯಪಾಠಗಳನ್ನು ಉದ್ಧರಿಸಬೇಕು.

೫) ಒಂದು ಕಟ್ಟಿನಲ್ಲಿ ಒಂದಕ್ಕಿಂತ ಹೆಚ್ಚಿಗೆ ಕೃತಿಗಳಿದ್ದರೆ ' ಈ ಕಟ್ಟಿನಲ್ಲಿರುವ ಕೃತಿಗಳು ' ಎಂಬ ಶೀರ್ಷಿಕೆಯನ್ನು ಮುದ್ರಿಸಿ ಮೊದಲನೆಯ ಕೃತಿಯನ್ನು ಪರಿಚಯಿಸುವ ಸಂದರ್ಭದಲ್ಲಿ ಮಾತ್ರ ಎಲ್ಲ ಕೃತಿಗಳ ಯಾದಿಯನ್ನು ಕೊಡಬೇಕು. ಆ ಕಟ್ಟಿನ ಇತರ ಕೃತಿಗಳನ್ನು ಪರಿಚಯಿಸುವಾಗ ' ಈ ಕಟ್ಟಿನಲ್ಲಿರುವ ಕೃತಿಗಳು ' ಎಂಬ ಶೀರ್ಷಿಕೆಯನ್ನು ಮಾತ್ರ ಮುದ್ರಿಸಿ, ಅದರ ಮುಂದೆ ಮೊದಲನೆಯ ಕೃತಿಯ ನಂಬರು, ಹೆಸರುಗಳನ್ನು ಸೂಚಿಸಿ, ಅಲ್ಲಿಯ ಈ ಕಟ್ಟಿನ ಕೃತಿಗಳು ಕಾಲಂ ನೋಡಿರಿ ಎಂದು ಸೂಚಿಸಬೇಕು.

ಉದಾಹರಣೆ : ಕನ್ನಡ ಅಧ್ಯಯನ ಪೀಠದ ೪೩೭೪ ನೆಯ ನಂಬರಿನ ಕಟ್ಟನ್ನು ಉದಾಹರಣೆಯಾಗಿ ಕೊಟ್ಟು, ಈ ವಿಷಯವನ್ನು ಸ್ಪಷ್ಟಪಡಿಸಬಹುದು.

| | |
|---|---|
| ಶ್ರೀಕೃಷ್ಣ ಪಾರಿಜಾತ | ಅಪರಾಳ ತಮಣ್ಣ, ೧೮ ನೇ ಶತಮಾನ |
| ಕನ್ನಡ | ಬಯಲಾಟ |

ಕೃತಿ ವಿಷಯ : ಪಾರಿಜಾತಪುಷ್ಪಕ್ಕಾಗಿ ಸತ್ಯಭಾಮೆ - ರುಕ್ಮಿಣಿಯರಲ್ಲಾದ ಮನಸ್ತಾಪವನ್ನು ಶ್ರೀಕೃಷ್ಣ ಪರಿಹರಿಸಿದುದು.

ವಿಶೇಷ : ಈ ಕೃತಿಯ ಪೂರ್ವಾರ್ಧವನ್ನು ಅಪರಾಳ ತಮ್ಮಣ್ಣ, ಉತ್ತರಾರ್ಧವನ್ನು ಶಿರಗುಪ್ಪಿ ಸದಾಶಿವಯ್ಯ ರಚಿಸಿರುವರೆಂಬ ಸೂಚನೆ ಇಲ್ಲಿದೆ.

| | |
|---|---|
| ೪೩೭೫ / ೧ | ವಿದೇಶಿ ಕಾಗದ |
| ೮" × ೬" | ಜೀರ್ಣಪ್ರತಿ |
| ೧೩೫ | ಅಕ್ಷರ ಸ್ಪಷ್ಟ |

ಶಾಲಿವಾಹನ ಶಕ ೧೭೨೯, ಪ್ರಭವ, ಶುದ್ಧ ಭಾಷೆ.

ಆದಿ : ಶ್ರೀ ವಿರೂಪಾಕ್ಷ ಲಿಂಗಾಯ ನಮಃ । ಶ್ರೀ ನುಣ್ಣೊಗ್ಗೆರಳ ಸಂಗಮೇಶ್ವರಾಯ ನಮಃ । ಶ್ರೀ ಗಣಾಧಿಪತೇ ನಮಃ ರಾಯಚೂರ ಅಪರಾಲ ತಂಮಂಣನು ಮಾಡಿದ ಪಾರಿಜಾತ ಬರವುದಕ್ಕೆ ಶುಭಮಸ್ತು । ಶೋಭನಮಸ್ತು । ಆಯುರಾರೋಗ್ಯ ಐಶ್ವರ್ಯಮಸ್ತು । ರಾಗ ನಾಟಿ । ಜಂಪೆ ತಾಳ ।

**ಅಂತ್ಯ :** ಯೀ ಪುಸ್ತಕ ಆರದುಯಂದಡೆ । ತಾಳಿಕೋಟಿ । ಸಜ್ಜನ ಗಾಣಿಗರ ಲಿಂಗಪ್ಪನಾ । ಗರ್ಭದಲ್ಲಿ ಹುಟ್ಟಿದ ಮಲ್ಲಪ್ಪನು ವೋದ್ಯಾಡಿಕೊಳಬೇಕೆಂದು ಮನೋಪ್ರೀತಿಯಿಂದ ಬರಸಿದನು । ಶ್ರೀ । ದೀರ್ಘ । ರಸ್ವ । ಬಿಂದು । ವಿಸರ್ಗ । ದ್ವಿತ್ತು । ಯಿಷ್ಟರಲ್ಲಿ । ವಿಶ್ಮಿ ಆದರೂ । ಬಲ್ಲಂತ ಗ್ನಾನಿಗಳು ತಿದ್ದಿಕೊಂಬುವದು । ಇತಿ ಮಂಗಳ ಮಹಾಶ್ರೀ.....

**ವಿಶೇಷ :** ಈ ವರೆಗೆ ಲಭ್ಯವಾದ ಶ್ರೀಕೃಷ್ಣ ಪಾರಿಜಾತದ ಹಸ್ತಪ್ರತಿಗಳಲ್ಲಿಯೇ ಇದು ಕವಿಪ್ರತಿಗೆ ಹತ್ತಿರವಾಗಿರುವ ಪ್ರತಿಯಾಗಿದೆ.

**ಈ ಕಟ್ಟಿನಲ್ಲಿರುವ ಕೃತಿಗಳು :** ೧) ಶ್ರೀಕೃಷ್ಣ ಪಾರಿಜಾತ (೧ - ೩೫ ಬ),
೨) ಒಂದು ಶೃಂಗಾರ ಪದ,
೩) ದೇವನಾಗರಿ ಲಿಪಿಯಲ್ಲಿ ಬರೆದ ಕೆಲವು ಆರ್ಯಾವೃತ್ತಗಳು,
೪) ಒಂದು ಪದ.

ಕೆಲವು ವೇಳೆ ಇಲ್ಲಿ ತುಂಬಲು ಉತ್ತರವಿಲ್ಲದಿದ್ದರೆ ಒಂದು ಗೆರೆ (ಡ್ಯಾಶ್) ಹಾಕಬೇಕು. ಎರಡು ವಿಭಾಗಗಳನ್ನು ಪ್ರತ್ಯೇಕಿಸಿ ತೋರಿಸಲು ನಡುವೆ ಸೂಕ್ತ ಚಿಹ್ನೆ ಬಳಸಬೇಕು. ಇಲ್ಲವೆ ಒಂದಿಷ್ಟು ಹೆಚ್ಚು ಸ್ಥಳ ಬಿಡಬೇಕು. ಒಂದು ವೇಳೆ ಅನೇಕರು ಸೇರಿ ಒಂದು ಸೂಚಿಗ್ರಂಥವನ್ನು ಸಿದ್ಧಪಡಿಸಿದ್ದರೆ ಅವರವರ ಕೃತಿಸೂಚಿಯ ಕೊನೆಯಲ್ಲಿ ಅವರವರ ಸಂಕ್ಷಿಪ್ತ ನಾಮವನ್ನು ಸಣ್ಣ ಅಕ್ಷರದಲ್ಲಿ ಮುದ್ರಿಸಬೇಕು. ಪ್ರಸ್ತಾವನೆಯನ್ನು ಈ ಸಂಕ್ಷಿಪ್ತ ನಾಮಗಳಿಗೆ ವಿವರ ಒದಗಿಸಬೇಕು.

## ೩.೧೬ : ವಾಲ್ಟರ್ ಗ್ರೆಗ್ ಮತ್ತು ಫ್ರೆಡರಿಕ್ ಬವರ್ಸ್ ನಿರ್ದೇಶನ - ಮಾದರಿ ಸೂಚಿ

ವಿವರಣಾತ್ಮಕ ಗ್ರಂಥಸೂಚಿಯಲ್ಲಿ ಬರುವ ವಿವರಗಳು ವಿಷಯಗಳನ್ನು ಆಧರಿಸಿರುತ್ತವೆ. ಭೂಪಟಗಳ ಗ್ರಂಥಸೂಚಿ, ಅದರಲ್ಲಿ ಬರುವ ವಿವರಗಳ ರೀತಿ ಬೇರೆ. ಸಸ್ಯಶಾಸ್ತ್ರದ ಗ್ರಂಥಸೂಚಿ ಆದರೆ ಅದರಲ್ಲಿರುವ ಬಣ್ಣದ ಚಿತ್ರಗಳ ವಿವರಣೆಯೂ ಬೇಕು. ಈ ವಿವರಣೆ ಸಸ್ಯಶಾಸ್ತ್ರಜ್ಞನಿಗಲ್ಲದೆ, ಚಿತ್ರಕಲಾಭ್ಯಾಸಿಗೂ, ಗ್ರಂಥಸೂಚಿಕಾರನಿಗೂ ಅದರಲ್ಲಿ ಕುತೂಹಲ ಹುಟ್ಟಿಸುವಂತಿರಬೇಕು.

ಈ ರೀತಿಯ ವಿವರಣೆ ಕೊಡುವದರಲ್ಲಿ ವಾಲ್ಟರ್ ಗ್ರೆಗ ಮತ್ತು ಫ್ರೆಡರಿಕ್ ಬವರ್ಸ್ ತುಂಬಾ ನಿರ್ದೇಶನವನ್ನಿತ್ತಿದ್ದಾರೆ. ಪುಸ್ತಕದ ಶೀರ್ಷಿಕೆ ಪುಟ ಮತ್ತಿತರ ಪೂರ್ವ ಭಾಗಗಳು ಇಲ್ಲದಿರುವಾಗಲೂ ಪುಸ್ತಕದ ಇತರ ಆವೃತ್ತಿಗಳು, ಮುದ್ರಣಗಳು, ಪುಸ್ತಕದ ಸ್ಥಿತಿ ಇವುಗಳನ್ನು ಗುರುತಿಸಲು ಸಾಕಷ್ಟು ವಿವರಗಳನ್ನು ಕೊಡಬೇಕು. ಕಾಗದದಲ್ಲಿರುವ ತಯಾರಕನ ಗುರುತು, ಉಪಯೋಗಿಸುವ ಅಚ್ಚು ಮೊಳೆಗಳ ವಿನ್ಯಾಸ, ಅಳತೆ, ಸಾಲುಗಳ ಉದ್ದ ಎಲ್ಲವೂ ಸೇರುತ್ತವೆ. ವಿವರಗಳು ಈ ರೀತಿ ಇರುತ್ತವೆ.

೧) ಲೇಖಕ, ಶೀರ್ಷಿಕೆ, ಪ್ರಕಟಣಸ್ಥಳ, ಮುದ್ರಿತ ಸ್ಥಳ, ಅಚ್ಚುಕೂಟ, ಆವೃತ್ತಿ, ಪ್ರಕಟಣ ವರ್ಷ.

೨) ಶೀರ್ಷಿಕೆ ಪುಟದ ನಕಲು.

೩) ಪುಟಗಳ ಬಗ್ಗೆ ವಿವರಣೆ : ಪೂರ್ವಭಾಗ, ಪಾಠ, ಉತ್ತರಭಾಗ.

೪) ಅಚ್ಚುಕೂಟದ ಹಲವು ಗುರುತುಗಳು.

೫) ಚಿತ್ರಗಳ ವಿವರಗಳು.

೬) ಕಾಗದದ ಆಕಾರ, ತಯಾರಿಕಾ ಮೂಲ, ತಯಾರಿಕಾ ಗುರುತು, ಹಾಳೆಯ ಆಕಾರ.

೭) ಅಚ್ಚುಮೊಳೆಯ ವಿವರ : ವಿನ್ಯಾಸ ಹಾಗೂ ಅಳತೆ.

೮) ರಟ್ಟು : ಹೊಲಿದಿರುವ, ರಟ್ಟು ಕಟ್ಟಿರುವ ವಿಧಾನ, ಹೊರಕವಚಕ್ಕೆ ಉಪಯೋಗಿಸಿರುವ ಸಾಮಗ್ರಿ, ಹೊರಮೈ ಅಲಂಕಾರ ವಿವರಗಳು.

೯) ಪುಸ್ತಕವನ್ನು ಹೆಸರಿಸಿರುವ ಇತರ ಗ್ರಂಥಸೂಚಿಗಳು, ಪುಸ್ತಕ ಪಟ್ಟಿಗಳು, ಇತರ ಪ್ರತಿಗಳು.

೧೦) ವಿವರಣಾತ್ಮಕ ಗ್ರಂಥಸೂಚಿಗೆ ಸೇರಿಸಬಹುದಾದ ಇತರ ವಿವರಗಳು.

ಗ್ರಂಥ ಭಂಡಾರದಲ್ಲಿ ಪುಸ್ತಕದ ಸ್ಥಾನವನ್ನು ನಿರ್ದೇಶಿಸಲು ಪುಸ್ತಕಕ್ಕೆ ಕೊಡುವ ಗುರುತು (Press Mark) ಅಷ್ಟೇನು ಮುಖ್ಯವಾದುದೆಂದು ಪರಿಗಣಿಸದಿದ್ದರೂ ೧೭೫೦ - ೧೮೨೫ ರಲ್ಲಿ ಪ್ರಕಟವಾದ ಇಂಗ್ಲೀಷ ಪುಸ್ತಕಗಳ ಬಗ್ಗೆ ಇದು ಒಂದು ಮುಖ್ಯ ಸಾಕ್ಷಿ.

ಪುಸ್ತಕದ ವಿವರಣೆಯಲ್ಲಿ ಗ್ರಂಥಸೂಚಿಗಳಲ್ಲಿ ಏಕರೂಪತೆ ಸಾಧ್ಯವಾದರೂ ಸಾಧುವಲ್ಲ. ಯಾಕೆಂದರೆ ಪುಸ್ತಕ ಯಾವ ಕಾಲದಲ್ಲಿ ಅಚ್ಚಾಯಿತು ಎಂಬುದನ್ನು ಅವಲಂಬಿಸಿ ವಿವರಗಳು ಇರಬೇಕಾಗುತ್ತದೆ. ಈ ವಿವರಣೆಯಲ್ಲಿ ಉಪಯೋಗಿಸುವ ಪದಗಳು ನಿಷ್ಕೃಷ್ಟವಾಗಿ ಒಂದೇ ಅರ್ಥವನ್ನು ಕೊಡುವಂತಿರಬೇಕು. ' ಮುದ್ರಣ ', ' ಆವೃತ್ತಿ ', ' ಪ್ರಕಟನಾ ವಿವರ ', ' ಸರ್ವಸ್ವಾಮ್ಯ ' ಇವುಗಳು ಸ್ಪಷ್ಟವಾಗಿರಬೇಕು. ಗ್ರಂಥಸೂಚಿಯ ಉದ್ದೇಶ ಸ್ಪಷ್ಟವಾಗಿ ಗ್ರಂಥವನ್ನು ಸರಿಯಾಗಿ ವಿಶ್ಲೇಷಿಸದಿದ್ದರೆ ಅದರಲ್ಲಿಯ ವಿವರಣೆ ಉಪಯುಕ್ತವಾಗಿರುತ್ತದೆ.

ಈ ವಿವರಣೆಗಳಲ್ಲಿ ಒಂದು ಮುಖ್ಯ ಸಮಸ್ಯೆಯೆಂದರೆ ಶೀರ್ಷಿಕೆ ಪುಟದ ತದ್ರೂಪ ವಿವರಣೆ. ಅದರಲ್ಲಿ ಉಪಯೋಗಿಸುವ ಮುದ್ರಣ, ವಿನ್ಯಾಸ, ಅಚ್ಚುಮೊಳೆ, ವಿನ್ಯಾಸ, ಆಕಾರ, ಅಲಂಕಾರಗಳು ಮುಖ್ಯ. ಅಕ್ಷರಗಳ ಬಗ್ಗೆ ವಿವರಗಳನ್ನು ಕೊಡಬಹುದು; ಆದರೆ ಅಲಂಕಾರಗಳು ಮತ್ತಿತರ ವಿಶೇಷ ಚಿಹ್ನೆಗಳನ್ನು ಉಪಯೋಗಿಸಿರುವಾಗ ಅವುಗಳ ವಿವರಣೆ ಕಷ್ಟ. ಪುಟದ ಅಂಚಿನಲ್ಲಿ ಅಲಂಕಾರವಿದ್ದರೆ ಇನ್ನೂ ಕಷ್ಟ. ಕೆಲವು ವೇಳೆ ಈ ಚಿಹ್ನೆಗಳನ್ನೇ ಆಧರಿಸಿ ಪುಸ್ತಕದ ಆವೃತ್ತಿಗಳನ್ನು ಮುದ್ರಕನನ್ನು ಗುರುತಿಸಬಹುದು. ಚಿತ್ರಯುಕ್ತ ಶೀರ್ಷಿಕಾಪುಟಗಳು ದೊಡ್ಡ

ಸಮಸ್ಯೆಯನ್ನು ತಂದೊಡ್ಡುತ್ತವೆ. ಈ ಸಮಸ್ಯೆಗಳಿಗೆ ಪರಿಹಾರವೆಂದರೆ ಶೀರ್ಷಿಕಾ ಪುಟದ ಛಾಯಾಚಿತ್ರವನ್ನು ಕೊಡುವದು ಒಂದೇ ದಾರಿ. ಈ ಸೂಚನೆ ಹೊಸದಲ್ಲ. ಆದರೆ ಇದರ ವೆಚ್ಚ ಹೆಚ್ಚು. ಛಾಯಾಚಿತ್ರಗಳನ್ನು ತೆಗೆಯುವಾಗಲೂ ಹಲವು ನಿಯಮಗಳನ್ನು ಪಾಲಿಸದಿದ್ದಲ್ಲಿ ಇಲ್ಲೂ ತಪ್ಪುಗಳಾಗುವ ಸಂಭವವಿದೆ. ಶೀರ್ಷಿಕೆ ಪುಟವನ್ನು ರೇಖಾಚಿತ್ರಣದ ಮೂಲಕ ವಿವರಿಸುವದಾದರೆ ಅದರಲ್ಲೂ ವ್ಯತ್ಯಾಸ ಕಂಡುಬರಲು ಸಾಧ್ಯ. ಇವೆಲ್ಲಕ್ಕಿಂತ ಹಾಫ್‌ಟೋನ್ ಮುದ್ರಣವೇ ಶ್ರೇಷ್ಠ. ಶೀರ್ಷಿಕೆ ಪುಟದ ತದ್ರೂಪ ವಿವರಣೆಯೊಂದಿಗೆ ಅದರ ಛಾಯಾಚಿತ್ರ ಮುದ್ರಣ ಇರಬಹುದು. ಅಥವಾ ಶೀರ್ಷಿಕೆ ಪುಟದಲ್ಲಿರುವ ಅಲಂಕಾರ, ಹಸ್ತಪ್ರತಿಯಾದರೆ ಅದರ ಒಡೆಯನು ಮೂಡಿಸಿರುವ ಗುರುತು, ಅಲಂಕಾರಗಳು, ಚಿಹ್ನೆಗಳು, ಇವುಗಳ ನಿರೂಪಣೆಗೆ ಮಾತ್ರ ಛಾಯಾಚಿತ್ರವನ್ನು ಉಪಯೋಗಿಸಬಹುದು. ಹಿಂದೆ ಪುಸ್ತಕದ ಪ್ರತಿಯಲ್ಲಿ ಹರಿದಿರುವ ಭಾಗಗಳು ಅಪೂರ್ಣತೆಗಳು, ಕರೆಗಳು, ಪುಸ್ತಕದ ಒಡೆಯನ ಗುರುತುಗಳು, ಹಸ್ತಪ್ರತಿ ಗುರುತುಗಳು, ರಟ್ಟು ಕಟ್ಟಿರುವ ವಿಧಾನಗಳಷ್ಟೆ ಮುಖ್ಯವಾಗಿದ್ದುವು. ಇದರಿಂದ ಎಲ್ಲಾ ಪ್ರತಿಗಳೂ ಒಂದೇ ರೀತಿ ಇವೆಯೆಂದು ತಿಳಿಯಬೇಕಾಗಿತ್ತು. ಗ್ರಂಥಾಲಯದ ಪುಸ್ತಕಸೂಚಿಯಲ್ಲಿ ಪಟ್ಟಿ ಮಾಡಿರುವ ಅಪೂರ್ವ ಪುಸ್ತಕದ ಪ್ರತಿಯನ್ನು ಗುರುತಿಸಲು ಮಾತ್ರ ಈ ವಿವರಗಳು ಅಗತ್ಯ.

ವಿವರಣಗಳ ಜೊತೆ ಕೊಟ್ಟಿರುವ ಟಿಪ್ಪಣಿಗಳು ಪುಸ್ತಕದ ತಯಾರಿಕಾ ವಿಧಾನ ಮತ್ತು ಅದರ ವ್ಯತ್ಯಾಸಗಳು, ಮುದ್ರಕನು ಉಪಯೋಗಿಸಿರುವ ಅಚ್ಚುಮೊಳೆಗಳ ವಿನ್ಯಾಸ, ಮುದ್ರಣಾಲಂಕಾರಗಳು, ತಯಾರಿಕೆಯ ಕಲಾತ್ಮಕ ಮೌಲ್ಯ, ಒಳಪಡಿಯ ವಿವರ, ಪುಸ್ತಕ ಪ್ರಕಟಣೆಯ ಇತಿಹಾಸ, ಆವೃತ್ತಿಗಳು ಯಾವ ಕಡೆಯಲ್ಲಿ ದೊರಕಿದವು ಎಂಬುದನ್ನು ತಿಳಿಸಿದರೆ ಉಪಯುಕ್ತವೆನಿಸುತ್ತದೆ.

ಗ್ರಂಥಸೂಚಿಯಲ್ಲಿ ಜ್ಞಾನದ ಎಲ್ಲಾ ರೀತಿಯ ದಾಖಲೆಗಳ ಪಟ್ಟಿ ಇರುತ್ತದೆ. ಇವುಗಳು ಪ್ರಕಟವಾಗಿರಬಹುದು ಅಥವಾ ಇಲ್ಲದಿರಬಹುದು. ಪುಸ್ತಕಗಳು, ನಿಯತಕಾಲಿಕೆ ಲೇಖನಗಳು, ಸರಕಾರಿ, ವ್ಯಾಪಾರಿ, ಕೈಗಾರಿಕಾ ಮತ್ತಿತರ ಸಂಸ್ಥೆಗಳ ಪ್ರಕಟಣೆಗಳು, ಸಮ್ಮೇಳನದ ವರದಿಗಳು, ಮಾನಕಗಳು, (standards), ಸ್ವಾಮ್ಯಗಳು (patents), ಮೈಕ್ರೋ ಬರಹಗಳು, ಗ್ರಾಮೋಫೋನ್ ಕಾರ್ಡುಗಳು, ಟೇಪ್‌ಗಳು, ಫಿಲಂ, ಮತ್ತಿತರ ಶ್ರವಣ - ದೃಶ್ಯ ಸಾಧನಗಳು ಮುಂತಾದವು. ಇವು ಒಂದು ಭಾಷೆಯಲ್ಲಿ ಅಲ್ಲದೆ ಎಲ್ಲಾ ಭಾಷೆಗಳಲ್ಲಿಯೂ ಇರುತ್ತವೆ. ಈ ರೀತಿ ದೊರೆಯುವ ಬರೆದ ಸಾಮಗ್ರಿಗಳ ಮಾಹಿತಿಗಳನ್ನು ತರ್ಕಬದ್ಧವಾಗಿ, ಉಪಯುಕ್ತವಾಗುವ ರೀತಿಯಲ್ಲಿ ಅಂದರೆ ನಿಕಟವಾಗಿರುವ ವಿಷಯ ಭಾಗಗಳು ಒಂದೆಡೆ ಬರುವಂತೆ ವಿಷಯವನ್ನು ವರ್ಗೀಕರಿಸಿ ಅದು "ವ್ಯವಸ್ಥಾತ್ಮಕ ಗ್ರಂಥಸೂಚಿ" (systematic Bibliography) ಎನಿಸುತ್ತದೆ. ಇದರಿಂದ ನಿರ್ದಿಷ್ಟ ವಿಷಯದಲ್ಲಿರುವ ದಾಖಲೆಗಳೆಲ್ಲದರ ಬಗ್ಗೆ ಮಾಹಿತಿಯನ್ನು ತಿಳಿಯಲು ಸಹಾಯವಾಗುತ್ತದೆ.

ಸಂಶೋಧಕನು ತನ್ನ ನಿರ್ದಿಷ್ಟ ವಿಷಯದಲ್ಲಿ ಈಗಾಗಲೆ ಏನು ಕೆಲಸ ನಡೆದಿದೆಯೆಂದು ತಿಳಿಯಲು ಗ್ರಂಥಸೂಚಿ ಅವಶ್ಯಕ. ಇದರಿಂದ ಹಾಗೆ ತಿಳಿಯದೆ ನಡೆಯುವ ಕೆಲಸದ ಪುನರಾವರ್ತನೆ, ಖರ್ಚು, ಅನಾವಶ್ಯಕ ಕಾಲಹರಣವನ್ನು ತಪ್ಪಿಸಲು ಸಾಧ್ಯ. ಇದರಿಂದ ಸಂಶೋಧನೆಗೆ ತಗಲುವ ವೆಚ್ಚದಲ್ಲಿ ಶೇಕಡಾ ಹತ್ತು ಭಾಗವನ್ನು ಉಳಿಸಲು ಸಾಧ್ಯವಿದೆ. ಅಲ್ಲದೆ ಕೆಲವು ವೇಳೆ ಪ್ರಯೋಗ ವಿಧಾನವನ್ನು, ಫಲಿತಾಂಶವನ್ನು ತುಲನಾತ್ಮಕವಾಗಿ ತಿಳಿಯಲು ಮಾಹಿತಿ ಪಡೆದು ಸಂಶೋಧನೆಗಳನ್ನು ತಾಳೆ ನೋಡಬಹುದು. ವ್ಯವಸ್ಥಾತ್ಮಕ ಗ್ರಂಥಸೂಚಿ ನಿರ್ದಿಷ್ಟ ವಿಷಯದ ನಾನಾ ಮುಖಗಳನ್ನು ತಿಳಿಸುವದರಿಂದ ವಿದ್ಯಾರ್ಥಿಯ ಅಭ್ಯಾಸಕ್ಕೆ ತುಂಬಾ ಅನುಕೂಲ.

ಗ್ರಂಥಾಲಯದಲ್ಲಿ ನಿರ್ದಿಷ್ಟ ದಾಖಲೆಗಳನ್ನು ಗುರುತಿಸಲು, ಅವುಗಳ ವಿವರಗಳನ್ನು ತಾಳೆ ನೋಡಲು ಗ್ರಂಥಸೂಚಿ ಬಹು ಉಪಯುಕ್ತ. ಪುಸ್ತಕಗಳನ್ನು ಕೊಳ್ಳುವಾಗ ಗ್ರಂಥಸೂಚಿಗಳು ಆಯಾ ವಿಷಯದಲ್ಲಿ ಮುಖ್ಯ ಕೃತಿಗಳು ಯಾವುವು ಎಂಬುದನ್ನು ತಿಳಿಸುತ್ತವೆ. ಇದರಿಂದ ಇವುಗಳು ಆಧಿಕೃತ ಸಲಹೆಗಾರರಿಂತಿದ್ದು ಉತ್ತಮ ಪುಸ್ತಕಗಳ ಸಂಗ್ರಹಣೆಗೆ ಸಹಾಯವಾಗುತ್ತವೆ.

### ೩.೧೭ : ಮಿತಿಗಳು

ಗ್ರಂಥಸೂಚಿಗಳಿಗೆ ಹಲವು ಮಿತಿಗಳಿವೆ. ಯಾವುದೇ ನಿರ್ದಿಷ್ಟ ವಿಷಯದಲ್ಲಿ ಸಿಗುವ ದಾಖಲೆಗಳು ಅಪಾರವಾಗಿರುವುದರಿಂದ ಗ್ರಂಥಸೂಚಿಯು ಸಮಗ್ರವಾಗಿಯೂ, ವಿಷಯದಲ್ಲಿ ಇತ್ತೀಚಿನ ಮಾಹಿತಿ ಹೊಂದಿರುವದು ಕಷ್ಟಸಾಧ್ಯ. ದಾಖಲೆಗಳು ಬೇರೆ ಭಾಷೆಗಳಲ್ಲಿರುವುದರಿಂದ ಸಂಶೋಧಕನು ಆ ವಿಚಾರಗಳನ್ನು ತಿಳಿಯಲು ತಡವಾಗುತ್ತದೆ. ಕೆಲವು ತಯಾರಕರು ತಮ್ಮ ಸಂಸ್ಥೆಯಲ್ಲಿ ನಡೆಯುವ ಸಂಶೋಧನೆಯ ವಿವರಗಳ ದಾಖಲೆಗಳನ್ನು ರಹಸ್ಯವಾಗಿಟ್ಟಿರುವುದರಿಂದ ಈ ದಾಖಲೆಗಳ ಹೆಸರು ಗ್ರಂಥಸೂಚಿಯಲ್ಲಿದ್ದರೂ ಅವು ದೊರೆಯುವಂತಿಲ್ಲ. ಕೆಲವು ಸರಕಾರಿ ದಾಖಲೆಗಳೂ ಅಷ್ಟೇ ಅಲಭ್ಯ. ವೈಜ್ಞಾನಿಕ ಸೂತ್ರಗಳು ತಂತ್ರಗಳನ್ನು ಈಗ ಸಮಾಜ ವಿಜ್ಞಾನದ ವಿಷಯಗಳಲ್ಲೂ ಉಪಯೋಗಿಸುತ್ತಿರುವುದರಿಂದ, ಹಿಂದೆ ಬೇರೆ ಬೇರೆ ಎಂದು ತಿಳಿದಿದ್ದ ಹಲವಾರು ವಿಷಯಗಳಲ್ಲೂ ಇಂದು ನಿಕಟವರ್ತಿಯಾಗಿವೆ. ಇವುಗಳ ಮಾಹಿತಿಗಳನ್ನು ಜೋಡಿಸಲು ಕಷ್ಟ. ಬರಹ ವೈವಿಧ್ಯಗಳೂ ಅಪಾರವಾಗಿರುವುದೂ ಒಂದು ಸಮಸ್ಯೆಯೇ ಸರಿ. ಆದರೂ ಈ ಎಲ್ಲಾ ದಾಖಲೆಗಳೂ ಜ್ಞಾನ ಪ್ರಸಾರಕ್ಕೆ ನಾನಾ ರೀತಿಯ ಕೊಡುಗೆಗಳು.

ಎಷ್ಟೇ ಎಡರು ತೊಡರುಗಳಿದ್ದರೂ ಈ ದಾಖಲೆಗಳ ಮಾಹಿತಿಯನ್ನು ವ್ಯವಸ್ಥಿತ ರೀತಿಯಲ್ಲಿ ಒದಗಿಸಲು ಯತ್ನಿಸುತ್ತದೆ. ಆದ್ದರಿಂದ ಅದು ತಾನು ತಿಳಿಸುವ ಹಾಗೂ ವಿವರಿಸುವ ದಾಖಲೆಗಳಷ್ಟೇ ಮುಖ್ಯವಾದುದು.

## ೩.೧೮ : ಲೇಖಕರಿಗೆ ಪ್ರಾಶಸ್ತ್ಯವಿಲ್ಲ

ಆಧುನಿಕ ಸೂಚಿಶಾಸ್ತ್ರದ ಮೇರೆಗೆ ಸೂಚಿಗಳಲ್ಲಿ ಲೇಖಕನಿಗೆ ಹೆಚ್ಚಿನ ಮಹತ್ವ ಕೊಡುವ ಪರಿಪಾಠವಿದೆ. ಗ್ರಂಥಾಲಯಕ್ಕೆ ಓದಲು ಬರುವ ಗ್ರಂಥಪ್ರೇಮಿಗಳಿಗೆ ಲೇಖಕನ ಹೆಸರು ಗೊತ್ತಿದ್ದರೆ, ಆ ಹೆಸರಿನಿಂದ ಪ್ರಾರಂಭವಾಗುವ ಸೂಚಿಗಳನ್ನು ಅವಲೋಕಿಸುತ್ತಾರೆ. ಆದ್ದರಿಂದ ಲೇಖಕನ ಹೆಸರು ಮತ್ತು ಗ್ರಂಥದ ಶಿರೋನಾಮೆಗಳ ಕೆಳಗೆ ಸೂಚಿಗಳನ್ನು ತಯಾರಿಸಿದರೆ ಗ್ರಂಥಾಲಯದ ಪ್ರಯೋಜನ ಓದುಗರಿಗೆ ಆಗುವದು. ಭಾರತ ಸರಕಾರದ ಸಲಹೆಯ ಮೇರೆಗೆ ರಚಿಸಲಾಗುವ ಹಸ್ತಪ್ರತಿಗಳ ಸೂಚಿಗಳಲ್ಲಿ ಕ್ರಮಾಂಕಕ್ಕೆ ಅಗ್ರಸ್ಥಾನ, ನಂತರ ವಿಷಯ, ಅನಂತರ ಶೀರ್ಷಿಕೆ, ಕೊನೆಗೆ ಲೇಖಕನ ಹೆಸರು. ಆದ್ದರಿಂದ ಈ ಪದ್ಧತಿಯ ಸೂಚಿಗಳನ್ನು ಆಧುನಿಕ ಸೂಚಿ ನಿರ್ಮಾಣಶಾಸ್ತ್ರದ ಪ್ರಕಾರ ತಯಾರಿಸಿದರೆ ಒಳಿತಾದೀತೆಂದು ಹೇಳಬಹುದು. ಹೀಗೆ ಮಾಡುವುದರಿಂದ ಹಸ್ತಪ್ರತಿಗಳನ್ನು ಶೀಘ್ರವಾಗಿ, ಸುಲಭವಾಗಿ ಗ್ರಂಥಾಲಯಗಳಲ್ಲಿ ಹುಡುಕಬಹುದು.

ಹಸ್ತಪ್ರತಿಗಳ ಕುರಿತು ಇನ್ನೆರಡು ವಿಷಯಗಳನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವಾದೀತು. ಒಂದೇ ಹಸ್ತಪ್ರತಿಯ ಅನೇಕ ಪ್ರತಿಗಳು ಇರುವ ಸಂಭವ ಹೆಚ್ಚು. ಅವುಗಳನ್ನು ಬೇರೆ ಬೇರೆ ಲಿಪಿಕಾರರು ಬೇರೆ ಬೇರೆ ಕಾಲಗಳಲ್ಲಿ ದೇಶದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಮಾಧ್ಯಮಗಳ ಮೇಲೆ ಬರೆದಿರಲು ಸಾಕು. ವೈಶಿಷ್ಟ್ಯಪೂರ್ಣವಾದ ಇಂಥಹಸ್ತಪ್ರತಿಗಳ ಸೂಚಿ ತಯಾರಿಸಲು ೩" × ೫" ಆಕಾರದ ಸೂಚಿ ಪತ್ರಕಗಳು ಚಿಕ್ಕವಾಗುತ್ತವೆ. ಆದ್ದರಿಂದ ಹಸ್ತಪ್ರತಿಗಳ ಸೂಚಿ ಪತ್ರಕಗಳನ್ನು ಸಿದ್ಧಪಡಿಸಲು ೪" × ೬" ಗಾತ್ರದ ಪತ್ರಕಗಳನ್ನು ಬಳಸಿದಲ್ಲಿ ಅವುಗಳ ಕುರಿತು ವಿಸ್ತಾರ ಮಾಹಿತಿ ಒದಗಿಸಲು ಅನುಕೂಲವಾಗುತ್ತದೆ. ಒಂದೊಂದು ಹಸ್ತಪ್ರತಿ ಅವಶ್ಯವೆನಿಸುವಷ್ಟು ಹಲವಾರು ಪತ್ರಕಗಳನ್ನು ತಯಾರಿಸಬಹುದು.

### • ಅಡಿಟಿಪ್ಪಣಿಗಳು •

೧. ಟಿ. ವಿ. ಸುಬ್ರಹ್ಮಣ್ಯಂ : ಗ್ರಂಥಸೂಚಿಯ ರಚನೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦, ಪು. ೨೮
೨. ಅಶೋಕ ಯ. ಅಸುಂಡಿ : ಕನ್ನಡದಲ್ಲಿ ಸಂದರ್ಭ ಗ್ರಂಥಗಳು, ಪು. ೨೯
೩. ಎಂ. ಚಿದಾನಂದಮೂರ್ತಿ : " ಕನ್ನಡ ಗ್ರಂಥಸೂಚಿ ಸಂಪುಟ ೧ " : ಒಂದು ವಿಮರ್ಶೆ ಸಾಧನೆ, ಸಂ. ೨, ಸಂ. ೨, ೧೯೭೩, ಪು. ೫೫ - ೬೦
೪. ಹಳ್ಳಿಕೇರಿ ಎಫ್. ಟಿ. : ಕನ್ನಡ ಹಸ್ತಪ್ರತಿಶಾಸ್ತ್ರ : ಕನ್ನಡ ಅಧ್ಯಯನ, ಸಂ. ೬, ಸಂಚಿಕೆ ೩
೫. ಅಶೋಕ ಯ. ಅಸುಂಡಿ : ಪ್ರೇರಣೆ; ಕನ್ನಡದಲ್ಲಿ ಸಂದರ್ಭ ಗ್ರಂಥಗಳು : ಸಮಗ್ರ ಸಮೀಕ್ಷೆ ಮತ್ತು ವಿವಾದಾತ್ಮಕ ಸೂಚಿ, ಎನ್. ಎ. ಪ್ರಕಾಶನ, ಬೆಂಗಳೂರು ೧೯೯೨, ಪು. ೫
೬. ರಾಘವನ್ ಕೆ. ಎಸ್. : ಮಾನವಿಕ ಕರ್ನಾಟಕ, ಸಂ. ೫, ಸಂಖ್ಯೆ ೧, ೧೯೭೨
೭. ಕರಿಸಿದ್ದಪ್ಪ ಸಿ. ಆರ್. (ಡಾ.) : ಕ್ರಿ. ಶ. ೧೮೦೦ ರಿಂದೀಚೆ ಪ್ರಕಟವಾದ ಕನ್ನಡ ಸಂದರ್ಭ ಗ್ರಂಥಗಳು : ಒಂದು ತಾತ್ವಿಕ ಅಧ್ಯಯನ, ಪಿಎಚ್. ಡಿ. ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೩
೮. ಕರಿಸಿದ್ದಪ್ಪ ಸಿ. ಆರ್. : ಕನ್ನಡ ಸಂದರ್ಭ ಗ್ರಂಥಗಳು, ಕರ್ನಾಟಕ ಗ್ರಂಥಾಲಯ, ಸಂಪುಟ ೨೦, ಸಂಚಿಕೆ ೧, ೨, ಜನೇವರಿ - ಜೂನ್, ೧೯೮೯
೯. ರೂಗಿ ಎಸ್. ಎಮ್ : ಆಯ್ದ ಕನ್ನಡ ಪರಾಮರ್ಶನ ಗ್ರಂಥಗಳ ಸಂಕ್ಷಿಪ್ತ ಪರಿಚಯ, ಅನಿಗೋಳ, ಬೈಲಹೊಂಗಲ (ತಾ.), ದೀಪಾ ಪ್ರಕಾಶನ, ೧೯೮೯

೧೦. ರೂಗಿ ಎಸ್. ಎಮ್ : ಆಯ್ದ ಕನ್ನಡ ಪರಾಮರ್ಶನ ಗ್ರಂಥಗಳ ಸಂಕ್ಷಿಪ್ತ ಪರಿಚಯ, ಅನಿಗೋಳ, ಬೈಲಹೊಂಗಲ (ತಾ.), ದೀಪಾ ಪ್ರಕಾಶನ, ೧೯೮೯

೧೧. ರೂಗಿ ಎಸ್. ಎಮ್ : ಆಯ್ದ ಕನ್ನಡ ಪರಾಮರ್ಶನ ಗ್ರಂಥಗಳ ಸಂಕ್ಷಿಪ್ತ ಪರಿಚಯ, ಅನಿಗೋಳ, ಬೈಲಹೊಂಗಲ (ತಾ.), ದೀಪಾ ಪ್ರಕಾಶನ, ೧೯೮೯

೧೨. ಅಶೋಕ ಯ. ಅಸುಂಡಿ : ಕನ್ನಡದಲ್ಲಿ ಸಂದರ್ಭ ಗ್ರಂಥಗಳು : ಸಮಗ್ರ ಸಮೀಕ್ಷೆ ಮತ್ತು ವಿವರಣಾತ್ಮಕ ಸೂಚಿ, ಎಸ್. ಎ. ಪ್ರಕಾಶನ, ಬೆಂಗಳೂರು ೧೯೯೨, ಪು. ೫ - ೮

೧೩. ಅಶೋಕ ಯ. ಅಸುಂಡಿ : ಕನ್ನಡದಲ್ಲಿ ಸಂದರ್ಭ ಗ್ರಂಥಗಳು : ಸಮಗ್ರ ಸಮೀಕ್ಷೆ ಮತ್ತು ವಿವರಣಾತ್ಮಕ ಸೂಚಿ, ಎಸ್. ಎ. ಪ್ರಕಾಶನ, ಬೆಂಗಳೂರು ೧೯೯೨, ಪು. ೭ - ೮

೧೪. ಎಂ. ಎಂ. ಕಲಬುರ್ಗಿ : ವಿಜಾಪುರ ಜಿಲ್ಲೆಯ ಶಾಸನಸೂಚಿ : ಪ್ರಸ್ತಾವನೆ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೧೫. ಗ್ರ್ಯಾಂಟ್ ಸರ್. ಎ. : ದೇಶೀಯ ಪ್ರಕಟಣೆಗಳು, ಬೊಂಬಾಯಿ ಗವರ್ನಮೆಂಟ್, ಬೊಂಬಾಯಿ, ೧೯೬೫

೧೬. ಗುಂಜಾಳ ಎಸ್. ಆರ್. ಮತ್ತು ರಾಚನಾಯ್ಕರ ವಿ. ಡಿ. : ಸಂಶೋಧನ ಲೇಖನ ಸೂಚಿ; ಲಿಂಗಾಯತ ಸಂಶೋಧನಾ ಕೇಂದ್ರ ಗ್ರಂಥಾಲಯ, ರುದ್ರಾಕ್ಷಿಮಠ, ಶಿವಬಸವನಗರ, ಬೆಳಗಾವಿ.

೧೭. ಕರಿಸಿದ್ದಪ್ಪ ಸಿ. ಆರ್. : 'ಸಂಕ್ರಮಣ ಶತಕ' : ಸಂಕ್ರಮಣ ಪ್ರಕಾಶನ, ಧಾರವಾಡ, ೧೯೮೧

೧೮. ಕರಿಸಿದ್ದಪ್ಪ ಸಿ. ಆರ್. (ಡಾ.) : ಸಂಕಲನಕಾರನ ಮಾತು : ಸಕ್ರಮಣ ಶತಕ : ಸಂಕ್ರಮಣ ಪ್ರಕಾಶನ, ಧಾರವಾಡ, ೧೯೮೧

೧೯. ಟಿ. ವಿ. ವೆಂಕಟರಮಣಯ್ಯ : ಭಾರತದ ರಾಷ್ಟ್ರೀಯ ಗ್ರಂಥಸೂಚಿ, ಗ್ರಂಥಾಲಯ ರಜತದೀಪ್ತಿ, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು, ೧೯೯೪, ಪು. ೩೧೬ - ೩೧೭

೨೦. ಗುಂಜಾಳ ಎಸ್. ಆರ್. ಮತ್ತು ರಾಚನಾಯ್ಕರ ವಿ. ಡಿ. : ಸಂಶೋಧನ ಲೇಖನ ಸೂಚಿ, ಪ್ರಸ್ತಾವನೆ ಪು. xi - xii

೨೧. ಹಿರೇಮಠ ಬಿ. ಕೆ. : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಜಂಬಗಿ ವೀರಶೈವ ಅಧ್ಯಯನ ವೇದಿಕೆ, ೧೯೯೨. ಪು. ೨೪೫

೨೨. Indian Textual criticism : S. M. Katre, pp. 110 - 111

೨೩. Indian Textual criticism : S. M. Katre, pp. 126 - 129

೨೪. ಹಿರೇಮಠ ಬಿ. ಕೆ. : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಜಂಬಗಿ ವೀರಶೈವ ಅಧ್ಯಯನ ವೇದಿಕೆ, ೧೯೯೨. ಪು. ೨೫೬ - ೨೬೦

೨೫. ಹಿರೇಮಠ ಬಿ. ಕೆ. : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಜಂಬಗಿ ವೀರಶೈವ ಅಧ್ಯಯನ ವೇದಿಕೆ, ೧೯೯೨. ಪು. ೨೫೬ - ೨೬೦

೨೬. Packa H. H. : Arranging and Cataloguing Manuscripts in Willium L. element's Library, American Archivist, I : 215 - 229; Oct. 1938

೨೭. ಎಸ್. ಜಿ. ಶಿರಹಟ್ಟಿ : ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ : ಗ್ರಂಥಾಲಯ ರಜತದೀಪ್ತಿ : ಕರ್ನಾಟಕ ಸರಕಾರ ಸಾರ್ವಜನಿಕ ಗ್ರಂಥಾಲಯ ಇಲಾಖೆ : ಬೆಂಗಳೂರು, ೧೯೯೪, ಪು. ೧೪೪ - ೧೫೦

೨೮. ಎಸ್. ಜಿ. ಶಿರಹಟ್ಟಿ : ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ : ಗ್ರಂಥಾಲಯ ರಜತದೀಪ್ತಿ : ಕರ್ನಾಟಕ ಸರಕಾರ ಸಾರ್ವಜನಿಕ ಗ್ರಂಥಾಲಯ ಇಲಾಖೆ : ಬೆಂಗಳೂರು, ೧೯೯೪, ಪು. ೧೪೪ - ೧೫೦

೨೯. ಎಸ್. ಜಿ. ಶಿರಹಟ್ಟಿ : ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ : ಗ್ರಂಥಾಲಯ ರಜತದೀಪ್ತಿ : ಕರ್ನಾಟಕ ಸರಕಾರ ಸಾರ್ವಜನಿಕ ಗ್ರಂಥಾಲಯ ಇಲಾಖೆ : ಬೆಂಗಳೂರು, ೧೯೯೪, ಪು. ೧೪೪ - ೧೫೦

೩೦. ಎಸ್. ಜಿ. ಶಿರಹಟ್ಟಿ : ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ : ಗ್ರಂಥಾಲಯ ರಜತದೀಪ್ತಿ : ಕರ್ನಾಟಕ ಸರಕಾರ ಸಾರ್ವಜನಿಕ ಗ್ರಂಥಾಲಯ ಇಲಾಖೆ : ಬೆಂಗಳೂರು, ೧೯೯೪, ಪು. ೧೪೪ - ೧೫೦

೩೧. ಎಸ್. ಜಿ. ಶಿರಹಟ್ಟಿ : ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ : ಗ್ರಂಥಾಲಯ ರಜತದೀಪ್ತಿ : ಕರ್ನಾಟಕ ಸರಕಾರ ಸಾರ್ವಜನಿಕ ಗ್ರಂಥಾಲಯ ಇಲಾಖೆ : ಬೆಂಗಳೂರು, ೧೯೯೪, ಪು. ೧೪೮ - ೧೪೯

೩೨. ಸುಲೋಚನಾ ಎಸ್. ಮೂರ್ತಿ : ಮಾನವಿಕ ವಿಜ್ಞಾನದಲ್ಲಿ ಸೂಚೀಕರಣ ಮತ್ತು ಸಂಕ್ಷಿಪ್ತೀಕರಣ : ಗ್ರಂಥಾಲಯ ರಜತದೀಪ್ತಿ. ೧೯೯೪, ಪು. ೧೮೨ - ೧೯೪

೩೩. ಸುಲೋಚನಾ ಎಸ್. ಮೂರ್ತಿ : ಮಾನವಿಕ ವಿಜ್ಞಾನದಲ್ಲಿ ಸೂಚೀಕರಣ ಮತ್ತು ಸಂಕ್ಷಿಪ್ತೀಕರಣ : ಗ್ರಂಥಾಲಯ ರಜತದೀಪ್ತಿ. ೧೯೯೪, ಪು. ೧೮೨ - ೧೯೪

೩೪. ಸುಲೋಚನಾ ಎಸ್. ಮೂರ್ತಿ : ಮಾನವಿಕ ವಿಜ್ಞಾನದಲ್ಲಿ ಸೂಚೀಕರಣ ಮತ್ತು ಸಂಕ್ಷಿಪ್ತೀಕರಣ : ಗ್ರಂಥಾಲಯ ರಜತದೀಪ್ತಿ. ೧೯೯೪, ಪು. ೧೮೨ - ೧೯೪

೩೫. ಸುಲೋಚನಾ ಎಸ್. ಮೂರ್ತಿ : ಮಾನವಿಕ ವಿಜ್ಞಾನದಲ್ಲಿ ಸೂಚೀಕರಣ ಮತ್ತು ಸಂಕ್ಷಿಪ್ತೀಕರಣ : ಗ್ರಂಥಾಲಯ ರಜತದೀಪ್ತಿ, ೧೯೯೪, ಪು. ೧೮೨ - ೧೯೪

೩೬. ಸುಬ್ರಹ್ಮಣ್ಯ ಟಿ. ವಿ. : ಗ್ರಂಥಸೂಚಿಯ ರಚನೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೦, ಪು. ೪೪ - ೪೬

೩೭. ಸುಬ್ರಹ್ಮಣ್ಯ ಟಿ. ವಿ. : ಗ್ರಂಥಸೂಚಿಯ ರಚನೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೦, ಪು. ೪೪ - ೪೬

*Knowledge*
*is of two kinds.*
*We know a subject*
*ourselves or we know*
*where we can find*
*information on it.*

***- Samuel Johnson***

## ಅಧ್ಯಾಯ : ನಾಲ್ಕು

# ಪ್ರಕಟಿತ ಸೂಚಿಗಳ ರೂಪರೇಷೆ

೪.೧ : ಕನ್ನಡದಲ್ಲಿ ಗ್ರಂಥಸೂಚಿ ಕಾರ್ಯ

೪.೨ : ಸೂಚಿಗಳ ಇತ್ತೀಚಿಗಿನ ಬೆಳವಣಿಗೆ

೪.೩ : ಸಮಾರೋಪ

## ಅಧ್ಯಾಯ : ನಾಲ್ಕು

# ಪ್ರಕಟಿತ ಸೂಚಿಗಳ ರೂಪರೇಷೆ

"ಯಾವುದೇ ಭಾಷೆಯಲ್ಲಿ ರಚಿತವಾದ ಎಲ್ಲ ಬಗೆಯ ಬರವಣಿಗೆಗಳನ್ನು ಕುರಿತ ಎಲ್ಲ ಅಂಶಗಳ ಶಾಸ್ತ್ರೀಯ ನಿರೂಪಣೆಯೇ ಗ್ರಂಥಸೂಚಿ."

ಎಲ್ಲ ಪ್ರೌಢ ಭಾಷೆಗಳಲ್ಲಿ ಗ್ರಂಥಸೂಚಿ ಒಂದು ಅನಿವಾರ್ಯದ ಅಂಗವಾಗಿದ್ದು ಅವುಗಳಲ್ಲಿ ಬೇಕಾದಷ್ಟು ವಿವಿಧ ಪ್ರಕಾರದ ಗ್ರಂಥಸೂಚಿಗಳು ರಚಿತವಾಗಿವೆ. ಇದಕ್ಕೆ ಕನ್ನಡ ಭಾಷೆ ಏನು ಹೊರತಲ್ಲ. ಗ್ರಂಥಸೂಚಿಗಳ ಸಂಖ್ಯೆ ಎಷ್ಟು ಹೇರಳವಾಗಿದೆಯೆಂದರೆ ಅವುಗಳನ್ನು ವ್ಯವಸ್ಥಿತವಾಗಿ ವಿಂಗಡಿಸಲು ವಿವರಿಸಲು ಗ್ರಂಥಸೂಚಿಗಳ ಗ್ರಂಥಸೂಚಿಯನ್ನು ಸಹ ೧೮೪೦ ರಲ್ಲಿ ಥಿಯೋಡೋರ್ ಬೆಸ್ಟರ್‌ಮನ್ ರಚಿಸಿದನು. ಕನ್ನಡದಲ್ಲಿ ನಿಘಂಟುಗಳಿಗೆ ಸೀಮಿತವಾದ ಇಂತಹ ಕೆಲವು ಗ್ರಂಥಸೂಚಿಗಳಿವೆ.

ಗ್ರಂಥಸೂಚಿಯ ಆವಶ್ಯಕತೆಯನ್ನು ಪ್ರಭುಶಂಕರ ಅವರು ಈ ರೀತಿ ವರ್ಣಿಸಿದ್ದಾರೆ.[೧]

"ಗ್ರಂಥಸೂಚಿ ಸಂಶೋಧಕರಿಗೆ ಅತ್ಯಂತ ಆವಶ್ಯಕವಾದ ಆಕರ ಗ್ರಂಥ ಯಾವುದೇ ವಿಷಯದಲ್ಲಿ ಸಂಶೋಧನೆಗೆ ತೊಡಗುವ ಮೊದಲು ಸಂಶೋಧಕ ಮಾಡುವ ಕೆಲಸ ಆ ವರೆಗೆ ಆ ವಿಷಯವಾಗಿ ಹೊರಬರುವ ವಿಷಯಗಳನ್ನು ಸಂಗ್ರಹಿಸುವುದು. ಆ ಕೆಲಸಕ್ಕೆ ಸೂಚಿಯಿಂದ ದೊರೆಯುವಂಥ ತಕ್ಷಣದ ಸಿದ್ಧ ನೆರವು ಬೇರೆ ಯಾವುದರಿಂದಲೂ ದೊರೆಯುವುದಿಲ್ಲ. ಅಲ್ಲದೆ ಗ್ರಂಥಸೂಚಿ ಕೊಡುವ ಚಿತ್ರ ಅತ್ಯಂತ ವಿಸ್ತಾರವೂ ವರ್ಣಮಯವೂ ಆದದ್ದು. ಬರವಣಿಗೆ ರೂಪುಗೊಂಡಂದಿನಿಂದಲೂ ಮಾನವ ತತ್ತ್ವ, ಕಲೆ, ಸಾಹಿತ್ಯ, ಶಾಸ್ತ್ರ, ವಿಜ್ಞಾನ, ತಂತ್ರಜ್ಞಾನ ಮೊದಲಾದ ಅಸಂಖ್ಯ ಕ್ಷೇತ್ರಗಳಲ್ಲಿ ಹೇಗೆ ಚಿಂತನೆ ನಡೆಸಿದ್ದಾರೆ.

ಈ ಚಿಂತನೆಗಳಿಗೆ ಹೇಗೆ ಅಭಿವ್ಯಕ್ತಿ ನೀಡಿದ್ದಾನೆ. ಅವನ ಅಭಿರುಚಿಗಳು ಕಾಲದಿಂದ ಕಾಲಕ್ಕೆ ಹೇಗೆ ಬದಲಾಗಿದೆ. ಶೈಲಿ ಹೇಗೆ ರೂಪಾಂತರಗೊಳ್ಳುತ್ತಾ ಹೋಗಿದೆ. ಅವನ ಸಂಸ್ಕೃತಿಯ ಮೇಲೆ ಇದರ ಪರಿಣಾಮ ಏನಾಗಿದೆ ಎಂಬೆಲ್ಲಾ ವಿಚಾರಗಳನ್ನು ಅಧ್ಯಯನ ಮಾಡಲು ಗ್ರಂಥಸೂಚಿಯೇ ಆಧಾರ."

ಯಾವುದೇ ವಿಷಯ ಅಥವಾ ಗ್ರಂಥಗಳ ಸಮುದಾಯಕ್ಕೆ ಸೀಮಿತವಾದ ಗ್ರಂಥಸೂಚಿಗಳನ್ನು ರಚಿಸಬಹುದಾಗಿದೆ. ಸಂಶೋಧನೆಗೆ ಮೊದಲು ಸಂಶೋಧಕರು ನಡೆಸುವ ವಿಷಯ ಸಮೀಕ್ಷೆ, ಅದರ ಆಳ ಮತ್ತು ವ್ಯಾಪ್ತಿ, ಕಲೆಹಾಕುವ ದಿಶೆಯಲ್ಲಿ ಗ್ರಂಥಸೂಚಿಗಳು ಆವಶ್ಯಕ. ಸಂಶೋಧನೆಗೆ ಆಯ್ದು ವಿಷಯದ ಮೇಲೆ ಲಭ್ಯವಿರುವ ಗ್ರಂಥಸೂಚಿಗಳ ವಿವರ ಪಡೆಯಲು ಸಹ ಗ್ರಂಥಸೂಚಿಗಳೇ ಸಹಕಾರಿ. ಆದುದರಿಂದ ಸಂಶೋಧನಾ ಸಾಮಗ್ರಿಯಾಗಿ ಸಾಹಿತ್ಯ ಸಂಗ್ರಹದ ಕಾರ್ಯಾಚರಣೆಯಲ್ಲಿ ಗ್ರಂಥಸೂಚಿಯ ಪಾತ್ರ ಅತ್ಯಮೂಲ್ಯ.

## ೪.೧ : ಕನ್ನಡದಲ್ಲಿ ಗ್ರಂಥಸೂಚಿ ಕಾರ್ಯ :

ಗ್ರಂಥಸೂಚಿ, ವಾಙ್ಮಯ ಸೂಚಿಗಳನ್ನು ರಚಿಸಿ ಮತ್ತು ಅಥವಾ ಸಂಕಲಿಸಿ ಸಂಪಾದಿಸಿದ ಕೆಲಸ, ಕನ್ನಡ ಭಾಷೆಯಲ್ಲಿ ಅನೇಕ ಮಟ್ಟದಲ್ಲಿ ನಡೆದಿದೆ. ಓರ್ವ ವ್ಯಕ್ತಿಯಿಂದ ಒಳಗೊಂಡಂತೆ, ರಾಜ್ಯ ಮತ್ತು ರಾಷ್ಟ್ರಮಟ್ಟದ ಸಂಘ-ಸಂಸ್ಥೆಗಳು ಅಕಾಡೆಮಿ ಪರಿಷತ್ತು, ವಿಶ್ವವಿದ್ಯಾಲಯಗಳು ಈ ಕಾರ್ಯದಲ್ಲಿ ಸಹಭಾಗಿಯಾಗಿವೆ. ೧೯೬೦ ರ ದಶಕದಲ್ಲಿ ಆರಂಭವಾದರೂ ಇನ್ನೂ ಪೂರ್ತಿಯಾಗದೆ, ಪುನರಾವೃತ್ತಿ ನಡೆಸಿರುವ " ಕನ್ನಡ ಗ್ರಂಥಸೂಚಿ " ಈ ನಿಟ್ಟಿನಲ್ಲಿ ಒಂದು ಮಹತ್ತರ ಹೆಜ್ಜೆಯಾಗಿದೆ.

ಕನ್ನಡ ಭಾಷೆಯಲ್ಲಿ ಗ್ರಂಥಸೂಚಿಯ ರಚನೆ ಐತಿಹಾಸಿಕವಾಗಿ ೧೯ ನೇ ಶತಮಾನದಲ್ಲಿ ಆರಂಭವಾಯಿತೆನ್ನಬಹುದು. ಇದೇ ಶತಮಾನದಲ್ಲಿ ಗ್ರಂಥಸೂಚಿಯ ಬಗ್ಗೆ ಚಿಂತನ ಚಿಲುಮೆ ಹೊರಹೊಮ್ಮಿದ ಬಗ್ಗೆ ನಾಲ್ಕು ಮಾತುಗಳನ್ನು ಇಲ್ಲಿ ಹೇಳಿದರೆ ವಿಷಯಾಂತರವೆನಿಸಲಾರದು. ಈ ದಿಶೆಯಲ್ಲಿ ೧೮೬೨ ರಲ್ಲಿ ಕೈಗೊಂಡ ಕಾರ್ಯ ಮುಂದೆ ಸಣ್ಣ ಮತ್ತು ಬೃಹತ್ ಪ್ರಮಾಣದ ಗ್ರಂಥಸೂಚಿಗಳ ಮತ್ತು ರಾಷ್ಟ್ರೀಯ ಗ್ರಂಥಾಲಯದ ಗ್ರಂಥಸೂಚಿಯ ರಚನೆಗೆ ಮುಖ್ಯ ಕಾರಣವಾಯಿತು.

ಕನ್ನಡದಲ್ಲಿ (?) ಮೊಟ್ಟಮೊದಲು ರಚಿತವಾದ ಗ್ರಂಥಸೂಚಿಕೆಯ ಶೀರ್ಷಿಕೆ : " Native Publication in the Bombay Presidency upto December 1864 prepared under the order of Government.

(?) ಇದರಲ್ಲಿ ಪೂರ್ಣವಾಗಿ ಕನ್ನಡ ಕೃತಿಗಳೇ ಇರದೆ, ಕೇವಲ ಕೆಲವು - ಕನ್ನಡ ಶೀರ್ಷಿಕೆಗಳಿವೆ.

ಬಿ. ನಾಗಪ್ಪ ಅವರು ಮೈಸೂರು ನಗರ ಕೇಂದ್ರ ಗ್ರಂಥಾಲಯದ ಅಮೃತ ಮಹೋತ್ಸವದ ಸಮಾರಂಭ ಸಂದರ್ಭದಲ್ಲಿ ಏರ್ಪಡಿಸಿದ್ದ ವಿಚಾರಸಂಕಿರಣಕ್ಕೆ ಸಾದರಪಡಿಸಿದ " ಕನ್ನಡ ಪುಸ್ತಕಗಳ ಮಾಹಿತಿ ನಿಯಂತ್ರಣ " ಲೇಖನದಿಂದ ಹೆಚ್ಚು ವಿವರಗಳನ್ನು ಇಲ್ಲಿಗೆ ಆಯ್ದುಕೊಳ್ಳಲಾಗಿದೆ.

(ಇದರ ಕನ್ನಡ ತರ್ಜುಮೆ : ೧೯೬೪ ನೇ ಡಿಸೆಂಬರ್‌ವರೆಗೆ ಬೊಂಬಾಯಿ ಪ್ರಾಂತದಲ್ಲಿ ಪ್ರಕಟವಾದ ದೇಶಿಯ ಪ್ರಕಟಣೆಗಳು) ಈ ಗ್ರಂಥಸೂಚಿಯನ್ನು ಸರ್. ಎ. ಗ್ರಾಂಟ್ ಅವರು ೧೮೬೫ ರಲ್ಲಿ ರಚಿಸಿ ಪ್ರಕಟಿಸಿದರು.

ಇದರಲ್ಲಿ ೮೬೮ ಗ್ರಂಥಗಳು ನಮೂದಾಗಿದ್ದು ಕೆಲವು ಕನ್ನಡ ಭಾಷೆಯ ಶೀರ್ಷಿಕೆಗಳು ಸಹ ಇವೆ. ೧೮೬೭ ರಲ್ಲಿ ಇದರ ರಚನೆಗೆ ಹಿನ್ನೆಲೆಯಾಗಿ ಮುನ್ನುಡಿಯಲ್ಲಿ ಬರೆದ ಕೆಲವು ಮುಖ್ಯ ಅಂಶಗಳು ತುಂಬಾ ಗಮನಾರ್ಹವಾಗಿವೆ.

೧೯೧೦ ರಲ್ಲಿ ಪ್ರಕಟವಾದ ಎಲ್. ಡಿ. ಬಾರ್ನೆಟ್ ಅವರ "A catalogue of Kannada, Badaga and Coorg books in the Library of British Museum " (ಬ್ರಿಟಿಷ್ ಮ್ಯೂಜಿಯಮ್ ಲೈಬ್ರರಿಯಲ್ಲಿ ಇರುವ ಕನ್ನಡ ಬಡಗ ಮತ್ತು ಕೊಡಗು ಭಾಷೆಗಳ ಗ್ರಂಥಗಳ ಸೂಚಿ) ಬಹಳ ಮಹತ್ವದ್ದೆನಿಸಿದೆ. ಈ ಕಾರ್ಯದಲ್ಲಿ ಅವರಿಗೆ ಆರ್. ನರಸಿಂಹಾಚಾರ್ ಮತ್ತು ಜೆ. ಎಫ್. ಫ್ಲೀಟ್ ಅವರು ನೆರವು ಒದಗಿಸಿದರಂತೆ ಕನ್ನಡದ ಉನ್ನತ ಅಧ್ಯಯನದಲ್ಲಿ ಆಸಕ್ತರಾದವರಿಗೆ ಇದು ಬಹಳ ಉಪಯುಕ್ತ ಆಧಾರ ಗ್ರಂಥ. ಇದೇ ಕೃತಿಯ ಪುರವಣಿ ಸಂಪುಟ ಶ್ರೀಮತಿ ಆರ್. ಬಾರ್ನೆಟ್ ಗೌರ ಅವರಿಂದ ೧೯೮೫ ರಲ್ಲಿ ಹೊರಬಂದಿತು. ಶ್ರೀಮತಿ ಗೌರ ಅವರು ತಮ್ಮ ಪತಿಯು ಪ್ರಾರಂಭಿಸಿದ ಕೆಲಸವನ್ನು ಮುಂದುವರಿಸಿ ಅದಕ್ಕೆ ಇನ್ನೂ ಮಹತ್ವವಿತ್ತಿದ್ದಾರೆ.ಇದರಲ್ಲಿ ೧೯೧೦ ರಿಂದ ೧೯೮೦ ರ ವರೆಗೆ ಬ್ರಿಟಿಷ್ ಮ್ಯೂಜಿಯಂ ಮತ್ತು ಗ್ರಂಥಾಲಯ ಅಧೀನ ಲೈಬ್ರರಿಗಳಲ್ಲಿ ಸಂಗ್ರಹಗೊಂಡ ಗ್ರಂಥಗಳನ್ನೂ ಪಟ್ಟಿ ಮಾಡಿದ್ದಾರೆ. ಈ ಗ್ರಂಥ ಸೂಚಿಯಿಂದ ಇಂಗ್ಲೆಂಡಿನಲ್ಲಿರುವ ಕನ್ನಡ ಪುಸ್ತಕಗಳ ಎರಡು ದೊಡ್ಡ ಸಂಗ್ರಹವನ್ನು ಕನ್ನಡಿಗರಿಗೆ ಪರಿಚಯಿಸಿದಂತಾಯಿತು. ಈ ಎರಡೂ ಗ್ರಂಥಸೂಚಿಗಳು ವಿದ್ವಾಂಸರಿಗೆ ಅತ್ಯುಪಯುಕ್ತ ಮತ್ತು ನಾಯಕರು ಹೇಳಿದಂತೆ ಎರಡನೇ ಕೃತಿ ಮೊದಲ ಗ್ರಂಥಸೂಚಿಯ ಸಮರ್ಥ ಮುಂದುವರಿಕೆ : [೨]

ಎರಡು ಮುಖ್ಯ ಬಹುವ್ಯಾಪ್ತಿಯ ಗ್ರಂಥಸೂಚಿಗಳನ್ನು ಸಹ ಇಲ್ಲಿ ಸ್ವಲ್ಪದರಲ್ಲಿಯೇ ವಿವರಿಸಲಾಗಿದೆ. ಇದರಿಂದ ಕನ್ನಡದಲ್ಲಿ ಕೆಲವು ಕೃತಿಗಳ ಪರಿಚಯ ಸಂಕ್ಷಿಪ್ತವಾಗಿ ಆದಂತಾಗುತ್ತದೆ. ಇದರಲ್ಲಿ ಮೊದಲನೆಯದು " ರಾಷ್ಟ್ರೀಯ ಗ್ರಂಥಸೂಚಿ " ಕನ್ನಡ ವಿಭಾಗ (ರಾಷ್ಟ್ರೀಯ ಗ್ರಂಥಾಲಯದ ಕನ್ನಡ ಗ್ರಂಥಗಳ ಸೂಚಿ). [೩]

ರಾಷ್ಟ್ರೀಯ ಗ್ರಂಥಾಲಯ, ಕಲಕತ್ತಾ ಹೊರತರುವ " ಭಾರತದ ರಾಷ್ಟ್ರೀಯ ಗ್ರಂಥಸೂಚಿ " ಯ ಪುರವಣಿಯಾಗಿ ರಾಷ್ಟ್ರದ ವಿವಿಧ ಭಾಷೆಗಳಲ್ಲಿ ಅವೇ ಭಾಷೆಗಳ ಲಿಪಿಯಲ್ಲಿ ಹೊರತರುವ ಕನ್ನಡ ಭಾಷೆಗೆ ಸಂಬಂಧಿಸಿದ ಸೂಚಿ ಇದು.

" ಜ್ಞಾನದ ಪ್ರಗತಿಗೆ ಗ್ರಂಥಗಳು ಒಂದೆಡೆ ಸಂಗ್ರಹಿತವಾದರೆ ಸಾಲದು. ವ್ಯವಸ್ಥಿತ ರೂಪದಲ್ಲಿ ಅವುಗಳ ಪರಿಚಯವನ್ನು ಜನರಿಗೆ ಮಾಡಕೊಡಬೇಕಾದ್ದು ಅಗತ್ಯ. ಈ ದಿಶೆಯಲ್ಲಿ ಕನ್ನಡದಲ್ಲಿ ಆಗಬೇಕಾದ ಪ್ರಯತ್ನ ಬಹಳ. " [೪]

ಈ ವಾಕ್ಯ " ಕನ್ನಡ ಗ್ರಂಥಸೂಚಿಯಲ್ಲಿ " ನೀಡಿದ ಉಲ್ಲೇಖ. ಇದು ನಾವು ಮಾಡಬೇಕಾದ ಕೆಲಸದ ಬಗ್ಗೆ ನೀಡಿರುವ ಎಚ್ಚರಿಕೆ. ಕನ್ನಡ ಗ್ರಂಥಸೂಚಿಯು ಆರಂಭವಾಗಿಯೇ ಸುಮಾರು ೨೫ ವರ್ಷಗಳು ಕಳೆದರೂ, ನಡೆದು ಬಂದ ದಾರಿ ಇನ್ನೂ ಸುಗಮವಾಗಲೇ ಇಲ್ಲ. ಗ್ರಂಥಸೂಚಿ, ಲೇಖನ ಸೂಚಿ ಮುಂತಾದ ಗ್ರಂಥ

# ಕನ್ನಡ ಗ್ರಂಥಸೂಚಿ

ಮುದ್ರಿತ ಕನ್ನಡ ಕೃತಿಗಳ ವಿವರಣಾತ್ಮಕ ಗ್ರಂಥಸೂಚಿ 1817-1968

ಸಂಪುಟ ೧

## ಶುದ್ಧ ವಿಜ್ಞಾನಗಳು

ಸಾಮಾನ್ಯ ವಿಜ್ಞಾನ, ಭೌತ ವಿಜ್ಞಾನ, ಗಣಿತ ವಿಜ್ಞಾನ, ಎಂಜಿನಿಯರಿಂಗ್, ತಾಂತ್ರಿಕ ವಿಜ್ಞಾನ, ರಸಾಯನ ವಿಜ್ಞಾನ, ಭೂ ವಿಜ್ಞಾನ, ಜೀವ ವಿಜ್ಞಾನ, ಸಸ್ಯ ವಿಜ್ಞಾನ, ಪ್ರಾಣಿ ವಿಜ್ಞಾನ, ಕೃಷಿ ವಿಜ್ಞಾನ, ವೈದ್ಯ ವಿಜ್ಞಾನ ಮತ್ತು ಗೃಹವಿಜ್ಞಾನ



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೧



## ಪರಿವಿಡಿ

# ಪರಿವಿಡಿ



## ಗ್ರಂಥಸೂಚಿ

### ಗ್ರಂಥಸೂಚಿಯ ರಚನೆ

ಪಾಟೀಲ, ಗುರುಲಿಂಗಪ್ಪ ಮಲ್ಲಪ್ಪ
ಗ್ರಂಥಸೂಚಿ ಮತ್ತು ಪುಸ್ತಕ ಶಾಸ್ತ್ರ
ಧಾರವಾಡ    ಬಸವಣ್ಣ ಗುರುಲಿಂಗಪ್ಪ ಪಾಟೀಲ    1970
9 + 136    18 × 12    † 5–00
ಆವಶ್ಯಕತೆ, ರಚನಾ ವಿಧಾನಗಳು, ಪ್ರಯೋಜನ ಇತ್ಯಾದಿ
೧    ಎ 02

### ವಿವರಣಾತ್ಮಕ ಗ್ರಂಥಸೂಚಿ

ಮೈಸೂರು ವಿಶ್ವವಿದ್ಯಾನಿಲಯ
ಕನ್ನಡ ಗ್ರಂಥಸೂಚಿ, ಮುದ್ರಿತ ಕನ್ನಡ ಕೃತಿಗಳ ವಿವರಣಾತ್ಮಕ ಗ್ರಂಥಸೂಚಿ 1817–1968 ಸಂಪುಟ ೧ : ಶುದ್ಧ ವಿಜ್ಞಾನಗಳು ಸಂ: ಡಿ ಜವರೇಗೌಡ, ಕೆ ಎಸ್ ದೇಶಪಾಂಡೆ, ಪ್ರಭುಶಂಕರ ಮತ್ತು ಆರ್ ಎಲ್ ಅನಂತರಾಮಯ್ಯ
ಮೈಸೂರು    ಪ್ರಸಾರಾಂಗ ಮೈ ವಿಶ್ವವಿದ್ಯಾನಿಲಯ    1971
20 + 240    28 × 22    ‡ 30–00
ಶುದ್ಧ ಮತ್ತು ಅನ್ವಯಿಕ ವಿಜ್ಞಾನ ಶಾಖೆಗಳಿಗೆ ಸೇರಿದ 1449 ಕೃತಿಗಳ ವಿವರಣೆ
೨    ಜ 16

### ವೈಯಕ್ತಿಕ ಕೃತಿಸೂಚಿಗಳು

ಆದ್ಯ, ಶೇಖರ [ಸಂಕ]
ಕಾರಂತ ಸಾಹಿತ್ಯ : ಕೃತಿ ಮತ್ತು ಲೇಖನ ದರ್ಶಿಕೆ
ಉಡುಪಿ    ಕಾರಂತ ಅಭಿನಂದನ ಸಮಿತಿ    1969
24    23.5 × 16    § —
ಶಿವರಾಮ ಕಾರಂತರ ಪ್ರಕಟಿತ–ಅಪ್ರಕಟಿತ ಕನ್ನಡ ಮತ್ತು ಇಂಗ್ಲಿಷ್ ಗ್ರಂಥಗಳ, ಲೇಖನಗಳ ಸೂಚಿ
೩    ಜ 16

ಗುರುರಾಜಭಟ್ಟ, ಪಾದೂರು    1924–
ನನ್ನ ಬರಹಗಳು
ಕಲ್ಯಾಣಪುರ    ಲೇಖಕ    1971
20    21 × 13    § —
1958–72ರ ಅವಧಿಯಲ್ಲಿ ಬರೆದ ಗ್ರಂಥ ಹಾಗೂ ಲೇಖನಗಳ ವಿವರ
೪    ಎ 02

ವಿಚೆರ್ರೋವಿನ್, ಎಲ್ ವಿ
ಮಹೋನ್ನತ ಮಾನವ
ಮದರಾಸು    ಸೋವಿಯೆತ್ ದೇಶ ಪ್ರಕಟಣೆ    1970
114    21 × 13    § 1–00
ಭಾರತೀಯ ಭಾಷೆಗಳಲ್ಲಿ ಲೆನಿನ್ನರನ್ನು ಕುರಿತು ಪ್ರಕಟವಾದ ಕೃತಿಗಳ ಪರಿಚಯ
೫    ಎ 02

### ನಿಯತಕಾಲಿಕ ಬರಹ ಸೂಚಿ

ಸುಬ್ರಹ್ಮಣ್ಯಂ, ತಿರುಮಕೂಡಲು ವೆಂಕಟಸುಬ್ಬಯ್ಯ, 1927–    [ಸಂ]
ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ–ಲೇಖನಗಳ ಸೂಚಿ
ಮೈಸೂರು    ಪ್ರಸಾರಾಂಗ ಮೈ ವಿಶ್ವವಿದ್ಯಾನಿಲಯ    1970
ಮೈ ವಿ ಇತರ ಪ್ರಕಟಣೆಗಳು–25
12 + 151    21 × 13    § 4–00  ‡ 6–00
ಮೊದಲನೆಯ ಸಂಚಿಕೆ (1916 ಏಪ್ರಿಲ್) ಯಿಂದ ನಲವತ್ತೊಂಬತ್ತನೆಯ ಸಂಪುಟ (1970 ಜೂನ್) ದ ವರೆಗೆ ಪ್ರಕಟವಾದ ಲೇಖನಗಳ ವರ್ಗೀಕೃತ ಸೂಚಿ
೬    ಜ 16

## ವಿಶ್ವಕೋಶ

### ಸಾಮಾನ್ಯ ವಿಶ್ವಕೋಶ

ಮೈಸೂರು ವಿಶ್ವವಿದ್ಯಾನಿಲಯ
ಕನ್ನಡ ವಿಶ್ವಕೋಶ, [ಸಂಪುಟ 1–3], ಪ್ರ ಸಂ : ಸಂಪುಟ 1 : ದೇ ಜವರೇಗೌಡ, ಸಂಪುಟ 2–3 : ಹಾ. ಮಾ. ನಾಯಕ
ಮೈಸೂರು    ಕನ್ನಡ ಅಧ್ಯಯನ ಸಂಸ್ಥೆ ಮೈ ವಿಶ್ವವಿದ್ಯಾನಿಲಯ    1969, 1970, 1971
ಸಂಪುಟ 112 + 955  ಸಚಿತ್ರ + ವರ್ಣಪಟಗಳು  27.5 × 21.5  ‡40–00
ಸಂಪುಟ 28 + 956 ಸಚಿತ್ರ + 14 ವರ್ಣಪಟಗಳು  27.5 × 21.5  ‡40–00
ಸಂಪುಟ 38 + 944 ಸಚಿತ್ರ + 13 ವರ್ಣಪಟಗಳು 27.5 × 21.5  ‡40–00
ಹದಿನಾಲ್ಕು ಸಂಪುಟಗಳ ಸಾಮಾನ್ಯ ವಿಶ್ವಕೋಶ. ವಿಷಯ ಸೂಚಿ ಮತ್ತು ಲೇಖಕ ಸೂಚಿಯೊಂದಿಗೆ. ಸಂಪುಟ 1 : 'ಅ' ದಿಂದ ಆರ್ಸೆನಿಕ್‌ವರೆಗೆ ; ಸಂಪುಟ 2 : 'ಅಲ' ದಿಂದ 'ಎರಟಾಸ್ಥೆನೀಸ್' ವರೆಗೆ ; ಸಂಪುಟ 3 'ಎರಟೋ' ದಿಂದ 'ಕರೀಲಿಯ' ವರೆಗೆ
೭    ಜ 16

### ಮಕ್ಕಳ ವಿಶ್ವಕೋಶ

ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ
ಜ್ಞಾನಗಂಗೋತ್ರಿ–ಕಿರಿಯರ ವಿಶ್ವಕೋಶ, ಸಂಪುಟ ೧ : ಮನುಕುಲದ ಕಥೆ, ಸಂಪುಟ ೨ : ಜೀವಜಗತ್ತು, ಪ್ರ ಸಂ : ನಿರಂಜನ
ಬೆಂಗಳೂರು    ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ    1971

ಸಂಪಾದನೆ ಕಾರ್ಯಗಳು ಕನ್ನಡದಲ್ಲಿ ಆಗಬೇಕಾದ ಆವಶ್ಯಕತೆಗಳೇ ಈ ವಿಭಾಗದಲ್ಲಿ ನಡೆದ ಕಾರ್ಯ ಅತ್ಯಲ್ಪ ಮತ್ತು ಈಗೀಗ ಅದು ವಿರಳವಾಗುತ್ತ ಹೋಗುತ್ತಿದೆ. ಟಿ. ವಿ. ವೆಂಕಟರಮಣಯ್ಯನವರು ಸಂಪಾದಿಸಿ " ಲೇಖನ ಸೂಚಿ " ಯ ಕಾರ್ಯ ಅವರೊಂದಿಗೆ ನಿತ್ರಾಣವಾಯಿತು. ಅಲ್ಲದೆ ಬೆಂಗಳೂರು ವಿಶ್ವವಿದ್ಯಾಲಯದ " ಸಾಹಿತ್ಯ ವಾರ್ಷಿಕ " ಎಂಬ ವಿಮರ್ಶಾ ಸಂಚಿಕೆ ಸಹ ಪ್ರಕಟಣೆಯನ್ನು ಸ್ಥಗಿತಗೊಳಿಸಿದೆ. ಇದನ್ನು ಗಮನಿಸಿದರೆ, ನಾವು ಮುನ್ನಡೆಯ ಹಾದಿ ಬಿಟ್ಟು ಇನ್ನು ಹಿಂದೆ ಇದ್ದೇವೆ. ಈ ವಿಷಯದಲ್ಲಿ ಸಾಹಿತಿಗಳು, ಕನ್ನಡ ಶಿಕ್ಷಕ ವೃಂದ, ಸಂಶೋಧಕರು, ಗ್ರಂಥಪಾಲಕರು ಮತ್ತು ಭಾಷೆಯ ಕಾರ್ಯವನ್ನು ನಡೆಸಿಕೊಂಡು ಹೋಗುವಂತಹ ಸಂಘ-ಸಂಸ್ಥೆ ಮತ್ತು ವಿಶ್ವವಿದ್ಯಾಲಯಗಳು ಚಿಂತಿಸುವುದು ಸೂಕ್ತ.

ಸದ್ಯದ ಈ ಗ್ರಂಥಸೂಚಿ ಹೊತ್ತಿಗೆಯಲ್ಲಿ ಸುಮಾರು ೮೦ ಗ್ರಂಥಸೂಚಿಗಳು ಸೇರಿವೆ. ಕನ್ನಡದಲ್ಲಿ ಗ್ರಂಥಸೂಚಿಯ ಕಾರ್ಯ ಈ ಮೊದಲೆ ಹೇಳಿದಂತೆ, ೧೯ ನೇ ಶತಮಾನದಲ್ಲಿ ಸಾಂಕೇತಿಕವಾಗಿ ಆರಂಭವಾದರೂ ಅದು ಮುಂದೆ ವ್ಯವಸ್ಥಿತವಾಗಿ ನಡೆದು ಬಂದಿಲ್ಲ. ಗ್ರಂಥಾಲಯ ಶಿಕ್ಷಣ ಪಡೆದ ಅನೇಕ ಪರಿಣತರು ೨೦ ನೇ ಶತಮಾನದ ಆದಿಯಿಂದ ಮಧ್ಯದವರೆಗೆ ಕೆಲವು ಕೆಲಸಗಳನ್ನು ಮಾಡಿದುದು ಕಂಡುಬರುತ್ತದೆ. ಆದರೆ ಬೃಹತ್ ಮತ್ತು ವ್ಯವಸ್ಥಿತ ಸಂಪಾದನೆ ಕಾರ್ಯ ೧೯೬೦ ರ ದಶಕದಿಂದಲೇ ಆರಂಭವಾಯಿತೆನ್ನಬಹುದು. ಇದಕ್ಕೆ ಕೆಲವು ಗ್ರಂಥಪಾಲಕರನ್ನೊಳಗೊಂಡಂತೆ ಅನೇಕ ಕನ್ನಡ ಸಾಹಿತಿಗಳು, ವಿದ್ವಾಂಸರು ತೋರಿದ ಆಸಕ್ತಿಯೇ ಮೂಲ ಕಾರಣವೆನ್ನಬಹುದು.

ಅದ್ಭುತ ಪ್ರಮಾಣದಲ್ಲಿರುವ ಕನ್ನಡ ಗ್ರಂಥ ಸಂಪತ್ತನ್ನು ವಿಷಯಾನುಕ್ರಮವಾಗಿ ವಿಂಗಡಿಸಿ ನಿಖರವಾದ ಕನ್ನಡ ಗ್ರಂಥಸೂಚಿಯನ್ನು ತಯಾರಿಸುವ ಸಂಘಟಿತ ಪ್ರಯತ್ನಕ್ಕೆ ಕೈ ಹಾಕಿದ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಕನ್ನಡಿಗರೆಲ್ಲರ ಕೃತಜ್ಞತೆಗಳು ಸಲ್ಲಬೇಕು. ಸುಮಾರು ಒಂದು ದಶಕ ಕಾಲ ನಿರಂತರವಾಗಿ ನಡೆದು ಬಂದ ಸೂಚಿ ಒಂದು ಆಶಾದಾಯಕ ಕಾರ್ಯಕ್ರಮ.

ಕನ್ನಡ ಗ್ರಂಥಸೂಚಿಯು ೧೯೬೭ ರಿಂದ ಇಲ್ಲಿಯವರೆಗೆ ನಡೆದು ಬಂದ ದಾರಿಯನ್ನು ಅದರ ಸಂಪಾದಕ ಮಂಡಳಿಯು ಈ ರೀತಿಯಾಗಿ ವರ್ಣಿಸಿದೆ. " ೧೮೧೭ ರಿಂದ ೧೯೬೮ ರ ವರೆಗೆ ಪ್ರಕಟವಾದ ಕನ್ನಡ ಪುಸ್ತಕಗಳ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸಿ ವಿಷಯವಾರು ಸಂಪುಟಗಳಾಗಿ ಪ್ರಕಟಿಸುವ ಯೋಜನೆಯನ್ನು ಮೈಸೂರು ವಿಶ್ವವಿದ್ಯಾನಿಲಯ ೧೯೬೭ ರಲ್ಲಿ ಕೈಗೊಂಡಿತು. ಕಲಕತ್ತೆಯ ರಾಷ್ಟ್ರೀಯ ಗ್ರಂಥಾಲಯವು ಸೇರಿದಂತೆ ರಾಷ್ಟ್ರದ ನೂರಾರು ಗ್ರಂಥಾಲಯಗಳಿಗೂ ಅನೇಕ ಸುಪ್ರಸಿದ್ಧ ವೈಯಕ್ತಿಕ ಗ್ರಂಥ ಸಂಗ್ರಹಗಳಿಗೂ ಹೋಗಿ ಸಹಾಯಕ ಸಂಶೋಧಕರು ನಿಯಮಿತ ನಮೂನೆಯಲ್ಲಿ ಪುಸ್ತಕಗಳ ಬಗೆಗೆ ಮಾಹಿತಿ ಸಂಗ್ರಹಿಸಿದರು.

ಹೀಗೆ ಎರಡು ವರ್ಷ ಕಾಲ ಸಂಗ್ರಹವಾದ ಸುಮಾರು ನಲವತ್ತು ಸಾವಿರ ಪುಸ್ತಕಗಳ ಮಾಹಿತಿಯನ್ನು ಸಂಪಾದಿಸಿ ಪರಿಷ್ಕರಿಸಿ ವರ್ಗೀಕರಿಸಿ ವಿಷಯವಾರು ಬೇರೆ ಬೇರೆ ಸಂಪುಟಗಳಲ್ಲಿ ಪ್ರಕಟಿಸಲಾಗುತ್ತಿದೆ. ವಿಜ್ಞಾನ ವಿಷಯಗಳನ್ನು ಕುರಿತ ಮೊದಲನೆಯ ಸಂಪುಟ ೧೯೭೧ ರಲ್ಲಿ ಹೊರಬಂದಿತು. ಭಾಷೆ, ತತ್ವ, ಧರ್ಮ ಕಲೆಗಳನ್ನು ಕುರಿತ ಎರಡನೆಯ ಸಂಪುಟ ೧೯೭೩ ರಲ್ಲೂ ಸಾಹಿತ್ಯ ವಿಮರ್ಶೆ ಹಾಗೂ ಕಾವ್ಯಗಳನ್ನೊಳಗೊಂಡ ಮೂರನೆಯ ಸಂಪುಟ ೧೯೭೪ ರಲ್ಲೂ ಪ್ರಕಟವಾದವು. ಗದ್ಯ, ನಾಟಕ, ಸಣ್ಣಕತೆ ಪ್ರಬಂಧಗಳಿರುವ ನಾಲ್ಕನೆಯ ಹಾಗೂ ಕಾದಂಬರಿಗಳಿಗೇ ಮೀಸಲಾದ ಐದನೆಯ ಸಂಪುಟಗಳೆರಡೂ ೧೯೭೯ ರಲ್ಲಿ ಹೊರಬಂದವು. ಅಂತಾರಾಷ್ಟ್ರೀಯ ಮಕ್ಕಳ ವರ್ಷದ ನೆನಪಿಗಾಗಿ ೧೯೭೯ ರಲ್ಲಿ ಸಮಗ್ರ ಬಾಲಸಾಹಿತ್ಯವನ್ನೊಳಗೊಂಡ ಆರನೆಯ ಸಂಪುಟವು ಪ್ರಕಟವಾಯಿತು. ಇತರ ಭಾಷೆಗಳಿಂದ ಬಂದು ಕನ್ನಡವನ್ನು ಶ್ರೀಮಂತಗೊಳಿಸಿರುವ ಅನುವಾದ ಸಾಹಿತ್ಯವನ್ನು ಶೀರ್ಷಿಕೆಯಾಗಿ, ಏಳನೆಯ ಸಂಪುಟ ಹೊರಬಂದಿದೆ." ೫

ಇನ್ನು ಮುಂದೆ ಬರುವ ಸಂಪುಟಗಳ ವಿವರ ಹೀಗಿದೆ:

ಸಂಪುಟ ೮ = ಜೀವನ ಚರಿತ್ರೆ

ಸಂಪುಟ ೯ = ಮಾನವಿಕ ಶಾಸ್ತ್ರ

ಸಂಪುಟ ೧೦ = ಈ ಹಿಂದಿನ ಸಂಪುಟಗಳಲ್ಲಿ ಬಿಟ್ಟುಹೋಗಿದ್ದ ಉಲ್ಲೇಖಗಳು

ವಾರ್ಷಿಕ ಪುರವಣಿ ಸಂಪುಟಗಳನ್ನು ಸಹ ಕೆಳಗೆ ತಿಳಿಸಿರುವಂತೆ ತರಲಾಗಿದೆ ಮತ್ತು ತರುವ ಯೋಜನೆ ಇದೆ.

೧. ೧೯೬೯ ರಿಂದೀಚೆಗೆ ೧೯೬೯ – ೧೯೭೦ – ೧೯೭೨ ನೇ ವರ್ಷಗಳನ್ನು ಕುರಿತ, ೧೯೭೧ – ೭೨ ವರ್ಷಗಳನ್ನು ಕುರಿತ, ೧೯೭೪ – ೭೫ – ೭೬ ವರ್ಷಗಳನ್ನು ಕುರಿತ ಒಟ್ಟು ಮೂರು ಸಂಪುಟಗಳು ಪ್ರಕಟವಾಗಿವೆ.

೨. ೧೯೭೭ – ೮೦ ನೇ ವರ್ಷಗಳನ್ನು ಕುರಿತ ಒಂದು ಸಂಪುಟ. ೧೯೮೧ – ೮೨ ನೇ ವರ್ಷಗಳ ಸಂಪುಟ ಸಿದ್ಧವಾಗುತ್ತಲಿವೆ.

೧೯೭೧ ರಲ್ಲಿ ಪ್ರಾರಂಭವಾದ ಈ ಯೋಜನೆಯಲ್ಲಿ ಇಲ್ಲಿಯವರೆಗೆ ೭ ಸಂಪುಟಗಳನ್ನೂ ೪ ಪುರವಣಿಗಳನ್ನೂ ಪ್ರಕಟಿಸಲಾಗಿದೆ. ಇದರಲ್ಲಿ ಸುಮಾರು ೩೬,೩೭೯ ಗ್ರಂಥಗಳ ವಾಙ್ಮಯ ವಿವರ ಮತ್ತು ಸಂಕ್ಷಿಪ್ತ ವ್ಯಾಖ್ಯೆ ಇದೆ. ಪ್ರತಿಯೊಂದು ಸಂಪುಟ ಮತ್ತು ಪುರವಣಿಯ ಕೊನೆಯಲ್ಲಿ ಅಗತ್ಯ ಅನುಬಂಧಗಳಿವೆ. ಕರ್ತೃಸೂಚಿ ವಿಷಯ ವಿಭಾಗ ಸೂಚಿ ಮತ್ತು ಗ್ರಂಥಾಲಯ ಗ್ರಂಥ ಸಂಗ್ರಹ ಸೂಚಿಗಳನ್ನು ಈ ಅನುಬಂಧಗಳಲ್ಲಿ ಅಕಾರಾದಿಯಾಗಿ ಕೊಡಲಾಗಿದೆ. ಈ ಸೂಚಿಯ ಇನ್ನೊಂದು ವಿಶೇಷವೆಂದರೆ, ಯಾವ ಗ್ರಂಥ ಎಲ್ಲಿ ಲಭ್ಯವಿದೆ ಎಂಬುದರ ಸಂಕ್ಷಿಪ್ತ ವಿವರ. ಈ ನಮೂದನೆ ಸಂಜ್ಞೆಯ ರೂಪದಲ್ಲಿ ಇದ್ದು, ಸಂಕ್ಷಿಪ್ತವಾಗಿ ಗ್ರಂಥದ ಲಭ್ಯತೆಗೆ ಮತ್ತು ಆಸಕ್ತರಿಗೆ ಪರಾಮರ್ಶನ ಅವಕಾಶ ಕಲ್ಪಿಸಿಕೊಡುತ್ತದೆ.

# ಕನ್ನಡ ಗ್ರಂಥಸೂಚಿ

## ಸಂಪಾದಕ ಮಂಡಲಿ





### ಕಲಿಸುವಿಕೆ

ಯುನೆಸ್ಕೋ
ವಿಜ್ಞಾನ ಬೋಧನೆಗೆ ಆಕರ ಗ್ರಂಥ
ಇಂಗ್ಲಿಷಿನಿಂದ ಅನು : ಎಚ್ ವಿ ಶ್ರೀರಂಗರಾಜು, ಜಿ ಶ್ರೀನಿವಾಸನ್, ಕೆ ಟಿ
ರಾಮಸ್ವಾಮಿ
ಬೆಂಗಳೂರು ಬೆಂಗಳೂರು ಬುಕ್ ಸೆಂಟರ್ 1967
xxii + 358 24 x 16.5 ಕಾಗದ 15-00
ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳ ಶಿಕ್ಷಕರಿಗೆ ವಿಜ್ಞಾನ ಬೋಧನೆಯ ವಿಚಾರ
೧ ವಿಧಾನ

ರಾಮಸ್ವಾಮಿ, ಕೆ ಟಿ [ಅನು]
ನೋಡಿ : ಯುನೆಸ್ಕೋ .... ೧

ಶ್ರೀನಿವಾಸನ್, ಜಿ [ಅನು]
ನೋಡಿ : ಯುನೆಸ್ಕೋ .... ೧

ಶ್ರೀರಂಗರಾಜು, ಎಚ್ ವಿ [ಅನು]
ನೋಡಿ : ಯುನೆಸ್ಕೋ .... ೧

### ಸಂಶೋಧನೆಗಳು

ಅಚ್ಯುತರಾವ್. ವೈ
ನಿರ್ಮಾಪಕರು–ಸಂಶೋಧಕರು ಸಚಿತ್ರ
ಹೈದರಾಬಾದು ಸತ್ಯಾತ್ರಯ ಪ್ರಕಾಶನ 1952
vi + 95 18 x 12 ಕಾಗದ 1-8-0
ಆರ್ಕಿಮಿಡೀಸ್, ಗೆಲಿಲಿಯೋ, ಪಿಪಾಸ ಮುಂತಾದ 21 ಸಂಶೋಧಕರ ಇತಿಹಾಸ
೨ ಸ ಕಾ ಬೆಂ

ಉಮಾದೇವಿ [ಅನು]
ನೋಡಿ : ಪಾರ್ಕರ್, ಬೆರ್ಥಾ ಮಾರಿಸ್ .... ೩

ಪಾರ್ಕರ್, ಬೆರ್ಥಾ ಮಾರಿಸ್
ಸರ್ವ ವಿಜ್ಞಾನಿಯರಾಗು ಸಚಿತ್ರ
ಇಂಗ್ಲಿಷಿನಿಂದ ಅನು : ಉಮಾದೇವಿ
ಬೆಂಗಳೂರು ಎಸ್ ಎಂ ವಾಸನ್ ಅಂಡ್ ಕಂಪನಿ 1859
67 + 60 21 x 13.5 ಕಾಗದ 0-90
ಕೋಪರ್ನಿಕಸ್, ಲೂಯಿ ಪಾಸ್ಟರ್, ಗೆಲಿಲಿಯೋ ಮುಂತಾದ ವಿಜ್ಞಾನಿಗಳ ಜೀವನ ಪರಿಚಯ, ಅವರ ಸಾಧನೆಗಳು
ಗಣಪತಿ ಪ್ರಾ

ಮೂರ್ತಿ, ಕೆ ಎಸ್ ಆರ್
ಅದ್ಭುತ ಸಾಧನೆಗಳು
ಸಂ : ಎಚ್ ಶೇಷಯ್ಯಂಗಾರ್
ಮದರಾಸು ರಾಯಲು ಅಂಡ್ ಕೊ 1960
ii + 146 18 x 12 ಕಾಗದ 1-80
ಗಗನಯಾನ, ಸಾಗರ ಶೋಧನೆ, ಉತ್ತರ ಧ್ರುವದ ಕಡೆಗೆ ಇತ್ಯಾದಿ
೪ ಮ ಮ

ರಾವ್, ಎಸ್ ಎಸ್
ನೋಡಿ : ಹೈಡ್, ಮಾರ್ಗರೆಟ್ ಓ .... ೬

ವರದರಾಜನ್, ಎಸ್
ವಿಜ್ಞಾನ ಸಂಶೋಧನೆ
ಮೈಸೂರು ಮೈ ವಿಶ್ವವಿದ್ಯಾನಿಲಯ 1958
ಮೈ ವಿ ಕನ್ನಡ ಗ್ರಂಥಮಾಲೆ-39
xvii + 176 18 x 12 ರಟ್ಟು 3-13
ಕ್ಯಾಲಿಕೋ 4-13
ಅರಿಸ್ಟಾಟಲ್, ಡಾರ್ವಿನ್, ವಿಲಿಯಂ ಹಾರ್ವೆ, ಗೆಲಿಲಿಯೊ, ಕೊಪರ್ನಿಕಸ್, ಕೆಪ್ಲರ್, ನ್ಯೂಟನ್, ಐನ್‌ಸ್ಟೀನ್ ಮುಂತಾದ ವಿಜ್ಞಾನಿಗಳ ಸಾಧನೆಗಳ ಪರಿಚಯ
೫ ಪ್ರ

ಶಿವರಾಮುರಾವ್, ಎಂ ಎಸ್
ವಿಜ್ಞಾನದ ಹಾದಿಯಲ್ಲಿ
ಮೈಸೂರು ಪೂರ್ಣಿಮಾ ಸಾಹಿತ್ಯ ಮಂದಿರ 1961
ಕಲಾಕ.ಸುಮ-14
27 18 x 12 ಕಾಗದ 0-40
ಫ್ಲೆಮಿಂಗ್, ಬಾಂಟಿಂಗ್ ಮುಂತಾದ ವಿಜ್ಞಾನಿಗಳ ಸಂಶೋಧನೆಯ ಕತೆ
೬ ಮೈ ಕೇಂ ಗ್ರಂ

ಶೇಷಯ್ಯಂಗಾರ್, ಎಚ್ [ಸಂ]
ನೋಡಿ : ಮೂರ್ತಿ, ಕೆ ಎಸ್ ಆರ್ .... ೪

ಹೈಡ್, ಮಾರ್ಗರೆಟ್ ಓ
ಅನ್ವೇಷಿಸದ ಪ್ರಪಂಚ
ಇಂಗ್ಲಿಷಿನಿಂದ ಅನು : ಎಸ್ ಎಸ್ ರಾವ್
ಮದರಾಸು ವಿಭಾ ಸಂಸ್ಥೆಗಾಗಿ ವಿಜ್ಞಾನ ಪ್ರಕಾಶನ 1966
162 18 x 12 ಕಾಗದ 2-10
ಮಾನವನ ನೆಲೆ ಮತ್ತು ಆಹಾರಗಳಿಗಾಗಿ ವಿಜ್ಞಾನಿಗಳು ನಡೆಸಿದ ಭೂ, ಸಾಗರ, ಆಕಾಶ ಸಂಶೋಧನೆಗಳು
೭ ಮೈ ವಿ ಗ್ರಂ

# ೧. ಗ್ರಂಥಸೂಚಿ

### ಅಭಿನಂದನ ಗ್ರಂಥಗಳ ಲೇಖನಗಳ ಸೂಚಿ

ಪಾಟೀಲ, ಪದ್ಮನಾಭ ಕೃಷ್ಣರಾವ್ 1927– [ಸಂ]
ಕನ್ನಡ ಅಭಿನಂದನ ಗ್ರಂಥಗಳ ಲೇಖನಗಳ ಸೂಚಿ
ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಾಲಯ 1972
10 + 232 21 x 14 § 8–00 ‡ 12–00
45 ಸಂಭಾವನಾ ಮತ್ತು ಸ್ಮಾರಕ ಗ್ರಂಥಗಳ ಲೇಖನಗಳ ಸೂಚಿ
೧ ಜ 16

### ಲೇಖನ ಸೂಚಿ

ವೆಂಕಟರಮಣಯ್ಯ, ತೊಣ್ಣೂರು ವೆಂಕಟರಮಣಯ್ಯ 1933–
ಕನ್ನಡ ಭಾಷಾ–ಸಾಹಿತ್ಯ ಲೇಖನಸೂಚಿ
ಬೆಂಗಳೂರು ಬೆಂಗಳೂರು ವಿಶ್ವವಿದ್ಯಾಲಯ 1973
16 + 761 21 x 14 † 25–00
ಪತ್ರಿಕೆಗಳು, ಅಭಿನಂದನಾ, ಸಂಭಾವನಾ ಗ್ರಂಥಗಳು ಹಾಗೂ ಸಾಹಿತ್ಯಿಕ ಲೇಖನಗಳ ಸೂಚಿ
೨ ಜ 01

# ೨. ವಿಶ್ವಕೋಶ

### ಸಾಮಾನ್ಯ ವಿಶ್ವಕೋಶ

ನಾಯಕ, ಹಾರೋಗದ್ದೆ ಮಾನಪ್ಪ 1931– [ಪ್ರ ಸಂ]
ಕನ್ನಡ ವಿಶ್ವಕೋಶ ಸಂಪುಟ 4–6
ಮೈಸೂರು ಕನ್ನಡ ಅಧ್ಯಯನ ಸಂಸ್ಥೆ 1972
(ಮುದ್ರಣ : ಸರಕಾರಿ ಮುದ್ರಣಾಲಯ, ಬೆಂಗಳೂರು)

ಸಂ : 4 : 8 + 952 16 ವರ್ಣ ಪುಟಗಳು, ಸಚಿತ್ರ 27.5 x 21.5
'ಕರೀಷಕ'–'ಕೂಡಲಸಂಗಮ' 40–00

ಸಂ : 5 : 8 + 952 13 ವರ್ಣ ಪುಟಗಳು, ಸಚಿತ್ರ 27.5 x 21.5
'ಕೂಡಲಿ–'ಗಣ' 40–00

ಸಂ : 6 : 8 + 948 10 ವರ್ಣ ಪುಟಗಳು, ಸಚಿತ್ರ 27.5 x 21.5
'ಗಣಕ'–ಗ್ಯಾಡ್ಲೂಪ್' 40–00
೩ ಜ 20

### ಮಕ್ಕಳ ವಿಶ್ವಕೋಶ

ಕುಳಕುಂದ ಶಿವರಾಯ [ನಿರಂಜನ] [ಪ್ರ ಸಂ]
ಜ್ಞಾನಗಂಗೋತ್ರಿ–ಕಿರಿಯರ ವಿಶ್ವಕೋಶ 5–6
ಬೆಂಗಳೂರು ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ 1973
16 + 707 ಸಚಿತ್ರ 27 x 21.5 ‡ 50–00
18 + 698 ಸಚಿತ್ರ 27 x 21.5 ‡ 50–00
ಸಂಪುಟ 5 : ಕಲೆ, ಸಾಹಿತ್ಯ ; ಸಂಪುಟ 6 : ಜಗತ್ತಿನ ಕ್ರೀಡೆಗಳು
೪ ಜ 01

# ೩. ಪತ್ರಿಕೋದ್ಯಮ

ಕುಲಕರ್ಣಿ, ರಾಮರಾವ ಭೀಮರಾವ [ರಾವ ಬಹಾದ್ದೂರ] 1910–
ವೀರಕರ್ಮದ ಪ್ರೇರಣೆ : 'ಕರ್ಮವೀರ'ದ ಸುವರ್ಣ ಮಹೋತ್ಸವ
ಹುಬ್ಬಳ್ಳಿ ಲೋಕ ಶಿಕ್ಷಣ ಟ್ರಸ್ಟ್ 1972
ಲೋಕ ಶಿಕ್ಷಣ ಮಾಲೆ
13 + 179 + 7 21 x 12 8–00
'ಕರ್ಮವೀರ' ವಾರ ಪತ್ರಿಕೆಯ ಹುಟ್ಟು, ಬೆಳವಣಿಗೆ ಹಾಗು ದೇಶದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅದರ ಪಾತ್ರ
೫ ಎ 02

ಈ ಏಳು ಸಂಪುಟಗಳಲ್ಲಿ ೧೮೮೭ ರಿಂದ ಪ್ರಕಟಿತ ಕನ್ನಡ ಕೃತಿಗಳಿಂದ ಆರಂಭವಾಗಿ ಮುಂದೆ ಪ್ರಕಟವಾದ ಸುಮಾರು ಎಲ್ಲ ಗ್ರಂಥಗಳ ಸೇರ್ಪಡೆ ನಡೆಯುತ್ತ ಬಂದಿದೆ. ಪ್ರತಿ ಶೀರ್ಷಿಕೆಯಡಿಯಲ್ಲಿ ಈ ಗ್ರಂಥಸೂಚಿ ಕೆಳಗೆ ನಮೂದಿಸಿದ ವಿವರ ನೀಡಿದೆ.

ಇದುವರೆಗೆ ಅಚ್ಚಾಗಿರುವ ಯಾವುದೇ ಪುಸ್ತಕ ಅದನ್ನು ಬರೆದ ಲೇಖಕ, ಪುಸ್ತಕದ ಒಳಗಿರುವ ವಿಷಯ, ಅದರ ಗಾತ್ರ, ಬೆಲೆ, ಅದು ಮುದ್ರಿತವಾದ ಕಾಲ, ಅದು ಸ್ವತಂತ್ರ ಕೃತಿಯೋ, ಅನುವಾದವೋ, ಸಂಗ್ರಹವೋ ಸಂಪಾದಿತವೋ ಇತ್ಯಾದಿ ಎಲ್ಲ ವಿವರ ಏಕತ್ರ ರೀತಿಯಲ್ಲಿ ಸಿಗುವ ಗ್ರಂಥಸೂಚಿಯನ್ನು ಸಿದ್ಧಪಡಿಸಲಾಗಿದೆ.

ಇಲ್ಲಿಯವರೆಗೆ ಕನ್ನಡ ಗ್ರಂಥಸೂಚಿಯ ಏಳು ಸಂಪುಟಗಳು ಮತ್ತು ನಾಲ್ಕು ಪುರವಣಿಗಳು ಪ್ರಕಟವಾಗಿವೆ. ಕೆಳಗಿನ ಪಟ್ಟಿಯು, ಗ್ರಂಥಸೂಚಿಯ ಬೆಳವಣಿಗೆಯನ್ನು ಚಿತ್ರಿಸುತ್ತದೆ.

| ಸಂಪುಟ ಸಂಖ್ಯೆ | ಪ್ರಕಟವಾದ ವರ್ಷ | ಕಾಲವ್ಯಾಪ್ತಿ | ವಿಷಯಗಳು | ಗ್ರಂಥಗಳ ಸಂಖ್ಯೆ |
|---|---|---|---|---|
| ೧ | ೧೯೭೧ | ೧೯೬೭ - ೧೯೬೮ | ಶುದ್ಧ ವಿಜ್ಞಾನಗಳು೧೯೪೦ | ೧೯೪೦ |
| ೨ | ೧೯೭೫ | " | ಸಾಮಾನ್ಯ ವಿಷಯಗಳು | ೫೩೨೭ |
| ೩ | ೧೯೭೪ | " | ಸಾಹಿತ್ಯ - ಕಾವ್ಯ ೪೧೨೯ | ೪೧೨೯ |
| ೪ | ೧೯೭೯ | " | ಗದ್ಯ, ನಾಟಕ, ಸಣ್ಣಕತೆ ಮತ್ತು ಪ್ರಬಂಧ | ೩೭೭೩ |
| ೫ | ೧೯೭೯ | " | ಕಾದಂಬರಿ | ೨೫೭೧ |
| ೬ | ೧೯೭೯ | " | ಬಾಲಸಾಹಿತ್ಯ | ೩೪೨೧ |
| ೭ | ೧೯೮೪ | " | ಅನುವಾದ ಸಾಹಿತ್ಯ | ೧೯೭೪ |
| ಪುರವಣಿಗಳು | | | | |
| ೧ | ೧೯೭೪ | ೧೯೭೮ - ೧೯೭೧ | ಎಲ್ಲಾ ವಿಷಯಗಳು | ೨೭೨೨ |
| ೨ | ೧೯೭೭ | ೧೯೭೨ - ೧೯೭೩ | " | ೨೫೮೮ |
| ೩ | ೧೯೮೧ | ೧೯೭೪ - ೧೯೭೬ | " | ೩೩೫೫ |
| ೪ | ೧೯೮೫ | ೧೯೭೭ - ೧೯೮೦ | " | ೫೧೬೩ |
| | | | | ೩೬೮೬೩ |

"...ಈಗ ವಿಶ್ವವಿದ್ಯಾನಿಲಯದ ಪ್ರಸಾರಾಂಗ ಕೈಗೊಂಡಿರುವ ಯೋಜನೆ ಮೊದಲನೆಯ ಸಮರ್ಪಕ ವ್ಯಾಪಕ ಯತ್ನ. ಈ ಕಾರ್ಯವನ್ನು ಕನ್ನಡದ ತಲೆಮಾರುಗಳು ಕೃತಜ್ಞತೆಯಿಂದ ಸ್ಮರಿಸುತ್ತವೆಂಬುದರಲ್ಲಿ ಸಂದೇಹವಿಲ್ಲ. ಕನ್ನಡ ಗ್ರಂಥಸೂಚಿ ಕನ್ನಡ ಪ್ರಕಟಣ ಪ್ರಪಂಚದ ಆಕರ್ಷಕ ಕಥೆಯನ್ನು ನಿರೂಪಿಸುತ್ತದೆ. ಯೋಜನೆ ಪೂರ್ಣಗೊಂಡಾಗ ಈ ಸೂಚಿಗಳನ್ನು ನೋಡದೆ ಯಾರೂ ಕನ್ನಡದಲ್ಲಿ ಕೆಲಸಮಾಡುವುದು ಸಾಧ್ಯವಾಗುವುದಿಲ್ಲ!..."

**—ಡಾ. ಹಾ. ಮಾ. ನಾಯಕ**

"The Kannada Bibliography will be a land mark in the annals of Kannada literature."

—*Hindustan Times*

"Nothing in recent years has given me such great pleasure as going through this splendidly brought out volume of the Kannada Grantha Suchi, Vol. III. Not only is its physical format impressive, the contents reveal a professional competence of the highest order! I made it a point to go through the annotations in a hundred entries chosen at random. I was astonished to observe the high level of terseness, brevity, and relevance, maintained all through!! There is nothing slovenly anywhere. The Editorial Committee deserves to be complimented on this achievement. It is an achievement of the first magnitude in the Bibliographical world in India!...This volume sets high standards for similar achievement in other Indian Languages!...I feel that I can hold my head a little higher as a Kannadiga after this!

—B. S. Keshavan
Former Librarian,
National Library,
INDIA

## ಭಾರತದ ರಾಷ್ಟ್ರೀಯ ಗ್ರಂಥಸೂಚಿ ಪಟ್ಟಿಗಳು

| ಸಂಚಿತ ವಾರ್ಷಿಕ ಸಂಪುಟಗಳು | | ಮಾಸಿಕ ಸಂಚಿಕೆಗಳು | |
|---|---|---|---|
| ಸಂಬಂಧಿಸಿದ ವರುಷ | ಪ್ರಕಟವಾದ ವರುಷ | ಸಂಬಂಧಿಸಿದ ತಿಂಗಳು | ಪ್ರಕಟವಾದ ತಿಂಗಳು |
| ೧೯೭೫ | ೧೯೭೯ | ಜನೇವರಿ ೧೯೮೬ | ಮೇ ೧೯೮೮ |
| ೧೯೭೬ | ೧೯೮೧ | ಫೆಬ್ರವರಿ ೧೯೮೬ | ಜೂನ್ ೧೯೮೮ |
| ೧೯೭೭ | ೧೯೮೩ | ಮಾರ್ಚ್ ೧೯೮೬ | ಜುಲೈ ೧೯೮೮ |
| ೧೯೭೮ | ೧೯೮೫ | ಏಪ್ರಿಲ್ ೧೯೮೬ | ಅಗಸ್ಟ್ ೧೯೮೮ |
| ೧೯೭೯ | ೧೯೮೪ | ಮೇ ೧೯೮೬ | ಸೆಪ್ಟೆಂಬರ್ ೧೯೮೮ |
| ಇದೇ ಕೊನೆಯ ಪ್ರಕಟಣೆ | | ಜೂನ್ ೧೯೮೬ | ಅಕ್ಟೋಬರ್ ೧೯೮೮ |
| | | ಜುಲೈ ೧೯೮೬ | ನವೆಂಬರ್ ೧೯೮೮ |
| | | ಅಗಸ್ಟ್ ೧೯೮೬ | ಡಿಸೆಂಬರ್ ೧೯೮೮ |
| | | ಸೆಪ್ಟೆಂಬರ್ ೧೯೮೬ | ಜನೇವರಿ ೧೯೮೯ |
| | | ಅಕ್ಟೋಬರ್ ೧೯೮೬ | ಫೆಬ್ರವರಿ ೧೯೮೯ |
| | | ನವೆಂಬರ್ ೧೯೮೬ | ಮಾರ್ಚ್ ೧೯೮೯ |
| | | ಡಿಸೆಂಬರ್ ೧೯೮೬ | ಮಾರ್ಚ್ ೧೯೮೯ |

### ೪.೧.೧ : ರಾಷ್ಟ್ರೀಯ ಗ್ರಂಥಾಲಯ ಗ್ರಂಥಸೂಚಿ

ರಾಷ್ಟ್ರೀಯ ಗ್ರಂಥಾಲಯದ ಕನ್ನಡ ಗ್ರಂಥಗಳ ಸೂಚಿ, ರಾಷ್ಟ್ರೀಯ ಗ್ರಂಥಾಲಯಕ್ಕೆ ಸೇರ್ಪಡೆಯಾದ ಹೊಸ ಹೊಸ ಕನ್ನಡ ಪುಸ್ತಗಳಿಗಷ್ಟೇ ಸೀಮಿತ. ಈ ಗ್ರಂಥಸೂಚಿ ವಿಭಾಗದ ಅತೀ ಇತ್ತೀಚಿನ ಕಂತು ೧೯೬೫ ರಲ್ಲಿ ಪ್ರಕಟವಾಗಿ, ಅಲ್ಲಿಂದೀಚೆ ಮತ್ತೆ ಹೊಸ ಸಂಪುಟಗಳು ಹೊರಬಂದಿಲ್ಲ. ರಾಷ್ಟ್ರೀಯ ಗ್ರಂಥಸೂಚಿಯ ಮುಖ್ಯ ನ್ಯೂನತೆ ಎಂದರೆ ಅದರ ಪ್ರಕಟಣೆಯಲ್ಲಾಗುವ ವಿಪರೀತ ವಿಳಂಬ ಕನ್ನಡ ಪುಸ್ತಕಗಳು ಈ ಸೂಚಿಯಲ್ಲಿ ನಮೂದಾಗಿರುವದು ಕೇವಲ ಶೇಕಡ ೪೨ ರಷ್ಟು ಎಂದು ನಾಗಪ್ಪ ತಿಳಿಸಿದ್ದಾರೆ.

ಅವರಂತೆ ಒಂದು ವರ್ಷದಲ್ಲಿ ನಮೂದಾದ ಸಂಖ್ಯೆ ಸುಮಾರು ೫೮೦ ಆದರೆ ಒಂದು ವರ್ಷದಲ್ಲಿ ಸುಮಾರು ೧,೪೦೦ ಕನ್ನಡ ಗ್ರಂಥಗಳು ಪ್ರಕಟವಾಗುತ್ತವೆ. ಇದರಂತ, ಕನ್ನಡ ಗ್ರಂಥಗಳ ಸಂಖ್ಯೆ ರಾಷ್ಟ್ರೀಯ

ಗ್ರಂಥಾಲಯದಲ್ಲಿ ಸೇರ್ಪಡೆಯಾಗುತ್ತಿರುವುದು ತೀರ ಕಡಿಮೆ ಎನ್ನಬಹುದು. ಈಗ ಪ್ರತಿ ವರ್ಷ ೨೦೦೦ ಕ್ಕಿಂತಲೂ ಹೆಚ್ಚು ಪುಸ್ತಕಗಳು ಪ್ರಕಟಗೊಳ್ಳುತ್ತಿವೆ. ಇದು ಇನ್ನೂ ಹೆಚ್ಚಬಹುದೆಂಬ ಆಶೆ ವ್ಯಕ್ತಪಡಿಸಬಹುದು.

## ೪.೧.೨ : ಭಾರತೀಯ ಸಾಹಿತ್ಯದ ಗ್ರಂಥಸೂಚಿ

ನವದೆಹಲಿಯಲ್ಲಿರುವ ಭಾರತೀಯ ಸಾಹಿತ್ಯ ಅಕಾಡೆಮಿಯವರು "ನ್ಯಾಷನಲ್ ಬಿಬ್ಲಿಯಾಗ್ರಾಫಿ ಆಫ್ ಇಂಡಿಯನ್ ಲಿಟರೇಚರ್" (National Bibliography of Indian Literature) ೧೯೦೧ - ೧೯೫೨ ಎಂಬ ಬೃಹತ್ ಸಂಕಲನವನ್ನು ಹಮ್ಮಿಕೊಂಡು ಎರಡನೆಯ ಸಂಪುಟದಲ್ಲಿ ೫೩ ವರ್ಷಗಳ ಅವಧಿಯಲ್ಲಿ ಪ್ರಕಟವಾದ ಕನ್ನಡ ಪುಸ್ತಕಗಳ ಸೂಚಿಯನ್ನು ಒದಗಿಸಿದ್ದಾರೆ.

೧೯೬೬ ರಲ್ಲಿ ಪ್ರಕಟವಾದ ಈ ಸಂಪುಟದಲ್ಲಿ ಹಿಂದಿ, ಕಾಶ್ಮೀರಿ ಮತ್ತು ಮಲೆಯಾಳಂ ಪುಸ್ತಕಗಳನ್ನೂ ಸೇರ್ಪಡಿಸಲಾಗಿದೆ. ಇದರಲ್ಲಿ ೨,೩೫೬ ಕನ್ನಡ ಪುಸ್ತಕಗಳು ಸೇರ್ಪಡೆಯಾಗಿವೆ. ಶೀರ್ಷಿಕೆ ಮತ್ತು ಲೇಖಕರ ಹೆಸರುಗಳನ್ನು ರೋಮನ್ ಲಿಪಿಯಲ್ಲಿ ಹಂಟೆರಿಯನ್ ಲಿಪ್ಯಂತರದ ವಿಧಾನಕ್ಕನುಗುಣವಾಗಿ ಕೊಡಲಾಗಿದೆ. ಪುಸ್ತಕಗಳ ವಸ್ತುಪರಿಚಯವನ್ನು ಸಂಕ್ಷಿಪ್ತವಾಗಿ ಇಂಗ್ಲಿಷ್‌ನಲ್ಲಿ ವಿವರಿಸಲಾಗಿದೆ. ಮಾನವಿಕಗಳ ಪರಿವಿಡಿಯಲ್ಲಿ ಬರುವ ಹಾಗೂ ಸಾಹಿತ್ಯದ ಮೌಲ್ಯವನ್ನು ಹೊಂದಿರುವ ಪುಸ್ತಕಗಳ ಬಗ್ಗೆ ಮಾಹಿತಿಗಳು ಈ ಸೂಚಿಯಲ್ಲಿ ದೊರೆಯುತ್ತದೆ.

ಅನೇಕ ಸಂಘ - ಸಂಸ್ಥೆ, ಗ್ರಂಥಾಲಯ ಮತ್ತು ವೃತ್ತಿಪರರ ಪ್ರಯತ್ನದ ಫಲವಾಗಿ ಗ್ರಂಥಸೂಚಿ ರಚನೆ ಕಾರ್ಯ ಕರ್ನಾಟಕದಲ್ಲಿ ನಡೆದು ಬಂದಿದೆ.

## ೪.೧.೩ : ಪ್ರಾದೇಶಿಕ ಗ್ರಂಥಸೂಚಿಗಳು

"ಗ್ರಂಥಲೋಕ" ಅನಂತರಾಮಯ್ಯ ಇವರು ಸಂಪಾದಿಸಿ ಪ್ರಕಟಿಸುತ್ತಿದ್ದರು. "ವಾರ್ಷಿಕ ಗ್ರಂಥಾವಳಿ" ಒಂದು ಉಪಯುಕ್ತ ಗ್ರಂಥಸೂಚಿಯ ಸರಣಿ. "ಗ್ರಂಥಲೋಕ" ನಿಯತಕಾಲಿಕೆಯಲ್ಲಿ ಸೇರಿಸಿ ಪ್ರಚಾರವಾದ ಶೀರ್ಷಿಕೆಗಳನ್ನು ಒಟ್ಟುಗೂಡಿಸಿ, ಸೂಚಿರೂಪದಲ್ಲಿ ತರುವ ಕಾರ್ಯ ನಿಜವಾಗಿಯೂ ಪ್ರಶಂಸನೀಯ. ಗ್ರಂಥ ಲೋಕದ ೧೨ ಮಾಸಿಕ ಸೂಚಿಗಳ ಆಧಾರದಿಂದ ಸಂಚಯಿತ ಸೂಚಿಗಳು ೧೯೮೦ ಮತ್ತು ೧೯೮೧ ರಲ್ಲಿ ಪ್ರಕಟಗೊಂಡವು. ಇದರಂತೆ, ಗ್ರಂಥಲೋಕದ ಹುಟ್ಟಿದಂದಿನಿಂದ ಇಲ್ಲಿಯವರೆಗೆ, ಅಂದರೆ ಅಕ್ಟೋಬರ್ ೧೯೯೦ ರ ವರೆಗೆ ಒಟ್ಟು ೧೪ ವರ್ಷಗಳಲ್ಲಿ ಸುಮಾರು ೧೫,೭೪ ಪುಸ್ತಕಗಳು ಸೂಚೀಕರಿಸಲ್ಪಟ್ಟಿವೆ.

೪.೧.೪ : ಪ್ರಕಾಶಕರು, ಸಾಹಿತ್ಯ ಪರಿಷತ್ತು ಮತ್ತು ರಾಜ್ಯ ವಿಶ್ವವಿದ್ಯಾಲಯಗಳ ಪ್ರಸಾರಾಂಗ ಪ್ರಕಟನೆಗಳ ಪಟ್ಟಿಗಳು ಸೂಚಿ ರೂಪದಲ್ಲಿ ಹೊರಬರುತ್ತಿವೆ. ಗ್ರಂಥಸೂಚಿ ಸಂಪಾದನೆಯ ಕಾರ್ಯದಲ್ಲಿ ಈ ಸಂಘಸಂಸ್ಥೆಗಳು ಸಹ ಹಿಂದೆ ಬಿದ್ದಿಲ್ಲ. ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಪ್ರಮುಖ ಪ್ರಕಾಶನ ಸಂಸ್ಥೆಗಳಾದ " ಇಂಡಿಯಾ ಬುಕ್ ಹೌಸ್ ", " ರಾಷ್ಟ್ರೋತ್ಥಾನ ಪರಿಷತ್ತು ", " ಬಾಪ್ಕೊ ಪ್ರಕಾಶನ " ಇವಲ್ಲದೆ, ಹುಬ್ಬಳ್ಳಿ, ಧಾರವಾಡ, ಗದಗ ಮತ್ತು ಮೈಸೂರಿನಂತಹ ಪಟ್ಟಣಗಳ ಪ್ರಕಾಶಕರು ತಮ್ಮ ಪ್ರಕಟಣೆಗಳನ್ನು ಗ್ರಂಥಸೂಚಿಯ ರೂಪದಲ್ಲಿ ಪ್ರಸಿದ್ಧಪಡಿಸುತ್ತಾರೆ. ಈ ಗ್ರಂಥಸೂಚಿಗಳು ನಿಯಮಿತವಾಗಿ ಹೊರಬರುತ್ತಿರುವುದು ಕಂಡುಬರುತ್ತದೆ. ಕನ್ನಡ ಗ್ರಂಥ ಪ್ರಕಟನೆಯಲ್ಲಿ ಇವುಗಳ ಕಾರ್ಯ ಪ್ರಕಟನೆಗೆ ಪೂರಕವಾಗಿದೆ. ಇಂತಹ ಕಾರ್ಯ ಪ್ರಶಂಸನೀಯವೂ ಅಲ್ಲದೇ ಕೇವಲ ನಿರ್ದಿಷ್ಟ ಸ್ವರೂಪದ ಹೊತ್ತಿಗೆಗಳನ್ನು ನಿಯಮಿತವಾಗಿ ಹೊರತರುವ ಪದ್ಧತಿ ಇರಿಸಿಕೊಂಡಿದೆ. ಈ ಪ್ರಕಾಶನ ಸಂಸ್ಥೆಗಳು ನೀಡುವ ಶೀರ್ಷಿಕೆಗಳನ್ನು ಅಬಾಲವೃದ್ಧರಾದಿಯಾಗಿ ಸರ್ವರಿಗೂ ಅಪ್ಯಾಯಮಾನವಾದ ಗ್ರಂಥಗಳನ್ನು ಕಡಿಮೆ ಕ್ರಯದಲ್ಲಿ ಒದಗಿಸಿ, ಸರ್ವರಿಗೆ ಕೈಗೆಟುಕುವಂತೆ ಮಾಡಿವೆ.

೪.೧.೫ : ಪ್ರಕಾಶನ ಸಂಸ್ಥೆಗಳಲ್ಲಿ ಪ್ರಕಟಿಸಿದ ಅನೇಕ ಗ್ರಂಥಸೂಚಿಗಳಲ್ಲಿ ಇತ್ತೀಚೆಗೆ ಹೊರಬಂದ " ಐ. ಬಿ. ಎಚ್. ಗ್ರಂಥಾವಳಿ "ಯ ಬಗ್ಗೆ ನಾಲ್ಕು ಮಾತು ಹೇಳಬಹುದು. ಅಲ್ಲದೇ ಅದು ತನ್ನದೇ ಆದ ವಿಶೇಷ ಸ್ಥಾನಮಾನ ಮತ್ತು ಪ್ರಶಂಸೆ ಗಳಿಸಿದೆ. ಟಿ. ವಿ. ವೆಂಕಟರಮಣಯ್ಯ ಅವರಿಂದ ಸಂಪಾದಿಸಿದ ಈ ಗ್ರಂಥಸೂಚಿ ಕನ್ನಡ ಭಾಷೆಯಲ್ಲಿ ವಿವಿಧ ಸ್ತರದ ಗ್ರಂಥಗಳ ಆಯ್ಕೆಯಲ್ಲಿ ಒಂದು ಉಪಯುಕ್ತ ಸಾಧನೆ. ಈ ಗ್ರಂಥಾವಳಿಯ ಬಗ್ಗೆ ಭಾರತದ ರಾಷ್ಟ್ರೀಯ ಗ್ರಂಥಾಲಯದ ಮಾಜಿ ಗ್ರಂಥಪಾಲ ಶ್ರೀ ಬಿ. ಎಸ್. ಕೇಶವನ್ [೨] ಅವರು ಹೇಳಿದ ಕೆಲ ಮಾತುಗಳನ್ನು ಇಲ್ಲಿ ಉಲ್ಲೇಖಿಸಿದರೆ ಉತ್ಪ್ರೇಕ್ಷೆಯಲ್ಲದಿದ್ದರೂ, ಬಹು ಪ್ರಸ್ತುತವಾಗಿದೆ.

೨) " Your publication (i.e. ಐ. ಬಿ. ಎಚ್. ಗ್ರಂಥಾವಳಿ) reminds me of great American Publication H. W. Wilson, whose privately printed catalogue became a reference all over the world... not a small achievement for a single publisher in regional language 1869 publications in regional Kannada... Fortunately you have selected a scholar whom I greatly esteem for his impecable professionalism... Mr. Venkataramanaiah has comprehensively demonstrated that the compilation of catalogue such as this is only possible if professionalism is married to scholarship. "

" ಗ್ರಂಥಲೋಕ " ಮತ್ತು " ಐ. ಬಿ. ಎಚ್. ಗ್ರಂಥಾವಳಿ " ಯಂತಹ ಕಾರ್ಯಗಳು ಕನ್ನಡದಲ್ಲಿ ಇನ್ನೂ ಹೆಚ್ಚಿನ ರೀತಿಯಲ್ಲಿ ನಡೆಯಬೇಕು.

ರಾಜ್ಯದ ಒಳಗಿನ ಮತ್ತು ಹೊರಗಿನ ಭಾಗಗಳಲ್ಲಿ ಸಹ ಸ್ತುತ್ಯ ಕಾರ್ಯ ನಡೆಸಿದ ಅನೇಕ ವ್ಯಕ್ತಿಗಳ ಹೆಸರನ್ನು ಸಹ ಇಲ್ಲಿ ನೆನೆಯಬೇಕು. ಶ್ರೀನಿವಾಸ ಹಾವನೂರ ಅವರು ರಚಿಸಿದ ಕೆಲವು ಸೂಚಿಗಳು ಈ ದಿಶೆಯಲ್ಲಿ ಮೂಲ ಪ್ರಯತ್ನಗಳಾಗಿವೆ.

೪.೧.೬ : ಕನ್ನಡ ಅನೇಕ ಉದ್ದಾಮ ಸಾಹಿತಿಗಳ ಕೃತಿಗಳ ಸೂಚಿಗಳನ್ನು ಕೆಲವು ಸಲ ಆಸಕ್ತರು, ಸಾಹಿತಿಗಳು ಅತೀವ ಶ್ರದ್ಧೆಯಿಂದ ರಚಿಸಿದ್ದಾರೆ. ಉದ್ದಾಮ ಸಾಹಿತಿಗಳ ಪರಿಪೂರ್ಣ ರಚನೆಗಳಿಗೆ ಸೀಮಿತಗೊಂಡ ಸೂಚಿಗಳಾಗಿ ಇವು ಸಂಪಾದಿಸಲ್ಪಟ್ಟಿವೆ. ಕೆಲವು ಉಲ್ಲೇಖಗಳನ್ನು ಇಲ್ಲಿ ನೀಡಲಾಗಿದೆ.

೧) ಶ್ರೀ ಶೇಖರ ಇದ್ಯ : ಕಾರಂತ ಸಾಹಿತ್ಯ : ಕೃತಿ ಮತ್ತು ಲೇಖನ ದರ್ಶಿಕೆ

೨) ಡಾ. ಹಾ. ಮಾ. ನಾಯಕ : ಗೋಕಾಕ ಗ್ರಂಥಾವಳಿ ಮತ್ತು ಮಾಸ್ತಿಯವರ ಪುಸ್ತಕಗಳು

೩) ಡಾ. ಎಸ್. ಆರ್. ಗುಂಜಾಳ : ಬಸವ ಸಾಹಿತ್ಯ ದರ್ಪಣ : ಒಂದು ಉಲ್ಲೇಖನೀಯ ಕೃತಿ. ಇದರಲ್ಲಿ ಕನ್ನಡ, ತೆಲುಗು, ತಮಿಳು, ಸಂಸ್ಕೃತ, ಹಿಂದೀ, ಮರಾಠಿ, ಉರ್ದು, ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಬಸವಣ್ಣನವರನ್ನು ಕುರಿತು ರಚಿತವಾದ ಗ್ರಂಥಗಳ ವಿವರಣಾತ್ಮಕ ಸೂಚಿ.

೪) ಡಾ. ಶೀನಿವಾಸ ಹಾವನೂರು ಮತ್ತು ಮ. ವಿ. ನಾಯಕ : ಗೋವಿಂದ ಪೈ ವಾಙ್ಮಯ ದರ್ಶನ

೫) ಟಿ. ಪಿ. ಸುಬ್ರಹ್ಮಣ್ಯಂ ಮತ್ತು ಲೀಲಾ ಸುಬ್ರಹ್ಮಣಂ ಅವರು ರಚಿಸಿದ ಪ್ರಬುದ್ಧ ಕರ್ನಾಟಕ ೫ ನೇ ಸಂಪುಟದಲ್ಲಿ ಗ್ರಂಥಸೂಚಿ

೬) ೧೯೭೭ ರಲ್ಲಿ ಪ್ರಕಟವಾದ ಪ್ರೊ. ಶಿ. ಕೆ. ಪಾಟೀಲ ಅವರ ಕನ್ನಡ ಅಭಿನಂದನಾ ಗ್ರಂಥಗಳ ಲೇಖನಗಳ ಸೂಚಿ.

ಇವುಗಳಲ್ಲದೆ ಏಕ ವಿಷಯ ಗ್ರಂಥಸೂಚಿಗಳೂ ಕನ್ನಡದಲ್ಲಿ ಬಂದಿವೆ.

೪.೧.೭ : ಗ್ರಂಥಸೂಚಿಗಳಿಗೆ ಪೂರಕವಾದ ಅನೇಕ ಸಹಸೂಚಿಗಳೂ ರಚನೆಯಾಗಿವೆ. ಅದರಲ್ಲಿ ಎಂ. ಆರ್. ಸಣ್ಣರಾಮೇಗೌಡ ಅವರು ಸಂಕಲಿಸಿದ ಲೇಖಕರ ಸೂಚಿ. ಇದೇ ದಾಟಿಯಲ್ಲಿ ವೆಂಕಟರಮಣಯ್ಯ ಅವರ ' ಕನ್ನಡ ಲೇಖಕರ ಕಾವ್ಯನಾಮಗಳು ನಿಜನಾಮಗಳು ' ಮುಖ್ಯವಾಗಿದೆ. ಸಣ್ಣರಾಮೇಗೌಡರ ಸೂಚಿ ಕೇವಲ ಕೆಲವು ಆಯ್ದು ನಿಯತಕಾಲಿಕೆಗಳಿಗೆ ಸೀಮಿತ. ಕನ್ನಡದ ಅನೇಕ ಗ್ರಂಥಕರ್ತರ, ಲೇಖಕರ ನಿಜ ಮತ್ತು ಗುಪ್ತ ಕಾವ್ಯನಾಮಗಳಿಗೆ ಇವು ಮುಖ್ಯವಾದ ಆಧಾರ ಗ್ರಂಥಗಳು.

೪.೧.೮ : ಕೆಲವು ಸಾಹಿತ್ಯ ನಿಯತಕಾಲಿಕ ಸೂಚಿಗಳು ಸಹ ಕನ್ನಡದಲ್ಲಿ ಲಭ್ಯವಿದೆ. ಟಿ. ವಿ. ವೆಂಕಟರಮಣಯ್ಯ ಅವರ ಬೃಹತ್ ಕಾರ್ಯ ಈ ದಿಶೆಯಲ್ಲಿ ಅತ್ಯಮೂಲ್ಯ. ಅವರು ಸಂಪಾದಿಸಿದ " ಕನ್ನಡ ಭಾಷಾ ಸಾಹಿತ್ಯ ಲೇಖನ ಸೂಚಿ " ಈ ಕೃತಿ ಬಹಳ ಮಹತ್ವ ಪಡೆದಿದೆ. ಇದು ಇನ್ನೂ ಮುಂದುವರಿಸಲಾಗದ್ದು ವಿಷಾದಕರ. ಈ ನಿಟ್ಟಿನಲ್ಲಿ ಇನ್ನೊಂದು ಕೃತಿ ಎಂದರೆ ಟಿ. ವಿ. ಸುಬ್ರಹ್ಮಣ್ಯಂ ಅವರ " ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಲೇಖನ " ಗಳ ಸೂಚಿ. ಇದಲ್ಲದೆ ಮೈಸೂರು ವಿಶ್ವವಿದ್ಯಾನಿಲಯವು ಹೊರತಂದ " ಕನ್ನಡ ನಿಯತಕಾಲಿಕೆಗಳ ಸೂಚಿ " ಇನ್ನೊಂದು ರಚನೆ. ಇವು ಇಲ್ಲಿ ಉಲ್ಲೇಖಿಸಬಹುದಾದ ಕೆಲವು ಹಿಂದಿನ ರಚನೆಗಳು.

೪.೧.೯ : ಇತ್ತೀಚೆಗೆ ಗುಂಜಾಳರು ಪ್ರಾರಂಭಿಸಿ (೧೯೮೬) ನಡೆಸಿಕೊಂಡು ಬರುತ್ತಿರುವ " ಸಮಾಜ ವಿಜ್ಞಾನ ಲೇಖನ ದರ್ಶಕ " ಮಹತ್ವದ ಆಲೇಖನಾ ಸೇವೆಯಾಗಿದೆ. ಕನ್ನಡದ ಹತ್ತು ಜನಪ್ರಿಯ ಮಾಸಿಕ, ವಾರ ಮತ್ತು ದಿನಪತ್ರಿಕೆಗಳನ್ನು ಅವಲೋಕಿಸಿದ ಲೇಖನ ಸೂಚಿಯಾಗಿ ಇದು ಬಹಳ ಉಪಯುಕ್ತವೆನಿಸಿದೆ. ಅದರ ಸಂಪಾದಕರೇ ಹೇಳಿದಂತೆ, ಪ್ರಸ್ತುತ ಸಮಾಜ ವಿಜ್ಞಾನ ದರ್ಶಕವು ಕನ್ನಡ ಪತ್ರಿಕೆಗಳಲ್ಲಿ ಸಮಾಜ ವಿಜ್ಞಾನವನ್ನು ಕುರಿತು ಕಾರಣ ರೂಪದಲ್ಲಿ ಪ್ರಕಟವಾದ ಲೇಖನಗಳ ಸೂಚಿಯಾಗಿದೆ. ಇದು ಸಂಶೋಧಕರಿಗೆ ದ್ವಿತೀಯ ಸ್ತರಕ್ಕೆ ಉಪಯೋಗವಾಗುವ ಕಾರ್ಯ.

ಇದರಿಂದ ಸ್ವತಂತ್ರ ಗ್ರಂಥ ರಚನೆಗೆ ನಾಂದಿಯಾಗುವದಲ್ಲದೆ, ಸಂಶೋಧಕರಿಗೆ ಮಾರ್ಗದರ್ಶಿಯಾಗಿದೆ. ಭಾರತೀಯ ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆಯ ಸಹಾಯದಿಂದ ನಡೆಸಲಾಗುತ್ತಿರುವ ಪ್ರಸ್ತುತ ಲೇಖನ ಸೂಚಿಯು ಈ ದಿಶೆಯಲ್ಲಿ ಮೊಟ್ಟಮೊದಲನೆಯ ಪ್ರಯತ್ನವೆಂದೇ ಹೇಳಬಹುದು.

ಕೇವಲ ಓರ್ವ ವ್ಯಕ್ತಿ ಸಾಹಿತ್ಯ ಮತ್ತು ಅವನ ಬಹುಮುಖ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿಯುವ ಸಾಹಿತ್ಯ ದರ್ಶನದ ಪರಿಚಯ ಗುಂಜಾಳರ " ಬಸವ ಸಾಹಿತ್ಯ ದರ್ಪಣ " ದಿಂದ ಆಗುತ್ತದೆ. ವರ್ತಮಾನ ಕಾಲದ ಸಾಹಿತಿ ಮತ್ತು ಲೇಖಕರ ಬಗ್ಗೆ ಸುಲಭ ಸಾಧ್ಯವಾದ ಸಾಹಿತ್ಯ ಸಿಗಬಹುದು. ೧೨ ನೇ ಶತಮಾನದ ಈ ದಾರ್ಶನಿಕನ ಬಗೆಗೆ ವಿವಿಧ ಭಾಷೆಗಳಲ್ಲಿ ರಚಿತವಾದ ಸಾಹಿತ್ಯ ಕೃತಿಗಳ ಪರಿಚಯವನ್ನು ಗುಂಜಾಳರು ಈ ಗ್ರಂಥಸೂಚಿಯಲ್ಲಿ ನೀಡಿದ್ದಾರೆ. ಗುಂಜಾಳರು ಇದೇ ಲೇಖಕನ ಸಹಾಯದಿಂದ ಇಂಗ್ಲೀಷಿನಲ್ಲಿ ' ಲಿಂಗಾಯತ ಬಿಬ್ಲಿಯಾಗ್ರಫಿ ' ಎಂಬ ಗ್ರಂಥ ಪ್ರಕಟಿಸಿದ್ದಾರೆ (೧೯೮೯). ಇದು ಒಂದು ರೀತಿಯಲ್ಲಿ ' ಬಸವ ಸಾಹಿತ್ಯದರ್ಪಣ ' ದ ವಿಸ್ತೃತ ಗ್ರಂಥ.

೪.೧.೧೦ : ಇತ್ತೀಚೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯ ' ಪುಸ್ತಕ ಮಾಹಿತಿ ' ೧೯೯೩ ರಲ್ಲಿ ಪ್ರಾರಂಭವಾಗಿ, ದಾಪುಗಾಲಿಡುತ್ತಿದೆ. ಅಲ್ಲದೆ ' ಕನ್ನಡ ಅಧ್ಯಯನ '; ' ದ್ರಾವಿಡ ಅಧ್ಯಯನ '; ' ಅಭಿವೃದ್ಧಿ ಅಧ್ಯಯನ '; ಜಾನಪದ ಕರ್ನಾಟಕ, ವಿವಿಧ ಪಟ್ಟಿಕೆಗಳಲ್ಲಿನ ವಿಮರ್ಶೆ, ಸಾದರ ಸ್ವೀಕಾರ ಇತ್ಯಾದಿಗಳನ್ನು ಅವಲೋಕಿಸಿದರೆ ಕನ್ನಡ ಪುಸ್ತಕ ಪ್ರಕಟಣೆ ಬೆಳೆದಿದೆಯಾದರೂ ಒಗ್ಗೂಡಿಸುವಿಕೆಯಿಲ್ಲ. ಇದೆ ಜೂನ್ ೨೬, ೨೦೦೨ ರ ಎಲ್ಲ ಇಲಾಖೆಗಳ,

ವಿಶ್ವವಿದ್ಯಾಲಯಗಳ, ಅಕಾಡೆಮಿಗಳ ಸಮನ್ವಯ ಸಮಿತಿ ರಚಿಸಿ ಇದರಿಂದ ' ಗ್ರಂಥಸೂಚಿ ಹೊರತರಲಾಗುವದು. ಎಂದು ಕನ್ನಡ ಸಂಸ್ಕೃತಿ ಸಚಿವರು ಆದೇಶ ಹೊರಡಿಸಿದ್ದಾರೆ ಮತ್ತು ಪುಸ್ತಕ ಪ್ರಾಧಿಕಾರ ಅಧ್ಯಕ್ಷರು ಪ್ರಥಮ ಸಭೆ ನಡೆಸಿದ್ದೇವೆ ಎಂದು ಪತ್ರಿಕಾ ಪ್ರಕಟಣೆ ನೀಡಿದ್ದಾರೆ. ಕನ್ನಡದಲ್ಲಿ ಇದೊಂದು ಒಳ್ಳೆಯ ಬೆಳವಣಿಗೆ.

೪.೧.೧೧ : ಮುದ್ರಿತ ಮತ್ತು ಪ್ರಕಟಿತ ಗ್ರಂಥಗಳ ಸೂಚಿಗಳು ಈ ರೀತಿ ಲಭ್ಯವಿದ್ದರೆ, ಹಸ್ತಪ್ರತಿಗಳಿಗೆ ಮೀಸಲಾದ ಕೆಲವು ಉತ್ಕೃಷ್ಟ ಕಾರ್ಯಗಳು ಕನ್ನಡದಲ್ಲಿ ನಡೆದಿವ. ಇದರಲ್ಲಿ ಅಮುದ್ರಿತ ತಾಳೆಗರಿ ಮೇಲೆ ಲಿಖಿತ ಕೈಬರಹ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಗಳು ಸೇರ್ಪಡೆಯಾಗುತ್ತವೆ. ಸೂಚೀಕರಣ ಜ್ಞಾನ ಮತ್ತು ಕ್ರಿಯೆಗೆ ಇಲ್ಲಿ ನೀಡಿದ ವಿವರಣೆಗಳು, ಇಂದಿನ ಕಾಲಕ್ಕೂ ಪ್ರಸ್ತುತವೆನಿಸಿವೆ. ಇಂತಹ ಅನೇಕ ಉತ್ಕೃಷ್ಟ ಕಾರ್ಯಗಳು ಬಹುಕಾಲದಿಂದ. ಕರ್ನಾಟಕದ ಹೊರಗೂ ಮತ್ತು ಒಳಗೂ ನಡೆದುಬಂದಿದೆ. ರಾಜ್ಯದ ಮತ್ತು ರಾಷ್ಟ್ರದ ಹಸ್ತಪ್ರತಿ ಗ್ರಂಥಸಂಗ್ರಹದ ಬಹುಪಾಲು ಕನ್ನಡ ಭಾಷೆಯ ಸೂಚಿಗಳ ವಿಪುಲ ಸಂಗ್ರಹ ನಮ್ಮಲ್ಲಿದೆ.

ನಮ್ಮ ರಾಜ್ಯದ ಒಳಗೆ, ಮೈಸೂರಿನ " ಪ್ರಾಚ್ಯ ಮತ್ತು ಸಂಶೋಧನಾ ಸಂಸ್ಥೆ " ಮತ್ತು ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಆವರಣದಲ್ಲಿಯ " ಕನ್ನಡ ಸಂಶೋಧನಾ ಸಂಸ್ಥೆ " ಇವೆರಡರಲ್ಲಿ ತಾಳೆಗರಿ ಗ್ರಂಥ.

ತಾಮ್ರಪಟ ಮತ್ತು ಇತರೆ ಮಾಧ್ಯಮದಲ್ಲಿ ರಚಿತವಾದ ಗ್ರಂಥಗಳ ಸಂಗ್ರಹವಿದೆ. ರಾಜ್ಯದ ಹೊರಗೆ, ಮದ್ರಾಸಿನ ಓರಿಯಂಟಲ್ ಮ್ಯಾನ್‌ಸ್ಕ್ರಿಪ್ಟ್ ಗ್ರಂಥಾಲಯ ಮತ್ತು ಉಸ್ಮಾನಿಯಾ ವಿಶ್ವವಿದ್ಯಾಲಯದ ಇವೆರಡೂ ಸಂಸ್ಥೆಗಳಲ್ಲಿ ಸಹ ಕನ್ನಡದ ಹಸ್ತಪ್ರತಿಗಳ ಸಂಗ್ರಹ ಇದೆ. ಇವೆರಡರಲ್ಲಿ ಅನೇಕ ಸಣ್ಣಪುರಣ ಪ್ರಾಚ್ಯ ವಸ್ತುಸಂಗ್ರಹಾಲಯಗಳೊಡಗೂಡಿ. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು ಪ್ರಕಟಿಸಿವೆ. ಇವುಗಳೊಂದಿಗೆ ಅನೇಕ ವ್ಯಕ್ತಿಗಳು, ಸಂಶೋಧಕರು ಆಸಕ್ತಿ ವಹಿಸಿ, ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಕಾರ್ಯ ಮುಂದುವರಿಸಿಕೊಂಡು ಬಂದಿದ್ದಾರೆ. ಇದೀಗ ಕರ್ನಾಟಕದ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಿಂದ ವೀರಶೈವ ಧರ್ಮವನ್ನು ಕುರಿತ ಹಸ್ತಪ್ರತಿಗಳ ಸೂಚಿಯೊಂದು ಪ್ರಕಟವಾಗಿದೆ.

ಗ್ರಂಥಸೂಚಿ ಕಾರ್ಯ ಯಾವುದೇ ಕಾಲಕ್ಕೆ ಸೀಮಿತವೂ ಅಲ್ಲ ಮತ್ತು ಅದನ್ನು ಯಾವುದೇ ಕಾಲಕ್ಕೆ ನಿಲ್ಲಿಸುವ ಪ್ರಮೇಯವೂ ಒದಗದು. ಎಲ್ಲಿಯವರೆಗೆ, ಗ್ರಂಥರಚನೆ, ಪ್ರಕಟನೆಗಳು ಮತ್ತು ಗ್ರಂಥಾಲಯಗಳು ಅದನ್ನು ಪಡೆಯುವ ಕಾರ್ಯದಲ್ಲಿ ನಿರತವಾಗಿರುತ್ತವೆಯೊ ಅಲ್ಲಿಯತನಕ ಈ ಕಾರ್ಯ ಸಹ ನಿರಂತರವಾಗಿ ನಡೆಯುತ್ತದೆ. ಹಿಂದೆ ಆದ ಕಾರ್ಯ ಎಷ್ಟು ಸಮರ್ಪಕವು ಎಂಬುದರ ವಿಮರ್ಶೆ ಅಥವಾ ಟೀಕೆ ಅನಗತ್ಯ. ಮುಂದೆ ಆಗಬೇಕಾದ. ನಡೆಯಬೇಕಾದ ನಡೆಸಿಕೊಂಡು ಹೋಗಬೇಕಾದ ಕಾರ್ಯದ ಕಡೆಗೆ ಗಮನ ಹರಿಸುವುದು ಒಳ್ಳೆಯದು. ಕರ್ನಾಟಕ ರಾಜ್ಯ ಸಾರ್ವಜನಿಕ ಗ್ರಂಥಾಲಯ ಇಲಾಖೆ ಈ ವೇದಿಕೆಯಲ್ಲಿ ಕಾರ್ಯಪ್ರವೃತ್ತರಾಗಬೇಕಾದುದು ಸೂಕ್ತ.

ಈಗಾಗಲೇ ಅದು ತನ್ನ ಪರಿಮಿತಿಯಲ್ಲಿ ಸಣ್ಣದೊಂದು ಕಾರ್ಯ ನಡೆಸಿಕೊಂಡು ಹೋಗುತ್ತಿದೆ. ಅದರ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡು ಈ ಕಾರ್ಯದಲ್ಲಿ, ಅಡಚಣೆ, ವ್ಯಾಪ್ತಿ ಬೇರೆ ಬೇರೆ ವ್ಯಕ್ತಿ, ಸಂಸ್ಥೆ ಮತ್ತಿತರರು ನಡೆಸುವ ಕಾರ್ಯದಲ್ಲಿ, ಅಪರಿಪೂರ್ಣತೆ ಮತ್ತಿತರ ನ್ಯೂನತೆಗಳಿರುವುದು ಸಹಜ. ಆದರೆ ಸಾರ್ವಜನಿಕ ಗ್ರಂಥಾಲಯ ಇಲಾಖೆ, ಈ ಎಲ್ಲವನ್ನು ಸರಿಪಡಿಸಿ ಕಾರ್ಯದ ಪುನರಾವರ್ತನೆಯಾಗುವುದನ್ನು ತಪ್ಪಿಸಿ ಕೇವಲ ತನ್ನದೇ ವ್ಯಾಪ್ತಿಯಲ್ಲಿ ಪರಿಪೂರ್ಣವಾಗಿ ನಡೆಸುವುದು ಎಲ್ಲ ದೃಷ್ಟಿಯಿಂದ ಸಮಂಜಸ.

## ೪.೨ : ಸೂಚಿಗಳ ಇತ್ತೀಚಿಗಿನ ಬೆಳವಣಿಗೆ

ಸೂಚಿಗಳ ಇತ್ತೀಚಿಗಿನ ಬೆಳವಣಿಗೆಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಕನ್ನಡ ಸಾಹಿತ್ಯ ಸಂದರ್ಭಗಳಲ್ಲಿ ಮಾಹಿತಿ ಸ್ಫೋಟದಿಂದ ವಸ್ತುಗಳು ಎಲ್ಲೆಲ್ಲಿ ಅಡಗಿಕೊಂಡಿವೆ ? " ಹೇಗೆ ಮತ್ತು ಎಲ್ಲಿ ? " ಎಂಬ ಪ್ರಶ್ನೆಗಳು ಸದಾ ಎಲ್ಲರನ್ನು ಕಾಡುತ್ತವೆ. "ನಮಗೆ ಕೆಲ ಮಾಹಿತಿ ಮೂಲಗಳಿಂದ ಅರಿವಿರಬಹುದು. ಅಥವಾ ಆವಶ್ಯಕ ಮಾಹಿತಿಯನ್ನು ಹೇಗೆ ಮತ್ತು ಎಲ್ಲಿ ಪಡೆಯಬಹುದು ಎಂಬುದರ ಬಗ್ಗೆ ಗ್ರಾಹ್ಯವಿರಬಹುದು" ಇದು ಡಾ. ಸ್ಯಾಮ್ಯುಯೇಲ್ ಜಾನ್ಸ್‌ನ್‌ರ ಒಂದು ವ್ಯಾಖ್ಯೆಯ ತಿರುಳು. ಈ ಪ್ರಶ್ನೆಗಳಿಗೆ "ಸಂಘಟಿತ ಮಾಹಿತಿ ನಿಯಂತ್ರಣ ವ್ಯವಸ್ಥೆಯೇ" ಸಮರ್ಪಕ ಉತ್ತರ. ವಿಳಂಬವಿಲ್ಲದೆ ಮಾಹಿತಿಯನ್ನು ಪಡೆಯುವ ಕಾರ್ಯ ಹಿಂದಿಗಿಂತಲೂ ಈಗ ಅವಶ್ಯ ಇದೆ. ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ರಚಿತವಾದ ಮುಖ್ಯ ಬೆಳವಣಿಗೆಗಳನ್ನು ಗಮನಿಸಿ ಕನ್ನಡ ಸಾಹಿತ್ಯದಲ್ಲಿ ರಚಿತಗೊಂಡ ಗ್ರಂಥಸೂಚಿಗಳನ್ನು, ಅವಕ್ಕೆ ಪೂರಕವಾಗಿರುವ ಸಾರಸಂಗ್ರಹಗಳನ್ನು, ಭಾರತದಲ್ಲಿ ಅದರಲ್ಲೂ ಕನ್ನಡದಲ್ಲಿ ರಚನೆಗೊಂಡಿರುವ ಸಾಹಿತ್ಯ ಸಂದರ್ಭದ ಸೂಚಿಗಳನ್ನು, ವಿಶೇಷಗಳನ್ನು ಇಲ್ಲಿ ಚರ್ಚಿಸಲಾಗಿದೆ. ಭಾರತೀಯ ಗ್ರಂಥಸೂಚಿಯಿಂದ, ಕನ್ನಡ ಗ್ರಂಥಸೂಚಿಯ ರಚನೆಗೆ ಪ್ರೇರಕ ಅಂಶಗಳನ್ನು, ಪುಸ್ತಕ ಮಾಹಿತಿ, ಆಕರ ಸೂಚಿಗಳ ಪ್ರಯತ್ನಗಳನ್ನು ಈ ಅಧ್ಯಾಯದಲ್ಲಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ.

## ೪.೨.೧ : ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಮತ್ತು ವಿಕಾಸ

ಪಾಂಡಿತ್ಯಪೂರ್ಣ ಯತ್ನದ ಫಲವಾಗಿ ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಇತ್ತೀಚಿಗೆ ಮಾತ್ರ ಬೆಳೆದಿದೆ. ಭಾರತ ಸ್ವತಂತ್ರವಾಗುವ ಮುನ್ನ ಕೆಲವೇ ಗ್ರಂಥಸೂಚಿ ಸಾಧನಗಳಿದ್ದುದು ಗ್ರಂಥಸೂಚಿಗಳ ಪ್ರಮಾಣ ವರ್ಷಗಳನ್ನು ನೋಡಿದರೆ ತಿಳಿಯುತ್ತದೆ. ಸಾಧಾರಣ ಮಾತುಗಳಲ್ಲಿ ಹೇಳುವುದಾದರೆ ಗ್ರಂಥಸೂಚಿಗಳೆಂದು ಕರೆಯುವ ಈ ಪುಸ್ತಕಗಳು ಪುಸ್ತಕಗಳ ಪಟ್ಟಿಗಳಾಗಿದ್ದು ಗ್ರಂಥಸೂಚಿ ಸಾಧನಗಳಾಗಿ ಹೆಚ್ಚು ಉಪಯೋಗಾರ್ಹವಾಗಿರಲಿಲ್ಲ. ಅವು ಸಮಗ್ರವಾಗಿಲ್ಲ ಮತ್ತು ಇತ್ತೀಚಿನ ಮಾಹಿತಿಗಳನ್ನು ಪಡೆದಿಲ್ಲ. ಆದರೆ ಅವು ಪೂರ್ವವ್ಯಾಪ್ತಿಯುಳ್ಳ ಗ್ರಂಥಸೂಚಿಗಳ

ರಚನೆಗೆ ಮುಖ್ಯ ಆಧಾರ ಸಾಮಗ್ರಿಗಳಾಗಿರುತ್ತವೆ. ಗ್ರಂಥಸೂಚಿಗಳ ವ್ಯವಸ್ಥೆ ಹಾಗೂ ಹತೋಟಿಗೆ ಸರಕಾರ ನಡೆಸಿದ ಪ್ರಥಮ ವ್ಯವಸ್ಥಿತ ಯತ್ನವೆಂದರೆ ೧೯೫೭ ರಲ್ಲಿ ಆರಂಭವಾದ ಭಾರತ ರಾಷ್ಟ್ರೀಯ ಗ್ರಂಥಸೂಚಿ ಎಂದು ಧಾರಾಳವಾಗಿ ಹೇಳಬಹುದು.

ಸಂಶೋಧನ ಕೇಂದ್ರಗಳಾಗಿರುವ ದೊಡ್ಡ ಹಾಗೂ ವ್ಯವಸ್ಥಿತ ಗ್ರಂಥಾಲಯಗಳಿರುವ ದೇಶಗಳಲ್ಲಿ ಗ್ರಂಥಸೂಚಿಗಳ ಪ್ರಾಮುಖ್ಯ ಮನವರಿಕೆಯಾಗಿದೆ. ಈ ಶತಮಾನದ ಆರಂಭದವರೆಗೆ ಭಾರತದಲ್ಲಿದ್ದ ಗ್ರಂಥಾಲಯಗಳ ಸಂಖ್ಯೆ ಕಡಿಮೆ; ಸುಮಾರಾಗಿ ದೊಡ್ಡದಾಗಿದ್ದ ಗ್ರಂಥಾಲಯಗಳ ಸಂಖ್ಯೆಯನ್ನು ಬೆರಳುಗಳಲ್ಲಿ ಎಣಿಸಬಹುದಾದಷ್ಟು ಅಲ್ಪ. ಸಾಕ್ಷರತೆ ಹುಟ್ಟಿದಂತೆ ಪ್ರಾದೇಶಿಕ ಭಾಷೆಗಳು ಅಭಿವೃದ್ಧಿ ಹೊಂದಿದಂತೆ, ಪುಸ್ತಕಗಳೂ ವಾರ್ತಾಪತ್ರಗಳೂ ಹೆಚ್ಚಿದಂತೆ ಗ್ರಂಥಾಲಯಗಳ ಸಂಖ್ಯೆಯೂ ಹೆಚ್ಚಿದೆ. ಗ್ರಂಥಾಲಯಗಳ ಚಳುವಳಿ ಮುನ್ನಡೆದಂತೆ ಗ್ರಂಥಸೂಚಿ ರಚನಾ ಕಾರ್ಯಕ್ಕೆ ಪ್ರೋತ್ಸಾಹ ಸಿಕ್ಕಿದಂತಾಯಿತು. ಆಧುನಿಕ ಗ್ರಂಥಾಲಯ ಚಳುವಳಿ ಆರಂಭವಾದಾಗಿನಿಂದ ಈ ಕ್ಷೇತ್ರದಲ್ಲಿ ವ್ಯಕ್ತಿಗಳಿಂದಲೂ ಸಂಸ್ಥೆಗಳಿಂದಲೂ ಕಾರ್ಯವನ್ನು ಈ ಲೇಖನ ಅವಲೋಕಿಸುತ್ತಿದೆ.

ಬರೋಡ ಸಂಸ್ಥಾನದಲ್ಲಿ ೧೯೧೦ ರಲ್ಲಿ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತರುವಾಗ ಭಾರತದಲ್ಲಿ ಆಧುನಿಕ ಗ್ರಂಥಾಲಯ ಚಳವಳಿ ಆರಂಭವಾಯಿತೆನ್ನಬಹುದು. ಅದಕ್ಕೆ ಹಿಂದೆ ಗ್ರಂಥಾಲಯಗಳು ಇರಲಿಲ್ಲವೆಂದಲ್ಲ. ವಿಶ್ವವಿದ್ಯಾನಿಲಯಗಳ ಗ್ರಂಥಾಲಯಗಳು, ಕಾಲೇಜು ಗ್ರಂಥಾಲಯಗಳು ಪೌರ ಸಭೆಗಳು ನಡೆಸುತ್ತಿದ್ದ ಗ್ರಂಥಾಲಯಗಳು ಮತ್ತು ಚಂದಾ ಹಣ ವಸೂಲಿ ಮಾಡಿ ಪುಸ್ತಕ ಎರವಲು ಕೊಡುತ್ತಿದ್ದ ಗ್ರಂಥಾಲಯಗಳು ಇದ್ದವು. ಆದರೆ ಭಾರತದಲ್ಲಿ ಎಲ್ಲಿಯೂ ಗ್ರಂಥಾಲಯಗಳ ಸ್ಥಾಪನೆ ಮತ್ತು ನಿರ್ವಹಣೆಗೆ ಯೋಜಿತ ವ್ಯವಸ್ಥೆ ಇರಲಿಲ್ಲ. ಈ ರೀತಿ ಆಧುನಿಕ ಗ್ರಂಥಾಲಯ ಚಳವಳಿಯನ್ನು ಆರಂಭಿಸಿದ ಗೌರವ ಬರೋಡದ ಮಹಾರಾಜ ಸಯ್ಯಾಜಿರಾವ ಗಾಯಕವಾಡರಿಗೆ ಸಲ್ಲಬೇಕು. ಹಳ್ಳಿಗಳಲ್ಲಿ ಪಟ್ಟಣಗಳಲ್ಲಿ ಗ್ರಂಥಾಲಯಗಳನ್ನು ಸಂಸ್ಥಾನಾದ್ಯಂತ ಸ್ಥಾಪಿಸುವ ಯೋಜನೆಯನ್ನು ಕಾರ್ಯಗತ ಮಾಡಿ ಜನರಿಗೆ ಉಚಿತವಾಗಿ ಗ್ರಂಥಾಲಯ ಸೇವೆಯನ್ನು ಒದಗಿಸಬೇಕೆಂಬ ಸ್ಫೂರ್ತಿ ಮಹಾರಾಜರಿಗೆ ದೊರಕಿದ್ದು ಅಮೆರಿಕದ ಸಂಯುಕ್ತ ಸಂಸ್ಥಾನವನ್ನು ಸಂದರ್ಶಿಸಿದಾಗ. ಆಗ ಅಲ್ಲಿಯ ವಿಲಿಯಂ ವುಲ್ಫನ್‌ಸನ್ ಬೋರ್ಡೆನ ಎಂಬ ಗ್ರಂಥಾಲಯ ಪರಿಣತರನ್ನು ಭಾರತಕ್ಕೆ ಕರೆತಂದು ಬರೋಡಾ ಸಂಸ್ಥಾನದಲ್ಲಿ ಗ್ರಂಥಾಲಯ ಶಾಖೆಯನ್ನು ಸ್ಥಾಪಿಸಿ ವ್ಯವಸ್ಥಿತಗೊಳಿಸಲು ಆರಂಭಿಸಿದರು. ೧೯೧೦ ರಲ್ಲಿ ಹೊಸದಾಗಿ ಸ್ಥಾಪಿತವಾದ ರಾಜ್ಯ ಗ್ರಂಥಾಲಯ ಶಾಖೆಯ ನಿರ್ದೇಶಕರಾಗಿ ಬೋರ್ಡಿನ ಅಧಿಕಾರ ವಹಿಸಿಕೊಂಡರು. ೧೯೧೦ ರಿಂದ ೧೯೧೩ ರ ವರೆಗೆ ಬೋರ್ಡಿನ ಕೇಂದ್ರ ಗ್ರಂಥಾಲಯವನ್ನು ಸ್ಥಾಪಿಸಿ ರಾಜ್ಯ ಸರಕಾರದ ಧನಸಹಾಯ ಪಡೆದ ಉಚಿತ ಸಾರ್ವಜನಿಕ ಗ್ರಂಥಾಲಯ ವ್ಯವಸ್ಥೆಯನ್ನು ರೂಪಿಸಿ, ಸಂಚಾರಿ ಗ್ರಂಥಾಲಯಗಳನ್ನು ಆರಂಭಿಸಿದರು.

ಕೇಂದ್ರ ಗ್ರಂಥಾಲಯದ ಸಿಬ್ಬಂದಿಗೂ ಗ್ರಂಥಾಲಯ ಅಭಿವೃದ್ಧಿ ಕಾರ್ಯಕ್ರಮ ನಡೆಸುವ ಇತರರಿಗೂ ಗ್ರಂಥಾಲಯ ತರಬೇತಿ ತರಗತಿಗಳನ್ನಾರಂಭಿಸಿದರು.

ಮಹಾರಾಜರು ಲಕ್ಷ್ಮಿ ವಿಲಾಸ ಅರಮನೆಯಲ್ಲಿ ಖಾಸಗಿಯಾಗಿ ಹೊಂದಿದ್ದ ಗ್ರಂಥಾಲಯವನ್ನು ೧೯೧೨ ರಲ್ಲಿ ಕೇಂದ್ರ ಗ್ರಂಥಾಲಯಕ್ಕೆ ಕೊಟ್ಟರು. ೧೮೬೬, ೧೮೬೭ ಮತ್ತು ೧೯೧೦ ರಲ್ಲಿ ಅರಮನೆ ಗ್ರಂಥಾಲಯದ ಇಂಗ್ಲೀಷ ಪುಸ್ತಕ ಸೂಚಿಗಳು ಪ್ರಕಟವಾದವು. ಈ ರಾಜ್ಯ ಗ್ರಂಥಾಲಯ ಕೇಂದ್ರ ಗ್ರಂಥಾಲಯಕ್ಕೆ ವರ್ಗಾವಣೆಯಾದ ಅನಂತರ ಕೇಂದ್ರ ಗ್ರಂಥಾಲಯ ತಾನು ಶೇಖರಿಸಿದ ಹೊಸ ಪುಸ್ತಕಗಳಿಗೆ ಸೂಚಿಗಳನ್ನು ವರ್ಗೀಕೃತ ರೀತಿಯಲ್ಲಿ ಟಿಪ್ಪಣಿಗಳೊಡನೆ ಪ್ರಕಟಿಸಿ ಇಂಗ್ಲೀಷ ಪುಸ್ತಕಸೂಚಿಗೆ ಪುರವಣಿಗಳನ್ನು ಹೊರಡಿಸಿತು. ಇದಲ್ಲದೇ ಕೆಲವು ವಿಶಿಷ್ಟ ವಿಷಯಗಳಲ್ಲಿ ಕೇಂದ್ರ ಗ್ರಂಥಾಲಯ ನಾಲ್ಕು ಗ್ರಂಥಸೂಚಿಗಳನ್ನು ತಯಾರಿಸಿ ಪ್ರಕಟಿಸಿತು.

ರಾಜ್ಯ ಗ್ರಂಥಾಲಯ ಶಾಖೆಯೊಡನೆ ಸಹಕರಿಸಲು ಬರೋಡ ರಾಜ್ಯ ಗ್ರಂಥಾಲಯಗಳಿಗೆ ಬೇಕಾಗುವ ಪುಸ್ತಕಗಳು ನಿಯತಕಾಲಿಕೆಗಳು ಮತ್ತಿತರ ಸಾಧನಗಳನ್ನು ಸುಲಭ ಬೆಲೆಯಲ್ಲಿ ಒದಗಿಸಲು ಒಂದು ಸಹಕಾರ ಸಂಘವನ್ನು ಸ್ಥಾಪಿಸಿತು. ಇದಲ್ಲದೇ ಈ ಸಂಸ್ಥೆ ಪುಸ್ತಕ ಪ್ರಕಟಣೆ ಆರಂಭಿಸಿ ಕೆಲವೇ ವರ್ಷಗಳಲ್ಲಿ ೮,೦೦೦ ಗುಜರಾತಿ ಪುಸ್ತಕಗಳ ವರ್ಗೀಕೃತ ಸೂಚಿಯನ್ನು ಬಹುಶಃ ಭಾರತದಲ್ಲೆ ಮೊದಲ ಬಾರಿಗೆ ಪ್ರಕಟಿಸಿತು. ಇದಲ್ಲದೆ ಇದು ಗುಜರಾತಿನಲ್ಲಿರುವ ಗ್ರಂಥಾಲಯಗಳ ವಿಲಾಸ ಪುಸ್ತಕವನ್ನು ಗುಜರಾತಿನ ಪುಸ್ತಕಗಳ ವರ್ಗೀಕರಣಕ್ಕೆ ಪರಿಷ್ಕೃತ ವರ್ಗೀಕರಣ ವ್ಯವಸ್ಥೆಯನ್ನು ಪ್ರಕಟಿಸಿತು.

ಅಮೆರಿಕದ ಲೈಬ್ರರಿ ಆಫ್ ಕಾಂಗ್ರೆಸ್ಸಿನಲ್ಲಿ ನಡೆಯುವ ಗ್ರಂಥಾಲಯ ಚಟುವಟಿಕೆಗಳನ್ನು ಬರೋಡ ಗ್ರಂಥಾಲಯ ವ್ಯವಸ್ಥೆಯ ಆಳಿತಗಾರರು ಗಮನವಿಟ್ಟು ನೋಡುತ್ತಿದ್ದರು. ಸಣ್ಣ ಪ್ರಮಾಣದಲ್ಲಾದರೂ ಕೇಂದ್ರ ಗ್ರಂಥಾಲಯದ ಪರಾಮರ್ಶನ ಹಾಗೂ ಎರವಲು ಶಾಖೆಯಲ್ಲಿನ ಮರಾಠಿ ಹಾಗೂ ಗುಜರಾತಿ ಪುಸ್ತಕಗಳ ವರ್ಗೀಕೃತ ಪುಸ್ತಕ ಸೂಚಿಯನ್ನು ಪ್ರಕಟಿಸಲು ಯತ್ನ ಮಾಡಿದರು. ಇದಲ್ಲದೇ ಆರಿಸಿ ೮,೦೦೦ ಶ್ರೇಷ್ಠ ಗುಜರಾತಿ ಪುಸ್ತಕಗಳ ಪಟ್ಟಿಯನ್ನು ಪ್ರಕಟಿಸಿ ಇವುಗಳಿಗಾಗಿ ಮುದ್ರಿತ ಪತ್ರಕಗಳನ್ನು ತಯಾರಿಸಿ, ದೊಡ್ಡ ಗ್ರಂಥಾಲಯಗಳಿಗೆ ಮಾರಿದರು.

ಇನ್ನೊಂದು ಮುಖ್ಯ ಹೆಜ್ಜೆ ಗ್ರಂಥಸೂಚಿ ಹಾಗೂ ಗ್ರಂಥಾಲಯ ಆಡಳಿತವನ್ನು ಕುರಿತು ಗ್ರಂಥಗಳ ಶೇಖರಣೆ. ಇದರಲ್ಲಿ ಮುಖ್ಯವಾದವು ೧೮೦೧ ರಿಂದ ೧೯೧೦ ರ ವರೆಗೆ ಗ್ರಂಥಾಲಯಕ್ಕೆ ಸೇರಿದ ಇಂಗ್ಲೀಷ ಪುಸ್ತಕಸೂಚಿ ೧೮೭೬ ರಿಂದ ೧೯೧೦ ರ ವರೆಗಿನ ಅಮೆರಿಕನ್ ಪುಸ್ತಕಸೂಚಿ, ೧೮೦೨ ರಿಂದ ೧೯೧೬ ರ ವರೆಗಿನ ವಿಶ್ವ ನಿಯತಕಾಲಿಕೆಗಳ ಸೂಚಿಗಳು, ಅನೇಕ ವಿಷಯಗಳ ಗ್ರಂಥಸೂಚಿಗಳು, ೧೮೮೧ ರಿಂದ ೧೯೧೫ ರ ವರೆಗೆ

ಬ್ರಿಟಿಷ್ ಮ್ಯೂಸಿಯಂ ಗ್ರಂಥಾಲಯಕ್ಕೆ ಸೇರಿದ ಆಧುನಿಕ ಪುಸ್ತಕಗಳ ಪಟ್ಟಿ ೧೦೮ ಸಂಪುಟಗಳಲ್ಲಿನ ಬ್ರಿಟಿಷ್ ಮ್ಯೂಸಿಯಂ ಪುಸ್ತಕಸೂಚಿ. ಈ ರೀತಿಯ ಸಂಗ್ರಹ ಭಾರತದ ಇನ್ನಾವ ಗ್ರಂಥಾಲಯದಲ್ಲೂ ಆಗ ಇರಲಿಲ್ಲ.

ಭಾರತದಲ್ಲಿ ಇಪ್ಪತ್ತನೆಯ ಶತಮಾನದ ಮೊದಲ ದಶಕದ ನಾನಾ ಕಾರಣಗಳಿಂದ ಬಹು ಮುಖ್ಯವಾದದ್ದು. ರಾಷ್ಟ್ರೀಯ ಶಿಕ್ಷಣಕ್ಕಾಗಿ ಚಳವಳಿ ಆರಂಭವಾದುದಲ್ಲದೆ ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿಯೂ ಕಡ್ಡಾಯವಾಗಿಯೂ ಮಾಡಬೇಕೆಂದು ಗೋಖಲೆಯವರ ಯತ್ನ ನಡೆದುದೂ ಆಗಲೇ. ಈ ದಶಕದಲ್ಲಿ ಭಾರತೀಯ ವಿಶ್ವವಿದ್ಯಾನಿಲಯಗಳ ಅಯೋಗ ಹಾಗೂ ಕಲ್ಕತ್ತ ವಿಶ್ವವಿದ್ಯಾನಿಲಯದ ಆಯೋಗ ನೇಮಕವಾದವು. ೧೯೦೪ ಹಾಗೂ ೧೯೧೩ ರಲ್ಲಿ ಸರಕಾರ ತನ್ನ ಶಿಕ್ಷಣ ನೀತಿಯನ್ನು ಬದಲಾಯಿಸಿತು. ಇದರಿಂದ ಶಿಕ್ಷಣ ಪ್ರಗತಿ ಹೊಂದಿತು. ಭಾರತದ ಅನೇಕ ಮೇಧಾವಿಗಳು ಜಗದ್ವಿಖ್ಯಾತರಾದರು. ದೇಶದಲ್ಲಿ ನವೋತ್ಸಾಹ ಮೂಡಿತು.

ಕಲ್ಕತ್ತ, ಮದ್ರಾಸ, ಮುಂಬಯಿ – ಈ ಪ್ರೆಸಿಡೆನ್ಸಿ ರಾಜಧಾನಿಗಳಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾಗಿ, ಪಾಶ್ಚಾತ್ಯದೇಶಗಳಲ್ಲಿ ತರಬೇತಿ ಹೊಂದಿದ ವಿದ್ವಾಂಸರು ವಿಶ್ವವಿದ್ಯಾನಿಲಯ ಗ್ರಂಥಾಲಯಗಳ ಹಾಗೂ ಸಾರ್ವಜನಿಕ ಗ್ರಂಥಾಲಯಗಳ ವ್ಯವಸ್ಥೆಗೆ ಗಮನವಿತ್ತರು. ಬ್ರಿಟಿಷ್ ಮ್ಯೂಜಿಯಂ, ಬ್ಲಾಡಿಯನ್ ಗ್ರಂಥಾಲಯ ಅವರಿಗೆ ಮಾದರಿಗಳಾಗಿದ್ದವು. ಬ್ರಿಟಿಷ್ ಮ್ಯೂಸಿಯಂ ಗ್ರಂಥಾಲಯದ ಮಾದರಿಯಲ್ಲಿ ೧೯೦೨ ರಲ್ಲಿ ಕಲ್ಕತ್ತದಲ್ಲಿ ಇಂಪೀರಿಯಲ್ ಗ್ರಂಥಾಲಯದ ಸ್ಥಾಪನೆಗೆ ಭಾರತದ ಮಿತ್ರನೂ ಬುದ್ಧಿಶಾಲಿಯೂ ಆದ ಲಾರ್ಡ್ ಕರ್ಜನ್ ಬೆಂಬಲವಿತ್ತು. ಸರಕಾರಿ ಗೆಝೆಟ್ಟಿನಲ್ಲಿ ತಿಳಿಸಿರುವಂತೆ " ಈ ಗ್ರಂಥಾಲಯ ವಿದ್ಯಾರ್ಥಿಗಳಿಗೆ ಪರಾಮರ್ಶನಕ್ಕಾಗಿ ಅಭ್ಯಾಸ ಸ್ಥಳವಾಗಿರುವುದಲ್ಲದೆ. ಭಾರತದ ಮುಂದಿನ ಚರಿತ್ರಕಾರರು ವೀಕ್ಷಿಸಲು ಓದಲು ಬೇಕಾದ ಎಲ್ಲ ಸಾಮಗ್ರಿಗಳನ್ನೂ ಒಳಗೊಂಡ ಆಕರ ಶಾಲೆಯಾಗಿರುವಂತೆ ಭಾರತವನ್ನು ಕುರಿತ ಪ್ರತಿಯೊಂದು ಕೃತಿಯನ್ನೂ ಎಲ್ಲ ಕಾಲದಲ್ಲೂ ಇಲ್ಲಿ ಶೇಖರಿಸಲಾಗುವುದು. "

ಭಾರತದಲ್ಲಿ ತಂಜಾವೂರ, ಸರಸ್ವತಿ ಮಹಲ್ ಗ್ರಂಥಾಲಯ ಪಾಟ್ನಾದ ಖುದಾಬಕ್ಷಾ ಗ್ರಂಥಾಲಯ, ಕಲ್ಕತ್ತದ ಏಷ್ಯಾಟಿಕ್ ಸೊಸೈಟಿ ಗ್ರಂಥಾಲಯ, ಇಂಪೀರಿಯಲ್ ಗ್ರಂಥಾಲಯ, ಮುಂಬಯಿಯಲ್ಲಿನ ರಾಯಲ್ ಏಷ್ಯಾಟಿಕ್ ಸೊಸೈಟಿ ಗ್ರಂಥಾಲಯ, ವಿಶ್ವವಿದ್ಯಾನಿಲಯಗಳ ಹಾಗೂ ಸರ್ಕಾರಿ ಗ್ರಂಥಾಲಯಗಳಲ್ಲಿ ಅಮೂಲ್ಯವಾದ ಕೈ ಬರಹ ಪ್ರತಿಗಳು, ಪುಸ್ತಕಗಳು ಪ್ರಕಟನೆಗಳು ಹೇರಳವಾಗಿವೆ. ದುರಾದೃಷ್ಟವಶಾತ್ ಈ ಗ್ರಂಥಾಲಯಗಳಲ್ಲಿ ವಿಳಾಸ ಪುಸ್ತಕವಿಲ್ಲ, ಕೈಪಿಡಿಗಳಿಲ್ಲ, ಪುಸ್ತಕ ಸೂಚಿಗಳಿಲ್ಲ, ಸರಿಯಾದ ವ್ಯವಸ್ಥಿತ ಆಡಳಿತವಿಲ್ಲ. ಗ್ರಂಥಾಲಯಗಳ ನಡುವೆ ಸಹಕಾರವಂತೂ ಕೇಳರಿಯದ ಮತ್ತು ಇದರಿಂದಾಗಿ ಸಂಶೋಧಕರು ದೇಶದ ಗ್ರಂಥಾಲಯಗಳಲ್ಲಿನ ಪುಸ್ತಕ ಮತ್ತಿತರ ಸಾಮಗ್ರಿಗಳ ಪೂರ್ಣ ಉಪಯೋಗ ಪಡೆಯದಂತೆ ಆಗಿದೆ. ಈ ತೊಂದರೆಗಳನ್ನು ಪರಿಹರಿಸಲು ಭಾರತ

ಸರಕಾರದ ಶಿಕ್ಷಣ ಕಮೀಷನರ ಹೆನ್ರಿ ಷಾರ್ಪ ಕೆಲವು ಆಸಕ್ತ ಜನರ ಸಭೆಯನ್ನು ಕರೆದರು. ಲಾಹೋರಿನಲ್ಲಿ ೧೯೧೮ ರಲ್ಲಿ ನಡೆದ ಈ ಸಭೆಯಲ್ಲಿ ಖ್ಯಾತಿವೆತ್ತ ಗ್ರಂಥಪಾಲರು, ಶಿಕ್ಷಣವೇತ್ತರು ಮತ್ತು ಆಡಳಿತಗಾರರು ಭಾಗವಹಿಸಿದ್ದರು. ಗ್ರಂಥಾಲಯಗಳ ತರಬೇತು ವಿಜ್ಞಾನದ ನಿಯತಕಾಲಿಕೆಗಳ ಸಂಯುಕ್ತ ಸೂಚಿಯ ರಚನೆ, ಗ್ರಂಥಾಲಯಗಳ ನಡುವಣ ಸಹಕಾರ ಇವುಗಳನ್ನು ಚರ್ಚಿಸಲಾಯಿತು. ಭಾರತದಲ್ಲಿ ಈ ರೀತಿ ಸಮ್ಮೇಳನ ನಡೆದುದು ಇದೇ ಮೊದಲು. ಇದರಿಂದ ಉಪಯುಕ್ತ ಫಲಿತಾಂಶ ಹೊರಹೊಮ್ಮಲಿಲ್ಲ. ಆದರೆ ಪ್ರಚಲಿತ ಗ್ರಂಥಾಲಯಗಳಲ್ಲಿ ಆಕರಗಳು, ಅನುಕೂಲಗಳ ಬಗ್ಗೆ ಸಮಾಚಾರ ವಿನಿಮಯವಾಯಿತು.

೧೯೩೦ ರಲ್ಲಿ ಏಷ್ಯದ ಶಿಕ್ಷಣ ಸಮ್ಮೇಳನ ಕಾಶಿಯಲ್ಲಿ ಸೇರಿತು. ಇದರ ಅಂಗವಾಗಿ ನಡೆದ ಗ್ರಂಥಾಲಯದ ಸೇವಾ ವಿಭಾಗ ಗ್ರಂಥಾಲಯಗಳಿಗೂ, ಗ್ರಂಥಾಲಯದ ಉಪಯೋಗ ಮಾಡುವವರಿಗೂ ಭಾಗವಹಿಸುವ ಅವಕಾಶವಿದ್ದಿತು. ಬರೋಡದ ಗ್ರಂಥಾಲಯಗಳ ಮುಖ್ಯಾಧಿಕಾರಿ ನೂಟಿನ ಮೋಹನದತ್ ಅಧ್ಯಕ್ಷರಾಗಿದ್ದರು. ಹಾಗೂ ಮದ್ರಾಸ ವಿಶ್ವವಿದ್ಯಾನಿಲಯ ಗ್ರಂಥಾಲಯದ ಎಸ್. ಆರ್. ರಂಗನಾಥನ್ ಕಾರ್ಯದರ್ಶಿಯಾಗಿಯೂ ಕಾಶಿ ಹಿಂದೂ ವಿಶ್ವವಿದ್ಯಾನಿಲಯ ಗ್ರಂಥಾಲಯದ ಡಿ. ಸುಬ್ರಹ್ಮಣ್ಯಂ ಸ್ಥಳೀಯ ಕಾರ್ಯದರ್ಶಿಯಾಗಿಯೂ ಆಯ್ಕೆಯಾದರು.

ಅಮೆರಿಕ, ಬ್ರಿಟನ್, ಜರ್ಮನಿ, ಚೀನ, ಜಪಾನ ಮತ್ತು ಭಾರತ ದೇಶಗಳಿಂದ ನಾನಾ ಪ್ರತಿನಿಧಿಗಳು ಗ್ರಂಥಾಲಯ ಕಾರ್ಯದ ಮೇಲೆ ೫೬ ಪ್ರಬಂಧಗಳನ್ನು ಓದಿದರು. ಎಸ್. ಆರ್. ರಂಗನಾಥನ್ " ಭಾರತಕ್ಕೊಂದು ಮಾದರಿ ಗ್ರಂಥಾಲಯ ಕಾನೂನು " ಎಂಬ ತಮ್ಮ ಮೂಲಭೂತ ಪ್ರಬಂಧವನ್ನು ಓದಿ ಇದನ್ನು ಮಸೂದೆಯ ರೂಪದಲ್ಲಿ ಭಾರತ ಸರಕಾರಕ್ಕೆ ೧೯೩೩ ರಲ್ಲಿ ಒಪ್ಪಿಸಿದರು. ಆದರೆ ಅವರ ಪ್ರಯತ್ನ ಫಲಿಸಲಿಲ್ಲ. ಗ್ರಂಥಾಲಯ ಕಾನೂನು ರೂಪಗೊಳ್ಳಲು ಯತ್ನವನ್ನು ಮುಂದುವರಿಸಿದರೂ ಭಾರತ ಸ್ವತಂತ್ರವಾಗುವವರೆಗೆ ಅವರ ಕನಸು ಈಡೇರಲಿಲ್ಲ. ಮದರಾಸ ರಾಜ್ಯದಲ್ಲಿ ಸಾರ್ವಜನಿಕ ಗ್ರಂಥಾಲಯಗಳನ್ನು ಸ್ಥಾಪಿಸಲು ಹಾಗೂ ಸಮಗ್ರ ಗ್ರಾಮೀಣ ಹಾಗೂ ನಗರ ಗ್ರಂಥಾಲಯ ಸೇವಾ ವ್ಯವಸ್ಥೆಗಾಗಿ ಕಾನೂನು ೧೯೪೮ ನೇ ಜನೇವರಿ ೨೭ ರಂದು ಗವ್ಹರ್ನರ್ ಜನರಲ್‌ರ ಒಪ್ಪಿಗೆ ಪಡೆಯಿತು. ಆರು ವರ್ಷಗಳ ಅನಂತರ ಸಾರ್ವಜನಿಕ ಗ್ರಂಥಾಲಯ ಕಾನೂನನ್ನು ರೂಪಿಸಿದ ರಾಜ್ಯವೆಂದರೆ ಹೈದರಾಬಾದ ಒಂದೇ. ಹಲವು ಉತ್ಸಾಹಿಗಳ ಗುಂಪುಗಳ ಒತ್ತಡದ ಫಲವಾಗಿ ಈ ಕಾನೂನು ಜಾರಿಗೆ ಬಂದಿತು. ೧೯೬೫ ರಲ್ಲಿ ಮೈಸೂರು ರಾಜ್ಯದಲ್ಲೂ ೧೯೬೭ ರಲ್ಲಿ ಮಹಾರಾಷ್ಟ್ರದಲ್ಲೂ ಸಾರ್ವಜನಿಕ ಗ್ರಂಥಾಲಯ ಕಾನೂನು ಜಾರಿಗೆ ಬಂದಿತು.

ರಂಗನಾಥನ್‌ರವರು " ದಕ್ಷಿಣ ಏಷ್ಯಾದಲ್ಲಿ ಪಾಂಡಿತ್ಯಪೂರ್ಣ ನಿಯತಕಾಲಿಕೆಗಳ ಸಂಯುಕ್ತಸೂಚಿಯ ಮುನ್ನುಡಿಯಲ್ಲಿ ಆ ಸಮ್ಮೇಳನದಲ್ಲಿ ಭಾರತ ಸಂಯುಕ್ತ ಪುಸ್ತಕ ಸೂಚಿಯನ್ನು ಕುರಿತು ನಿರ್ಣಯ ಮಂಡಿಸಲು ತಮಗೆ ಅವಕಾಶ ಮೊಟ್ಟ ಮೊದಲನೇ ಬಾರಿಗೆ ಬಂದಿತೆಂದು ತಿಳಿಸಿದ್ದಾರೆ.

ಇಲ್ಲಿ ಯೋಚಿಸಲಾದ ಸಂಯುಕ್ತಸೂಚಿ ಆಧಾರ ಸ್ವರೂಪವುಳ್ಳಂಥದು. ಅದು ರಾಷ್ಟ್ರದ ಎಲ್ಲ ಪುಸ್ತಕ ಸಂಪತ್ತನ್ನೂ ಒಳಗೊಂಡಿರಬೇಕು (ಪುಸ್ತಕಗಳು, ನಿಯತಕಾಲಿಕೆಗಳು) ಮೊದಲನೆಯ ಅಖಿಲ ಭಾರತ ಗ್ರಂಥಾಲಯ ಸಮ್ಮೇಳನಗಳಲ್ಲಿ ಸಹ ಇದೇ ರೀತಿಯ ನಿರ್ಣಯ ಸ್ವೀಕಾರವಾಗಿ ಪುಸ್ತಕ ಸೂಚಿಯ ವ್ಯಾಪ್ತಿಯನ್ನು ಭಾರತದ ಗ್ರಂಥಾಲಯಗಳಲ್ಲಿನ ವಿಜ್ಞಾನದ ನಿಯತಕಾಲಿಕೆಗಳು ಹಾಗೂ ವಾರ್ಷಿಕಗಳಿಗೆ ಮಾತ್ರ ಸೀಮಿತವಾಗಿರಬೇಕೆಂದು ನಿರ್ಧರಿಸಲಾಯಿತು. ಎಲ್ಲಾ ವಿಧದಲ್ಲೂ ಇದನ್ನು ಪ್ರಾಯೋಗಿಕ ದೃಷ್ಟಿಯಿಂದ ನೋಡಲಾಗಿದೆ.

ಈ ನಿರ್ಣಯದಂತೆ ಭಾರತ ಗ್ರಂಥಾಲಯ ಸಂಸ್ಥೆ ಅಂತರ್ ವಿಶ್ವವಿದ್ಯಾನಿಲಯ ಸಮಿತಿಯನ್ನು ಸಂಯುಕ್ತ ಪುಸ್ತಕ ಸೂಚಿಯನ್ನು ತಯಾರಿಸುವಂತೆ ಪ್ರಾರ್ಥಿಸಿತು. ಅದರಂತೆ ಆ ಸಮಿತಿ ಮಾಹಿತಿಗಳನ್ನು ಕಲೆ ಹಾಕಲು ಆರಂಭಿಸಿ ಪುಸ್ತಕ ಸೂಚಿಯ ಸಂಕಲನಕ್ಕೆ ಮತ್ತು ಪ್ರಕಟನೆಗೆ ಹಲವು ಖ್ಯಾತ ಗ್ರಂಥಾಲಯಗಳ ಅಭಿಪ್ರಾಯವನ್ನು ಕೇಳಿತು. ಕಡೆಯದಾಗಿ ಸಮಿತಿ ಪುಸ್ತಕ ಸೂಚಿಯ ಸಂಕಲನ ಹಾಗೂ ಪ್ರಕಟಣೆಯನ್ನು ಭಾರತ ಗ್ರಂಥಾಲಯ ಸಂಸ್ಥೆಗೆ ವಹಿಸಿತು. ಈ ಸಂಸ್ಥೆ ಕೂಡಿಹಾಕಿದ್ದ ಮಾಹಿತಿಗಳನ್ನೆಲ್ಲ ಪಂಜಾಬ ವಿಶ್ವವಿದ್ಯಾನಿಲಯದ ಗ್ರಂಥಾಲಯ ಶ್ರೀ. ಎಸ್. ಎಸ್. ಸೇಠರವರಿಗೆ ವಹಿಸಿತು. ೧೯೪೭ ರ ವರೆಗೆ ಏನೂ ಪ್ರಗತಿ ಸಾಧ್ಯವಾಗಲಿಲ್ಲ. ಭಾರತ ವಿಭಜನೆಯಾದಾಗ ಲಾಹೋರಿನಲ್ಲಿ ನಡೆದ ಗಲಭೆಗಳಲ್ಲಿ ಆ ಮಾಹಿತಿಗಳೆಲ್ಲಾ ಕಳೆದು ಹೋದುವೆಂದು ವರದಿಯಾಯಿತು. ಕಡೆಗೆ ೧೯೪೯ ರಲ್ಲಿ ಈ ಸಂಕಲನ ಹಾಗೂ ಪ್ರಕಟನ ಕಾರ್ಯವನ್ನು ರಂಗನಾಥನ್‌ರವರಿಗೆ ವಹಿಸಲಾಯಿತು. ಆಗ ದೆಹಲಿಯಲ್ಲಿ ಯುನೆಸ್ಕೋ ವಿಜ್ಞಾನ ಸಹಕಾರಿ ಕಚೇರಿಯ ದೆಹಲಿ ಶಾಖೆಯ ಅಧಿಕಾರಿ ಡಾ. ವುಲ್‌ಸ್ಕಿಯವರ ಆಸಕ್ತಿಯ ಫಲವಾಗಿ ಯುನೆಸ್ಕೋದಿಂದ ಧನಸಹಾಯ ಪಡೆದು ಈ ಪುಸ್ತಕಸೂಚಿ ಪ್ರಕಟವಾಯಿತು. ಅನೇಕ ಸಂಯುಕ್ತ ಸೂಚಿಗಳಿಗೆ ವಿಭಾಗಿತ ಸೂಚಿಗಳಿಲ್ಲ. " ಯೂನಿಯನ್ ಕ್ಯಾಟಲಾಗ್ ಆಫ್ ಲರ್ನ್‌ಡ ಪಿರಿಯಾಡಿಕಲ್ ಪಬ್ಲಿಕೇಶನ್ಸ್ ಇನ್ ಸೌತ್ ಏಶಿಯಾ " ದಲ್ಲಿ ಲೇಖನಗಳು ವರ್ಗೀಕೃತವಾಗಿ ಕೋಲನ ವರ್ಗೀಕರಣ ಪದ್ಧತಿಯ ರೀತಿಯಲ್ಲಿ ಜೋಡಿಸಲ್ಪಟ್ಟಿವೆ. ೧೯೫೩ ರಲ್ಲಿ ಪ್ರಕಟವಾದ ಮೊದಲನೆಯ ಭಾಗ ಭೌತ ಹಾಗೂ ಜೀವವಿಜ್ಞಾನದ ನಿಯತಕಾಲಿಕೆಗಳನ್ನು ಮಾತ್ರ ಒಳಗೊಂಡು ಭಾರತ ಹಾಗೂ ದಕ್ಷಿಣ ಏಷ್ಯಾದ ಗ್ರಂಥಾಲಯಗಳಲ್ಲಿ ಈ ನಿಯತಕಾಲಿಕೆಗಳ ಯಾವ ಸಂಪುಟಗಳು ದೊರೆಯುತ್ತವೆ ಎಂಬುದನ್ನು ಸೂಚಿಸುತ್ತದೆ. ಪ್ರಕೃತಿ ವಿಜ್ಞಾನದ ನಿಯತಕಾಲಿಕೆಗಳ ಸಂಯುಕ್ತ ಸೂಚಿ ಹಲವಾರು ಇದ್ದರೂ ಅವುಗಳ ವ್ಯಾಪ್ತಿ ಮತ್ತು ಅವುಗಳ ಕೊಡುವ ಮಾಹಿತಿ ಕೆಲವೇ ಭೌಗೋಳಿಕ ಪ್ರದೇಶಗಳಿಗೆ ಹಾಗೂ ವಿಷಯಕ್ಕೆ ಸೀಮಿತವಾಗಿವೆ.

ಗ್ರಂಥಾಲಯ ಸೇವೆಯಲ್ಲಿ ಆಸಕ್ತಿ ತಳೆದ ಆಂಧ್ರರು ಜನರಲ್ಲಿ ಗ್ರಂಥಾಲಯ ಚಳವಳಿಯನ್ನು ಕುರಿತು ಪ್ರಚಾರ ಮಾಡಲು ಸೂಕ್ತ ವಾತಾವರಣವಿರುವುದನ್ನು ಕಂಡು ೧೯೧೪ ರಲ್ಲಿ ಆಂಧ್ರದೇಶ ಗ್ರಂಥಾಲಯ ಸಂಘವನ್ನು

ಸ್ಥಾಪಿಸಿದರು. ಬರೋಡಾ ಸಂಸ್ಥಾನದಲ್ಲಿ ಗ್ರಂಥಾಲಯಗಳ ಬೆಳವಣಿಗೆಗೆ ಸ್ಫೂರ್ತಿ ದೊರೆತಿದ್ದು ಮಹಾರಾಜರಿಂದ : ಆದರೆ ಆಂಧ್ರದಲ್ಲಿ ಗ್ರಂಥಾಲಯ ಚಳವಳಿಗೆ ಜನಗಳ ಬೆಂಬಲವಿತ್ತು. ಆಂಧ್ರ ಗ್ರಂಥಾಲಯ ಸಂಸ್ಥೆಯೇ ಭಾರತದಲ್ಲಿ ಸ್ಥಾಪಿತವಾದ ಮೊದಲ ಗ್ರಂಥಾಲಯ ಸಂಘ. ಈ ಸಂಘ ಇದುವರೆಗೆ ೧೩ ಪುಸ್ತಕಗಳನ್ನು ಪ್ರಕಟಿಸಿದೆ : ಹಾಗೂ ಗ್ರಂಥಾಲಯ ಸರ್ವಸ್ವಮು ಎಂಬ ನಿಯತಕಾಲಿಕೆಯನ್ನು ಪ್ರಕಟಿಸುತ್ತಿದೆ. ೧೯೨೪ ರಿಂದ ೧೯೩೬ ರ ವರೆಗೆ ಇಂಡಿಯನ್ ಲೈಬ್ರರಿ ಜರ್ನಲ್ ಎಂಬ ನಿಯತಕಾಲಿಕೆಯನ್ನು ಅನಿಯತ ಕಾಲದ ಅಂತರದಲ್ಲಿ ಪ್ರಕಟಿಸಿತು. ಎರಡೂ ಪತ್ರಿಕೆಗಳ ಧ್ಯೇಯ ಗ್ರಂಥಾಲಯ ಚಳವಳಿಗೆ ಉತ್ತೇಜನೆ.

ಪ್ರಾದೇಶಿಕ ಸಂಘಗಳಲ್ಲಿ ಅತ್ಯಂತ ಚಟುವಟಿಕೆಯದು ೧೯೨೮ ರಲ್ಲಿ ರಂಗನಾಥನ್‌ರವರು ಸ್ಥಾಪಿಸಿದ ಮದ್ರಾಸ ಗ್ರಂಥಾಲಯ ಸಂಘ. ಈ ಸಂಘ ನಾನಾ ಮಾಲೆಗಳನ್ನು ಆರಂಭಿಸಿ ಅನೇಕ ಪುಸ್ತಕಗಳನ್ನು ಪ್ರಕಟಿಸಿತು. ಇದಲ್ಲದೆ ಸಂಘ ವಿದ್ಯಾಭ್ಯಾಸ ಇಲಾಖೆಯ ಡೈರೆಕ್ಟರ್ ಸಹಕಾರದೊಂದಿಗೆ ಪುಸ್ತಕ ಪಟ್ಟಿಗಳನ್ನೂ ಶ್ರೀ ಕುಮಾರರಾಜಾ ಮುತ್ತಯ್ಯ ಚಿಟ್ಟಿಯಾರರ ನೆರವಿನಿಂದ ತಮಿಳು ಪುಸ್ತಕಗಳ ಸಮಗ್ರ ಸೂಚಿಯನ್ನು ಪ್ರಕಟಿಸಿತು.

ಉಳಿದ ಪ್ರಾದೇಶಿಕ ಗ್ರಂಥಾಲಯಗಳ ಸಂಘಗಳಲ್ಲಿ ಮುಖ್ಯವಾದುದು ಬಂಗಾಳ ಗ್ರಂಥಾಲಯದ ಸಂಘ. ಬಂಗಾಳದಲ್ಲಿ ಗ್ರಂಥಾಲಯ ಚಳುವಳಿಯಲ್ಲಿ ಆಸಕ್ತರಾದ ಮಣೀಂದ್ರದೇವ ರಾಯ ೧೯೨೭ ರಲ್ಲಿ ಈ ಸಂಘವನ್ನು ಸ್ಥಾಪಿಸಿದರು. ಈ ಸಂಘ ಸಾರ್ವಜನಿಕ ಹಾಗೂ ಶಾಲಾ ಗ್ರಂಥಾಲಯಗಳಿಗೆ ಕೊಳ್ಳಲು ಯೋಗ್ಯವಾದ ಪುಸ್ತಕಗಳ ಪಟ್ಟಿಯನ್ನು ಪ್ರಕಟಿಸುತ್ತಿದೆ. ೧೯೩೬ ರಲ್ಲಿ ಈ ಸಂಘ ಬಂಗಾಳದ ನಾನಾ ಭಾಗಗಳಲ್ಲಿ ಗ್ರಂಥಾಲಯಗಳ ಸ್ಥಿತಿಯನ್ನು ಕುರಿತು ಸಮೀಕ್ಷೆ ನಡೆಸಿತು. ೧೯೪೨ ರಲ್ಲಿ ಬಂಗಾಳ ಗ್ರಂಥಾಲಯಗಳ ಸ್ಥಿತಿಯನ್ನು ಕುರಿತು ಸಮೀಕ್ಷೆ ನಡೆಸಿತು. ೧೯೪೨ ರಲ್ಲಿ ಬಂಗಾಳ ಗ್ರಂಥಾಲಯಗಳ ವಿಳಾಸ ಪುಸ್ತಕವನ್ನು ಪ್ರಕಟಿಸಿತು. ಈ ಪುಸ್ತಕದ ಎರಡನೆಯ ಆವೃತ್ತಿಯ ತಯಾರಿಕೆ ನಡೆದಿದೆ. ಬಂಗಾಳ ನಿಯತಕಾಲಿಕೆಗಳ ಲೇಖನ ಸೂಚಿಯನ್ನು 'ಗ್ರಂಥಾಗಾರ' ಎಂಬ ನಿಯತಕಾಲಿಕೆಯ ಮೂಲಕ ನಡೆಸುತ್ತಿದೆ. ಈ ಕೆಲಸ ಮುಂದುವರಿದರೆ ಬಂಗಾಳಿ ಮಾತನಾಡುವ ಪಂಡಿತರಿಗೆ ಮಹದುಪಕಾರವಾಗುತ್ತದೆ.

ಈ ಸಂಘಗಳ ಮಾಲೆಯಲ್ಲಿ ಮುಂದಿನದು ೧೯೩೩ ರಲ್ಲಿ ಅಣ್ಣಾಮಲೈ ವಿಶ್ವವಿದ್ಯಾನಿಲಯದ ಎಂ. ಓ. ಥಾರಮಸ ಮತ್ತು ಕಲ್ಕತ್ತದ ಇಂಪೀರಿಯಲ್ ಲೈಬ್ರರಿಯ ಅಧಿಕಾರಿ ಖಾನ್ ಬಹದ್ದೂರ ಅಸಾದುಲ್ಲಾರವರ ಯತ್ನದಿಂದಾಗಿ ರೂಪುಗೊಂಡ ಅಖಿಲ ಭಾರತ ಗ್ರಂಥಾಲಯ ಸಂಘ ಮಾಡರ್ನ್ ಲೈಬ್ರರಿಯನ್ ಪತ್ರಿಕೆಯ ೧೯೩೩ ರ ಜನೇವರಿಯ ಸಂಚಿಕೆಯಲ್ಲಿ ಥಾಮಸ್‌ರವರು ತೀಕ್ಷ್ಣವಾದ ಲೇಖನವೊಂದನ್ನು ಬರೆದು ಅದರಲ್ಲಿ ಬ್ರಿಟಿಷ್ ಗ್ರಂಥಾಲಯ ಸಂಘದ ಮುಖ್ಯ ಕಾರ್ಯಗಳನ್ನು ವಿವರಿಸಿ ಭಾರತ ಗ್ರಂಥಾಲಯ ಸಂಘ ಸ್ಥಾಪಿತವಾಗಬೇಕೆಂದು

ಆಗ್ರಹ ಮಾಡಿದರು. ಆದರಲ್ಲಿ ಅವರು ಈ ರೀತಿ ಬರೆದರು. ನಾವು ಒಗ್ಗಟ್ಟಾಗುವುದು ನಮ್ಮ ಕ್ಷೇಮಸಾಧನೆಗಾಗಿ ಅಲ್ಲ. ಅದೂ ಪ್ರಾಸಂಗಿಕವಾಗಿರಬಹುದು. ನಮ್ಮ ಮುಖ್ಯ ಉದ್ದೇಶ ಗ್ರಂಥಾಲಯ ಚಳುವಳಿಯನ್ನು ಉದ್ದೇಶಿಸಿ ಮುಂದುವರಿಸುವುದು.

೧೯೨೨ ರ ಸಪ್ಟಂಬರ್ ೧೨ ರಂದು ಕಲ್ಕತ್ತದ ಏಷ್ಯಾಟಿಕ್ ಸೊಸೈಟಿ ಹಾಲ್‌ನಲ್ಲಿ ಅಖಿಲ ಭಾರತ ಗ್ರಂಥಾಲಯ ಸಮ್ಮೇಳನ ಮೊದಲನೆಯ ಬಾರಿ ನಡೆಯಿತು. ಆರಂಭ ಹಾಗೂ ಮುಕ್ತಾಯ ಸಭೆಗಳ ಅಧ್ಯಕ್ಷತೆಯನ್ನು ಥಾಮಸ್‌ರವರು ವಹಿಸಿದ್ದರು. ವಿಷಯ ನಿಯಾಮಕ ಸಮಿತಿಯ ಸಭೆಗಳ ಅಧ್ಯಕ್ಷತೆ ವಹಿಸಿದ್ದವರು ಪಂಜಾಬ ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ. ಎ. ಸಿ. ವುಲ್ನರ್. ಥಾಮಸ್‌ರವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಗ್ರಂಥಾಲಯ ಸಂಘ ಯೋಚಿಸಿರುವ ಕಾರ್ಯಗಳ ಸ್ಥೂಲ ವಿವರಣೆಯನ್ನಿತ್ತರು. ಭಾರತದಲ್ಲಿ ಗ್ರಂಥಾಲಯ ಚಳವಳಿಯನ್ನು ಪ್ರೋತ್ಸಾಹಿಸುವುದು : ತರಬೇತಿ ಹೊಂದಿದ ಗ್ರಂಥಾಲಯಗಳಿಗೆ ಉತ್ತೇಜನ ಗ್ರಂಥಾಲಯಶಾಸ್ತ್ರದಲ್ಲಿ ಸಂಶೋಧನೆ ಗ್ರಂಥಾಲಯಗಳ ಸ್ಥಾನಮಾನಗಳ ಅಭಿವೃದ್ಧಿ ಇವುಗಳನ್ನು ಕುರಿತು ಸಲಹೆ ಮಾಡಿದರು. ಅಲ್ಲದೇ ಹಸ್ತಪ್ರತಿಗಳು ಮತ್ತು ಪುಸ್ತಕಗಳಿಗೆ ಗ್ರಂಥಸೂಚಿಗಳು, ಗ್ರಂಥಾಲಯಗಳಿಂದ ಪುಸ್ತಕಗಳನ್ನು ಎರವಲು ಪಡೆಯುವುದು, ಸಂಯುಕ್ತ ಸೂಚಿಗಳ ರಚನೆ ಮುಂತಾದ ಸಹಕಾರಿ ಚಟುವಟಿಕೆಗಳನ್ನು ಆದಷ್ಟು ಹೆಚ್ಚಿಸುವುದನ್ನೂ ಸೂಚಿಸಿದರು.

ಎರಡು ವರ್ಷಗಳ ಅನಂತರ ಲಕ್ನೋದಲ್ಲಿ ಏಪ್ರಿಲ್ ೧೯ - ೨೧ ರಲ್ಲಿ ಎರಡನೆಯ ಅಖಿಲ ಭಾರತ ಗ್ರಂಥಾಲಯ ಸಮ್ಮೇಳನ ಡಾ. ಸಿ. ಸಿ. ವುಲ್ನರ್ ಅವರ ಅಧ್ಯಕ್ಷತೆಯಲ್ಲಿ ಸೇರಿತು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಸಂಘದ ಕೆಲಸವನ್ನು ಒತ್ತಿ ಹೇಳಿ, ಸಾಂಪ್ರದಾಯಿಕ ಹಾಗೂ ಅಸಾಂಪ್ರದಾಯಿಕ ಶಿಕ್ಷಣದಲ್ಲಿ ಗ್ರಂಥಾಲಯಗಳ ಪಾತ್ರವನ್ನು ವಿವರಿಸಿದರು. ದೇಶದಲ್ಲಿ ಸಣ್ಣ ಗ್ರಂಥಾಲಯಗಳ ಜಾಲವೇ ಇರಬೇಕೆಂದೂ ರಾಜ್ಯ ವಿಶ್ವವಿದ್ಯಾನಿಲಯಗಳು ಬೆಳೆಯಬೇಕೆಂದೂ ದೇಶದ ರಾಜಧಾನಿಯಲ್ಲಿ ಅಖಿಲ ಭಾರತಕ್ಕೆ ರಾಷ್ಟ್ರೀಯ ಗ್ರಂಥಾಲಯವಿರಬೇಕೆಂದೂ ಹೇಳಿ ಇವುಗಳು ಗ್ರಂಥಾಲಯ ಚಳುವಳಿಯ ಉಗಮ ಹಾಗೂ ಸ್ಫೂರ್ತಿ ಸ್ಥಾನಗಳಾಗಬೇಕೆಂದೂ ಪ್ರತಿ ರಾಜ್ಯದಲ್ಲೂ ಗ್ರಂಥಾಲಯದ ಅಗತ್ಯವೆಂದೂ ಒತ್ತಿ ಹೇಳಿ ಗ್ರಂಥಾಲಯಗಳ ನಡುವೆ ಸಹಕಾರವನ್ನು ಹಾರೈಸಿದರು.

ಅಖಿಲ ಭಾರತ ಗ್ರಂಥಾಲಯ ಸಂಘ ಸ್ಥಾಪನೆಯಾದ ೨೭ ವರ್ಷಗಳ ಆನಂದರ ಭಾರತ ಸರಕಾರ ನೇಮಿಸಿದ ಗ್ರಂಥಾಲಯ ಸಲಹಾ ಸಮಿತಿ ಈ ರೀತಿ ಹೇಳಿದೆ.

"ಹೆಚ್ಚು ಕಡಿಮೆ ಗ್ರಂಥಾಲಯ ಸಂಸ್ಥೆಗಳು ರಕ್ತಹೀನವಾಗಿ ಬಳಿಚಿಕೊಂಡಿವೆ. ದೇಶದಲ್ಲಿ ಗ್ರಂಥಾಲಯ ಚಳವಳಿ ಸರಿಯಾಗಿ ಬೆಳೆಯದೇ ಇರುವುದು ಇದಕ್ಕೆ ಕಾರಣ. ಹೌದು, ಈ ಪರಿಸ್ಥಿತಿ ಗ್ರಂಥಾಲಯ ಸಂಘದ ಆಲಸ್ಯ ಪ್ರವೃತ್ತಿಯ ಫಲವೂ ಹೌದು. ಗ್ರಂಥಾಲಯ ಚಳವಳಿಗೆ ಶಕ್ತಿಯುತವಾದ ಗ್ರಂಥಾಲಯ ಸಂಸ್ಥೆಗಳ ನೆರವು ಮುಖ್ಯ.

ಭಾರತ ಮೊದಲನೆಯ ಯೋಜನೆಯಲ್ಲಿ ಗ್ರಂಥಾಲಯಗಳಿಗೆ ಹಣವನ್ನು ಮೀಸಲಿಡದಿದ್ದರೂ ಪ್ರಾಥಮಿಕ ಶಿಕ್ಷಣ, ಅನಕ್ಷರಸ್ಥರಿಗೆ ಸಾಮಾಜಿಕ ಶಿಕ್ಷಣ ಇವುಗಳಿಗೆ ಹಣ ನೀಡಿದುದರಿಂದ ಮುಂದಿನ ವರ್ಷಗಳಲ್ಲಿ ಗ್ರಂಥಾಲಯಗಳ ಅಭಿವೃದ್ಧಿಗೆ ಅಡಿಪಾಯ ಹಾಕಿದಂತಾಯಿತು.

ಎರಡನೆಯ ಪಂಚವಾರ್ಷಿಕ ಯೋಜನೆ (೧೯೫೫ - ೫೬) ಇನ್ನೊಂದು ಹೆಜ್ಜೆ ಮುಂದೆ ಹೋಗಿ ರಾಷ್ಟ್ರೀಯ ಕೇಂದ್ರ ಗ್ರಂಥಾಲಯ, ಕೇಂದ್ರ ಪರಾಮರ್ಶನ ಗ್ರಂಥಾಲಯಗಳ ಸ್ಥಾಪನೆಗೂ, ರಾಷ್ಟ್ರೀಯ ಗ್ರಂಥಸೂಚಿಯ ಪ್ರಕಟನೆಗೂ ಹಣ ನೀಡಿತು.

**ವಿವರಗಳು ಈ ರೀತಿ ಇವೆ :**

೧. ಕಲ್ಕತ್ತದ ರಾಷ್ಟ್ರೀಯ ಗ್ರಂಥಾಲಯದ ಅಭಿವೃದ್ಧಿ : ಮುಖ್ಯ ಕಟ್ಟಡದ ಬಡಾವಣೆ ಪುಸ್ತಕ ಸೂಚಿಯ ಪುನರ್ ವ್ಯವಸ್ಥೆ ಭಾರತೀಯ ಶಾಸ್ತ್ರದ ಗ್ರಂಥಸೂಚಿಯ ಸಂಕಲನ ರಟ್ಟು ಕಟ್ಟುವ ವಿಭಾಗ, ಮಕ್ಕಳ ವಿಭಾಗದ ಸ್ಥಾಪನೆ ರೂ. ೧೦ ಲಕ್ಷಗಳು.

೨. ಕೇಂದ್ರ ಪರಾಮರ್ಶನ ಗ್ರಂಥಾಲಯ : ಕಟ್ಟಡ ಹಾಗೂ ರಾಷ್ಟ್ರೀಯ ಗ್ರಂಥಸೂಚಿಯ ಪ್ರಕಟನೆ ರೂ. ೫೦ ಲಕ್ಷಗಳು.

೩. ಕೇಂದ್ರ ಶಿಕ್ಷಣ ಗ್ರಂಥಾಲಯ : ಕಟ್ಟಡ, ಲೇಖನಗಳ ಸೂಚಿಯ ಸೇವಾ ವಿಸ್ತರಣೆ, ಅಕಾರಾದಿ ಪುಸ್ತಕ ಸೂಚಿಯ ಪುನರ್ ವ್ಯವಸ್ಥೆ ಅಂತರ ಗ್ರಂಥಾಲಯ ಎರವಲು ಸೇವೆ ಸಾರಸಂಗ್ರಹಗಳ ವ್ಯವಸ್ಥೆ ಸಾಮಾಜಿಕ ಶಿಕ್ಷಣಸಾಹಿತ್ಯದ ಸೂಚಿ. ರೂ. ೫ ಲಕ್ಷ ೪೦ ಸಾವಿರ

೪. ಗ್ರಂಥಾಲಯಗಳ ತರಬೇತಿಗೆ ಸಂಸ್ಥೆ, ಕಟ್ಟಡ, ಸಾಮಾಜಿಕ ಶಿಕ್ಷಣ ಕಾರ್ಯಕ್ರಮಗಳಲ್ಲಿ ರಾಜ್ಯ ಜಿಲ್ಲಾ ಹಾಗೂ ತಾಲ್ಲೂಕು ಗ್ರಂಥಾಲಯಗಳ ತರಬೇತಿ ಗ್ರಾಮಗ್ರಂಥಾಲಯ ಸೇವಾ ವ್ಯವಸ್ಥೆ. ರೂ. ೧೦ ಲಕ್ಷಗಳು.

**ಒಟ್ಟು— ೭೫ ಲಕ್ಷ ೪೦ ಸಾವಿರ ರೂಪಾಯಿಗಳು**

ಪ್ರತಿ ಗ್ರಂಥಾಲಯ ಸಮ್ಮೇಳನದಲ್ಲೂ ಸರಕಾರವನ್ನು ಕೇಳುತ್ತಿದ್ದ ಬೇಡಿಕೆಯಂತೆ ಹಿಂದಿನ ಇಂಪೀರಿಯಲ್ ಗ್ರಂಥಾಲಯವನ್ನು ರಾಷ್ಟ್ರೀಯ ಗ್ರಂಥಾಲಯವನ್ನಾಗಿ ೧೯೫೧ ರಲ್ಲಿ ಸ್ಥಾಪಿಸಲಾಯಿತು. ೧೯೫೩ ರಲ್ಲಿ ಚಾರಿತ್ರಿಕ ಘಟನೆಗಳ ನೆನಪುಳ್ಳ ಬೆಲವಿಡಿಯರ್ ಕಟ್ಟಡಕ್ಕೆ ವರ್ಗಾವಣೆಯಾಯಿತು. ಅದರ ಆರಂಭೋತ್ಸವ ನಡೆಸಿದ ಆಗಿನ ಕೇಂದ್ರೀಯ ಮಂತ್ರಿ ಮೌಲಾನಾ ಅಬ್ದುಲ್ ಕಲಾಂ ಆಝಾದರು ತಮ್ಮ ಭಾಷಣದಲ್ಲಿ “ಈ ಗ್ರಂಥಾಲಯ ಅಭಿವೃದ್ಧಿ ಹೊಂದುತ್ತಾ ಕಾಲ ಕ್ರಮೇಣ ಯುರೋಪ್ ಮತ್ತು ಅಮೇರಿಕಗಳ ಅತ್ಯುತ್ತಮ ಗ್ರಂಥಾಲಯಗಳನ್ನು

ಮೀರಿಸುವಂತಾಗುವುದು ಎಂದು ಆಶಿಸುತ್ತೇನೆ. ಇದಕ್ಕಾಗಿ ಭಾರತ ಏನನ್ನಾದರೂ ಮಾಡಲು ಸಿದ್ಧ. ಹೊಸ ಪುಸ್ತಕಗಳನ್ನು ಕೊಳ್ಳಲು ಈಗಾಗಲೇ ವಾರ್ಷಿಕ ಕೊಡುಗೆಯನ್ನು ಹೆಚ್ಚಿಸಲಾಗಿದೆ ಎಂದು ಹೇಳಿದರು.

ರಾಷ್ಟ್ರೀಯ ಗ್ರಂಥಾಲಯದ ನಾನಾ ಮುಖದ ಚಟುವಟಿಕೆ ಹೆಚ್ಚಿ ೧೯೪೭ - ೬೦ ರಲ್ಲಿ ಅದರ ಹಣಕಾಸು ವ್ಯವಹಾರ ರೂ. ೧,೪೭,೩೦೦=೦೦ ರಿಂದ ೧೨,೧೬,೨೭೮=೦೦ ಕ್ಕೆ ಏರಿತು. ಅದರ ಸಿಬ್ಬಂದಿ ೨೬ ರಿಂದ ೪೨೬ ಕ್ಕೆ ಏರಿತು. ಪುಸ್ತಕಗಳ ಸಂಖ್ಯೆ ೧೦ ಲಕ್ಷದ ಹತ್ತಿರಕ್ಕೆ ಬಂತು ಇನ್ನೂ ೧೦ ಲಕ್ಷ ಪುಸ್ತಕಗಳನ್ನಿಡಲು ೩೦ ಲಕ್ಷಣ ರೂಪಾಯಿಗಳ ವೆಚ್ಚದಲ್ಲಿ ಕಟ್ಟಡವನ್ನು ಬಡಾಯಿಸಲಾಯಿತು.

೧೯೫೦ ರಲ್ಲಿ ಭಾರತೀಯ ಶಾಸ್ತ್ರದ ಗ್ರಂಥಸೂಚಿಯನ್ನು ಹಿಂದಿನ ಕಾಲದ ಪುಸ್ತಕಗಳಿಂದ ಆರಂಭಗೊಳಿಸಲಾಯಿತು. ಇದು ಟಿಪ್ಪಣಿ ಸಹಿತ ಇರುವ ಗ್ರಂಥಸೂಚಿಯಾಗಿ ೫೬ ಸಂಪುಟಗಳಲ್ಲಿ ಬರಲಿದೆ. ಇವುಗಳಲ್ಲಿ ಮಾನವಶಾಸ್ತ್ರ, ಸಸ್ಯಶಾಸ್ತ್ರ, ಬಂಗಾಳಿ ಭಾಷೆ ಸಾಹಿತ್ಯ ಇವುಗಳ ಸಂಪುಟ ಪ್ರಕಟವಾಗಿದೆ. ಪ್ರಾಚೀನ ಭಾರತ ಇತಿಹಾಸ, ಮಧ್ಯಕಾಲದ ಭಾರತೀಯ ಇತಿಹಾಸ, ಭಾರತೀಯ ಭಾಷಾಶಾಸ್ತ್ರ ಸಂಸ್ಕೃತ ಸಾಹಿತ್ಯದ ಸಂಪುಟಗಳನ್ನು ಆರಂಭಿಸಲಾಗಿದೆ. ಈ ವಿಭಾಗಗಳಲ್ಲಿ ವಿಷಯ ಪರಿಣತರು ರಾಷ್ಟ್ರೀಯ ಗ್ರಂಥಾಲಯದ ವಿಭಾಗಗಳ ಸಹಕಾರದೊಂದಿಗೆ ಕೆಲಸ ಮಾಡುತ್ತಿದ್ದಾರೆ.

ಇದಲ್ಲದೆ ವಿದ್ವಾಂಸರ ಉಪಯೋಗಕ್ಕಾಗಿ ಗ್ರಂಥಸೂಚಿಗಳನ್ನು ತಯಾರಿಸಲಾಗಿದೆ. ಕೈಗಾರಿಕಾ ಹಾಗೂ ವೈಜ್ಞಾನಿಕ ಸಂಶೋಧನ ಮಂಡಲಿಗಾಗಿ ಭಾರತೀಯ ವೈಜ್ಞಾನಿಕ ಪ್ರಕಟನೆಗಳ ವರ್ಗೀಕೃತ ಗ್ರಂಥಸೂಚಿಯನ್ನು ತಯಾರಿಸಲಾಗಿದೆ.

೧೯೫೩ ರಲ್ಲಿ ಭಾರತ ಸರಕಾರ ರಾಷ್ಟ್ರೀಯ ಸಂಸ್ಕೃತಿ ದತ್ತಿಯನ್ನು ನೇಮಿಸಿತು. ಅದರ ಉದ್ದೇಶಗಳು ಈಡೇರಲು ಲಲಿತಕಲಾ ಅಕಾಡೆಮಿ, ಸಂಗೀತ - ನಾಟಕ ಅಕಾಡೆಮಿ, ಸಾಹಿತ್ಯ ಅಕಾಡೆಮಿ ಇವುಗಳ ಸ್ಥಾಪನೆಯಾಯಿತು. ಕಡೆಯ ಸಂಸ್ಥೆ ೧೯೫೪ ರಲ್ಲಿ ಸ್ಥಾಪಿತವಾಯಿತು. ಭಾರತದ ನಾನಾ ಭಾಷೆಗಳ ಚಟುವಟಿಕೆಗಳನ್ನು ಸಮನ್ವಯಗೊಳಿಸಿ ದೇಶದ ಸಂಸ್ಕೃತಿಯ ಏಕತೆಯನ್ನು ವೃದ್ಧಿಗೊಳಿಸುವುದೇ ಸಾಹಿತ್ಯ ಅಕಾಡೆಮಿಯ ಉದ್ದೇಶ. ಇದು ಹಲವು ಉತ್ತಮ ಕೆಲಸಗಳನ್ನು ಮಾಡಿದೆ.

ಮೊದಲನೆಯದಾಗಿ ಭಾರತೀಯ ಸಾಹಿತ್ಯದ ರಾಷ್ಟ್ರೀಯ ಗ್ರಂಥಸೂಚಿಯ ತಯಾರಿಕೆ. ಭಾರತದ ಸಂವಿಧಾನದಲ್ಲಿ ಉಲ್ಲೇಖವಾಗಿರುವ ಹದಿನಾಲ್ಕು ಭಾಷೆಗಳಲ್ಲಿ ಮಾನವಶಾಸ್ತ್ರದಲ್ಲಿ ೨೦ ನೆಯ ಶತಮಾನದ ಮುಖ್ಯ ಪ್ರಕಟನೆಗಳು, ಭಾರತದಲ್ಲಿ ಭಾರತೀಯರಿಂದ ಇಂಗ್ಲೀಷ ಭಾಷೆಯಲ್ಲಿ ಬರೆದು ಪ್ರಕಟವಾದ ಪುಸ್ತಕಗಳ ಗ್ರಂಥಸೂಚಿಯ ತಯಾರಿಕೆ.

೧೯೬೩ ರಲ್ಲಿ ಪ್ರಕಟವಾದ ಮೊದಲನೆಯ ಸಂಪುಟದಲ್ಲಿ ಆಸ್ಸಾಮೀ, ಬಂಗಾಳೀ, ಇಂಗ್ಲೀಷ ಗುಜರಾತೀ ಸಾಹಿತ್ಯ ಕೃತಿಗಳ ಹೆಸರಿದೆ ಇದು ೧೯೦೧ ರಿಂದ ೧೯೫೩ ರ ಕಾಲದ ಪ್ರಕಟನೆಗಳನ್ನೊಳಗೊಂಡಿದೆ. ಪುಸ್ತಕದ ಹೆಸರು ಮತ್ತಿತರ ವಿವರಗಳು ರೋಮನ್ ಲಿಪಿಯಲ್ಲಿದ್ದು ಇಂಗ್ಲೀಷಿನಲ್ಲಿ ಟಿಪ್ಪಣಿಗಳಿವೆ. ಪ್ರತಿಯೊಂದು ಭಾಷೆಯ ಪುಸ್ತಕಗಳನ್ನು ಈ ರೀತಿ ಗುಂಪುಗಳಾಗಿ ವಿಭಾಗಿಸಿದೆ. ಸಂಕೀರ್ಣ ಕೃತಿಗಳು, ತತ್ವ ಹಾಗೂ ಮತ, ಸಮಾಜ ವಿಜ್ಞಾನ, ಭಾಷೆ, ಕಲೆ, ಸಾಹಿತ್ಯ ಚರಿತ್ರೆ, ಜೀವನ ಚರಿತ್ರೆ, ಪ್ರವಾಸ ಸಾಹಿತ್ಯ ಮತ್ತು ಇತರ ರೀತಿಯವು. ಅಧಿಕಾರಯುಕ್ತವಾಣಿಯಿರುವ ಪರಿಣಿತರು ಈ ಪುಸ್ತಕಗಳನ್ನು ಆಯ್ದು ಆ ಕಾರ್ಯದಲ್ಲಿ ಭಾಗವಹಿಸಿದ್ದಾರೆ.

ಇದೇ ರೀತಿ ಪ್ರಕಟವಾಗಿರುವ ಎರಡನೆಯ ಸಂಪುಟದಲ್ಲಿ ಹಿಂದಿ, ಕನ್ನಡ, ಕಾಶ್ಮೀರಿ, ಮಲಯಾಳಂ ಸಾಹಿತ್ಯ ಪ್ರಕಟನೆಗಳೂ ಇವೆ. ಮೂರನೆಯದರಲ್ಲಿ ಮರಾಠಿ, ಒರಿಯಾ, ಪಂಜಾಬೀ, ಸಂಸ್ಕೃತ ಸಾಹಿತ್ಯ ಪ್ರಕಟನೆಗಳೂ ನಾಲ್ಕನೆಯದರಲ್ಲಿ ಸಿಂಧಿ, ತಮಿಳು, ತೆಲಗು, ಉರ್ದು ಸಾಹಿತ್ಯ ಪ್ರಕಟನೆಗಳು ಇರುತ್ತವೆ. ಇದೇ ರೀತಿ ಅಕಾಡೆಮಿ ೧೯೬೧ ರಲ್ಲಿ ಬರಹಗಾರರ ಪರಿಚಯ ಕೋಶವನ್ನು ಪ್ರಕಟಿಸಿತು.

೧೯೫೫ ರಲ್ಲಿ ಸಪ್ಟಂಬರಿನಲ್ಲಿ ಭಾರತದ ವಯಸ್ಕರ ಶಿಕ್ಷಣ ಸಂಘ ದೆಹಲಿಯಲ್ಲಿ " ಸಾಮಾಜಿಕ ಶಿಕ್ಷಣದಲ್ಲಿ ಗ್ರಂಥಾಲಯಗಳ ಪಾತ್ರ " ಎಂಬ ವಿಚಾರಸಂಕೀರಣವನ್ನು ಏರ್ಪಡಿಸಿತು. ಭಾರತದ ಗ್ರಂಥಾಲಯಗಳ ಸ್ಥಿತಿಗತಿಗಳನ್ನು ಪರಿಶೀಲಿಸಲು ಒಂದು ಗ್ರಂಥಾಲಯ ಆಯೋಗವನ್ನು ರಚಿಸಬೇಕೆಂದು ಸಮ್ಮೇಳನ ಶಿಫಾರಸ್ಸು ಮಾಡಿತು. ಇದನ್ನು ಈ ಸಮಸ್ಯೆಯ ಅರಿವು ಇದ್ದ ಕೇಂದ್ರ ಶಿಕ್ಷಣ ಸಚಿವ ಶಾಖೆ ಒಪ್ಪಿತು. ಇದರಂತೆ ೧೯೫೬ ರಲ್ಲಿ ಬಿಹಾರದ ಶಿಕ್ಷಣ ಶಾಖೆಯ ಡೈರೆಕ್ಟರ್ ಶ್ರೀ ಕೆ. ಪಿ. ಶುಕ್ಲಾ ಅವರ ಅಧ್ಯಕ್ಷತೆಯಲ್ಲಿ ಒಂಬತ್ತು ಜನರುಳ್ಳ ಸಮಿತಿಯನ್ನು ನೇಮಿಸಿತು. ಅದರ ವಿಚಾರಣೆಗೆ ಸೇರಿದ ವಿಷಯಗಳ ಪೈಕಿ ೧) ಜನರ ಪ್ರಚಲಿತ ಓದಿಗೆ ಬೇಕಾದ ಸಾಮಗ್ರಿಗಳು ೨) ನಾನಾ ಪಂಗಡಗಳ ಜನರ ಓದಿನ ಅಭಿರುಚಿ ಇವುಗಳೂ ಇದ್ದವು. ಇದನ್ನು ಕಾರ್ಯಗತ ಮಾಡಲು ದೊಡ್ಡ ಸಂಶೋಧನ ಯೋಜನೆಯೇ ಬೇಕಾಗಿತ್ತು. ಆದ್ದರಿಂದ ಸಮಿತಿ ಈ ಕೆಳಗೆ ಸೂಚಿಸಿದ ವಿಷಯಗಳಿಗೆ ಮಾತ್ರ ಗಮನ ಕೊಟ್ಟಿತು.

೧) ಭಾರತದಲ್ಲಿ ಮುಂದೆ ಇರಬೇಕಾದ ಗ್ರಂಥಾಲಯ ವ್ಯವಸ್ಥೆ,

೨) ಗ್ರಂಥಾಲಯ ಹಾಗೂ ಸಾಮಾಜಿಕ ಶಿಕ್ಷಣ ಯೋಜನೆಯ ನಡುವಣ ಸಹಕಾರ ಮಾರ್ಗ,

೩) ಗ್ರಂಥಾಲಯ ತರಬೇತಿ ಹಾಗೂ ಅದರ ಸೇವಾ ಪರಿಸ್ಥಿತಿ,

೪) ಭಾರತದಲ್ಲಿ ಮುಂಬರುವ ಗ್ರಂಥಾಲಯ ವ್ಯವಸ್ಥೆಯ ಆಡಳಿತ ಮತ್ತು ಹಣಕಾಸು.

ಇದು ಭಾರತದಲ್ಲೇ ಪ್ರಪ್ರಥಮವಾಗಿ ಸಾರ್ವಜನಿಕ ಗ್ರಂಥಾಲಯಗಳ ಬಗ್ಗೆ ವಿಸ್ತೃತವಾಗಿ ನಡೆದ ಸಮೀಕ್ಷೆ. ಈ ವಿಷಯಗಳನ್ನು ಸಮಿತಿ ಕೂಲಂಕುಶವಾಗಿ ಪರಿಶೀಲಿಸಿತು. ಈ ಶಿಫಾರಸ್ಸಿನಂತೆ ಭಾರತದ ಗ್ರಂಥಾಲಯ ವ್ಯವಸ್ಥೆ ಪ್ರಗತಿ ಹೊಂದುತ್ತಿದೆ. ಇದರಲ್ಲಿ ಸ್ಥಳೀಯ ಪರಿಸ್ಥಿತಿಗನುಗುಣವಾಗಿ ಹಲವು ಮಾರ್ಪಾಡುಗಳು ಅನಿವಾರ್ಯ.

ಈ ಸಲಹಾ ಸಮಿತಿಯ ವರದಿಯಂತೆ ಸದಸ್ಯರು ಓದುಗರಿಗೆ ಗ್ರಂಥಗಳನ್ನು ಒದಗಿಸುವ ಕಾರ್ಯಕ್ಕೆ ಮಹತ್ವ ನೀಡಿದರು. ಅಲ್ಲದೇ ರಾಜ್ಯಗಳ ಕೇಂದ್ರ ಗ್ರಂಥಾಲಯಗಳು ತಮ್ಮ ಇತರ ಕಾರ್ಯಗಳ ಜೊತೆಗೆ ರಾಜ್ಯದ ಎಲ್ಲ ಖಾಸಗಿ ಹಾಗೂ ಸರಕಾರಿ ಪ್ರಕಟನೆಗಳ ಸಂಗ್ರಹವನ್ನು ಹೊಂದಿರಬೇಕೆಂದೂ ಗ್ರಂಥಸೂಚಿಗಳನ್ನು ಪಂಡಿತರು ಹಾಗೂ ಸಂಶೋಧಕರಿಗಾಗಿ ತಯಾರಿಸಬೇಕೆಂದು ರಾಜ್ಯದ ಮುಖ್ಯ ಗ್ರಂಥಾಲಯಗಳಲ್ಲಿನ ಪುಸ್ತಕ ಸಂಗ್ರಹಗಳಿಗೆ ಸಂಯುಕ್ತ ಸೂಚಿಯನ್ನು ತಯಾರಿಸಬೇಕೆಂದೂ ರಾಜ್ಯದ ಹೊರಗೂ ಒಳಗೂ ಅಂತರ ಗ್ರಂಥಾಲಯದ ಎರವಲು ಸೇವೆಯ ಕೇಂದ್ರವಾಗಬೇಕೆಂದೂ ಶಿಫಾರಸ್ಸು ಮಾಡಿದರು.

ಅಲ್ಲದೇ ಭಾರತ ಸರಕಾರದ ಈ ಕೆಳಕಂಡ ನಾಲ್ಕು ಗ್ರಂಥಸೂಚಿಗಳ ತಯಾರಿಕೆಯನ್ನು ಆರಂಭಿಸಬೇಕೆಂದೂ ಸೂಚಿಸಲಾಯಿತು.

೧) ವಿಶ್ವವಿದ್ಯಾಲಯ ಧನ ಆಯೋಗದ ಆಶ್ರಯದಲ್ಲಿ ಬರುವ ದೇಶದ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿನ ಪುಸ್ತಕಗಳ ಸಂಯುಕ್ತ ಸೂಚಿ :

೨) ಭಾರತ ಸರಕಾರದ ಶಿಕ್ಷಣ ಸಚಿವ ಶಾಖೆಯ ಆಶ್ರಯದಲ್ಲಿ ಸರಕಾರದ ಎಲ್ಲ ಶಾಖೆಗಳಲ್ಲಿ ಹಾಗೂ ಸಂಶೋಧನ ಗ್ರಂಥಾಲಯಗಳಲ್ಲಿರುವ ಪುಸ್ತಕಗಳ ಸಂಯುಕ್ತ ಸೂಚಿ.

೩) ರಾಷ್ಟ್ರೀಯ ಗ್ರಂಥಾಲಯದ ಆಶ್ರಯದಲ್ಲಿ ನಾನು ರಾಜ್ಯಗಳ ಕೇಂದ್ರ ಗ್ರಂಥಾಲಯಗಳಲ್ಲಿರುವ ಕೃತಿಸ್ವಾಮ್ಯ ಪುಸ್ತಕಗಳ ಸಂಯುಕ್ತ ಸೂಚಿ :

೪) ವೈಜ್ಞಾನಿಕ ಸಂಶೋಧನೆ ಹಾಗೂ ಸಂಸ್ಕೃತಿ ವಿಚಾರ ಸಚಿವ ಶಾಖೆಯ ಆಶ್ರಯದಲ್ಲಿ ಎಲ್ಲ ವಿಶ್ವವಿದ್ಯಾನಿಲಯ ಗ್ರಂಥಾಲಯಗಳು ಸಂಶೋಧನ ಗ್ರಂಥಾಲಯಗಳಲ್ಲಿರುವ ಎಲ್ಲ ವೈಜ್ಞಾನಿಕ ಹಾಗೂ ಪಾಂಡಿತ್ಯಪೂರ್ಣ ನಿಯತಕಾಲಿಕೆಗಳ ಸಂಯುಕ್ತ ಸೂಚಿ.

ಇಪ್ಪತ್ತನೆಯ ಶತಮಾನದ ಆರಂಭದಿಂದ ಭಾರತದಲ್ಲಿ ವೈಜ್ಞಾನಿಕ ಸಂಶೋಧನೆ ತೀವ್ರವಾಗಿ ಪ್ರಗತಿ ಹೊಂದಿತು. ಹಿಂದಿನ ವರ್ಷಗಳಲ್ಲಿ ವೈಜ್ಞಾನಿಕ ಸಂಶೋಧನೆ ಹಿರಿಯ ವಿಶ್ವವಿದ್ಯಾನಿಲಯಗಳಾದ ಮುಂಬಯಿ, ಕಲ್ಕತ್ತ, ಮದ್ರಾಸಗಳಲ್ಲಿ ಮಾತ್ರ ನಡೆಯುತ್ತಿತ್ತು. ಭಾರತ ಸರಕಾರ ವೈಜ್ಞಾನಿಕ ಸಂಶೋಧನೆಯಲ್ಲಿ ಆಸಕ್ತಿ ವಹಿಸಿ ದೇಶದ ಆರ್ಥಿಕ ಪ್ರಗತಿಗೆ ನೆರವಾಗಲು ಅನೇಕ ಮುಖ್ಯ ಸಂಶೋಧನ ಸಂಸ್ಥೆಗಳನ್ನು ಸ್ಥಾಪಿಸಿತು. ಸಾಧಾರಣವಾಗಿ ಹೇಳುವುದಾದರೆ ಆಗ ಭಾರತದಲ್ಲಿ ವ್ಯವಸ್ಥಿತವಾದ ಕೈಗಾರಿಕೆಗಳು ಕೆಲವೇ ಇದ್ದವು. ಕೈಗಾರಿಕಾ ವಸ್ತುಗಳಿಗೆ ಇಂಗ್ಲೆಂಡನ್ನು ಅವಲಂಬಿಸಬೇಕಾಗಿತ್ತು. ಖಾಸಗಿ ದತ್ತಿಯಿಂದ ಸ್ಥಾಪಿತವಾದ ಸಂಶೋಧನ ಸಂಸ್ಥೆಗಳೂ ಇದ್ದವು. ಬೆಂಗಳೂರಿನ ಟಾಟಾ ವಿಜ್ಞಾನ ಮಂದಿರ ಟಾಟಾ ಮನೆತನದವರಿಂದ ದತ್ತಿ ಪಡೆದು ಭಾರತ ಹಾಗೂ ಮೈಸೂರು

ಸರಕಾರದಿಂದ ಸಹಾಯ ಪಡೆದು ಮುನ್ನಡೆಯಿತು. ಇದೇ ರೀತಿ ಸ್ನಾತಕೋತ್ತರ ಸಂಶೋಧನೆಗಾಗಿ ಸ್ಥಾಪಿತವಾದ ಮತ್ತೊಂದು ಸಂಸ್ಥೆ ಸರ್ ಜಗದೀಶಚಂದ್ರ ಬೋಸರಿಂದ ಸ್ಥಾಪಿತವಾದ ಕಲ್ಕತ್ತದ ಭೋಸ ಸಂಶೋಧನಾಲಯ. ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧನಾ ಕಾರ್ಯ ಬೇಗ ಮುನ್ನಡೆಯಿತು. ಸರಕಾರ ಆರಂಭಿಸಿದ ಪಂಚವಾರ್ಷಿಕ ಯೋಜನೆಯಿಂದ ದೇಶದ ವೈಜ್ಞಾನಿಕ ಹಾಗೂ ಕೈಗಾರಿಕಾ ಚಟುವಟಿಕೆಗಳು ಹೆಚ್ಚಾಗಿವೆ.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಭಾರತದಲ್ಲಿ ವೈಜ್ಞಾನಿಕ ಪ್ರಯೋಗಾಲಯಗಳ ಸ್ಥಾಪನೆಗೆ ಯೋಜನೆಯೊಂದನ್ನು ರೂಪಿಸಲಾಯಿತು. ಹೊಸದಾಗಿ ಸ್ಥಾಪಿಸಲ್ಪಟ್ಟ ವೈಜ್ಞಾನಿಕ ಹಾಗೂ ಕೈಗಾರಿಕಾ ಸಂಶೋಧನ ಮಂಡಲಿ ಈ ಯೋಜನೆಯನ್ನು ಹಾಕಿತು. ಈ ಮಂಡಲಿಯ ಮುಖ್ಯ ಕಾರ್ಯ ವೈಜ್ಞಾನಿಕ ಹಾಗೂ ಕೈಗಾರಿಕಾ ಸಂಶೋಧನಗಳನ್ನು ಪ್ರೋತ್ಸಾಹಿಸಿ ಸಮನ್ವಯಗೊಳಿಸುವುದು. ಈ ಮಂಡಳಿಯ ಕೆಳಗೆ ೨೮ ರಾಷ್ಟ್ರೀಯ ಪ್ರಯೋಗಾಲಯಗಳೂ ಸಂಸ್ಥೆಗಳೂ ಇವೆ. ಅಲ್ಲದೇ ಈ ಮಂಡಳಿ ವಿಜ್ಞಾನಿಗಳಿಗೆ ಸಂಶೋಧನ ಸಂಸ್ಥೆಗಳಿಗೆ ವಿಶ್ವವಿದ್ಯಾಸಿಲಯುಗಳಿಗೆ ಹಣ ಸಹಾಯ ಮಾಡುತ್ತದೆ. ವಿಜ್ಞಾನಕ್ಕೆ ಸಂಬಂಧಿಸಿದ ಸಮಾಚಾರ ವಿತರಣೆಯೂ ಇದರ ಜವಾಬ್ದಾರಿ. ೧೯೫೨ ರ ವರೆಗೆ ರಾಷ್ಟ್ರೀಯ ಪ್ರಯೋಗಾಲಯಗಳಲ್ಲಿ ಮಂಡಳಿಯ ಧನ ಸಹಾಯದಿಂದ ನಡೆದ ಸಂಶೋಧನೆಗಳನ್ನು ವಿಮರ್ಶಿಸಿ ೧೯೫೪ ರಲ್ಲಿ ಪ್ರಕಟಿಸಿತು. ಇದರ ಜೊತೆಗೆ ಅನುಬಂಧದಲ್ಲಿ ವೈಜ್ಞಾನಿಕ ಹಾಗೂ ತಾಂತ್ರಿಕ ಲೇಖನಗಳ ಗ್ರಂಥಸೂಚಿ ಇದೆ ೧೯೫೫ ರ ಅನಂತರ ಮಂಡಲಿ ರಾಷ್ಟ್ರೀಯ ಸಂಶೋಧನಾಲಯಗಳು ಹಾಗೂ ತಾನು ಸಹಾಯ ನೀಡಿದ ಸಂಶೋಧನ ಕಾರ್ಯಗಳನ್ನು ಕುರಿತು ಪ್ರಕಟಿತ ಲೇಖನಗಳ ಸಾರವನ್ನು ಪ್ರಕಟಿಸಿತು. ಈ ಲೇಖನ ಸಾರಗಳು ಮಂಡಳಿಯ ತ್ರೈಮಾಸಿಕವಾದ ಜರ್ನಲ್ ಆಫ್ ಸೈಂಟಿಫಿಕ್ ಆ್ಯಂಡ್ ಇಂಡಸ್ಟ್ರಿಯಲ್ ರಿಸರ್ಚ್ ಪತ್ರಿಕೆಯಲ್ಲಿ ಪ್ರಕಟವಾಗುತ್ತವೆ.

ಇನ್ಸ್‌ಡಾಕ್ (INSDOC) ಎಂದು ಕರೆಯಲ್ಪಡುವ ಭಾರತ ರಾಷ್ಟ್ರೀಯ ವೈಜ್ಞಾನಿಕ ಪ್ರಲೇಖಗಳ ಕೇಂದ್ರ ೧೯೫೨ ರಲ್ಲಿ ಸ್ಥಾಪಿತವಾಯಿತು. ಭಾರತದಲ್ಲಿ ಪ್ರಲೇಖ ಸೇವೆಯಲ್ಲಿ ಇದೊಂದು ಮೈಲಿಗಲ್ಲು. ಯುನೆಸ್ಕೊ ಮೂರು ವರ್ಷಗಳ ಕಾಲ ವಿದೇಶಿ ತಜ್ಞರ ಸೇವೆಯನ್ನು ಕೊಟ್ಟಿದ್ದಲ್ಲದೆ ಅಧ್ಯಯನಕ್ಕಾಗಿ ೮ ಸಾವಿರ ಡಾಲರ ನೀಡಿತು. ಇನ್ಸ್‌ಡಾಕ್ ಸಂಸ್ಥೆಯ ಚಟುವಟಿಕೆಗಳು ಏಕಪ್ರಕಾರವಾಗಿ ಹೆಚ್ಚುತ್ತಿವೆ. ಸರಕಾರ ಕೊಡುವ ಸಹಾಯ ದ್ರವ್ಯದ ಮೊಬಲಗು ಏರುತ್ತಿದೆ.

ಭಾರತದಲ್ಲಿ ಉಪಯೋಗಕ್ಕೆ ಬೇಕಾಗುವ ಎಲ್ಲ ವಿಜ್ಞಾನ ನಿಯತಕಾಲಿಕೆಗಳನ್ನು ದೇಶವಿದೇಶಗಳಿಂದ ತರಿಸಿಟ್ಟುಕೊಳ್ಳುವುದು, ವಿಜ್ಞಾನಿಗಳಿಗೂ ಶಿಲ್ಪಶಾಸ್ತ್ರಜ್ಞರಿಗೂ ಅವಶ್ಯವಾದ ನಾನಾ ನಿಯತಕಾಲಿಕ ಲೇಖನಗಳ ಪ್ರಕಟನೆಯನ್ನು ಪ್ರತಿ ತಿಂಗಳೂ ಲೇಖನಗಳ ಸಾರಸಂಗ್ರಹ ಪತ್ರಿಕೆಯ ಮೂಲಕ ತಿಳಿಯಪಡಿಸುವುದು : ನಿರ್ದಿಷ್ಟ

ಪ್ರಶ್ನೆಗಳನ್ನು ಉತ್ತರಿಸುವುದು ನಿಯತಾಲಿಕೆ ಲೇಖನಗಳ ಛಾಯಾ ಪ್ರತಿಯನ್ನೊದಗಿಸುವುದು, ಲೇಖನಗಳನ್ನು ಇಂಗ್ಲೀಷೇತರ ಯೂರೋಪಿಯನ್ ಭಾಷೆ ಹಾಗೂ ಚೀನೀ, ಜಪಾನೀ ಭಾಷೆಗಳಿಂದ ಇಂಗ್ಲೀಷಿಗೆ ಭಾಷಾಂತರ ಮಾಡಿ ಒದಗಿಸುವುದು – ಇವೇ ಇನ್ಸ್‌ಡಾಕ್‌ನ ಮುಖ್ಯ ಕಾರ್ಯಗಳು. ಪ್ರಕಟಿತ ಹಾಗೂ ಅಪ್ರಕಟಿತ ವರದಿಗಳನ್ನು ನಿಕ್ಷೇಪವಾಗಿಟ್ಟು ಪ್ರಪಂಚದ ಇತರರಿಗೆ ತಿಳಿಯುವಂತೆ ಸಮಾಚಾರ ನೀಡುವುದೂ ಈ ಸಂಸ್ಥೆಯ ಜವಾಬ್ದಾರಿ.

೧೯೪೯ ರಲ್ಲಿ ಯುನೆಸ್ಕೋ ದಕ್ಷಿಣ ಏಷ್ಯಾ ದೇಶಗಳಲ್ಲಿನ ವಿಜ್ಞಾನ ನಿಯತಕಾಲಿಕೆಗಳ ಸಂಯುಕ್ತ ಸೂಚಿಯನ್ನು ಸಂಕಲಿಸಲು ಆರಂಭಿಸಿತು. ಇದನ್ನು ಇನ್ಸ್‌ಡಾಕ್ ಸಂಸ್ಥೆ ವಹಿಸಿಕೊಂಡಿತು. ೧೯೬೫ ರಿಂದ ವಿಜ್ಞಾನ ಲೇಖನಗಳ ಸಾರಸಂಗ್ರಹ ನಿಯತಕಾಲಿಕೆ ಭಾರತ ವಿಜ್ಞಾನ ಸಾರಸಂಗ್ರಹ ಆರಂಭಿಸಿದೆ. ಅದೇ ವರ್ಷದಲ್ಲಿ ಭಾರತದ ವಿಜ್ಞಾನ ನಿಯತಕಾಲಿಕೆಗಳ ವಿಳಾಸ ಪುಸ್ತಕ ಸಂಕಲಿಸಿ ೧೯೬೮ ರಲ್ಲಿ ಪರಿಷ್ಕರಿಸಿತು. ಭಾರತದ ವಿಜ್ಞಾನಿಗಳ ಸಹಾಯಕ್ಕಾಗಿ ೧೯೫೪ ರಿಂದ ೧೯೬೫ ರ ಕೊನೆಯವರೆಗೆ ಪ್ರಚಲಿತ ವಿಜ್ಞಾನ ಲೇಖನಗಳ ಪಟ್ಟಿಯನ್ನು ಪಕ್ಷ ಪತ್ರಿಕೆಯಾಗಿ ಪ್ರಕಟಿಸಿತು. ಇವುಗಳಲ್ಲದೇ ಕೆಲವು ನಿರ್ದಿಷ್ಟ ವಿಷಯಗಳಲ್ಲಿ ಪ್ರಚಲಿತ ವಿಜ್ಞಾನ ಲೇಖನಗಳನ್ನು ಸಂಗ್ರಹಿಸಿ ಪ್ರದರ್ಶಿಸಿತು.

೧) ರಾಷ್ಟ್ರೀಯ ಕಟ್ಟಡ ನಿರ್ಮಾಣ ಸಂಸ್ಥೆಯ ಚಟುವಟಿಕೆಗಳ ಸಾರಸಂಗ್ರಹ (೧೯೫೫)

೨) ಕೇಂದ್ರ ರಸ್ತೆ ನಿರ್ಮಾಣ ಸಂಶೋಧನೆ ಸಂಸ್ಥೆಯ ಚಟುವಟಿಕೆಗಳ ಸಾರಸಂಗ್ರಹ

೩) ಭಾರತದಲ್ಲಿ ಪ್ರಾಣಿಶಾಸ್ತ್ರದ ಗ್ರಂಥಸೂಚಿ (೧೯೬೪)

೪) ನೀರಾವರಿ ಹಾಗೂ ವಿದ್ಯುಚ್ಛಕ್ತಿ ಸಾರಸಂಗ್ರಹ (೧೯೪೨)

೫) ರೇಲ್ವೆ ಸಚಿವ ಶಾಖೆಯ ಅಧೀನದಲ್ಲಿರುವ ರೇಲ್ವೆಗೆ ಸಂಬಂಧಿಸಿದ ನಕ್ಷೆ ಹಾಗೂ ಮಾನವ ಪ್ರಲೇಖಗಳ ಟಿಪ್ಪಣಿ (೧೯೫೪)

೬) ಪೊಟ್ಟಣ ಕಟ್ಟುವ ಕಾರ್ಯದ ಲೇಖನದ ಸಾರಸಂಗ್ರಹ (೧೯೬೮)

೭) ದೇಶ ರಕ್ಷಣೆ, ಸಂಶೋಧನೆ ಹಾಗೂ ಅಭಿವೃದ್ಧಿ ಪ್ರಯೋಗಶಾಲೆಯ ಪ್ರಲೇಖಗಳ ಪತ್ರಿಕೆ (೧೯೬೬)

ದುರದೃಷ್ಟವಶಾತ್ ಸಮಾಜ ವಿಜ್ಞಾನ ವಿಷಯಗಳ ಪ್ರಲೇಖನ ಕಾರ್ಯ ವಿಜ್ಞಾನ ಮತ್ತಿತರ ವಿಷಯಗಳು ಗಮನಕ್ಕೆ ಬಂದಿಲ್ಲ. ಇತ್ತೀಚೆಗೆ ರಾಷ್ಟ್ರೀಯ ಸಮಾಜ ವಿಜ್ಞಾನ ಸಂಶೋಧನೆ ಮಂಡಲಿಯನ್ನು ನೇಮಿಸಿ ಅದಕ್ಕೆ ರಾಷ್ಟ್ರೀಯ ಮಟ್ಟದಲ್ಲಿ ಸಮಾಜ ವಿಜ್ಞಾನ ಲೇಖನಗಳ ಕಾರ್ಯದ ಜವಾಬ್ದಾರಿಯನ್ನು ವಹಿಸಿದೆ. ಸಧ್ಯದಲ್ಲಿ ವಿದ್ವಾಂಸರಿಗೆ ನೆರವಾಗಲು ಈ ರೀತಿ ಪ್ರಯತ್ನ ನಡೆದಿದೆ.

೧) ಭಾರತ ಶಿಕ್ಷಣ ಲೇಖನಗಳ ಸಾರಸಂಗ್ರಹ – ೧೯೫೫

೨) ಏಷ್ಯದ ಸಮಾಜಶಾಸ್ತ್ರ ಗ್ರಂಥಸೂಚಿ – ೧೯೫೨

೩) ಏಷ್ಯದ ವಿಷಯಗಳ ಪ್ರಲೇಖನಗಳು – ೧೯೬೦

೪) ಭಾರತ ನಿಯತಕಾಲಿಕೆಗಳ ಲೇಖನ ಸೂಚಿ – ೧೯೬೭

೫) ಭಾರತ ನಿಯತಾಲಿಕೆ ಸಾಹಿತ್ಯ – ೧೯೬೪

ಭಾರತದಲ್ಲಿ ದೊರಕುವ ಗ್ರಂಥಸೂಚಿಗಳ ಆಕರಗಳನ್ನು ಪೂರ್ಣವಾಗಿ ತಿಳಿಸುವುದು ಈ ಸಮೀಕ್ಷೆಯಿಂದ ಸಾಧ್ಯವಾಗಿಲ್ಲ. ಆದರೆ ಅದರ ಶಕ್ತಿ ದೌರ್ಬಲ್ಯಗಳನ್ನು ಕುರಿತು ಹಲವು ಸಂಗತಿಗಳನ್ನು ನಿರ್ಧರಿಸಬಹುದು.

ಭಾರತದ ಭಾಷೆಗಳ ಸಾಹಿತ್ಯವನ್ನು ಕುರಿತ ಗ್ರಂಥಸೂಚಿಗಳ ರಚನೆ ಇನ್ನೂ ಬೆಳಕು ಕಂಡಿಲ್ಲ. ಹಿಂದಿನ ಕಾಲದ ಗ್ರಂಥಗಳನ್ನು ಕುರಿತು ಗ್ರಂಥಸೂಚಿಗೆ ಲಂಡನ್ನಿನಲ್ಲಿ ಭಾರತ ಕಚೇರಿಯ ಗ್ರಂಥಾಲಯ ಹಾಗೂ ಬ್ರಿಟಿಷ್ ಮ್ಯೂಸಿಯಂ ಪುಸ್ತಕ ಸೂಚಿಗಳನ್ನು ಅವಲಂಬಿಸಬೇಕಾಗಿದೆ. ಈ ಕೊರತೆಯನ್ನು ತುಂಬಲು ಕೆಲವು ಭಾಷೆಗಳಲ್ಲಿ ಹಿಂದಿನ ಕಾಲದ ಗ್ರಂಥಗಳ ಸೂಚಿಯನ್ನು ತಯಾರಿಸುವ ಕಾರ್ಯ ಆಗೊಮ್ಮೆ ಈಗೊಮ್ಮೆ ಸಾಗಿದೆ. ಮರಾಠಿ ಭಾಷೆಯಲ್ಲಿ ಮಾತ್ರ ಈ ರೀತಿಯ ಗ್ರಂಥಸೂಚಿಗಳು ತಯಾರಾಗಿವೆ. ತಮಿಳು, ತೆಲಗು, ಬಂಗಾಳಿ ಭಾಷೆಗಳಲ್ಲಿ ಈ ರೀತಿಯ ಪ್ರಯತ್ನ ನಡೆದಿದೆ ಸ್ಥಳಾಭಾವದಿಂದ ಈ ಗ್ರಂಥಸೂಚಿಗಳ ವಿವರಗಳನ್ನು ಕೊಡುವುದು, ಈ ಪ್ರಬಂಧದಲ್ಲಿ ಸಾಧ್ಯವಾಗಿಲ್ಲ.

ಗ್ರಂಥಸೂಚಿಗಳ ರಚನೆ ತೃಪ್ತಿಕರವಾಗಿ ನಡೆಯಲು ಇನ್ನೂ ಬಹುದೂರವಿದೆ. ಇದರ ಮುಂದಿನ ವ್ಯವಸ್ಥೆ ಬಹಳ ಎಡರುತೊಡರುಗಳಿಂದ ಕೂಡಿದೆ. ಇವುಗಳ ಪರಿಹಾರಕ್ಕಾಗಿ ಅಗಾಧ ಹಣ, ಸಾಕಷ್ಟು ಪರಿಣತ ಸಂಬಂಧಿ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಸರಿಯಾದ ವ್ಯವಸ್ಥೆ ಅಗತ್ಯ. ಇದರ ಪ್ರಗತಿ ನಿಧಾನವಾಗಬಹುದು : ಆದರೆ ಈ ದಿಸೆಯಲ್ಲಿ ಭಾರತ ಸರಕಾರದ ಆಸಕ್ತಿ, ಇತರ ಆಸಕ್ತ ಜನರ ಸಹಕಾರದಿಂದ ಈ ಗ್ರಂಥಸೂಚಿಗಳ ವ್ಯವಸ್ಥೆಯ ಗೊಂದಲ ಮುಗಿದು ಸಂಶೋಧಕರಿಗೆ ಕ್ಷಿಪ್ರ ಸೇವೆ ಸಲ್ಲಿಸುವಂತೆ ವಿವೇಚನಾಯುಕ್ತ ವ್ಯವಸ್ಥೆಯಿರುವ ಹೊಸಯುಗದ ಆವಿರ್ಭಾವ ಬೇಗ ಬಂದಿತೆಂದು ಆಶಿಸಬಹುದಾಗಿದೆ.

## ೪.೨.೨ : ಭಾರತ ರಾಷ್ಟ್ರೀಯ ಗ್ರಂಥಸೂಚಿ

ಗ್ರಂಥಗಳು ನಾಡಿನ ಸಾಂಸ್ಕೃತಿಕ ರಾಯಭಾರಿಗಳು. ಒಂದು ದೇಶದ ಕಲೆ, ಇತಿಹಾಸ, ಸಂಸ್ಕೃತಿ, ವೈಜ್ಞಾನಿಕ ಬೆಳವಣಿಗೆ, ಶೈಕ್ಷಣಿಕ ಪ್ರಗತಿ ಇತ್ಯಾದಿಗಳನ್ನು ಆ ನಾಡಿನಲ್ಲಿ ಪ್ರಕಟವಾಗುವ ಕೃತಿಗಳ ಆಧಾರದ ಮೇಲೆ ಗುರುತಿಸಬಹುದು. ಜಗತ್ತಿನಲ್ಲಿ ಪ್ರತಿವರ್ಷ ಇಪ್ಪತ್ತೆರಡು ಲಕ್ಷಕ್ಕೂ ಹೆಚ್ಚು ಪುಸ್ತಕಗಳು ಪ್ರಕಟವಾಗುತ್ತವೆ. ಭಾರತ ದೇಶ ಒಂದರಲ್ಲಿಯೇ ಸುಮಾರು ಹದಿನೈದು ಸಾವಿರದಷ್ಟು ಗ್ರಂಥಗಳು ಪ್ರಕಟವಾಗುತ್ತಿವೆ. ಈ ಎಲ್ಲಾ ಗ್ರಂಥಗಳನ್ನು ಯಾವುದೇ ಒಂದು ಗ್ರಂಥಾಲಯ ಹೊಂದುವುದು ಕಷ್ಟಸಾಧ್ಯದ ಕೆಲಸ. ಹಾಗೆಯೇ ತಮಗೆ ಆಸಕ್ತಿ ಇರುವ

# ರಾಷ್ಟ್ರೀಯ ಗ್ರಂಥಸೂಚಿ

**ಕನ್ನಡ ವಿಭಾಗ**

**೧೯೫೯**


ಸಂಪಾದಕ: ಬಿ. ಎಸ್. ಕೇಶವನ್

ಸಹ ಸಂಪಾದಕ: ಎಚ್. ಎನ್. ಆನಂದರಾವ್

ಸೆಂಟ್ರಲ್ ರೆಫರೆನ್ಸ್ ಲೈಬ್ರರಿ
ವೈಜ್ಞಾನಿಕ ಸಂಶೋಧನಾ ಮತ್ತು ಸಾಂಸ್ಕೃತಿಕ ಸಚಿವಾಲಯ
ಭಾರತ ಸರ್ಕಾರ





ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಶಾಖೆಯ
ಡೈರೆಕ್ಟರ್‌ರವರಿಂದ ಪ್ರಕಟಿಸಲ್ಪಟ್ಟಿತು
ಅಕ್ಟೋಬರ್ ೧೯೬೦


ದ್ವಿಬಿಂದು ವರ್ಗೀಕರಣದ ಮೇರೆಗೆ ಈ ಗ್ರಂಥಸೂಚಿಯಲ್ಲಿ ಸೇರಿಸಲಾಗಿರುವ ಮುಖ್ಯ ವರ್ಗಗಳ ಪಟ್ಟಿ.

z ಸಾಮಾನ್ಯ ಗ್ರಂಥಗಳು
m ಪತ್ರಿಕೆಗಳು
w ಜೀವನ ಚರಿತ್ರೆ
2 ಗ್ರಂಥಾಲಯ ಶಾಸ್ತ್ರ
3 ಗ್ರಂಥಾವಲೋಕನ ಶಾಸ್ತ್ರ
A ವಿಜ್ಞಾನ
B ಗಣಿತ
C ಭೌತಿಕ ವಿಜ್ಞಾನ
E ರಸಾಯನ ವಿಜ್ಞಾನ
G ಜೀವ ವಿಜ್ಞಾನ
I ಸಸ್ಯ ವಿಜ್ಞಾನ
J ಕೃಷಿ ವಿಜ್ಞಾನ
K ಪ್ರಾಣಿ ವಿಜ್ಞಾನ
KZ ಪಶು ಸಂಗೋಪನಶಾಸ್ತ್ರ
L ವೈದ್ಯ ವಿಜ್ಞಾನ
M ಉಪಯುಕ್ತ ಕಲೆಗಳು
N ಲಲಿತ ಕಲೆ
O ಸಾಹಿತ್ಯ
P ಭಾಷಾ ಶಾಸ್ತ್ರ
Q ಮತಧರ್ಮ
R ದರ್ಶನ
S ಮನಸ್ ಶಾಸ್ತ್ರ
Σ ಸಮಾಜ ಶಾಸ್ತ್ರಗಳು
T ಶಿಕ್ಷಣ
U ಭೂಗೋಳ
V ಇತಿಹಾಸ
W ರಾಜ್ಯಶಾಸ್ತ್ರ
X ಅರ್ಥಶಾಸ್ತ್ರ
Y ಸಮಾಜ ವಿಜ್ಞಾನ



# ಭಾರತದ ರಾಷ್ಟ್ರೀಯ ಗ್ರಂಥಸೂಚಿ

## 000—ಸಾಮಾನ್ಯ ಗ್ರಂಥಗಳು

001—ಸಾಮಾನ್ಯ ಜ್ಞಾನ

ಗುಂಜಾಲ, ಎಸ್. ಆರ್.
ನೂತನ ಸಾಮಾನ್ಯ ಜ್ಞಾನ. ಧಾರವಾಡ, ಅಶೋಕ ಪಬ್ಲಿಕೇಶನ್ಸ್ ೧೯೫೯, ೮೮ ಪು. ೧೮ ಸೆಮೀ. ೦.೭೫.
z

ನೂತನ ಸಾಮಾನ್ಯ ಜ್ಞಾನ. ಧಾರವಾಡ, ಅಶೋಕಪಬ್ಲಿಕೇಷನ್ಸ್, ೧೯೫೯.೯೬ ಪು. ಚಿತ್ರ ೧೭.೫ ಸೆಮೀ. ೦.೭೫.
z

015—ರಾಷ್ಟ್ರೀಯ ಗ್ರಂಥ ಸೂಚಿ

015·54[1]—ಕನ್ನಡ ಪ್ರಕಾಶನಗಳು

ರಾಷ್ಟ್ರೀಯ ಗ್ರಂಥಸೂಚಿ, ಕನ್ನಡ ವಿಭಾಗ, ೧೯೫೮—
ಬೆಂಗಳೂರು, ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಶಾಖೆ, ಡಿಸೆಂಬರ್ ೧೯೫೯. ೧೨, ೯೨ ಪು. ೨೧ ಸೆಮೀ. ೧.೦೦.
ಪ್ರಕಾಶಕರ ಸೂಚಿ : ೯೧—೯೨.
a14—333, N53

027—ಸಾರ್ವಜನಿಕ ಗ್ರಂಥಾಲಯಗಳು

027·0954—ಭಾರತ

ದೇಶಪಾಂಡೆ, ಕೆ. ಎಸ್.
ಭಾರತದಲ್ಲಿ ಗ್ರಂಥಾಲಯ ಪ್ರಸಾರ. ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, ೧೯೫೯. ೧೩, ೧೦೮ ಪು. ಚಿತ್ರ. ೧೭.೫ ಸೆಮೀ ೦.೨೫.
2.44·N5

050—ಸಾಮಾನ್ಯ ನಿಯತ ಕಾಲಿಕಗಳು

059·4814—ಕನ್ನಡ ನಿಯತ ಕಾಲಿಕಗಳು

ಪರಿಮಳ. ಸಂಪುಟ ೧. ಸಂಚಿಕೆ ೧. ಮಡಕೇರಿ, ಕಾವೇರಿ ಪ್ರಕಟನಾಲಯ, ಫೆಬ್ರವರಿ ೧೯೫೯. ೧೮ ಸೆಮೀ, ವಾರ್ಷಿಕ ಚಂದ. ೨.೦೦.
ಮಾಸಪತ್ರಿಕೆ, ಸಂಪಾದಕ ಎಂ.ಎಸ್. ಸುಬ್ಬರಾವ್.
m4413, N59

ವಿಷಯದ ಬಗೆಗೆ ಪ್ರಕಟವಾಗುವ ಕೃತಿಗಳ ವಿವರಗಳನ್ನು ತಿಳಿಯುವುದೂ ಕಷ್ಟದ ಕೆಲಸ. ಇಂತಹ ಸಂದರ್ಭಗಳಲ್ಲಿ ಗ್ರಂಥಸೂಚಿಗಳು ನೆರವಿಗೆ ಬರುತ್ತವೆ. ಗ್ರಂಥಸೂಚಿಯೆಂದರೆ ಗ್ರಂಥದ ಹೆಸರು, ಕೃರ್ತೃ, ಪ್ರಕಾಶನ ಸ್ಥಳ, ಪ್ರಕಾಶಕನ ಹೆಸರು, ಪ್ರಕಾಶನ ವರ್ಷ, ಬೆಲೆ, ಪುಟಸಂಖ್ಯೆ, ಅಳತೆ ಇತ್ಯಾದಿ ವಿವರಗಳನ್ನು ಯಾವುದಾದರೊಂದು ಕ್ರಮಬದ್ಧ ಜೋಡಣೆಯಲ್ಲಿ ನೀಡುವ ಗ್ರಂಥ.. ಈ ಗ್ರಂಥಸೂಚಿಗಳು ಯಾವುದಾದರೊಂದು ವ್ಯಕ್ತಿ, ಲೇಖಕ, ವಿಷಯ ಅಥವಾ ಪ್ರದೇಶ ಇತ್ಯಾದಿಗಳಿಗೆ ಸೀಮಿತಗೊಂಡಿರಬಹುದು. ಹೀಗೆ ಗ್ರಂಥಸೂಚಿಗಳು ನೀಡುವ ಮಾಹಿತಿಯ ಆಧಾರದ ಮೇಲೆ ಅವುಗಳನ್ನು ವೈಯಕ್ತಿಕ, ಸಾಮಾನ್ಯ, ವಿಷಯವಾರು ಇತ್ಯಾದಿ ಬಗೆಗಳಾಗಿ ವಿಂಗಡಿಸಬಹುದು.

ಯಾವುದೇ ಒಂದು ದೇಶದಲ್ಲಿ ಪ್ರಕಟವಾಗುವ ಎಲ್ಲ ಬಗೆಯ ಗ್ರಂಥಗಳ ವಿವರಗಳನ್ನು ಒದಗಿಸುವ ಗ್ರಂಥಸೂಚಿಗಳಿಕೆ ಕೇವಲ ಪುಸ್ತಕಗಳನ್ನಷ್ಟೇ ಅಲ್ಲದೆ ನಕಾಶೆ, ಭೂಪಟ, ಧ್ವನಿಸುರುಳಿ, ದೃಕ್ ಶ್ರವಣ ಮಾಧ್ಯಮಗಳನ್ನು ಇತ್ಯಾದಿ ಮಾಹಿತಿ ಮೂಲಗಳ ವಿವರಗಳನ್ನೂ ಒಳಗೊಳ್ಳಬಹುದು.

೧೮೬೭ ರ ಸುಮಾರಿನಿಂದ ಭಾರತದಲ್ಲಿ ಗ್ರಂಥಸೂಚಿಗಳ ರಚನೆ ಆರಂಭವಾಯಿತಾದರೂ ರಾಷ್ಟ್ರೀಯ ಗ್ರಂಥಸೂಚಿಯ ಬಗೆಗೆ ಆಸಕ್ತಿ ಮೂಡಲು ಮತ್ತೆ ಕೆಲವು ವರ್ಷಗಳ ವರೆಗೆ ಕಾಯಬೇಕಾಯಿತು. ಡಾ. ಎಸ್. ಆರ್. ರಂಗನಾಥ ಅವರು ೧೯೪೨ ರಲ್ಲಿ ನಡೆದ ಭಾರತದ ಗ್ರಂಥಾಲಯ ಸಂಘಟನೆಯ ಸಮ್ಮೇಳನದಲ್ಲಿ ಮಾತನಾಡುತ್ತ ರಾಷ್ಟ್ರೀಯ ಗ್ರಂಥಸೂಚಿಯ ನಿರ್ಮಾಣಕ್ಕಾಗಿ ಒಂದು ಖಾಯಂ ಸಂಘಟನೆಯ ಆವಶ್ಯಕತೆಯ ಬಗ್ಗೆ ಒತ್ತಿ ಹೇಳಿದರು. ೧೯೪೪ ರಲ್ಲಿ ಜೈಪುರದಲ್ಲಿ ನಡೆದ ಆರನೆಯ ಅಖಿಲ ಭಾರತ ಗ್ರಂಥಾಲಯ ಸಮ್ಮೇಳನದಲ್ಲಿ ಜೆ. ಸಿ. ರಾಲೋ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ರಂಗನಾಥನ್ ಅವರ ಮೇಲಿನ ಹೇಳಿಕೆಯ ಬಗ್ಗೆ ಮತ್ತೊಮ್ಮೆ ನಾಡಿನ ಗಮನ ಸೆಳೆದರು.

ಭಾರತದಲ್ಲಿ ಪ್ರಕಟವಾಗುವ ಎಲ್ಲ ಭಾಷೆಯ ಗ್ರಂಥಗಳೂ ಒಂದೇ ಕಡೆ ದೊರೆಯುವಂತೆ ಆಗುವವರೆಗೆ ಭಾರತ ರಾಷ್ಟ್ರೀಯ ಗ್ರಂಥಸೂಚಿಯ ರಚನೆ ಸಾಧ್ಯವಾಗುವಂತಿರಲಿಲ್ಲ. ೧೯೫೪ ರಲ್ಲಿ ಜಾರಿಗೊಳಿಸಿದ ಗ್ರಂಥ ವಿತರಣ ಕಾಯಿದೆಯನ್ವಯ ಕಲ್ಕತ್ತದ ರಾಷ್ಟ್ರೀಯ ಗ್ರಂಥಾಲಯ ಭಾರತದಲ್ಲಿ ಪ್ರಕಟವಾಗುವ ಎಲ್ಲ ಭಾಷೆಯ ಎಲ್ಲ ಗ್ರಂಥಗಳನ್ನು ಉಚಿತವಾಗಿ ಪಡೆಯುವ ಸೌಲಭ್ಯವನ್ನು ಪಡೆಯಿತು. ಇದರಿಂದ ದೇಶದ ಎಲ್ಲ ಭಾಷೆಯ ಗ್ರಂಥಗಳೂ ಒಂದೆಡೆ ದೊರೆಯುವಂತಾಯಿತು. ಭಾರತ ರಾಷ್ಟ್ರೀಯ ಗ್ರಂಥಸೂಚಿಯ (ಭಾ. ರಾ. ಗ್ರಂ.) ರಚನೆಗೆ ಇದು ಭದ್ರ ಬುನಾದಿಯನ್ನೊದಗಿಸಿತು.

೧೯೫೫ ರಲ್ಲಿ ಭಾರತ ಸರಕಾರ ಭಾ. ರಾ. ಗ್ರಂ. ಯ ರೂಪುರೇಷೆಗಳನ್ನು ನಿರ್ಧರಿಸಲು ಶ್ರೀ ಬಿ. ಎಸ್. ಕೇಸವನ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯ ಸಲಹೆಯ ಮೇರೆಗೆ ಕೇಂದ್ರೀಯ ಪರಾಮರ್ಶನ ಗ್ರಂಥಾಲಯವು ರಾಷ್ಟ್ರೀಯ ಗ್ರಂಥಾಲಯದ ಆವರಣದಲ್ಲಿ ಅಸ್ತಿತ್ವಕ್ಕೆ ಬಂದಿತು ಮತ್ತು ಭಾ. ರಾ. ಗ್ರಂ. ಯ ರಚನೆಯ ಕೆಲಸವನ್ನು ವಹಿಸಿಕೊಂಡಿತು.

### ೪.೨.೨.೧ : ಪ್ರಾಯೋಗಿಕ ಸಂಚಿಕೆಗಳು

ಬಿ. ಎಸ್. ಕೇಸವನ್ ಸಮಿತಿಯ ಸಲಹೆಗಳಿಗನುಸಾರವಾಗಿ ಈ ಗ್ರಂಥಾಲಯವು ರೋಮನ್ ಲಿಪಿಯಲ್ಲಿ ಎರಡು ಪ್ರಾಯೋಗಿಕ ಸಂಚಿಕೆಗಳನ್ನು –ಒಂದು ದ್ವಿಬಿಂದು ವರ್ಗೀಕರಣದಲ್ಲಿ ಮತ್ತೊಂದು ಡ್ಯೂಯಿ ದಶಮಾನ ವರ್ಗೀಕರಣದಲ್ಲಿ –ಪ್ರಕಟಿಸಿ ವಿಮರ್ಶೆಗಾಗಿ ದೇಶ ವಿದೇಶಗಳ ವಿದ್ವಾಂಸರಿಗೆ ಕಳುಹಿಸಿ ಕೊಟ್ಟಿತು. ಭಾರತದ ಗ್ರಂಥಸೂಚಿಯ ನಿರ್ಮಾಣದಲ್ಲಿ ಮೊದಲ ಮತ್ತು ಪ್ರಮುಖ ಪ್ರಯತ್ನವಾದ ಈ ಗ್ರಂಥಸೂಚಿಯನ್ನು ದೇಶ ವಿದೇಶಗಳ ವಿದ್ವಾಂಸರು ಸ್ವಾಗತಿಸಿದರಾದರೂ ಈ ಸಂಚಿಕೆಗಳ ಪರವಾಗಿ ಮತ್ತು ವಿರೋಧವಾಗಿ ಅನೇಕ ವಿಮರ್ಶೆಗಳು ಬಂದವು. ಅವೆಲ್ಲವುಗಳಲ್ಲಿ ಬಹಳ ಮುಖ್ಯವಾದುದು ಭಾರತ ಗ್ರಂಥಾಲಯ ಪಿತಾಮಹ ಡಾ. ಎಸ್. ಆರ್. ರಂಗನಾಥನ್‌ರವರದು. ಭಾ. ರಾ. ಗ್ರಂ. ಯ ಪ್ರಕಟಣೆಯ ಸಾಹಸವನ್ನು ಅವರು ಸ್ವಾಗತಿಸಿದರಾದರೂ, ಅದರ ರೋಮನ್ ಲಿಪಿಯ ಬಗ್ಗೆ ತಮ್ಮ ಅತೃಪ್ತಿಯನ್ನು ಸೂಚಿಸಿದರು. ಭಾರತದ ಪ್ರತಿಯೊಂದು ಭಾಷೆಗೂ ಆಯಾ ಭಾಷೆಯಲ್ಲಿಯೇ ಗ್ರಂಥಸೂಚಿ ಪ್ರಕಟವಾಗಬೇಕೆನ್ನುವುದು ರಂಗನಾಥನ್ ಅವರ ನಿಲುವಾಗಿದ್ದಿತು.

### ೪.೨.೨.೨ : ಗ್ರಂಥಸೂಚಿಯ ರೂಪುರೇಷೆ

ಶೈಲಿ ಜೋಡಣೆ, ತಂತ್ರ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಕೇವಲ ಕೆಲವು ಮುಖ್ಯ ಬದಲಾವಣೆಗಳನ್ನುಳಿದು, ಉಳಿದಂತೆ ಭಾ. ರಾ. ಗ್ರಂ. ಯ ಬ್ರಿಟಿಷ ರಾಷ್ಟ್ರೀಯ ಗ್ರಂಥಸೂಚಿಯನ್ನು ಅನುಸರಿಸುತ್ತಿದೆ.

**ವ್ಯಾಪ್ತಿ :**

ಭಾ. ರಾ. ಗ್ರಂ. ಯ ಮುಖ್ಯ ಉದ್ದೇಶ ಭಾರತ ಸಂವಿಧಾನದಲ್ಲಿ ಗುರುತಿಸಿರುವ ಭಾರತೀಯ ಭಾಷೆಗಳಾದ ಆಸ್ಸಾಮಿ, ಉರ್ದು, ಒರಿಯಾ, ಕನ್ನಡ, ಗುಜರಾತಿ, ತಮಿಳು, ತೆಲುಗು, ಪಂಜಾಬಿ, ಬಂಗಾಲಿ, ಮರಾಠಿ, ಮಲಯಾಳಂ, ಸಂಸ್ಕೃತ ಮತ್ತು ಹಿಂದಿ ಹಾಗೂ ಇಂಗ್ಲೀಷಿನಲ್ಲಿ ಪ್ರಕಟವಾಗುವ ಗ್ರಂಥಗಳ ವಿವರಗಳನ್ನು ನೀಡುವುದು. ಕೇಂದ್ರ ಮತ್ತು ರಾಜ್ಯ ಸರಕಾರಗಳ ಹಾಗೂ ಸ್ವಾಯತ್ತ ಸಂಘ-ಸಂಸ್ಥೆಗಳ ಪ್ರಕಟಣೆಗಳನ್ನು ಸಹ ಇದು ಒಳಗೊಳ್ಳುತ್ತದೆ. ಆದರೆ ಭೂಪಟಗಳು, ಧ್ವನಿ ಸುರಳಿಗಳು, ಪಠ್ಯಪುಸ್ತಕಗಳ ಮಾರ್ಗದರ್ಶಿಗಳು ವ್ಯಾಪಾರೀ ಸಂಬಂಧದ ಸೂಚಿಗಳು ಮತ್ತು ಕೈಪಿಡಿಗಳು, ಕಂಪನಿ ರಿಪೋರ್ಟುಗಳು ಮತ್ತು ಟೆಲಿಫೋನ್ ಡೈರೆಕ್ಟರಿಗಳನ್ನು ಇದು ಒಳಗೊಳ್ಳುವುದಿಲ್ಲ.

**ಲಿಪಿ ಮತ್ತು ಭಾಷೆ :**

ಭಾರತ ಬಹುಭಾಷೀಯ ಮತ್ತು ಬಹುಲಿಪಿಯ ರಾಷ್ಟ್ರ. ಇಂತಹ ಬಹು ಭಾಷಾ ದೇಶದಲ್ಲಿ ಗ್ರಂಥಸೂಚಿ ಯಾವ ಭಾಷೆಯಲ್ಲಿರಬೇಕೆನ್ನುವುದು ಬಹಳ ಮುಖ್ಯವಾದ ಸಮಸ್ಯೆಯಾಗಿದ್ದಿತು. ಒಂದೇ ಕಡೆ ಈ ಗ್ರಂಥಸೂಚಿ ಪ್ರಕಟವಾಗಬೇಕಾದ ಕಾರಣ ಮುದ್ರಣದಲ್ಲಿನ ತೊಂದರೆ, ದೇಶಿಯ ಮತ್ತು ವಿದೇಶಿಯ ವಿದ್ವಾಂಸರು ಮತ್ತು

ಆಸಕ್ತರ ಬಳಕೆಗೆ ಅನುಕೂಲ ಇತ್ಯಾದಿಗಳನ್ನು ಗಮನದಲ್ಲಿರಿಸಿಕೊಂಡು, ಭಾಷೆ, ಲಿಪಿ ಮತ್ತು ಇಂಗ್ಲೀಷ ಭಾಷೆಗಳನ್ನು ಬಳಸಲಾಯಿತಾದರೂ ಅನೇಕ ಗುರುತುಗಳನ್ನು ಲೇಬಲ್, ಮಸಿಯ ಗುರುತು ಲಿಪಿಯಲ್ಲಿಯ ವಿವರಗಳು ಮತ್ತು ಟಿಪ್ಪಣಿಗಳಲ್ಲಿಯೂ ನೀಡಲಾಗುತ್ತದೆ.

**ವರ್ಗೀಕರಣ ಮತ್ತು ಜೋಡಣೆ :**

ಭಾ. ರಾ. ಗ್ರಂ. ಯಲ್ಲಿ ಮೂರು ಭಾಗಗಳಿವೆ. ಲೇಖಕ ಮತ್ತು ಶೀರ್ಷಿಕೆ ಸೂಚಿಕೆ ಮತ್ತು ವಿಷಯ ಸೂಚಿಕೆ.

ಆರಂಭದಲ್ಲಿ ಭಾ. ರಾ. ಗ್ರಂ. ಯು ಸಾಮಾನ್ಯ ಪ್ರಕಟಣೆಗಳು ಹಾಗೂ ಸರಕು ಪ್ರಕಟಣೆಗಳು ಎನ್ನುವ ಎರಡು ಭಾಗಗಳಾಗಿ ಪ್ರಕಟವಾಗುತ್ತಿದ್ದಿತು. ಆದರೆ ಈ ಬಗ್ಗೆ ವರ್ಗೀಕರಣ ಕೃತಕವಾದುದು ಮತ್ತು ಪರಾಮರ್ಶೆಗೆ ಕ್ಲಿಷ್ಟಕರ ಎನ್ನುವ ಕಾರಣ ೧೯೭೩ ರಿಂದ ಈ ಎರಡೂ ಭಾಗಗಳನ್ನು ಒಗ್ಗೂಡಿಸಲಾಯಿತು.

**ವರ್ಗೀಕೃತ ಭಾಗ :**

ವರ್ಗೀಕೃತ ಭಾಗ ಗ್ರಂಥಸೂಚಿಯ ಪ್ರಮುಖ ಭಾಗವಾಗಿದೆ. ಗ್ರಂಥಗಳ ಸಂಪೂರ್ಣ ವಿವರಗಳನ್ನು ಇಲ್ಲಿ ನೀಡಲಾಗುತ್ತದೆ. ಪ್ರತಿಯೊಂದು ಗ್ರಂಥ ಆಲೇಖವೂ ಸಾಮಾನ್ಯವಾಗಿ ಲೇಖಕನ ಹೆಸರು, ಹುಟ್ಟಿದ ವರ್ಷ, ಪೂರ್ಣ ಶೀರ್ಷಿಕೆ ಆವೃತ್ತಿ ಪ್ರಕಟಣೆಯ ಸ್ಥಳ, ಪ್ರಕಾಶನದ ಹೆಸರು, ಪ್ರಕಟಣೆಯ ತಿಂಗಳು ಮತ್ತು ವರ್ಷ, ಪುಟ ಸಂಖ್ಯೆ, ಚಿತ್ರ, ನಕ್ಷೆ ನಕಾಶೆಗಳಿದ್ದರೆ ಅವುಗಳ ವಿವರ, ಪುಸ್ತಕದ ಅಳತೆ, ರಟ್ಟು ಬೆಲೆ, ಪುಸ್ತಕ ಮಾಲೆ ಇತ್ಯಾದಿ ವಿವರಗಳನ್ನು ಒಳಗೊಳ್ಳುತ್ತದೆ. ಇನ್ನೂ ಹೆಚ್ಚಿನ ವಿವರ ಆವಶ್ಯಕವೆನಿಸಿದಲ್ಲಿ ಆಲೇಖದ ಕೆಳಗೆ ಇಂಗ್ಲೀಷಿನಲ್ಲಿ ಸಣ್ಣ ಟಿಪ್ಪಣಿಯನ್ನು ನೀಡಲಾಗುತ್ತದೆ. ಈ ಮೇಲಿನ ಯಾವುದೇ ಮಾಹಿತಿ ದೊರೆಯದೇ ಹೋದಲ್ಲಿ ಆ ಸ್ಥಳದಲ್ಲಿ ಖಾಲಿ ಚೌಕಾವರಣವನ್ನು ನೀಡಲಾಗುತ್ತದೆ. ಆಲೇಖದ ಕೆಳಗೆ ಎಡ ಮೂಲೆಯಲ್ಲಿ ಪುಸ್ತಕ ಯಾವ ಭಾಷೆಯಲ್ಲಿದೆ ಎನ್ನುವುದನ್ನು ಸೂಚಿಸುವ ಸಂಕೇತಾಕ್ಷರವನ್ನು ಬಲ ಮೂಲೆಯಲ್ಲಿ ದ್ವಿಬಿಂದು ವರ್ಗೀಕರಣ ಸಂಖ್ಯೆಯನ್ನು ನೀಡಲಾಗುತ್ತಿದೆ.

ಆಲೇಖಗಳು ರೋಮನ್ ಲಿಪಿಯಲ್ಲಿ ಇರುವುದರಿಂದ ಒಂದೇ ವಿಷಯದ ಮೇಲೆ ಪ್ರಕಟವಾಗುವ ಎಲ್ಲಾ ಭಾಷೆಯ ಗ್ರಂಥಗಳನ್ನು ಒಂದೇ ಕಡೆ ಜೋಡಿಸಲು ಅನುಕೂಲವಾಗಿದೆ. ಅಲ್ಲದೇ ಲೇಖಕರ ನಾಮ ನಿರ್ದೇಶನ ಮಾಡಲು ಸಹ ಇದು ಬಹಳಷ್ಟು ಸಹಕಾರಿಯಾಗಿದೆ. ಗ್ರಂಥಗಳನ್ನು ಡ್ಯೂಯಿ ದಶಮಾನ ಪದ್ಧತಿಯ ೧೬ ನೆಯ ಆವೃತ್ತಿಗೆ ಅನುಸಾರವಾಗಿ ವರ್ಗೀಕರಿಸಿ ಜೋಡಿಸಲಾಗುತ್ತಿದೆ.

**ಲೇಖಕ ಶೀರ್ಷಿಕೆ ಸೂಚಿಕೆ :**

೧೯೭೩ ರ ವರೆಗೆ ಲೇಖಕ ಶೀರ್ಷಿಕೆ ಮತ್ತು ವಿಷಯ ಸೂಚಿಕೆಗಳನ್ನು ಒಂದೇ ಕಡೆ ವರ್ಣಾನುಕ್ರಮದಲ್ಲಿ ನೀಡಲಾಗುತ್ತಿತ್ತು. ಆದರೆ ೧೯೭೪ ರಿಂದ ಬಳಕೆಗೆ ಹೆಚ್ಚು ಸುಲಭವಾಗಲೆನ್ನುವ ದೃಷ್ಟಿಯಿಂದ ವಿಷಯ ಸೂಚಿಕೆಗಳನ್ನು ಬೇರೆಯಾಗಿ ನೀಡಲಾಗುತ್ತಿದೆ.

ಲೇಖಕ ಶೀರ್ಷಿಕೆ ಸೂಚಿಯಲ್ಲಿ ಲೇಖಕ, ಸಹ ಲೇಖಕ, ಸಂಪಾದಕ, ಅನುವಾದಕ ಶೀರ್ಷಿಕೆ, ಪುಸ್ತಕ ಮಾಲೆಗಳನ್ನು ವರ್ಗಾನುಕ್ರಮದಲ್ಲಿ ನೀಡಲಾಗುತ್ತಿದೆ. ಮತ್ತು ಈ ಭಾಗದ ಲೇಖಕ ಆಲೇಖಗಳನ್ನು ವರ್ಗೀಕೃತ ಭಾಗದ ಮುಖ್ಯ ಲೇಖನಗಳನ್ನು ಡ್ಯೂಯಿ ದಶಮಾನ ವರ್ಗೀಕರಣ ಸಂಖ್ಯೆಯ ಮೂಲಕ ಜೋಡಿಸಲಾಗುತ್ತಿದೆ. ಉಳಿದ ಆಲೇಖಗಳನ್ನು ಲೇಖಕ ಆಲೇಖದೊಂದಿಗೆ ಜೋಡಿಸಲಾಗುವುದು.

**ವಿಷಯ ಸೂಚಿಕೆ :**

ವಿಷಯ ಸೂಚಿಕೆಯಲ್ಲಿ, ಆಲೇಖಗಳನ್ನು ಸರಣಿ ಪದ್ಧತಿಯಲ್ಲಿ ಪಡೆಯಲಾಗುತ್ತದೆ. ಈ ಬಗೆಯ ಸೂಚಿಕೆಯ ಎರಡು ಮುಖ್ಯ ಅಂಶಗಳನ್ನು ಒಳಗೊಳ್ಳುತ್ತದೆ. ೧) ವರ್ಗೀಕರಣದ ಸ್ಪಷ್ಟತೆ ಮತ್ತು ೨) ವರ್ಗ ವಿಶ್ಲೇಷಣೆಯ ಜ್ಞಾನ. ಇದರಿಂದ ಯಾವುದೇ ಭಾಷೆಯ ಮಿತಿಗೆ ಒಳಗಾಗದೇ ವಿಶಾಲ ತಳಹದಿಯ ಮೇಲೆ ವರ್ಗೀಕರಣ ಮಾಡಲು ಸಹಾಯವಾಗುತ್ತದೆ.

**ಪ್ರಕಟಣ ಕಾಲ :**

೧೯೫೮ ರಿಂದ ೧೯೬೩ ರ ವರೆಗೆ ಭಾ. ರಾ. ಗ್ರಂ. ಯು ತ್ರೈಮಾಸಿಕವಾಗಿ ಪ್ರಕಟವಾಗಿದೆ. ೧೯೬೪ ಜನೇವರಿ ತಿಂಗಳಿನಿಂದ ಇದು ಮಾಸಿಕವಾಗಿ ಪ್ರಕಟವಾಗಿದೆ. ಆದರೆ ೧೯೭೮ ರಿಂದ ೧೯೮೩ ರ ವರೆಗೆ ಇದು ಕೇವಲ ವಾರ್ಷಿಕ ಸಂಚಿಕೆಯಾಗಿ ಪ್ರಕಟವಾಗಿದೆ. ೧೯೮೪ ರ ಜನೇವರಿಯಿಂದ ಇದು ಮತ್ತೆ ಮಾಸಿಕವಾಗಿ ಪ್ರಕಟವಾಗುತ್ತಿದೆ. ಅಲ್ಲದೇ ಪ್ರತಿ ವರ್ಷ ವಾರ್ಷಿಕ ಸಂಚಿತ ಸಂಪುಟಗಳನ್ನು ಪ್ರಕಟಿಸಲಾಗುತ್ತಿದೆ. ೧೯೫೮ - ೧೯೬೨ ರ ಭಾ. ರಾ. ಗ್ರಂ. ಯ ಸಂಚಿತ ಸಂಪುಟವನ್ನೂ ಪ್ರಕಟಿಸಲಾಗಿದೆ.

ಭಾ. ರಾ. ಗ್ರಂ. ಪ್ರಕಟಣ ಕಾಲಾವಧಿ ಪದೇ ಪದೇ ಬದಲಾಗಲು ಬಹಳ ಮುಖ್ಯ ಕಾರಣವೆಂದರೆ ಅದರ ಮುದ್ರಣ ವಿನ್ಯಾಸ ಮತ್ತು ಉಚ್ಚಾರಣಾ ಸಂಕೇತಗಳನ್ನುಳ್ಳ ರೋಮನ್ ಅಕ್ಷರಗಳು. ಈ ಸಮಸ್ಯೆಯನ್ನು ಆದಷ್ಟು ಕಡಿಮೆ ಮಾಡಲು ಈಗ ಈ ಗ್ರಂಥಸೂಚಿಯ ಮುದ್ರಣಕ್ಕೆ ಫೋಟೋ ಟೈಪ್ ಸೆಟ್ಟಿಂಗ್ ಯಂತ್ರವನ್ನು ಬಳಸಲಾಗುತ್ತಿದೆ. ಇದರಿಂದ ಗ್ರಂಥಸೂಚಿಯು ಕಾಲಕ್ಕೆ ಸರಿಯಾಗಿ ಪ್ರಕಟವಾಗಲು ಅನುಕೂಲವಾಗುತ್ತಿದೆ.

## ೪.೨.೩ : ಭಾಷೆಯ ಗ್ರಂಥಸೂಚಿಗಳು :

ಭಾ. ರಾ. ಗ್ರಂ. ಯು ಆಯಾ ಭಾಷೆಗಳಲ್ಲಿಯೇ ಪ್ರಕಟವಾಗಬೇಕೆನ್ನುವುದು ಡಾ. ಎಸ್. ಆರ್. ರಂಗನಾಥನ್ ಅವರ ಬಲವಾದ ಆಸೆಯಾಗಿದ್ದಿತು. ರೋಮನ್ ಲಿಪಿ ಮತ್ತು ಇಂಗ್ಲೀಷ ಭಾಷೆಗಳು ಪ್ರಾದೇಶಿಕ ಉಪಯೋಗಿಗಳಿಗೆ ಹೆಚ್ಚು ಉಪಯುಕ್ತವಾಗಲಾರದು ಎನ್ನುವುದು ಅವರ ಅಭಿಪ್ರಾಯವಾಗಿದ್ದಿತು. ಎಲ್ಲಾ ಭಾಷೆಗಳನ್ನು ಒಳಗೊಳ್ಳುವ

ಭಾ. ರಾ. ಗ್ರಂ. ಯು ಒಂದೆರಡು ಭಾಷೆಗಳಲ್ಲಿ ಮಾತ್ರ ಆಸಕ್ತಿ ಹೊಂದಿರುವ ಓದುಗರು ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಗ್ರಂಥಾಲಯಗಳು ಕಾಲೇಜು ಗ್ರಂಥಾಲಯಗಳು ಇತ್ಯಾದಿಗಳಿಗೆ ಅತೀ ದೊಡ್ಡ ಹೊರೆಯಾಗುತ್ತದೆ. ಆದುದರಿಂದ ಕೇಂದ್ರೀಯ ಪರಾಮರ್ಶನ ಗ್ರಂಥಾಲಯ ಸಿದ್ಧಪಡಿಸುವ ಆಲೇಖಗಳ ಆಧಾರದ ಮೇಲೆ ಭಾಷೀಯ ಗ್ರಂಥ ಸೂಚಿಗಳನ್ನು ಸಿದ್ಧಪಡಿಸುವಂತೆ ಕೇಂದ್ರ ಸರಕಾರ ರಾಜ್ಯ ಸರಕಾರಗಳನ್ನು ಕೇಳಿಕೊಂಡಿತು. ಇದರಂತೆ ಹಿಂದಿ ಮತ್ತು ಉರ್ದು ಗ್ರಂಥಸೂಚಿಗಳನ್ನು ಉತ್ತರ ಪ್ರದೇಶ ಸರಕಾರವೂ ಸಂಸ್ಕೃತ, ಆಸ್ಸಾಮಿ, ಮತ್ತು ಒರಿಯಾ ಭಾಷೆಯ ಗ್ರಂಥಸೂಚಿಗಳನ್ನು ಕೇಂದ್ರೀಯ ಪರಾಮರ್ಶನ ಗ್ರಂಥಾಲಯವೂ ಉಳಿದ ಭಾಷೆಯ ಗ್ರಂಥಸೂಚಿಗಳನ್ನು ಆಯಾ ರಾಜ್ಯ ಸರಕಾರಗಳೂ ಪ್ರಕಟಿಸುತ್ತಿವೆ.

ಇದುವರೆಗೆ ಭಾ. ರಾ. ಗ್ರಂ. ಯು ಮೂರು ಲಕ್ಷ ಗ್ರಂಥಗಳನ್ನು ದಾಖಲೆ ಮಾಡಿದೆ. ಈ ಗ್ರಂಥಸೂಚಿ ಕೇವಲ ತಾತ್ಕಾಲೀನ ಉಪಯೋಗಕ್ಕೆ ಮಾತ್ರವಿರದೇ ನಾಡಿನ ಪುಸ್ತಕ ಪ್ರಕಟಣ ಪ್ರಪಂಚದ ಅಧಿಕೃತ ದಾಖಲೆಯಾಗಿ ಉಳಿಯುತ್ತದೆ. ಗ್ರಂಥಗಳ ಆಯ್ಕೆಯಲ್ಲಿ ದೇಶ ವಿದೇಶಗಳ ಗ್ರಂಥಪಾಲಕರು, ಸಂಶೋಧಕರು, ಆಸಕ್ತರಿಗೆ ಮಾಹಿತಿ ಮೂಲವಾಗಿ ದೇಶದ ಗ್ರಂಥ ಪ್ರಕಟಣೆಯ ಅಂಕಿ-ಸಂಖ್ಯೆಗಳಿಗೆ ಅಧಿಕೃತ ದಾಖಲೆಯಾಗಿ ವರ್ಗೀಕರಣ ಸೂಚೀಕರಣ ಮತ್ತು ಭಾರತೀಯ ಲೇಖಕರ ಹೆಸರುಗಳ ನಾಮ ನಿರ್ದೇಶನದಲ್ಲಿ ಗ್ರಂಥಪಾಲಕರಿಗೆ ಹೆಚ್ಚಿನ ಸಹಕಾರಿಯಾಗಿದೆ. ಇದೆಲ್ಲದರಿಂದ ಪುಸ್ತಕಗಳ ಪ್ರಕಾಶಕರು ತಮ್ಮ ಕೃತಿಗಳಿಗೆ ಉಚಿತ ಪ್ರಚಾರ ಪಡೆಯುತ್ತಾರೆ. ಸ್ವಿಡ್ಜರ್ಲೆಂಡಿನ ರಾಷ್ಟ್ರೀಯ ಗ್ರಂಥಾಲಯದ ಗ್ರಂಥಪಾಲಕ ಓ. ಬೊರ್ಗೋಯಿಸ್ ಅವರು ಹೇಳಿದಂತೆ " ಭಾ. ರಾ. ಗ್ರಂ. ಯು ಪಾಶ್ಚಾತ್ಯ ಮತ್ತು ಪೌರ್ವಾತ್ಯ ರಾಷ್ಟ್ರಗಳ ಮಧ್ಯೆ ಸಾಂಸ್ಕೃತಿಕ ಕೊಂಡಿಯಾಗಿದೆ. "

### ೪.೨.೩ : ರಾಷ್ಟ್ರಮಟ್ಟದ ಗ್ರಂಥಸೂಚಿಗಳು

### ೪.೨.೩.೧ : ರಾಷ್ಟ್ರೀಯ ಗ್ರಂಥಸೂಚಿ ಕನ್ನಡ ವಿಭಾಗ

೧೯೬೦ ರಲ್ಲಿ ಮೈಸೂರು ಸರಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಶಾಖೆಯ ಡೈರೆಕ್ಟರ್‌ರವರಿಂದ ಪ್ರಕಟಿಸಲ್ಪಟ್ಟಿತು. ೧೯೫೮ ರಿಂದ ೧೯೬೦ ರ ವರೆಗೆ ಪ್ರಕಟಿಸಲ್ಪಟ್ಟ ಕನ್ನಡ ಪುಸ್ತಕಗಳ ಪಟ್ಟಿ ಇದಾಗಿದೆ.

ಪದ್ಮಶ್ರೀ ಬಿ. ಎಸ್. ಕೇಸವನ್ ಸಂಪಾದಕರಾಗಿ ಎಚ್. ಎಸ್. ಆನಂದರಾಮ ಸಹಸಂಪಾದಕರಾಗಿರುವ ಈ ಗ್ರಂಥಸೂಚಿಗಳು ಸತತವಾಗಿ ೧೯೫೮ ರಿಂದ ಐದು ಸಂಪುಟಗಳಾಗಿ ಹೊರಬಂದಿವೆ. ಡ್ಯುಯಿ ದಶಾಂಶ ವರ್ಗೀಕರಣದ ಮೇರೆಗೆ ಈ ಗ್ರಂಥಸೂಚಿಯಲ್ಲಿ ಸೇರಿಸಲಾಗಿರುವವಿಷಯಗಳ ಪಟ್ಟಿಯನ್ನು ನೀಡಲಾಗಿದೆ. ೦೦೦ - ಸಾಮಾನ್ಯ ಗ್ರಂಥಗಳು, ೧೦೦೦ - ದರ್ಶನ, ೨೦೦ - ಧರ್ಮ, ೩೦೦ - ಸಮಾಜಶಾಸ್ತ್ರಗಳು, ೪೦೦ - ಭಾಷಾಶಾಸ್ತ್ರಗಳು, ೫೦೦ - ಸಾಮಾನ್ಯ ವಿಜ್ಞಾನ, ೬೦೦ - ಉಪಯುಕ್ತ ಕಲೆ, ತಾಂತ್ರಿಕ ಜ್ಞಾನ, ೭೦೦ - ಲಲಿತ ಕಲೆ, ೮೦೦ - ಸಾಹಿತ್ಯ, ಮತ್ತು

೯೦೦ - ಇತಿಹಾಸ –ಹೀಗೆ ಡ್ಯುಯಿ ದಶಾಂಶ ಪದ್ಧತಿಯನ್ನು ಮಾದರಿಯನ್ನಾಗಿಸಿಕೊಂಡು ವಿವಿಧ ಪುಸ್ತಕಗಳ ವಿವರಣಾತ್ಮಕ ಪಟ್ಟಿಯನ್ನು ನೀಡಲಾಗಿದೆ.

ಈ ಸೂಚಿಯಲ್ಲಿ ವಿಷಯುಗಳ ಸರ್ವವ್ಯಾಪಕವಾದ ಪಟ್ಟಿಯನ್ನು ಕೊಡಲಾಗಿದೆ. ಇದರಲ್ಲಿರುವ ವರ್ಗಸಂಖ್ಯೆಗಳನ್ನು. ಅವುಗಳಿಗೆ ತತ್ಸಮವಾದ ವರ್ಗೀಕೃತ ವಿಭಾಗದಲ್ಲಿನ ವಿಷಯಗಳನ್ನು ಕ್ರಮಾನುಸಾರವಾಗಿ ಕೊಟ್ಟು ವಿವರಿಸಲಾಗಿದೆ. ಆದುದರಿಂದ ಈ ಗ್ರಂಥಸೂಚಿಯನ್ನು ಉಪಯೋಗಿಸುವವರು ತಮಗೆ ಬೇಕಾದ ವಿಶಿಷ್ಟ ವಿಷಯವನ್ನು ಸುಲಭವಾಗಿ ಗುರತಿಸಬಹುದು. ವರ್ಣಾನುಕ್ರಮದ ಮೇರೆಗೆ ರಚಿಸಲಾದ ವಿಭಾಗದಲ್ಲಿ ವಿಷಯಗಳ ಪಟ್ಟಿಯು ಇರುತ್ತದೆ. ಮತ್ತು ವರ್ಣಾನುಕ್ರಮದ ಮೇರೆಗೆ ರಚಿಸಲಾದ ವಿಭಾಗದಲ್ಲಿ ವಿಷಯಗಳ ಮೇರೆಗೆ ಯಾವತ್ತೂ ವಿಷಯಗಳ ಪಟ್ಟಿಯು ಇರುತ್ತದೆ. ಮತ್ತು ವಣಾಕ್ರಮದ ವಿಭಾಗದಲ್ಲಿ ಕೊಡಲಾದ ವರ್ಗ ಸಂಖ್ಯೆಗಳ ಮುಖಾಂತರ ವಿಷಯಗಳ ಮೇರೆಗೆ ರಚಿಸಲಾದ ವಿಭಾಗದಲ್ಲಿ ಕಾಣಿಸಲಾದ ಯಾವದೊಂದು ವಿಶಿಷ್ಟ ವಿಷಯದ ಮೇಲೆ ಇರುವ ಗ್ರಂಥಗಳನ್ನು ಕಂಡು ಹಿಡಿಯಲು ಓದುಗರಿಗೆ ಸಹಾಯಕವಾಗುತ್ತವೆ.

**ಕನ್ನಡ ಸಾಹಿತ್ಯ ದರ್ಶನ :**

ಕನ್ನಡ ಸಾಹಿತ್ಯ ದರ್ಶನ– ಶ್ರೀನಿವಾಸ ಹಾವನೂರ ಅವರು ೧೯೫೬ ರಲ್ಲಿ ಇನ್ನೊಂದು ಪುಸ್ತಕ ಸೂಚಿಯನ್ನು ಪ್ರಕಟಿಸಿದ್ದಾರೆ. ಇದು ೧೯೫೬ ರಲ್ಲಿ ಅಚ್ಚಾದ. ಪ್ರಕಟವಾದ ಕನ್ನಡ ಪುಸ್ತಕಗಳ ಪಟ್ಟಿಯಾಗಿದೆ.[೯]

**ಭಾರತೀಯ ರಾಷ್ಟ್ರೀಯ ಗ್ರಂಥಸೂಚಿ :**

ಪುಸ್ತಕ ಡೆಲಿವರಿ ಕಾಯಿದೆಗಳು. ೧೯೫೪ (ತಿದ್ದುಪಡಿ ೧೯೫೬) ರಲ್ಲಿ " ಭಾರತೀಯ ರಾಷ್ಟ್ರೀಯ ಗ್ರಂಥಸೂಚಿಯು ೧೯೫೬ ರಲ್ಲಿ ಪ್ರಕಟಗೊಂಡಿತು.[೧೦] ಪುಸ್ತಕ ಡೆಲಿವರಿ ಕಾಯಿದೆಯಂತೆ ಭಾರತದಲ್ಲಿ ಪ್ರಕಟಗೊಂಡ ಪ್ರತಿಯೊಂದು ಪುಸ್ತಕ ಪ್ರತಿಯನ್ನು ರಾಷ್ಟ್ರೀಯ ಗ್ರಂಥಾಲಯಕ್ಕೆ ಕಳಿಸಿಕೊಡಬೇಕಾಗಿತ್ತು. ಹಾಗೆಯೇ ಈ ಗ್ರಂಥಾಲಯಗಳಿಗೆ ಬಂದ ಪುಸ್ತಕಗಳನ್ನು ಆಯಾ ವರ್ಷವೇ ಪಟ್ಟಿ ಮಾಡಿ ರಾಷ್ಟ್ರೀಯ ಗ್ರಂಥಸೂಚಿಯನ್ನು ಪ್ರಕಟಿಸಲಾಯಿತು. ಆದರೆ ಈ ಸೂಚಿಯ ಬೆಲೆಯು ದುಬಾರಿಯಾದುದರಿಂದ ವೈಯಕ್ತಿಕವಾಗಿ ಕೊಳ್ಳುವವರಿಗೆ, ಗ್ರಂಥಾಲಯಗಳಿಗೂ, ಕೊಳ್ಳಲು ಸಾಧ್ಯವಾಗಲಿಲ್ಲವೆನಿಸುತ್ತದೆ. ಯಾಕೆಂದರೆ ಹಾಗೆ ಪ್ರಕಟಗೊಂಡ ಆ ಗ್ರಂಥಸೂಚಿಯ ಬೆಲೆ ಸಂಘ-ಸಂಸ್ಥೆಗಳಿಗೂ ಕೂಡ ಕೈಗೆಟುಕುವಂತಿರಲಿಲ್ಲ. ಆದ್ದರಿಂದ ರಾಜ್ಯ ಸರಕಾರಗಳು ಮೇಲಿನ ಗ್ರಂಥಸೂಚಿಯಿಂದ ಪ್ರೇರೇಪಣೆ ಪಡೆದುಕೊಂಡು ತಮ್ಮ ಸ್ವಂತ ಪ್ರಕಟಣೆಗಳನ್ನು ಮತ್ತು ರಾಷ್ಟ್ರೀಯ ಗ್ರಂಥಸೂಚಿಯಲ್ಲಿ ಪ್ರಕಟಗೊಂಡ ಸ್ಥಳೀಯ ಪ್ರಕಟಣೆಗಳನ್ನು ಆಯ್ದು ರಾಷ್ಟ್ರೀಯ ಗ್ರಂಥಸೂಚಿಯಲ್ಲಿ ಕನ್ನಡ ಭಾಗದ ಅಡಿಯಲ್ಲಿ ೧೯೫೯, ೧೯೬೦, ೧೯೬೧ ಮತ್ತು ೧೯೬೨ ರ ವರೆಗೆ ಮೈಸೂರು ಸರಕಾರ ಪ್ರಕಟಿಸಿತು.

ಈ ಪ್ರಕಟಣೆಯು ಗ್ರಂಥಾಲಯ ವಿಜ್ಞಾನದ ಸಿದ್ಧಾಂತಗಳಿಗನುಗುಣವಾಗಿ ವರ್ಗೀಕರಣ ಮಾಡಿ, ಸೈದ್ಧಾಂತಿಕ ಮತ್ತು ವೈಜ್ಞಾನಿಕವಾಗಿ ಗ್ರಂಥಗಳ ಸೂಚಿಯನ್ನು ಇಲ್ಲಿ ಅಳವಡಿಸಲಾಗಿದೆ. ಇದರ ಸಂಪಾದಕರು ರಾಷ್ಟ್ರೀಯ ಗ್ರಂಥಾಲಯ ಕಲ್ಕತ್ತಾದ ಮುಖ್ಯಸ್ಥ ಕನ್ನಡಿಗ, ಪದ್ಮಶ್ರೀ ಬಿ. ಎಸ್. ಕೇಶವನ್; ಅವರಿಗೆ ಸಹಾಯಕರಾಗಿ ಕೆಲಸ ನಿರ್ವಹಿಸಿದವರು ಹೆಚ್. ಎಸ್. ಆನಂದರಾಮು. ಆಗಿನ ಮೈಸೂರು ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಪ್ರಕಟಿಸಿತ್ತು. ನಾಲ್ಕು ಸಂಪುಟಗಳು ಒಂದರ ನಂತರ ಒಂದು ಹೊರಬಂದು ಕನ್ನಡ ಗ್ರಂಥಸೂಚಿ ನಿಯಮಗಳಿಗೆ ಭದ್ರ ಬುನಾದಿಯನ್ನು ಹಾಕಲಾಯಿತು.

ಇಲ್ಲಿಂದ ಒಂದೊಂದೇ ಕನ್ನಡ ಗ್ರಂಥಸೂಚಿಗಳು ಪ್ರಕಟಣೆ ಪ್ರಾರಂಭಿಸಿದವು. ಶ್ರೀನಿವಾಸ ಹಾವನೂರರ " ಒಂದು ಸಾವಿರದ ಕನ್ನಡ ಪುಸ್ತಕಗಳ ಪಟ್ಟಿ ". ಇದು ಇಂಗ್ಲೀಷಿನಲ್ಲಿದ್ದು ಕನ್ನಡದಲ್ಲಿ ೧೯೬೧ ರಲ್ಲಿ ಪ್ರಕಟವಾಯಿತು.

ಆಗಿನ ಮೈಸೂರು ಸರಕಾರವು ಶಿಕ್ಷಣ ನಿರ್ದೇಶನಾಲಯದ ಅಡಿಯಲ್ಲಿ ಎರಡು ಪ್ರಕಟಣೆಗಳನ್ನು ಹೊರತಂದಿತು. " ವಿಜ್ಞಾನ ಮತ್ತು ಸಮಾಜವಿಜ್ಞಾನ ಗ್ರಂಥಗಳ ಪರಿಚಯ ಮತ್ತು ಗ್ರಂಥ ಪರಿಚಯ " –ಶ್ರೀನಿವಾಸ ಹಾವನೂರ ಅವರೇ ಈ ಸೂಚಿಯ ಸಂಪಾದಕರು. ಶಿಕ್ಷಣ ನಿರ್ದೇಶನಾಲಯ ವಿಭಾಗ, ಧಾರವಾಡದಲ್ಲಿ ೧೯೬೬ ರಲ್ಲಿ ಇಂತಹ ಎರಡು ಪ್ರಕಟಣೆಗಳನ್ನು ಹೊರತರಲಾಯಿತು. ಹಾಗೆಯೇ ಶ್ರೀನಿವಾಸ ಹಾವನೂರರು ಇನ್ನೊಂದು ಗ್ರಂಥಸೂಚಿಯನ್ನು ಪ್ರಕಟಿಸಿದ್ದಾರೆ. " ಗ್ರಂಥ ಪರಿಚಯ "[೧೧] ವೆಂಬ ಶೀರ್ಷಿಕೆಯಡಿಯಲ್ಲಿ ಕನ್ನಡ ಪ್ರಕಾಶನ ಕೇಂದ್ರ, ಬೆಂಗಳೂರ ಅವರು ಪ್ರಕಟಿಸಿದ್ದಾರೆ.

## ೪.೨.೩.೨ : ಸೂಚಿ ೨೦೦೦

**ಕನ್ನಡ ಪ್ರಕಟಣೆಗಳು :** ಸೂಚಿ ೨೦೦೦. ಇದು ನವದೆಹಲಿ, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ. ಇದು ನ್ಯಾಶನಲ್ ಬುಕ್ ಟ್ರಸ್ ಪ್ರಕಟಿಸುವ ತನ್ನ ಪ್ರಕಟಣೆಗಳು, ಪುಸ್ತಕಗಳ ವಿವರಣಾತ್ಮಕ ಪಟ್ಟಿಯಾಗಿದೆ. ಇಲ್ಲಿ ಒಂದು ವಿಶೇಷವೇನೆಂದರೆ ಪುಸ್ತಕಗಳ ವಿವರಣ ಪಟ್ಟಿಯೊಂದಿಗೆ ಅದರ ಅಂತರ್‌ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪ್ರಚಲಿತವಿರುವ ಒಟ್ಟು ಪುಸ್ತಕಗಳ ಅಂಕೆ-ಸಂಖ್ಯೆಗಳನ್ನು ನಾವು ಗಣನೆಗೆ ತೆಗೆದುಕೊಳ್ಳಲು ಇದು ಸಹಾಯಕವಾಗುತ್ತದೆ. ಇನ್ನೊಂದು ಮುಖ್ಯವಾದುದೇನೆಂದರೆ ಖಾಸಗಿ ಪ್ರಕಾಶಕರಿಗೂ ಹಾಗೂ ಸರಕಾರಿ ಸಂಸ್ಥೆಗಳು ಪ್ರಕಟಿಸುವ ಪುಸ್ತಕ ಪಟ್ಟಿಯಂತೆ ಇದು ಇಲ್ಲದುದು. ಸೂಚಿ ನಿಯಮಗಳನ್ನು ಅಳವಡಿಸಿಕೊಂಡು ಶೀರ್ಷಿಕೆ - ಲೇಖಕ - ಅನುವಾದಕ - ವಿಷಯ (ಸಾರಸಂಗ್ರಹ) ಗಳನ್ನೊಳಗೊಂಡು ಅಂತರ್‌ರಾಷ್ಟ್ರೀಯ ಗ್ರಂಥ ಸಂಖ್ಯೆಯನ್ನು ವಿಶೇಷವಾಗಿ ನಮೂದಿಸಲಾಗಿದೆ. ಮೊದಲ ಏಳು ಪುಟಗಳಲ್ಲಿ ಬುಕ್ ಟ್ರಸ್ಟ್ ಮಾಲಿಕೆಗಳು, ಪ್ರಕಾಶನ ಸಂಸ್ಥೆಯ ಧ್ಯೇಯೋದ್ದೇಶಗಳು, ಪ್ರಕಾಶನದ ವಿವಿಧ ವಿಷಯುಗಳು ಇಲ್ಲಿ ಸೇರಿರುತ್ತವೆ. ತನ್ನ ಕಾಯಮಕ್ರಮದ ರೂಪ-ರೇಷೆಗಳು ಇಲ್ಲಿ ಉಲ್ಲೇಖಿತವಾಗಿವೆ.

ನಮ್ಮ ಪ್ರಕಟಣೆಗಳಿಗೆ ನಿಮ್ಮ ಸಮೀಪದ
ಟ್ರಸ್ಟ್ ಕಾರ್ಯಾಲಯವನ್ನು ಸಂಪರ್ಕಿಸಿ:
ಪ್ರಧಾನ ಕಛೇರಿ
ಎ-5, ಗ್ರೀನ್ ಪಾರ್ಕ್
ಹೊಸ ದೆಹಲಿ-110016
ದೂರವಾಣಿ: 6564020, 6564540, 6564667,
ಟೆಲೆಕ್ಸ್: 031-73034 NBT IN
ತಂತಿ: NABUTRUST
ಫ್ಯಾಕ್ಸ್: 6851795
E-mail:nbtindia@ndb.vsnl.net.in
ದಕ್ಷಿಣ ಪ್ರಾದೇಶಿಕ ಕಾರ್ಯಾಲಯ
ಹಾಲ್ ನಂ. 1, ಬಿ.ಡಿ.ಎ. ಷಾಪಿಂಗ್ ಕಾಂಪ್ಲೆಕ್ಸ್,
ಬನಶಂಕರಿ ಎರಡನೇ ಹಂತ,
ಬೆಂಗಳೂರು-560070
ದೂರವಾಣಿ: 6711994
ಪಶ್ಚಿಮ ಪ್ರಾದೇಶಿಕ ಕಾರ್ಯಾಲಯ
ಮುನಿಸಿಪಲ್ ಉರ್ದು ಪ್ರೈಮರಿ ಶಾಲೆ ಕಟ್ಟಡ
ಬಾಬುಲ್ನಾ ಟ್ಯಾಂಕ್ ಕ್ರಾಸ್ ಲೇನ್
ಜೆ.ಜೆ. ಆಸ್ಪತ್ರೆ ಎದುರು
ಮುಂಬೈ-400009
ದೂರವಾಣಿ: 3720442
ಟೆಲೆಕ್ಸ್: 011-73814 BOOK IN
ಪೂರ್ವ ಪ್ರಾದೇಶಿಕ ಕಾರ್ಯಾಲಯ
5-ಎ, ಭವಾನಿ ದತ್ತ ಲೇನ್
ಕಲ್ಕತ್ತಾ-700073
ದೂರವಾಣಿ: 2413899
ಟೆಲೆಕ್ಸ್: 021-2756 NBT IN
ಟ್ರಸ್ಟಿನ ಪ್ರಕಟಣೆಗಳು ಪ್ರಕಾಶನ ವಿಭಾಗದ ಸೇಲ್ಸ್ ಎಂಪೋರಿಯಾ
ಮತ್ತು ಪ್ರಮುಖ ಪುಸ್ತಕ ವ್ಯಾಪಾರಿಗಳ ಬಳಿ ದೊರೆಯುತ್ತವೆ.



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಸೂಚಿ 2000

# ಕನ್ನಡ
## ಪ್ರಕಟಣೆಗಳು

### ಭಾರತ-ದೇಶ ಮತ್ತು ಜನ

ಈ ಮಾಲಿಕೆಯ ಪುಸ್ತಕಗಳು ಭಾರತದ ಸಂಮಿಶ್ರ ಹಾಗೂ ಜೀವಂತ ಸ್ವರೂಪಗಳನ್ನು ಸಂಪನ್ನಗೊಳಿಸಿರುವ ವೈವಿಧ್ಯಮಯ ಭೌತಿಕ ಪರಿಸರ, ಸಾಂಸ್ಕೃತಿಕ ಪರಂಪರೆಗಳು, ಸಸ್ಯವರ್ಗ ಮತ್ತು ಪ್ರಾಣಿವರ್ಗದ ಜಗತ್ತನ್ನು ಪರಿಚಯಿಸುತ್ತವೆ. ಪರಿಣತರು ಸುಸ್ಪಷ್ಟ, ಸರಳ ಹಾಗೂ ತಾಂತ್ರಿಕವಲ್ಲದ ಭಾಷಾ ಶೈಲಿಯಲ್ಲಿ ಬರೆದ ಈ ಪುಸ್ತಕಗಳು ಈ ವಿಷಯಗಳ ಪರಿಚಯವೇ ಇಲ್ಲದಂಥ ಓದುಗರಿಗೂ ಉಪಯುಕ್ತ-ವಾಗಿರುತ್ತವೆಯಲ್ಲದೆ ಇತ್ತೀಚಿನ ಮಾಹಿತಿಯನ್ನು ನೀಡುತ್ತವೆ.

### ತರುಣ ಭಾರತೀ

ತರುಣ ಭಾರತೀ ಪುಸ್ತಕಮಾಲೆಯು 18 ವರ್ಷದ ಯುವ ಓದುಗರಿಗೆ ತಾವು ಮುಂಬರುವ ವರ್ಷಗಳಲ್ಲಿ ಎದುರಿಸಬೇಕಾಗಿ ಬರುವ ಸಾಮಾಜಿಕ, ಆರ್ಥಿಕ ಹಾಗೂ ರಾಜನೈತಿಕ ಗ್ರಹಿಕೆಗಳು, ವಿಚಾರಗಳು ಹಾಗೂ ಆಯ್ಕೆಗಳ ಬಗ್ಗೆ ಪರಿಚಯ ಮಾಡಿಕೊಡುವ ಉದ್ದೇಶ ಹೊಂದಿದೆ. ಈ ಪುಸ್ತಕಮಾಲೆಯಲ್ಲಿ ಸಾಹಸ ಕಾರ್ಯಗಳು ಹಾಗೂ ಯಾತ್ರೆಗಳ ಕಥನಗಳು ಮತ್ತು ಉದ್ಯೋಗಾವಕಾಶಗಳಿಗೆ ಸಂಬಂಧಿಸಿದ ಮಾಹಿತಿ ನೀಡುವ ಪುಸ್ತಕಗಳೂ ಸೇರಿವೆ.

### ಜನಪ್ರಿಯ ವಿಜ್ಞಾನ ಮಾಲೆ

ಓದು-ಬರಹ ಕಲಿತ ಸಾಮಾನ್ಯ ಓದುಗನಿಗೆ ತನ್ನ ಸುತ್ತಮುತ್ತಲಿನ ಜೀವನದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮಹತ್ವವನ್ನು ಅರಿಯಲು ನೆರವಾಗುವುದು ಈ ಮಾಲೆಯ ಉದ್ದೇಶ. ಈ ಮಾಲೆಯ ಪುಸ್ತಕಗಳಲ್ಲಿ, ಸಾಧ್ಯವಾದೆಡೆಯಲ್ಲೆಲ್ಲಾ, ವಿಜ್ಞಾನ ಕ್ಷೇತ್ರಕ್ಕೆ ಭಾರತ ನೀಡಿರುವ ಕೊಡುಗೆಯತ್ತ ಬೆಳಕು ಚೆಲ್ಲಲಾಗುವುದು. ಸರಳವಾಗಿ, ಸುಲಭವಾಗಿ ಅರ್ಥವಾಗುವ ಶೈಲಿಯಲ್ಲಿ ಬರೆಯಲಾದ ಈ ಪುಸ್ತಕಗಳಲ್ಲಿ ದೈನಂದಿನ ಜೀವನದ ಉದಾಹರಣೆಗಳನ್ನು ನೀಡಲಾಗುವುದು. ರೇಖಾಚಿತ್ರಗಳು, ನಕ್ಷೆಗಳು ಮತ್ತು ಛಾಯಾಚಿತ್ರಗಳು ಪಠ್ಯಸಾಮಗ್ರಿಯನ್ನು ಸುಸ್ಪಷ್ಟಗೊಳಿಸುತ್ತವೆ.

### ಇತರ ಪ್ರಕಟಣೆಗಳು

ಯಾವುದೇ ಪುಸ್ತಕಮಾಲೆಗೆ ಸೇರದ ಕೆಲವು ಮಹತ್ವಪೂರ್ಣ ಪುಸ್ತಕಗಳನ್ನು ಇತರ ಪ್ರಕಟಣೆಗಳು ಎಂದು ವರ್ಗೀಕರಿಸಲಾಗಿದೆ.

### ಅಂತರ ಭಾರತೀಯ ಪುಸ್ತಕಮಾಲೆ

ಈ ಪುಸ್ತಕಮಾಲೆಯು ವಿವಿಧ ಪ್ರದೇಶಗಳ ಸೃಜನಶೀಲ ಸಾಹಿತ್ಯದ ಕೊಡು-ಕೊಳ್ಳುವಿಕೆಯ ಮೂಲಕ ರಾಷ್ಟ್ರೀಯ ಐಕ್ಯತೆಗೆ ಉತ್ತೇಜನ ನೀಡುವ ಉದ್ದೇಶ ಹೊಂದಿದೆ. ಇದರಲ್ಲಿ ವಿವಿಧ ಭಾಷೆಗಳ ಸುಪ್ರಸಿದ್ಧ ಕೃತಿಗಳು ಸೇರಿವೆ. ಇವುಗಳಲ್ಲಿ ಪ್ರಮುಖವಾಗಿ ಕಾದಂಬರಿಗಳು ಅಥವಾ ಕಥೆಗಳು ಸೇರಿವೆ. ಅನ್ಯ ಭಾಷೆಗಳ ಓದುಗರಿಗೆ ಅನುವಾದದ ಮೂಲಕ ಇವನ್ನು ಒದಗಿಸಲಾಗುತ್ತದೆ. ಅಂತರ ಭಾರತೀಯ ಪುಸ್ತಕಮಾಲೆಯಲ್ಲಿ ಕೇವಲ ಸಮಕಾಲೀನ ಕೃತಿಗಳನ್ನೇ ಪ್ರಕಟಿಸಲಾ-ಗುವುದಾದ್ದರಿಂದ 'ಕ್ಲಾಸಿಕ್' ಎನ್ನಬಹುದಾದ ಸಾರ್ವಕಾಲಿಕ ಕೃತಿಗಳನ್ನು 'ಭಾರತೀಯ ಸಾಹಿತ್ಯ ನಿಧಿ' ಎಂಬ ನಮ್ಮ ಇನ್ನೊಂದು ಪುಸ್ತಕಮಾಲೆಯಲ್ಲಿ ಪ್ರಕಟಿಸುತ್ತೇವೆ.



### ಜಾನಪದ ಮಾಲೆ

ಈ ಪುಸ್ತಕಮಾಲೆಯು ದೇಶದ ಒಂದು ಪ್ರದೇಶದಲ್ಲಿನ ಜನರ ಸಾಂಸ್ಕೃತಿಕ ವೈಶಿಷ್ಟ್ಯವನ್ನು ಮತ್ತೊಂದು ಪ್ರದೇಶದ ಓದುಗರಿಗೆ ಪರಿಚಯಿಸುವ ಉದ್ದೇಶವನ್ನು ಹೊಂದಿದೆ. ಈ ಮಾಲೆಯ ಪುಸ್ತಕಗಳಲ್ಲಿ ಆಯಾ ಪ್ರದೇಶಗಳು,ಜನ, ಕಾಲ್ಪನಿಕ ಕಥೆ, ಪೌರಾಣಿಕ ಕಥೆಗಳು, ಧರ್ಮ, ರೀತಿ-ನೀತಿಗಳು, ಸಂಪ್ರದಾಯಗಳು, ಪರಂಪರೆ, ಜಾತ್ರೆಗಳು, ಹಬ್ಬ-ಹರಿದಿನಗಳು, ಸಂಗೀತ, ನೃತ್ಯ, ನಾಟಕ, ಕಲೆ, ಕರಕುಶಲತೆ, ಜಾನಪದ ಸಾಹಿತ್ಯ ಮುಂತಾದ ವಿಷಯಗಳ ವಿವರಣೆಗಳು ಇರುತ್ತವೆ.

ದೇಶ-ವಿದೇಶಗಳ ಜಾನಪದ ಕಥೆಗಳ ಸಂಕಲನಗಳನ್ನೂ ಪ್ರಕಟಿಸುವುದರ ಮೂಲಕ ಈ ಪುಸ್ತಕಮಾಲೆಗೆ ಹೊಸ ರೂಪ ನೀಡಲಾಗುತ್ತಿದೆ.

### ರಾಷ್ಟ್ರೀಯ ಜೀವನಚರಿತ್ರೆ ಮಾಲೆ

ಈ ಪುಸ್ತಕಮಾಲೆಯು ಭಾರತೀಯ ಸಮಾಜ, ಸಂಸ್ಕೃತಿ, ವಿಜ್ಞಾನ, ಅರ್ಥವ್ಯವಸ್ಥೆ ಹಾಗೂ ರಾಜನೀತಿಯ ಜೊತೆಗೆ ಭಾರತೀಯ ಚಿಂತನೆಯ ವಿಕಾಸಕ್ರಿಯೆಯಲ್ಲಿ ಅಸಾಧಾರಣ ಕೊಡುಗೆ ಸಲ್ಲಿಸಿರುವ ಭಾರತೀಯ ಮಹನೀಯರ-ಮಹಿಳೆಯರ ಜೀವನಚರಿತ್ರೆಯನ್ನು ಪ್ರಕಟಿಸುವ ಉದ್ದೇಶ ಹೊಂದಿದೆ. ಈ ಪುಸ್ತಕಗಳಲ್ಲಿ ಸಂಬಂಧಿತ ವ್ಯಕ್ತಿಗಳ ಜೀವನ ಕಾಲದ ವಿಶ್ವಾಸಾರ್ಹ, ನಿರ್ಲಿಪ್ತ, ವಿಸ್ತೃತ ಹಾಗೂ ವಿಶ್ಲೇಷಣಾತ್ಮಕ ವಿವರಣೆ ಇರುತ್ತದೆ. ಕಲಾ ಪ್ರಕಾರಗಳು, ಸಾಮಾಜಿಕ ಮತ್ತು ಸಾಂಸ್ಕೃತಿಕ ಆಂದೋಲನಗಳು ಹಾಗೂ ವೈಚಾರಿಕ ನಿಲುವುಗಳನ್ನು ಪ್ರತಿಬಿಂಬಿಸುವ ಜೀವನಚರಿತ್ರೆಗಳ ಸಂಕಲನಗಳನ್ನೂ ಪ್ರಕಟಿಸಲು ಈಗ ಯೋಜಿಸಲಾಗಿದೆ.

### ನೆಹರೂ ಬಾಲ ಪುಸ್ತಕಾಲಯ

ಈ ಪುಸ್ತಕಮಾಲೆಯ ಉದ್ದೇಶ ಮಕ್ಕಳು ಸ್ವಯಂ ಇಚ್ಛೆಯಿಂದ ಓದುವಂಥ ಮನೋರಂಜಕ ಹಾಗೂ ಮಾಹಿತಿಪೂರ್ಣ ಸಾಹಿತ್ಯದ ಸಮೃದ್ಧ ಭಂಡಾರವನ್ನು ನಿರ್ಮಿಸುವುದು. ದೇಶಾದ್ಯಂತ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ವಿವಿಧ ವಿಷಯಗಳ ಬಗ್ಗೆ ಏಕರೂಪವಾದ ಓದುವ ಸಾಮಗ್ರಿಯನ್ನು ಒದಗಿಸುವುದರಿಂದ ರಾಷ್ಟ್ರೀಯ ಐಕ್ಯತೆಗೂ ಪ್ರೋತ್ಸಾಹ ನೀಡಿದಂತಾಗುವುದು.

ಈ ಮಾಲೆಯ ಪುಸ್ತಕಗಳನ್ನು ನಾಲ್ಕು ವಯೋಮಿತಿಗಳ ಮಕ್ಕಳ ಉಪಯೋಗ-ಕ್ಕಾಗಿ ಪ್ರಕಟಿಸಲಾಗುತ್ತದೆ-ಶಾಲಾಪೂರ್ವ ವಯಸ್ಸಿನ ಮಕ್ಕಳಿಗೆ, 6 ರಿಂದ 8 ವರ್ಷದವರಿಗೆ, 9 ರಿಂದ 11, ಮತ್ತು 12 ರಿಂದ 14 ವರ್ಷದ ಮಕ್ಕಳಿಗೆ. ಆಯಾ ವಯೋಮಾನದ ಮಕ್ಕಳ ಆವಶ್ಯಕತೆಗಳಿಗನುಗುಣವಾಗಿ ಇವನ್ನು ರಚಿಸಲಾಗುತ್ತದೆ. ಈ ಪುಸ್ತಕಗಳ ಅಂದ ಚೆಂದವನ್ನು ಕಾಯ್ದುಕೊಳ್ಳಲು ಚಿತ್ರಗಳನ್ನು ಬರೆಸುವ ಕಾರ್ಯವನ್ನೂ ಪ್ರತ್ಯೇಕವಾಗಿ ಮಾಡಿಸಲಾಗುವುದು. ಎಲ್ಲಾ ಪುಸ್ತಕಗಳಲ್ಲೂ ವರ್ಣಚಿತ್ರಗಳು, ಕಪ್ಪು-ಬಿಳುಪು ಚಿತ್ರಗಳು, ರೇಖಾಚಿತ್ರಗಳು ಹಾಗೂ ಛಾಯಾ-ಚಿತ್ರಗಳು ಇರುತ್ತವೆ. ಶಾಲಾಪೂರ್ವ ಮಕ್ಕಳಿಗಾಗಿ ಸಿದ್ಧಪಡಿಸಿರುವ ಪುಸ್ತಕಗಳು ವರ್ಣಚಿತ್ರಗಳ ಮೂಲಕ ಕಥೆ ಹೇಳುತ್ತವೆ. ಓದುವ ಸಾಮಗ್ರಿ ಇರುವುದಿಲ್ಲ. ಇದ್ದರೂ ಕೆಲವೇ ಪದಗಳಿರುತ್ತವೆ.

ಎರಡುನೂರಾ ಮೂವತ್ತೊಂದು ಪುಸ್ತಕಗಳ ವಿವರಣಾತ್ಮಕ (ಸಾರಸಂಗ್ರದೊಂದಿಗೆ) ಪಟ್ಟಿ ಇದಾಗಿದೆ. ಜೊತೆಗೆ ಹತ್ತೊಂಬತ್ತು ಪ್ರಕಟಣೆಯ ಸಿದ್ಧತೆಯಲ್ಲಿ ಇರುವ ಪುಸ್ತಕಗಳ ವಿವರಣಾತ್ಮಕ ಪಟ್ಟಿಯನ್ನು ನೀಡಲಾಗಿದೆ. ಒಟ್ಟು ಎರಡುನೂರಾ ಐವತ್ತು ಪುಸ್ತಕಗಳ (ವಿವರಣಾತ್ಮಕ) ಪಟ್ಟಿ ಇದಾಗಿದ್ದು ಕೊಳ್ಳುಗರಿಗೆ, ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ಶಿಕ್ಷಕರಿಗೆ ಇದೊಂದು ವಿಶೇಷ ಕೈಗನ್ನಡಿಯಾಗಿದೆ.

ನ್ಯಾಶನಲ್ ಬುಕ್ ಟ್ರಸ್ಟ್‌ನ ವಿಶೇಷ ಸೂಚಿ ಇದಾಗಿದ್ದು ಖಾಸಗಿ ಅಥವಾ ವಿಶ್ವವಿದ್ಯಾಲಯಗಳ ಪ್ರಕಟಣೆಗಳ ಪಟ್ಟಿಯಂತೆ ಇದು ಇಲ್ಲ.

**೪.೨.೩.೩ : ಮದ್ರಾಸ ಹಸ್ತಪ್ರತಿ ಸೂಚಿಗಳು**

೧. ಮೆಕೆಂರಿಝಿ ಕಲೆಕ್ಷನ್ : ಎ ಡಿಸ್ಕ್ರಿಟ್ಟಿವ್ ಕ್ಯಾಟಲಾಗ್ ಆಫ್ ದಿ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್, ಸಂ. ಎಚ್. ಎಚ್. ವಿಲ್ಸನ್ : ೧೮೨೮ ಪ್ರತಿ ೧೫೨

೨. ಅಲ್ಪಾಬೆಟಿಕಲ್ ಇಂಡೆಕ್ಸ್ ಆಫ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನ್‌ಮೆಂಟಲ್ ಒರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ - ೧೮೮೩

೩. ಆನ್ ಅಲ್ಪಾಬೆಟಿಕಲ್ ಇಂಡೆಕ್ಸ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ. ಗವರ್ನ್‌ಮೆಂಟಲ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪಾದಕ– ಎಸ್. ಕುಪ್ಪುಸ್ವಾಮಿ ಶಾಸ್ತ್ರಿ; (೧೯೨೯), ಪ್ರತಿ ೧೫೪೦

೪. ಆನ್ ಅಲ್ಪಾಬೆಟಿಕಲ್ ಇಂಡೆಕ್ಸ್ ಆಫ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂ. ಟಿ. ಚಂದ್ರಶೇಖರನ್; (೧೯೫೨), ಪ್ರತಿ ೧೮೨೯

೫. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂ. ೧, ಸಂ. ಎಸ್. ಕುಪ್ಪುಸ್ವಾಮಿ ಶಾಸ್ತ್ರಿ, ೧೯೩೪, ಪ್ರತಿ ೧೩೮

೬. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೩, ಸಂ. ಎಸ್. ಕುಪ್ಪುಸ್ವಾಮಿ ಶಾಸ್ತ್ರಿ, ಮತ್ತು ಪಿ. ಪಿ. ಎಸ್. ಶಾಸ್ತ್ರಿ; ೧೯೩೭, ಪ್ರತಿ ೨೭೮

೭. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೩, ಸಂ. ಎಸ್. ಕುಪ್ಪುಸ್ವಾಮಿ ಶಾಸ್ತ್ರಿ ಮತ್ತು ಪಿ. ಪಿ. ಎಸ್. ಶಾಸ್ತ್ರಿ– ೧೯೩೯, ಪ್ರತಿ ೧೫೮

೮. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೪, ಸಂ. ಎ. ಶಂಕರನ್– ೧೯೪೬, ಪ್ರತಿ ೩೪೮

೯. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೫, ಸಂ. ಟಿ. ಚಂದ್ರಶೇಖರನ್– ೧೯೫೧, ಪ್ರತಿ ೨೧೩

೧೦. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೬, ಸಂ. ಟಿ. ಚಂದ್ರಶೇಖರನ್– ೧೯೫೨, ಪ್ರತಿ ೨೩೩

೧೧. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೭, ಸಂ. ಟಿ. ಚಂದ್ರಶೇಖರನ್– ೧೯೫೮, ಪ್ರತಿ ೧೪೪

೧೨. Mackenzie Manuscripts, Summaries of the historical manuscripts in the mackenzie collection, Vol. II (Telugu, Kannada, Marathi), T. V. Machingam, 1976

## ಗವರ್ನ್‌ಮೆಂಟ್ ಓರಿಯಂಟಲ್ ಮನ್ಯುಸ್ಕ್ರಿಪ್ಟ್ಸ್ ಲೈಬ್ರರಿ ಮದ್ರಾಸ ಹಸ್ತಪ್ರತಿ ಸೂಚಿಗಳು

| ಅನುಕ್ರಮ | ಹಸ್ತಪ್ರತಿ ಸೂಚಿಗಳ ಹೆಸರು | ಅವಧಿ | ಸಂಖ್ಯೆ |
|---|---|---|---|
| ೧. | ಮೆಕೆಂರಿಖು ಕಲೆಕ್ಷನ್ಸ್ | ೧೯೨೮ | ೧೫೨ |
| ೨. | ಅಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಓರಿಯಂಟಲ್ ಮನ್ಯುಸ್ಕಿಪ್ಟ್ಸ್ | ೧೮೮೩ | – |
| ೩. | ಅಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಕೆನರೀಸ್ ಮನ್ಯುಸ್ಕಿಪ್ಟ್ಸ್ | ೧೯೨೯ | ೧೫೪೦ |
| ೪. | ಅಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಕನ್ನಡ ಮನ್ಯುಸ್ಕಿಪ್ಟ್ಸ್ | ೧೯೫೨ | ೧೮೨೯ |

ಇವುಗಳನ್ನಲ್ಲದೆ ಏಳು ಸಂಪುಟಗಳನ್ನು ಈ ಸಂಸ್ಥೆ ಪ್ರಕಟಿಸಿದೆ :

| ಸಂಪುಟ | ಸಂಪಾದಕರು | ಕಾಲ | |
|---|---|---|---|
| ೧. | ಎಸ್. ಕುಪ್ಪುಸ್ವಾಮಿ ಶಾಸ್ತ್ರಿ | ೧೯೩೪ | ೧೩೮ |
| ೨. | ಎಸ್. ಕುಪ್ಪುಸ್ವಾಮಿ ಶಾಸ್ತ್ರಿ ಮತ್ತು ಪಿ. ವಿ. ಎಸ್. ಶಾಸ್ತ್ರಿ | ೧೯೩೭ | ೨೭೮ |
| ೩. | ಎಸ್. ಕುಪ್ಪುಸ್ವಾಮಿ ಶಾಸ್ತ್ರಿ ಮತ್ತು ಪಿ. ವಿ. ಎಸ್. ಶಾಸ್ತ್ರಿ | ೧೯೩೯ | ೧೫೮ |
| ೪. | ಎಸ್. ಶಂಕರನ್ | ೧೯೪೬ | ೩೪೮ |
| ೫. | ಟಿ. ಚಂದ್ರಶೇಖರನ್ | ೧೯೫೧ | ೨೧೩ |
| ೬. | ಟಿ. ಚಂದ್ರಶೇಖರನ್ | ೧೯೫೨ | ೨೩೩ |
| ೭. | ಟಿ. ಚಂದ್ರಶೇಖರನ್ | ೧೯೫೮ | ೧೪೪ |

### ೪.೨.೩.೪ : ಭಾರತೀಯ ರಾಜ್ಯ ಗ್ರಂಥಸೂಚಿಗಳು (Indian States Bibliographies) :

ಗೋರೆಗಾಂವ, ಇಂಡಿಯನ್ ಡಾಕ್ಯುಮೆಂಟೇಶನ್ ಸೇವಾ ಕೇಂದ್ರವು ೧೯೭೮ ರಲ್ಲಿ ಪ್ರಕಟಿಸಿದೆ, ಇದರ ಸಂಪಾದಕರು ಸತ್ಯಪ್ರಕಾಶರು. ಇದು ಕರ್ನಾಟಕ ಸರಕಾರವು ಪ್ರಕಟಿಸಿದ ಪ್ರಕಟಣೆಗಳನ್ನು ಒಳಗೊಂಡಿದೆ. ಮುಖ್ಯವಾಗಿ ಇಂಗ್ಲೀಷ ಪ್ರಕಟಣೆಗಳನ್ನು ಒಳಗೊಂಡಿರುತ್ತದೆ. ಸರಕಾರದ ಎಲ್ಲ ಇಲಾಖೆಗಳ ಮುಖ್ಯ ಕಾಗದಪತ್ರಗಳ ದಾಖಲೆಯನ್ನು ಇದು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯದ ಬಗ್ಗೆ ಅಭ್ಯಸಿಸುವವರಿಗೆ, ಜ್ಞಾನಪಿಪಾಸುಗಳಿಗೆ ಇದು ಆಕರಸೂಚಿಯಾಗಿರುತ್ತದೆ.

### ೪.೨.೩.೫ : ಉತ್ತರ ಭಾರತದ ಕನ್ನಡ ಹಸ್ತಪ್ರತಿ - ಇತರ ದಾಖಲೆಗಳ ಸೂಚಿ, ೧೯೯೨

ಈ ಗ್ರಂಥಸೂಚಿ ಉತ್ತರ ಭಾರತದ ಕನ್ನಡ ಹಸ್ತಪ್ರತಿ ಮತ್ತು ಇತರ ದಾಖಲಾತಿ ಸೂಚಿಯು ಇದಾಗಿದ್ದು ಕರ್ನಾಟಕದಿಂದ ಬಹುದೂರ ಇರುವ ಕಾಶಿ, ಕೇದಾರ (ಯು. ಪಿ.), ಆರ್‍ರಾ (ಬಿಹಾರ), ಕಲ್ಕತ್ತ (ಪಶ್ಚಿಮ ಬಂಗಾಳ) ರಾಜ್ಯಗಳಲ್ಲಿ ಸಿಕ್ಕ ಪ್ರತಿಗಳಾಗಿದ್ದು ಕನ್ನಡ ಸಾಹಿತ್ಯದ ಬೀಸು ಹರವುಗಳನ್ನು ಇದು ತಿಳಿಯಪಡಿಸುತ್ತದೆ. ನಮ್ಮಿಂದ ದೂರ ಬಹುದೂರ ಇದ್ದ ದಿ. ಡಾ. ವಿ. ಶಿವಾನಂದ ಅವರು ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಕನ್ನಡದ ಪ್ರಾಧ್ಯಾಪಕರು ಮತ್ತು ವಿಭಾಗ ಮುಖ್ಯಸ್ಥರಾಗಿದ್ದವರು. ಅವರು ಈ ಹಸ್ತಪ್ರತಿ ಸೂಚಿ ಸಿದ್ಧಪಡಿಸಿದ್ದಾರೆ. ಕರ್ನಾಟಕದ ಹೊರವಲಯದಲ್ಲಿ ಅದರಲ್ಲೂ ಉತ್ತರ ಭಾರತದಲ್ಲಿ ದೊರಕುತ್ತಿರುವ ಸಾಮಗ್ರಿಗಳ ಸೂಚಿ ಈ ಸಂಪುಟದಿಂದ ನಮಗೆ ದೊರಕುವಂತಾಗಿದ್ದು ಬಹುದಿನಗಳಿಂದಲೂ ಇದ್ದ ಒಂದು ಕೊರತೆಯನ್ನು ಇದು ನಿವಾರಿಸುತ್ತದೆ.

ಕಾಶಿಯ ಜಂಗಮವಾಡಿ ಮಠ ಹಾಗೂ ಆರ್‍ರಾದ ಜೈನ ಸಿದ್ಧಾಂತ ಭವನದ ಗ್ರಂಥಗಳು ಅಪೂರ್ವವಾದ ತಾಳೆವೋಲೆ ಸಾಮಗ್ರಿಗಳಲ್ಲಿದ್ದು, ವಿವಿಧ ಕ್ಷೇತ್ರಗಳ ಅಕ್ಷಯ ಭಂಡಾರವನ್ನು ಸಂರಕ್ಷಿಸಿಕೊಂಡು ಬಂದಿದೆ. ಕಲ್ಕತ್ತಾದ ಏಷ್ಯಾಟಿಕ್ ಸಂಸ್ಥೆಯಲ್ಲಿನ ದಾಖಲೆಗಳನ್ನು ಇಲ್ಲಿ ಸೂಕ್ಷ್ಮ ಛಾಯಾ ಸುರುಳಿ (Micro film strip) ಮೂಲಕ ಪಡೆದು, ಅದನ್ನು ಛಾಯಾಚಿತ್ರದಿಂದ ಪ್ರತಿಗೊಳಿಸಿ ಮತ್ತೆ ಅದನ್ನು ಮುದ್ರಣಕ್ಕೆ ಅಣಿಗೊಳಿಸಲಾಗಿದೆ. ಇಲ್ಲಿನ ದಾಖಲೆಗಳು ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ಮಹತ್ವದ್ದಾಗಿದೆ.

ಕನ್ನಡ ಪೀಠ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨ ರಲ್ಲಿ ಇದನ್ನು ಪ್ರಕಟಿಸಿದೆ.

### ೪.೨.೩.೬ : ಲಿಂಗಾಯತ ಗ್ರಂಥಸೂಚಿ (Lingayat Bibliography) :

೧೯೮೯ ರಲ್ಲಿ ಡಾ. ಎಸ್. ಆರ್. ಗುಂಜಾಳ ಅವರು ಲಿಂಗಾಯತ ಗ್ರಂಥಸೂಚಿಯನ್ನು ಪ್ರಕಟಿಸಿದ್ದಾರೆ. ಇದಕ್ಕೆ ಸಹಾಯ ಮಾಡಿದವರು ಡಾ. ಅಶೋಕ. ಯ. ಅಸುಂಡಿಯವರು. ಗ್ರಂಥಸೂಚಿಯು ಇಂಗ್ಲೀಷಿನಲ್ಲಿಯ

ಸಂಶೋಧನಾ ಪ್ರಬಂಧಗಳನ್ನು ಅಲ್ಲದೆ ಜರ್ಮನ್, ಫ್ರೆಂಚ್, ತೆಲುಗು, ತಮಿಳು, ಸಂಸ್ಕೃತ, ಮರಾಠಿ, ಹಿಂದಿ ಮತ್ತು ಉರ್ದು ಭಾಷೆಗಳಲ್ಲಿಯ ಲೇಖನಗಳನ್ನು, ನಿಯತಕಾಲಿಕೆ ಲೇಖನಗಳನ್ನು, ನಿಯತಕಾಲಿಕೆಗಳು, ವಿಶ್ವಕೋಶಗಳಲ್ಲಿಯ ವಿವರಗಳನ್ನು, ಸಂಶೋಧನಾ ಯೋಜನೆಗಳನ್ನು ಇಲ್ಲಿ ಪಟ್ಟಿ ಮಾಡಿದ್ದಾರೆ.

| | | |
|---|---|---|
| A. | Books | 114 |
| B. | Periodical Articles | 262 |
| C. | Periodicals | 3 |
| D. | Contribution to classics; encyclopeias; etc. | 46 |
| E. | Thesis | 18 |
| F. | Research Projects | 2 |
| | **Total Entries** | **444** |

ಹೀಗೆ ಒಟ್ಟು ನಾಲ್ಕುನೂರಾನಲವತ್ನಾಲ್ಕು ನಮೂದುಗಳಿವೆ.

ಪುಸ್ತಕಗಳಿಗೆ ನಮೂದು ಈ ಕೆಳಗಿನಂತೆ ದಾಖಲಿಸಿದ್ದಾರೆ.

i) ಕೃತಿಕಾರನ ಹೆಸರು

ಅಡ್ಡ ಹೆಸರು (ಸಾಮಾನ್ಯ ರೂಢಿಯಲ್ಲಿರುವಂತೆ), ಸಂಪಾದಕ, ಸಂಕಲನಕಾರ, ಸಂಗ್ರಹಕಾರ..... ಇತ್ಯಾದಿ ....... ನಂತರ ವ್ಯಕ್ತಿಯ ಹೆಸರು, ತಂದೆಯ ಹೆಸರು

ii) ಕೃತಿಯ ಶೀರ್ಷಿಕೆ

ಶೀರ್ಷಿಕೆಯ ಜೊತೆಗೆ ಉಪಶೀರ್ಷಿಕೆ..... ಇತ್ಯಾದಿ

iii) ಮುದ್ರಣ

ಪ್ರಕಾಶನ ಸ್ಥಳ, ಪ್ರಕಾಶಕರ ಸಂಸ್ಥೆಯ ಹೆಸರು, ಪ್ರಕಟಣೆಯ ವರ್ಷ

**ಸಂಶೋಧನಾ ಸಂಪ್ರಬಂಧಗಳು ಮತ್ತು ಪ್ರಬಂಧಗಳು :**

ಸಂಶೋಧಕ / ಲೇಖಕ, ಶೀರ್ಷಿಕೆ, ವಿಶ್ವವಿದ್ಯಾಲಯದ ಹೆಸರು, ಯಾವ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ವಿಶ್ವವಿದ್ಯಾಲಯದ ಸ್ಥಳದ ಹೆಸರು ಮತ್ತು Ph.D. ಸ್ವೀಕರಿಸಿದ್ದು.

**ಪುಸ್ತಕಗಳಲ್ಲಿನ ಲೇಖನಗಳಿಗೆ :**

ಲೇಖನ ಬರೆದವನ ಹೆಸರು, ಶೀರ್ಷಿಕೆ, ಸಂಪಾದಕನ ಹೆಸರು, ಪುಸ್ತಕ ಸಾಮಗ್ರಿಯ ಶೀರ್ಷಿಕೆ, ಮುದ್ರಣ ಮತ್ತು ಪುಟದ ವಿವರ (ಯಾವ ಪುಟಗಳಲ್ಲಿ, ಎಷ್ಟು ಪುಟಗಳು) ಗಳನ್ನು ನೀಡಬೇಕು.

**ಪತ್ರಿಕೆಗಳು :**

ಪತ್ರಿಕೆಯ ಹೆಸರು, ಪ್ರಕಾಶಕ / ಪ್ರಕಾಶನದ ಹೆಸರು, ಅವಧಿ, ಸಂಪುಟ, ಸದ್ಯದಲ್ಲಿ ಪತ್ರಿಕೆ ಇದೆಯೋ / ಕಣ್ಮುಚ್ಚಿದೆಯೋ.

ಹೀಗೆ ವಿವರಗಳನ್ನು ನೀಡಿ ಗ್ರಂಥಸೂಚಿಯನ್ನು ಶ್ರೀಮಂತಗೊಳಿಸಿದ್ದಾರೆ. ಬಹುಶಃ ಇಷ್ಟು ವಿವರಗಳು ಬೇರಾವ ಗ್ರಂಥಸೂಚಿಗಳಲ್ಲಿಲ್ಲ ಎನಿಸುತ್ತದೆ. ವೈಜ್ಞಾನಿಕವಾಗಿ ಮತ್ತು ಸೈದ್ಧಾಂತಿಕವಾಗಿ ಗ್ರಂಥಸೂಚಿಯಲ್ಲಿ ಸಮಗ್ರ ವಿವರಗಳನ್ನು ನೀಡುತ್ತಾರೆ. ಹೀಗಾಗಿ ಸಂಶೋಧಕರಿಗೆ ಇದೊಂದು ಕೈಪಿಡಿಯಾಗಿ ಕೆಲಸ ನೀಡುತ್ತದೆ.

ಇದು ೧೯೦೧ ರಿಂದ ೧೯೮೭ ರ ವರೆಗೆ ಇದರ ಅವಧಿಯನ್ನು ಗಣನೆಗೆ ತೆಗೆದುಕೊಂಡು ಈ ಕಾಲಾವಧಿಯಲ್ಲಿ ಪ್ರಕಟಗೊಂಡ ಸಮಗ್ರ ಬೆಳವಣಿಗೆಯನ್ನು ಈ ಕೃತಿರಚನೆಗೆ ಬಳಸಿಕೊಂಡಿದ್ದಾರೆ. ವಿಶೇಷವಾಗಿ ಕನ್ನಡ ವೀರಶೈವ, ಲಿಂಗಾಯತ ಧರ್ಮಗಳನ್ನು ಕುರಿತು ಬೇರೆ ಭಾಷೆಗಳಲ್ಲಿ ಅಭ್ಯಾಸ, ಅಧ್ಯಯನ ಮಾಡುವವರಿಗೆ ಇದೊಂದು ಮಾರ್ಗದರ್ಶಿಯಾಗಿರುತ್ತದೆ. ಇಂತಹ ಅದ್ಭುತ ಕೆಲಸ ಮಾಡಿದ ಗುಂಜಾಳ ಮತ್ತು ಅಸುಂಡಿಯವರು ಅಭಿನಂದನಾರ್ಹರು. ಇದನ್ನು ಶ್ರೀ ಚೆನ್ನಬಸವ ಪಟ್ಟದದೇವರು ಮಾಲಿಕೆಯಲ್ಲಿ ಬಸವಧರ್ಮ ಪ್ರಚಾರ ಸಂಸ್ಥೆ, ಹಿರೇಮಠ, ಬಾಲ್ಕಿ, ಜಿಲ್ಲೆ . ಬೀದರ – ಇವರು ಪ್ರಕಟಿಸಿದ್ದಾರೆ. ಇದೊಂದು ಸ್ತುತ್ಯಾರ್ಹ ಕಾರ್ಯ.

## ೪.೨.೩.೭ : ಅಂತರ-ರಾಷ್ಟ್ರೀಯ ಮಟ್ಟದಲ್ಲಿ ಪ್ರಯತ್ನ :

**ಶ್ರೀಮತಿ ಅಲಬರ್ಟನ್ ಗೌರ್ (ಗೌರಮ್ಮನವರ) ಕನ್ನಡ ಗ್ರಂಥಸೂಚಿ, ೧೯೮೫**

i) ೧೯೧೦ ರಲ್ಲಿ ಪ್ರಕಟವಾದ ಎಲ್. ಡಿ. ಬಾರ್ನೆಟ್ ಅವರ " A Catalogue of Kannada, Badaga and Coorg books in the library of British museum " (ಬ್ರಿಟಿಷ್ ಮ್ಯೂಜಿಯಂ ಲೈಬ್ರರಿಯಲ್ಲಿ ಇರುವ ಕನ್ನಡ ಬಡಗ ಮತ್ತು ಕೊಡಗು ಭಾಷೆಗಳ ಗ್ರಂಥಗಳ ಸೂಚಿ) ಬಹಳ ಮಹತ್ವದ್ದೆನಿಸಿದೆ. ಈ ಕಾರ್ಯದಲ್ಲಿ ಅವರಿಗೆ ಆರ್. ನರಸಿಂಹಾಚಾರ್ ಮತ್ತು ಜೆ. ಎಫ್. ಫ್ಲೀಟ್ ಅವರು ನೆರವು ಒದಗಿಸಿದರಂತೆ, ಕನ್ನಡದ ಉನ್ನತ ಅಧ್ಯಯನದಲ್ಲಿ ಆಸಕ್ತರಾದವರಿಗೆ ಇದು ಬಹಳ ಉಪಯುಕ್ತ ಆಧಾರ ಗ್ರಂಥ.

ii) ಇದೇ ಕೃತಿಯ ಪುರವಣಿ ಸಂಪುಟ ಶ್ರೀಮತಿ ಗೌರ ಅವರು ತಮ್ಮ ಪತಿಯು ಪ್ರಾರಂಭಿಸಿದ ಕೆಲಸವನ್ನು ಮುಂದುವರಿಸಿ ಅದಕ್ಕೆ ಇನ್ನೂ ಮಹತ್ವವಿತ್ತಿದ್ದಾರೆ. ಇದರಲ್ಲಿ ೧೯೧೦ ರಿಂದ ಆರಂಭಿಸಿ ೧೯೮೦ ರ ವರೆಗೆ ಬ್ರಿಟಿಷ್ ಮ್ಯೂಜಿಯಂ ಮತ್ತು ಗ್ರಂಥಾಲಯ ಅಧೀನ ಲೈಬ್ರರಿಗಳಲ್ಲಿ ಸಂಗ್ರಹಗೊಂಡ ಗ್ರಂಥಗಳನ್ನು ಪಟ್ಟಿ ಮಾಡಿದ್ದಾರೆ.

**PUSHPA-DANTA.** ಮಹಿಮ್ನ ಸ್ತೋತ್ರಂ. [Mahimnaḥ-stōtram. A Ṣaiva Sanskrit hymn in 35 verses. With Viṣvārādhya's commentary, and a Kannada translation.] *See* VIṢVĀRĀDHYA. ವಿಶ್ವಾರಾಧ್ಯ . . . ಶಿವಪಂಚಸ್ತವಃ [Ṣiva-pañcha-stava.] pp. 61-112. 1908. 8°. 14028. bbb. 21.

**PUTRA-KĀMĒSHṬI.** ಪುತ್ರಕಾಮೇಷ್ಟಿಯೆಂಬ ಯಕ್ಷಗಾನಪ್ರಬಂಧವು. [Putra-kāmēshṭi. An operatic poem in *yaksha-gāna* style on the sacrifice of Daṣa-ratha to bring about the birth of Rāma, *etc.*] pp. 33. ಬೆಂಗಳೂರು ೧೮೭೮ [*Bangalore*, 1878.] 12°. 14176. ee. 4.(1.)

**PUṬṬAṆṆA**, *grandson of Vīranagere Beṭṭad'-ayya, of Mysore.* ದ್ರೌಪದೀಸ್ವಯಂವರ ನಾಟಕಂ ಮುಂ॥ [Draupadī-svayaṃvaram. A drama on the legend of Draupadī's espousals as told in the Mahā-bhārata.] pp. 80. ಮೈಸೂರು [*Mysore*,] 1901. 8°. 14176. e. 5.(2.)

—— Rati kaliana. ರತಿಕಲ್ಯಾಣ [A *yaksha-gāna* operatic version of the mythological story of Rati's marriage with Pradyumna.] pp. 48. ಮೈಸೂರು [*Mysore*,] 1899. 8°. 14176. f. 57.(4.)

**PUṬṬAṆṆA**, *Maisūru S.* *See* DAY (T.). (ಸುಮತಿಮದನ ಕುಮಾರರ ಚರಿತ್ರೆ) [Sumati-madana-kumārara charitre. An adaptation, by Puṭṭaṇṇa, of "Sandford and Merton."] [*Karṇāṭaka-grantha-māle.*] [1897.] 8°. 14176. k. 16.(no. 17.)

—— *See* SHAKSPERE (W.). A Translation of . . . Cymbeline [by M. S. Puṭṭaṇṇa and M. Ṣrīnivās'-aiyaṅgār], *etc.* 1881. 12°. 14176. e. 29.

—— *See* SHAKSPERE (W.). A Translation of . . . King Lear in Kanarese [by M. S. Puṭṭaṇṇa], *etc.* 1899. 8°. 14176. e. 13.(2.)

—— *See* ṢRĪNIVĀS'-AIYAṄGĀR, *M. Bh.*, and PUṬṬAṆṆA, *M. S.* ಹಿಂದೂ ಚರಿತ್ರ ಸಂಗ್ರಹ. Hindu charitra sangraha, *etc.* 1896. 12°. 14176. h. 72.

—— *See* ṢRĪNIVĀS'-AIYAṄGĀR, *M. Bh.*, and PUṬṬAṆṆA, *M. S.* Nitichintámaṇi, *etc.* 1884. 8°. 14176. l. 34.

—— *See* ṢRĪNIVĀS'-AIYAṄGĀR, *M. Bh.*, and PUṬṬAṆṆA, *M. S.* Nitichintâmani . . . Part iii., *etc.* 1898. 12°. 14176. h. 73.

—— Second Book of Lessons in Canarese. Prepared for the Government schools . . . ಕನ್ನಡ ಪಾಠಗಳ ಎರಡನೇ ಪುಸ್ತಕವು. Fifth edition. pp. vi. 188. *Basel Mission Press: Mangalore*, 1873. 12°. 14176. h. 19.

**PUṬṬA-SĀM'-AYYA**, *Agarapura.* *See* LŌLIMBA-RĀJA. ಲೋಲಿಂಬರಾಜ . . . ವೈದ್ಯಜೀವನಮ್. [Vaidya-jīvana. With Kannada commentary called Vaidya-jīvana-dīpikā by Puṭṭa-sām'-ayya.] 1878. 8°. 14043. c. 31.

**RĀGHAVĀCHĀRYA**, *Vēdānta, Courtier of Mummaḍi Kṛishṇa-rāja of Mysore.* *See* KṚISHṆA RĀJA, *of Salem.* ಶ್ರೀ . . . ನಿಜದೀಪಿಕಾ ಶಿರೋರತ್ನ ಮುಂ॥ [Nija-dīpikā-ṣirōratnavu. With commentary by Rāghavāchārya.] 1893. 8°. 14177. b. 2.

—— *See* KṚISHṆA RĀJA, *of Salem.* ಶ್ರೀ . . . ನಿಜದೀಪಿಕಾ ರತ್ನ ಮುಂ॥ [Nija-dīpikā-ratnavu. With commentary by Rāghavāchārya.] [1894.] 8°. 14177. b. 1.

**RĀGHAVĀṄKA**, *son of Mahā-dēva Bhaṭṭa.* [*Life.*] *See* CHIKKA NAÑJ'-ĀCHĀRYA. ರಾಘವಾಂಕರಕಾವ್ಯಂ. [Rāghavāṅkara kāvyam.] 1904. 8°. 14176. [illegible]

—— (ಹರಿಶ್ಚಂದ್ರಕಾವ್ಯಂ.) [Hariṣchandra-kāvyam. A poem in *vārdhika shaṭpadi* metre on the legend of king Hariṣchandra.] *See* KARṆĀṬAKA KĀVYA-MAÑJARI. ಕರ್ಣಾಟಕ ಕಾವ್ಯಮಂಜರಿ, *etc.* ನಂ. 22. 189?-1898. 8°. 14176. ff. 1.(no. 22.)

*Incomplete, containing only i.–v. 9.*
*Rāghavāṅka of Hampe, son of Mahā-dēva Bhaṭṭa and disciple and nephew of Hari-harārya, flourished about 1800. He composed Hariṣchandra-kāvya, Vīra-bhadrāshṭaka, Siddha-rāma-purāna, Sōma-nātha-charitre, Ṣarabha-charitre, Vīrēsvara-charitre, Adaiyana kathe, Hari-hara-māhātmya, Anubhava-ṣikhāmaṇi, &c.*

**RĀGHAVĒNDRA**, *disciple of Sudhīndra.* *See* APPAṆĀCHĀRYA. श्रय . . . राघवेंद्रस्तोत्रम् प्रा० [Rāghavēndra-stōtram. A hymn in praise of Rāghavēndra.] [1906.] *obl.* 12°. 14028. bb. 13.(3.)

**RĀGHAVĒNDRĀCHĀRYA**, *Rāyapālya.* *See* NĀRĀYAṆA, *son of Trivikrama.* (ಸಂಸ್ಕೃತ ಕನ್ನಡ . . . ಶ್ರೀಮಧ್ವವಿಜಯ ಮುಂ॥) [Madhva-vijaya. With Kannada interpretation and Sanskrit notes by Rāghavēndrāchārya.] [1888, 1889.] 8°. 14048. bb. 37.

—— *See* NĀRĀYAṆA, *son of Trivikrama.* ಸಂಸ್ಕೃತ ಕನ್ನಡ . . . ಮಣಿಮಂಜರಿ [Maṇi-mañjarī. Edited with Sanskrit commentary and Kannada interpretation by Rāghavēndrāchārya.] [1890.] *obl.* 8°. 14048. d. 58.

## Publications and lectures by staff

ASHTON, S R

*The British in India: from trade to empire*. London, Batsford Academic & Educational, 1987.

'Archives and Education: the India Office Library and Records'. In: *Teaching History*, no 47, February 1987.

—at Rangoon University, Burma, 5 January 1987: *A rebellion in Burma: the Sagaing uprising, 1910*.

BINGLE, RICHARD

'Private papers in the India Office Library and Records'. In: *South Asian studies;* edited by A Gaur. The British Library, 1986. pp 26–36.

BLAKE, D M

'Oral archives at the India Office Library and Records' In: *South Asian studies;* edited by A Gaur. The British Library, 1986. pp 128–134.

BLOOMFIELD, B C

'The library of the Royal Asiatic Society and other private and society libraries'. In: *South Asian studies;* edited by A Gaur. The British Library, 1986. pp 90–93.

'The acquisition of orientalist materials in the United Kingdom'. In: *Arabic resources: acquisition and management in British libraries;* edited by David Burnett. London, Mansell, 1986. pp 39–51.

'Polytechnic libraries: a cultural influence?' In: *COPOL Newsletter*, 41 (December 1986). pp 2–9.

'South Asian studies and libraries in the United Kingdom: now and the future'. In: *South Asia library notes and queries*, 19/20, Fall 1985/Spring 1986, 1–11.

—at the National Preservation Advisory Conference, in Loughborough; *The conservation crisis: our Achilles heel.*

—at the 52nd General Conference of IFLA. Chairman Section on Bibliography; Secretary Division of Bibliographic Control, in Tokyo, August 1986: *Far Eastern collections in the United Kingdom.*

—at the Library Association Rare Books Group Seminar: Cambridge, July 1986: *Some problems in the bibliography of twentieth century books.*

—at the British and Irish Association of Law Librarians Cambridge, September: *Future provision in library co-operation for law.*

—at the Council of Polytechnic Librarians (COPOL). Annual meeting Sheffield, October: *Polytechnic librarians. a cultural influence.*

Between 16 January – 2 February Mr Bloomfield visited Burma at the invitation of the Chairman of the Burma Socialist Programme Party to visit libraries and archives.

BROWN, YU-YING

'The end of isolation for Far Eastern libraries in Europe?' In: *Bulletin of the European Association for Japanese Studies;* no 25, June 1986. pp 10–20. Translated into Japanese this article appeared in Vol 38, no 4 of *Biburosu (Biblos)*, a monthly journal of the National Diet Library, Tokyo.

'Ideographic interchange: RLIN CJK and alternative systems.' In: *SCONUL REPORT of the Conference and Annual Meeting;* 1985–86. pp 4–10.

*Retrospective National Bibliographies: an international directory.* (IFLA Publications 35), Paris, 1986 [Responsible for section on Japan: pp 102–107].

—at the Workshop on Oriental Graphic Art, The Barber Institute, Birmingham, October 1986: *Japanese book illustration as seen in some 20th century limited editions in the British Library.*

CAYLEY, JOHN

'New(ish) gods: computers and Chinese.' In: *Bulletin of the British Association of Chinese Studies*, 1986.

Editorial assistance for David S G Goodman, *Provincial leadership in the PRC, Vol 1: Directory*. Cardiff: Cardiff University Press 1986 (Newcastle Studies on East Asia).

Mr Cayley also worked on the following translations: 'The Ruined City' by Bao Zhao, *Agenda* 24.2 (Summer 1986) 19–22.

'Once you had left' by Zhang Jiuling and 'In the palace of Wei' by Cui Guofu (two quatrains), *Poetry Durham*, 14 (Winter 1986).

'Four poems after Ruan Ji's "Songs of my heart"' (Nos 18, 24, 47 & 65).

'Three poems by Wang Wei ("Man, mountain and river"), "Two poems by Du Fu ("Evening", "Returning rays")'; all introduced with a prose piece. *Numbers* (Cambridge), 2 (May 1987).

COOK, A S

'More manuscript maps by John Thornton for the *Oriental Navigation*'. In: *Imago et Mensura Mundi: Atti del IX Congresso Internazionale di Storia della Cartografia;* ed. C Marzoli. Roma, Istituto della Enciclopedia Italiana, 1985. pp 61–69.

'Alexander Dalrymple and John Arnold: Chronometers and the representation of longitude on East India Company charts'. In: *Vistas in Astronomy* 28 (1985). pp 189–195.

'[The India Office] Not a map collector at all'. In: *IMCOS [International Map Collectors' Society] Journal* 6/1 (1986). pp 20–23.

DESMOND, RAY (together with Martin Moir)

'South Asian material in the India Office Library and Records'. In: *South Asian studies;* edited by A Gaur. The British Library, 1986. pp 13–21.

FARRINGTON, A J

*The Second Afghan War 1878–80 casualty roll.* London, 1986.

'18th Royal Irish Regiment: Pegu Medal Roll'. In: *Medal News* 10/8–9 (1986). pp 10–13,17.

—at the 32nd International Congress for Asian and North African Studies, Hamburg, August 1986: *A new source for Chinese trade to Japan in the seventeenth century.*

GAUR, ALBERTINE

*South Asian studies.* (Papers presented at a Colloquium 24–26 April 1985) edited by A Gaur. The British Library, 1986.

'South Asian material in the Department of Oriental Manuscripts and Printed Books'. In: *South Asian studies;* edited by A Gaur. The British Library, 1986. pp 3–12.

—at the Far Eastern Painting Society: May 1986: *Writing materials.*

—at the Architectural Association School of Architecture; June 1986: *Signs and symbols.*

—at the 32nd International Congress for Asian and North African Studies; Hamburg, August 1986: *The history of writing.*

During April 1986 Dr Gaur spent three weeks as guest-lecturer at the University of Malaya, Kuala Lumpur, Malaysia and gave lectures to the staff of the India

# THE

# MADRAS REGISTER

CONTAINING

AN ALMANAC

*FOR THE YEAR OF OUR LORD* 1799.

AND

*CORRECT LISTS*

OF THE

*Civil, Military, Judicial, and Medical Establishments under the Madras Presidency.*

A LIST IS ALSO ADDED

OF THE EUROPEANS

NOT IN THE

KING'S OR COMPANY'S EMPLOY.

with other matters of useful Information.

Compiled for the benefit of the MALE ASYLUM, and Printed at the ASYLUM PRESS, by the Boys of the CHARITY.

*PRICE Four Pagodas.*

ಈ ಗ್ರಂಥಸೂಚಿಯಿಂದ ಇಂಗ್ಲೆಂಡಿನಲ್ಲಿರುವ ಕನ್ನಡ ಪುಸ್ತಕಗಳ ಎರಡು ದೊಡ್ಡ ಸಂಗ್ರಹವನ್ನು ಕನ್ನಡಿಗರಿಗೆ ಪರಿಚಯಿಸಿದಂತಾಯಿತು. ಈ ಎರಡೂ ಗ್ರಂಥಸೂಚಿಗಳು ವಿದ್ವಾಂಸರಿಗೆ ಅತ್ಯುಪಯುಕ್ತ. ಡಾ. ಹಾ. ಮಾ. ನಾಯಕರು ಹೇಳುವಂತೆ ಎರಡನೇ ಕೃತಿ ಮೊದಲ ಗ್ರಂಥಸೂಚಿಯ ಸಮರ್ಥ ಮುಂದುವರಿಕೆ.

ಶ್ರೀಮತಿ ಅಲಬರ್ಟನ್ ಗೌರ್ ಅವರ ಗ್ರಂಥಸೂಚಿಯ ಬಗೆಗೆ ಹಾ. ಮಾ. ನಾಯಕ 'ಗೌರಮ್ಮ'ನವರ ಗ್ರಂಥಸೂಚಿ ಎಂದು ಬರೆದಿದ್ದಾರೆ. ಅಲ್ಲದೆ ಅವರಿಗೆ ಅಚ್ಚಗನ್ನಡದ ಮುತ್ತಿನ ಹೆಸರೊಂದನ್ನು ಕೊಟ್ಟು ಗೌರವಿಸಿದ್ದಾರೆ. ಭಾಷೆಗಳ ಸಾಮ್ಯತೆ. ಹೊಂದಾಣಿಕೆ ಒಮ್ಮೊಮ್ಮೆ ಎಷ್ಟು ವಿಚಿತ್ರವಾಗಿ ತೋರುತ್ತದೆ ನೋಡಿ.

## ೪.೨.೪ : ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸೂಚಿಗಳು :

### ೪.೨.೪.೧ : ಕನ್ನಡ ಹಸ್ತಪ್ರತಿ ಸೂಚಿಗಳು :

ಕನ್ನಡ ಭಾಷೆಯಲ್ಲಿ ಕೃತಿರಚನೆ ಕ್ರಿ. ಶ. ೯ ನೆಯ ಶತಮಾನದಲ್ಲಿ ರಚಿತವಾದ ಶ್ರೀವಿಜಯ ಅವರ ಕವಿರಾಜಮಾರ್ಗಕ್ಕೆ ಪೂರ್ವದಲ್ಲಿಯೇ ಆರಂಭವಾಗಿತ್ತೆಂಬುದರ ಬಗೆಗೆ ಸಂದೇಹವಿಲ್ಲ. ಕೃತಿಯಲ್ಲಿನ ಗದ್ಯ - ಪದ್ಯ ಕರ್ತೃಗಳ ಉಲ್ಲೇಖ. ದೇಸಿ ಪ್ರಭೇದಗಳು. ಉತ್ತರ - ದಕ್ಷಿಣ ಮಾರ್ಗಗಳ ಪ್ರಸ್ತಾಪಗಳು ಪೂರ್ವದ ಉಪಲಬ್ಧ ಸಾಹಿತ್ಯಕ್ಕೆ ಸಾಕ್ಷಿಗಳಾಗಿವೆ. ಕ್ರಿ. ಶ. ೫ ನೆಯ ಶತಮಾನದಿಂದೀಚೆಗೆ ಕನ್ನಡ ಭಾಷೆಯ ಶಾಸನಗಳು ದೊರಕಿವೆ. ಆದರೆ ಕವಿರಾಜಮಾರ್ಗ ಪೂರ್ವದ ಯಾವ ಸಾಹಿತ್ಯಕೃತಿಗಳೂ ಉಪಲಬ್ಧವಾಗಿಲ್ಲ. ಉಪಲಬ್ಧ ಕೃತಿಗಳಲ್ಲಿ ಕವಿರಾಜಮಾರ್ಗವೇ ಮೊದಲನೆಯದಾಗಿದೆ.

ಉಪಲಬ್ಧ ಕೃತಿಗಳನ್ನೆಲ್ಲ ಹಿಂದಿನ ಕಾಲದಲ್ಲಿ ಓಲೆ ಹಾಗೂ ಕೆಲಕಾಲನಂತರ ಕಾಗದಗಳ ಮೇಲೆ ಬರೆಯಲಾಗುತ್ತಿತ್ತು. ಹಿಂದಿನ ಕಾಲದಲ್ಲೇ ಆಗಲಿ. ಇಂದಿನ ಕಾಲದಲ್ಲೇ ಆಗಲಿ ಉಪಲಬ್ಧ ಗ್ರಂಥಗಳೆಲ್ಲವನ್ನೂ ಯಾವುದೇ ಒಂದು ಸ್ಥಳದಲ್ಲಿ ಒಟ್ಟಿಗೆ ಕಾಣುವ ಸಂಭವವಿರಲಿಲ್ಲವೆಂದೇ ಹೇಳಬಹುದು. ಸಾಮಾನ್ಯವಾಗಿ ಅರಮನೆ. ಗುರುಮನೆ. ಮಠಗಳು. ಬಸದಿಗಳು. ವಿದ್ವಾಂಸರ ವೈಯಕ್ತಿಕ ಸಂಗ್ರಹಗಳು, ಕೃತಿಸಂಗ್ರಹಗಳ ಮೂಲ ನೆಲೆಗಳಾಗಿದ್ದವು. ಅಲ್ಲದೆ ಆ ಧರ್ಮಗಳಿಗೆ ಸಂಬಂಧಿಸಿದ ಕೃತಿಗಳು ಆ ಧರ್ಮೀಯಗಳ ಸಂಗ್ರಹಗಳಲ್ಲಿ ಶೇಖರವಾಗುತ್ತಿದ್ದುದು ಬಹುಸಾಮಾನ್ಯ ರೀತಿಯಾಗಿತ್ತು. ಹೀಗಾಗಿ ಆಸಕ್ತಿಯುಳ್ಳ, ಅಭಿರುಚಿಯುಳ್ಳ ವ್ಯಕ್ತಿಗಳಿಗೆ ತಾವು ನೋಡಬಯಸಿದ ಕೃತಿಗಳ ಸುಳುಹು ಹಾಗೂ ಪರಿಶೀಲನೆಗೆ ಕೃತಿಗಳು ದೊರಕುವುದು ಕಠಿಣತರವಾಗಿದ್ದಿತು.

ಭಾರತದಲ್ಲಿ ಆಂಗ್ಲೇಯರ ವಿದ್ಯಾಭ್ಯಾಸ ಪ್ರಸಾರವಾದಂತೆ ಸರಕಾರಗಳು ಹಸ್ತಪ್ರತಿಗಳ ಸಂಗ್ರಹ - ಸಂರಕ್ಷಣೆ - ಪ್ರಕಟನೆಗಳಲ್ಲಿ ಆಸಕ್ತಿಯನ್ನು ವಹಿಸಲಾರಂಭಿಸಿದವು. ಪ್ರಾಚ್ಯ ಸಂಶೋಧನಾಲಯಗಳಲ್ಲಿ ಹಾಗೂ ಹಲವಾರು

ವಿಶ್ವವಿದ್ಯಾನಿಲಯಗಳಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವ ಕಾರ್ಯ ಪ್ರಾರಂಭವಾಯಿತು. ಇಲ್ಲಿ ವಿವಿಧ ಧರ್ಮಗಳ, ವಿವಿಧ ಭಾಷೆಗಳ, ವಿವಿಧ ಲಿಪಿಗಳ ಕೃತಿರಾಶಿ ಒಂದೆಡೆಯಲ್ಲಿ ಸಂಗ್ರಹಗೊಂಡು ಅಭ್ಯಾಸಿಗಳಿಗೆ ಸುಲಭವಾಗಿ ಪರಿಶೀಲನೆಗೆ ದೊರೆಯುವಂತಾಯಿತು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತದಲ್ಲಿನ ಪೂನಾ, ಮದ್ರಾಸ, ತಂಜಾವೂರು, ಮೈಸೂರಿನಲ್ಲಿಯ ಸಂಗ್ರಹಗಳು ತುಂಬ ಪ್ರಸಿದ್ಧಿ ಪಡೆದ ಕೇಂದ್ರಗಳಾಗಿ ಪರಿಣಮಿಸಿದವು. ಹೀಗೆ ಸಂಗ್ರಹಗೊಂಡ ಕೃತಿರಾಶಿಯ ವಿವರಗಳು ಕಾಲಾನುಕ್ರಮದಲ್ಲಿ ಸೂಚಿಗಳ ರೂಪದಲ್ಲಿ ಪ್ರಕಟಗೊಳ್ಳಲಾರಂಭಿಸಿದವು.

ಕನ್ನಡದಲ್ಲಿ ಕರ್ನಲ್ ಮೆಕೆಂಝಿಯೇ (೧೭೫೪ - ೧೮೨೧) ಹಸ್ತಪ್ರತಿಗಳನ್ನು ಸಂಗ್ರಹಿಸಿದವರಲ್ಲಿ ಮೊದಲಿಗ. '೧೮೫೮ ರಲ್ಲಿ ಮದ್ರಾಸಿನಲ್ಲಿ ಸ್ಥಾಪಿತವಾದ ಸರಕಾರಿ ಹಸ್ತಪ್ರತಿ ಭಂಡಾರಕ್ಕೆ ಸೇರ್ಪಡೆಯಾದ ಮೆಕೆಂಝಿ ಸಂಗ್ರಹವೇ ಪ್ರಪ್ರಥಮ ಸಾರ್ವಜನಿಕ ಕನ್ನಡ ಹಸ್ತಪ್ರತಿ ಭಂಡಾರ' ಎಚ್. ದೇವೀರಪ್ಪ : ಕನ್ನಡ ಹಸ್ತಪ್ರತಿಗಳ ಇತಿಹಾಸ, ಬೆಂಗಳೂರು, ೧೯೭೭, ಪುಟ ೧೦೧ ರಲ್ಲಿ ಅಭಿಪ್ರಾಯ ನೀಡಿದ್ದಾರೆ.

ಹಸ್ತಪ್ರತಿಗಳ ಬಾಹ್ಯ ಹಾಗೂ ಆಂತರಿಕ ವಿವರಗಳನ್ನು ಒಳಗೊಂಡ ಸೂಚಿಗಳೇ ಹಸ್ತಪ್ರತಿ ಸೂಚಿಗಳು. ಬಾಹ್ಯ ವಿವರಗಳಲ್ಲಿ ಹಸ್ತಪ್ರತಿಗಳ ವಸ್ತು (ಓಲೆ, ಶ್ರೀತಾಳ, ಕಾಗದ, ಇತ್ಯಾದಿ); ಪ್ರತಿಗಳ ಆಕಾರ ಅಂದರೆ ಉದ್ದ ಅಗಲಗಳು, ಗರಿಗಳ ಹಾಳೆಗಳ ಸಂಖ್ಯೆಗಳು, ಸೂಚಿತವಾಗುತ್ತವೆ. ಆಂತರಿಕ ವಿವರಗಳಲ್ಲಿ ಪ್ರತಿ ಗರಿಯ ಅಥವಾ ಹಾಳೆಯಲ್ಲಿನ ಒಂದು ಪಾರ್ಶ್ವದಲ್ಲಿನ ಸಾಲುಗಳ ಸಂಖ್ಯೆ, ಪ್ರತಿ ಸಾಲಿನಲ್ಲಿನ ಅಕ್ಷರಗಳ ಸಂಖ್ಯೆ, ಕೃತಿಯ ಆದಿ ಮತ್ತು ಅಂತ್ಯಗಳ ಉಲ್ಲೇಖಗಳು ಬರುತ್ತವೆ. ಇವಲ್ಲದೆ ಸೂಚಿಗಳಲ್ಲಿ ಕೃತಿಯ ಹೆಸರು, ಕರ್ತೃ, ಕಾಲಗಳನ್ನು ಸೂಚಿಸಿರುತ್ತದೆ.

ಕನ್ನಡದಲ್ಲಿ ಪ್ರಕಟವಾಗಿರುವ 'ವರ್ಣನಾತ್ಮಕ ಹಸ್ತಪ್ರತಿ ಸೂಚಿ'ಗಳಲ್ಲಿ ಮಾತ್ರ ಮೇಲಿನ ಬಾಹ್ಯ ಹಾಗೂ ಆಂತರಿಕ ವಿವರಗಳನ್ನು ಕಾಣಬಹುದಾಗಿದೆ. ಉಳಿದ ಹಸ್ತಪ್ರತಿ ಸೂಚಿಗಳಲ್ಲಿ ಇವುಗಳಲ್ಲಿನ ಕೆಲವು ಅಂಶಗಳು ಮಾತ್ರ ಇರುತ್ತವೆ.

ಕನ್ನಡದಲ್ಲಿ ಪ್ರಕಟವಾದ ಮೊದಲ ಹಸ್ತಪ್ರತಿಸೂಚಿ ಮೆಕೆಂಝಿ ಸಂಗ್ರಹಕ್ಕೆ ಸಂಬಂಧಿಸಿದುದಾಗಿದೆ. ಈ ಸೂಚಿ 'Mackenzie Collection : A Descriptive Catalogue of the Oriental Maniscripts, Ed. H. H. Wilson, Vol. I, 1828' ಎಂಬ ಹೆಸರಿನಲ್ಲಿದೆ ಇದರಲ್ಲಿ ಕನ್ನಡಕ್ಕೆ ಸಂಬಂಧಿಸಿದ ೧೫೨ ಕೃತಿಗಳ ವಿವರವಿದೆ. (ಎಚ್. ದೇವೀರಪ್ಪ, ಕನ್ನಡ ಹಸ್ತಪ್ರತಿಗಳ ಇತಿಹಾಸ, ೧೯೭೭, ಪುಟ ೧೦೦). ಹೀಗೇನೇ ಕನ್ನಡದಲ್ಲಿ ೧೯೩೪ ರಲ್ಲಿ ಪ್ರಕಟವಾದ ಮೊದಲ 'ವರ್ಣನಾತ್ಮಕ ಹಸ್ತಪ್ರತಿ ಸೂಚಿ'ಯ ಕೀರ್ತಿ ಮದ್ರಾಸ ಸರಕಾರಕ್ಕೆ ಸಲ್ಲತಕ್ಕದ್ದಾಗಿದೆ.

ಕನ್ನಡದಲ್ಲಿ ಪ್ರಕಟವಾಗಿರುವ ಹಲವಾರು ಹಸ್ತಪ್ರತಿ ಸೂಚಿಗಳು ಮತ್ತು ವರ್ಣನಾತ್ಮಕ ಹಸ್ತಪ್ರತಿ ಸೂಚಿಗಳನ್ನು ಈ ಕೆಳಗೆ ಹೆಸರಿಸಲಾಗಿದೆ :

೧. A Classified catalogue of Sanskrit and Kannada Manuscripts in the Sarasvati Bhandaram (Palace Sanskrit Library of H. H. the Maharaja of Mysore, Collections of 1900 - 1905, Mysore, 1905).

ಇದರಲ್ಲಿ ಸುಮಾರು ೩೦೦ ಓಲೆ ಕೃತಿಗಳ ವಿವರಗಳಿವೆ.

೨. A Catalogue of Samskrita, Prakrita and Hindi Works in the Jain Siddhanta Bhavana, Arrah.

೧೯೧೯ ರಲ್ಲಿ ಶ್ರೀ ಸುಪಾರ್ಶ್ವ ದಾಸ್‌ಗುಪ್ತ ಮತ್ತು ಮೂಲಚಂದ್ರ ಜೈನ್ ಅವರಿಂದ ಸಂಪಾದಿತವಾದ ದೇವನಾಗರಿ ಲಿಪಿಯಲ್ಲಿ ಪ್ರಕಟಿತವಾಗಿದೆ. ಸುಮಾರು ೫೦೦ ಕೃತಿಗಳ ವಿವರಗಳಿವೆ.

೩. An Alphabetical Index of Kanarese Maniscripts in the Government Oriental Maniscripts Library, Madras, (ಸಂ.) ಎಸ್. ಕುಪ್ಪುಸ್ವಾಮಿ ಶಾಸ್ತ್ರಿ.

ಇದರಲ್ಲಿ ೧೫೪೦ ಕೃತಿಗಳ ವಿವರಗಳಿವೆ.

೪. A Devanageri Printed Catalogue of the Maniscripts in the Mutt of Sri Lakshnisena Bhattaraka Mahasvamin, Kolhapur, Sam 1900.

೫. A Descriptive Catalogue of the Kanarese Manuscripts in the Government Oriental Manuscripts Library, Madras.

ಮೇಲಿನ ಶೀರ್ಷಿಕೆಯಲ್ಲಿ ೧೯೩೪ - ೧೯೫೮ ರ ಕಾಲಾವಧಿಯಲ್ಲಿ ೭ ಸಂಪುಟಗಳು ಪ್ರಕಟವಾಗಿವೆ. ಇಲ್ಲಿ ಒಟ್ಟು ೧೪೦೫ ಕೃತಿಗಳ ವಿವರವಿದೆ.

೬. ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚೀ.

೧೯೪೮ ರಲ್ಲಿ ಕೆ. ಭುಜಬಲಿ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ದೇವನಾಗರಿ ಲಿಪಿಯಲ್ಲಿ ಪ್ರಕಟವಾಗಿದೆ.

೭. A Descriptive Catalogue of Manscripts in the Kannada Research Institute, Dharwar.

ಮೇಲಿನ ಶೀರ್ಷಿಕೆಯಲ್ಲಿ ೧೯೫೩ - ೧೯೭೬ ರ ವರೆಗೆ ೧೩ ಸಂಪುಟಗಳು ಪ್ರಕಟವಾಗಿವೆ.

೮. ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ.

ಮೇಲಿನ ಶೀರ್ಷಿಕೆಯಲ್ಲಿ ೧೯೬೨ - ೧೯೬೩ ರಲ್ಲಿ ೯ ಸಂಪುಟಗಳು ಪ್ರಕಟವಾಗಿದ್ದು ೨೦೬೬ ಕೃತಿಗಳ ವಿವರಗಳಿವೆ.

ಈಚೆಗೆ ೧೯೮೦ - ೮೧ ರಲ್ಲಿ ಐದರಿಂದ ಒಂಬತ್ತನೆಯ ಸಂಪುಟಗಳ ಪ್ರಕಟನೆ ಆಗಿದ್ದು ೩,೨೮೫ ಕೃತಿಗಳ ವಿವರಗಳಿವೆ.

೯. A Descriptive Catalogue of the Kannada Manuscripts in the Osmania University Library. ೧೯೬೭ ರಲ್ಲಿ ಪ್ರಕಟವಾದ ಈ ಸೂಚಿಯಲ್ಲಿ ೨೯೫ ಕೃತಿಗಳ ವಿವರಗಳಿವೆ.

೧೦. ಶ್ರವಣಬೆಳಗೊಳ ಜೈನಮಠದ ತಾಡಪತ್ರೀಯ ಗ್ರಂಥಸೂಚಿ, ೧೯೮೦, ೪೪೮ ಓಲೆ ಹಾಗೂ ೧೯ ಕಾಗದ ಕಟ್ಟುಗಳು.

## ೪.೨.೪.೨ : ಕನ್ನಡ ಹಸ್ತಪ್ರತಿ ಸೂಚಿ ರಚನೆ

ಇಂಗ್ಲೀಷಿನಲ್ಲಿದ್ದಂತೆ ಹಸ್ತಪ್ರತಿ ಸೂಚಿಗಳಿಗೆ ಸೂಚಿ ರಚಿಸುವ ಕ್ರಿಯೆ ಭಾರತದಲ್ಲಿ ಸರ್ ವಿಲಿಯಂ ಜೋನ್ಸ್ ಅವರಿಂದ (೧೮೦೭) ಪ್ರಾರಂಭವಾಯಿತು. ಮದ್ರಾಸ, ಮೈಸೂರು, ಧಾರವಾಡಗಳಲ್ಲಿಯ ಸರಕಾರಿ ಸಂಸ್ಥೆಗಳು, ಮೈಸೂರು - ಧಾರವಾಡ - ಬೆಂಗಳೂರು - ಹೈದ್ರಾಬಾದ್ ವಿಶ್ವವಿದ್ಯಾಲಯಗಳು, ಕರ್ನಾಟಕದ ಒಳ ಹೊರಗಿನ ವೈಯಕ್ತಿಕ ಸಂಸ್ಥೆಗಳು ಹಸ್ತಪ್ರತಿ ಸೂಚಿಗಳನ್ನು ಪ್ರಕಟಿಸಿವೆ. ಇವುಗಳನ್ನು ವಿವರಣಾತ್ಮಕ ಸೂಚಿ ಗ್ರಂಥ, ಯಾದಿ ರೂಪದ ಸೂಚಿ ಗ್ರಂಥ, ಲೇಖನರೂಪದ ಸೂಚಿ ಎಂದು ವರ್ಗೀಕರಿಸಬಹುದು. ಇವುಗಳಲ್ಲಿ ವರ್ಣನಾತ್ಮಕ ಸೂಚಿಗೆ ವಿಶೇಷ ಸ್ಥಾನವಿದೆ. ಈ ವರೆಗೆ ಪ್ರಕಟವಾದ ಕನ್ನಡ ಹಸ್ತಪ್ರತಿಗಳನ್ನು ಇಲ್ಲಿ ಕೊಡಲಾಗಿದೆ. ಇಲ್ಲಿ ಸಂಗ್ರಹಿಸಿರುವ ಸೂಚಿಗಳು ಡಾ. ಕಲಬುರ್ಗಿಯವರು ಸಂಗ್ರಹಿಸಿ ಪ್ರಕಟಿಸಿದವುಗಳಾಗಿವೆ.

**ಕನ್ನಡ ಹಸ್ತಪ್ರತಿ ಸೂಚಿಗಳು**

**೧. ಮದ್ರಾಸ ಹಸ್ತಪ್ರತಿ ಸೂಚಿಗಳು :**

೧. ಮೆಕೆಂರಿಝಿ ಕಲೆಕ್ಶನ್ : ಎ ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ದಿ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್, ಸಂ. ಎಚ್. ಎಚ್. ವಿಲ್ಸನ್, (೧೮೨೮) ಪ್ರತಿ ೧೫೨

೨. ಅಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನ್‌ಮೆಂಟಲ್ ಒರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, (೧೮೮೩) ಪ್ರತಿ.

೩. ಆನ್ ಅಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ. ಗವರ್ನ್‌ಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪಾದಕ– ಎಸ್. ಕುಪ್ಪುಸ್ವಾಮಿ ಶಾಸ್ತ್ರಿ, (೧೯೨೯), ಪ್ರತಿ ೧೫೪೦

೪. ಆನ್ ಆಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನ್‌ಮೆಂಟ್ ಲೈಬ್ರರಿ, ಮದ್ರಾಸ, ಸಂ. ಟಿ. ಚಂದ್ರಶೇಖರನ್, (೧೯೫೨), ಪ್ರತಿ ೧೮೭೯

೫. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ. ಗವರ್ನ್‌ಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂ. ೧, ಸಂ. ಎಸ್. ಕುಪ್ಪುಸ್ವಾಮಿ ಶಾಸ್ತ್ರಿ, (೧೯೩೪), ಪ್ರತಿ ೧೩೮

೬. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೩, ಸಂ. ಎಸ್. ಕುಪ್ಪುಸ್ವಾಮಿ ಶಾಸ್ತ್ರಿ, ಮತ್ತು ಪಿ. ಪಿ. ಎಸ್. ಶಾಸ್ತ್ರಿ, (೧೯೩೭), ಪ್ರತಿ ೨೭೮

೭. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ३, ಸಂ. ಎಸ್. ಕುಪ್ಪುಸ್ವಾಮಿ ಶಾಸ್ತ್ರಿ ಮತ್ತು ಪಿ. ಪಿ. ಎಸ್. ಶಾಸ್ತ್ರಿ, (೧೯೩೯), ಪ್ರತಿ ೧೫೮

೮. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೪, ಸಂ. ಎ. ಶಂಕರನ್, (೧೯೪೬), ಪ್ರತಿ ೩೪೮

೯. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೫, ಸಂ. ಟಿ. ಚಂದ್ರಶೇಖರನ್, (೧೯೫೧), ಪ್ರತಿ ೨೧೩

೧೦. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೬, ಸಂ. ಟಿ. ಚಂದ್ರಶೇಖರನ್, (೧೯೫೨), ಪ್ರತಿ ೨೩೩

೧೧. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ, ಸಂಪುಟ ೭, ಸಂ. ಟಿ. ಚಂದ್ರಶೇಖರನ್, (೧೯೫೮), ಪ್ರತಿ ೧೪೪

೧೨. Mackenzie Manuscripts, Summaries of the historical manuscripts in the mackenzie collection, Vol. II (Telugu, Kannada, Marathi), T. V. Mac.hingam, (1976)

## ಮೈಸೂರು ಹಸ್ತಪ್ರತಿ ಸೂಚಿಗಳು

೧೩. ಮೈಸೂರು ಗೌರ್ನಮೆಂಟ್ ಓರಿಯೆಂಟಲ್ ಲೈಬ್ರರಿಯಲ್ಲಿರುವ ಅಚ್ಚಿನ ಮತ್ತು ಕೈಬರಹದ ಪಟ್ಟಿ (೧೯ - ೨೧), ಪ್ರತಿ, ೧೫೧೧

೧೪. ಮೈಸೂರು ಗೌರ್ನಮೆಂಟ್ ಓರಿಯೆಂಟಲ್ ಲೈಬ್ರರಿ ೧೯೨೨ ರಿಂದ ೧೯೨೯ ರ ವರೆಗಿನ ಅವಧಿಯಲ್ಲಿ ಸಂಗ್ರಹಿಸಿದ ಅಚ್ಚಿನ ಕೈಬರಹದ ಕನ್ನಡ ಪುಸ್ತಕಗಳ ಪಟ್ಟಿ (೧೯೩೦). ಪ್ರತಿ. ೧೩೪

೧೫. ಮೈಸೂರ ಯುನಿವರ್ಸಿಟಿ ಓರಿಯಂಟಲ್ ರಿಸರ್ವ್ ಇನ್‌ಸ್ಟಿಟ್ಯೂಟದಲ್ಲಿ ೧೯೪೧ ರಿಂದ ೧೯೫೪ ರ ವರೆಗಿನ ಸಂಗ್ರಹಿಸಿರುವ ಕೈಬರಹದ ಪುಸ್ತಕಗಳ ಪಟ್ಟಿ (೧೯೫೫). ಪ್ರತಿ ೧೪೪

೧೬. ಮೈಸೂರು ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆಯಲ್ಲಿರುವ ಕೈಬರಹದ ಕನ್ನಡ ಗ್ರಂಥಗಳ ಆಕಾರಾದಿ ಸೂಚಿ (೧೮೯೧ ರಿಂದ ೧೯೫೧ ರ ವರೆಗೆ). (೧೯೫೫). ಪ್ರತಿ ೧೮೨೭

೧೭. ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ಹಸ್ತ ಕೃತಿಗಳ ವರ್ಣನಾತ್ಮಕ ಸೂಚಿ - ಸಂಪುಟ - ೧ : ಸಂ. ಬಿ. ಎಸ್. ಸಣ್ಣಯ್ಯ. (೧೯೬೨). ಪ್ರತಿ ೪೯೭

೧೮. ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ಹಸ್ತ ಕೃತಿಗಳ ವರ್ಣನಾತ್ಮಕ ಸೂಚಿ - ಸಂಪುಟ - ೨ : ಸಂ. ಬಿ. ಎಸ್. ಸಣ್ಣಯ್ಯ. (೧೯೬೨). ಪ್ರತಿ ೫೧೪

೧೯. ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ಹಸ್ತ ಕೃತಿಗಳ ವರ್ಣನಾತ್ಮಕ ಸೂಚಿ - ಸಂಪುಟ - ೩ : ಸಂ. ಬಿ. ಎಸ್. ಸಣ್ಣಯ್ಯ. (೧೯೬೩). ಪ್ರತಿ ೫೧೪

೨೦. ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ಹಸ್ತ ಕೃತಿಗಳ ವರ್ಣನಾತ್ಮಕ ಸೂಚಿ - ಸಂಪುಟ - ೪ : ಸಂ. ಬಿ. ಎಸ್. ಸಣ್ಣಯ್ಯ. (೧೯೬೩). ಪ್ರತಿ ೫೪೮

೨೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಕನ್ನಡ ಅಧ್ಯಯನ ಸಂಸ್ಥೆ - ಸಂಪುಟ - ೫ : ಬಿ. ಎಸ್. ಸಣ್ಣಯ್ಯ; (೧೯೮೦). ಪ್ರತಿ ೭೩೫

೨೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಕನ್ನಡ ಅಧ್ಯಯನ ಸಂಸ್ಥೆ - ಸಂಪುಟ - ೬ : ಬಿ. ಎಸ್. ಸಣ್ಣಯ್ಯ; (೧೯೮೦). ಪ್ರತಿ ೭೪೪

೨೩. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಕನ್ನಡ ಅಧ್ಯಯನ ಸಂಸ್ಥೆ - ಸಂಪುಟ - ೭ : ಬಿ. ಎಸ್. ಸಣ್ಣಯ್ಯ; (೧೯೮೦). ಪ್ರತಿ ೭೩೫

೨೪. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಕನ್ನಡ ಅಧ್ಯಯನ ಸಂಸ್ಥೆ - ಸಂಪುಟ - ೮ : ಬಿ. ಎಸ್. ಸಣ್ಣಯ್ಯ; (೧೯೮೦). ಪ್ರತಿ ೬೩೬

೨೫. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಕನ್ನಡ ಅಧ್ಯಯನ ಸಂಸ್ಥೆ - ಸಂಪುಟ - ೯ : ಬಿ. ಎಸ್. ಸಣ್ಣಯ್ಯ; (೧೯೮೧). ಪ್ರತಿ ೩೨೮ + ೧೩೮

೨೬. ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಲ್ಮ್ ಸೂಚಿ : ಬಿ. ಎಸ್. ಸಣ್ಣಯ್ಯ (೧೯೮೮). ಪ್ರತಿ ೧೩೨೪

## ಧಾರವಾಡ ಹಸ್ತಪ್ರತಿ ಸೂಚಿಗಳು

೨೭. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ - ೧; ಆರ್. ಎಸ್. ಪಂಚಮುಖಿ; (೧೯೫೩), ಪ್ರತಿ ೫೭

೨೮. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೨; ಎಸ್. ಎಸ್. ಮಾಳವಾಡ ಮತ್ತು ಬಿ. ಎಸ್. ಕುಲಕರ್ಣಿ; (೧೯೫೫), ಪ್ರತಿ ೪೪

೨೯. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೩; ಬಿ. ಎಸ್. ಕುಲಕರ್ಣಿ; (೧೯೫೭), ಪ್ರತಿ ೪೮

೩೦. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೪; ಎಸ್. ಎಂ. ಅಣ್ಣಿಗೇರಿ ಮತ್ತು ಎಸ್. ಬಿ. ಪುರೋಹಿತ; (೧೯೬೧), ಪ್ರತಿ ೮೫

೩೧. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೫; ಬಿ. ಎಸ್. ಕುಲಕರ್ಣಿ; (೧೯೬೪), ಪ್ರತಿ ೮೦

೩೨. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೬; ಬಿ. ಎಸ್. ಕುಲಕರ್ಣಿ; (೧೯೬೫), ಪ್ರತಿ ೮೫

೩೩. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೭; ಬಿ. ಎಸ್. ಕುಲಕರ್ಣಿ ಮತ್ತು ಎಸ್. ಬಿ. ಪುರೋಹಿತ; (೧೯೬೭), ಪ್ರತಿ ೮೩

೩೪. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೮; ಬಿ. ಎಸ್. ಕುಲಕರ್ಣಿ ಮತ್ತು ಎಸ್. ಬಿ. ಪುರೋಹಿತ; (೧೯೬೮), ಪ್ರತಿ ೭೮

೩೫. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೯; ಬಿ. ಎಸ್. ಕುಲಕರ್ಣಿ ಮತ್ತು ಎಸ್. ಬಿ. ಪುರೋಹಿತ; (೧೯೭೦), ಪ್ರತಿ ೭೨

೩೬. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೧೦; ಬಿ. ಎಸ್. ಕುಲಕರ್ಣಿ; (೧೯೭೬), ಪ್ರತಿ ೫೧

೩೭. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೧೧; ಬಿ. ಎಸ್. ಕುಲಕರ್ಣಿ; (೧೯೮೨), ಪ್ರತಿ ೬೮

೩೮. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೧೨; ಬಿ. ಎಸ್. ಕುಲಕರ್ಣಿ; (೧೯೮೨), ಪ್ರತಿ ೮೫

೩೯. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) - ಸಂಪುಟ ೧೩; ಬಿ. ಸಿ. ಕಡಕೋಳ ಮತ್ತು ಕೆ. ಪಿ. ಈರಣ್ಣ; (೧೯೯೦), ಪ್ರತಿ ೮೨

೪೦. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೧ : ಡಾ. ಬಿ. ಆರ್. ಹಿರೇಮಠ, (೧೯೯೨), ಕಟ್ಟು ೧ ರಿಂದ ೧೦೦ (೩೪೫ ಪ್ರತಿ)

೪೧. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೨ : ಡಾ. ಬಿ. ಆರ್. ಹಿರೇಮಠ, (ಅಚ್ಚಿನಲ್ಲಿ) ಪ್ರತಿ ೧೦೧ - ೨೦೦

೪೨. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೩ : ಡಾ. ಬಿ. ಆರ್. ಹಿರೇಮಠ, (ಅಚ್ಚಿನಲ್ಲಿ) ಪ್ರತಿ ೨೦೧ - ೩೦೦

೪೩. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೪ : ಡಾ. ಬಿ. ಆರ್. ಹಿರೇಮಠ, (ಅಚ್ಚಿನಲ್ಲಿ) ಪ್ರತಿ ೩೦೧ - ೪೦೦

೪೪. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೫ : ಡಾ. ಬಿ. ಆರ್. ಹಿರೇಮಠ, (ಅಚ್ಚಿನಲ್ಲಿ) ಪ್ರತಿ ೪೦೧ - ೫೦೦

೪೫. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೬ : ಡಾ. ವಿ. ಬಿ. ರಾಜೂರ, (೧೯೯೨), ಕಟ್ಟು ೫೦೧ - ೬೦೦

೪೬. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೭ : ಡಾ. ವಿ. ಬಿ. ರಾಜೂರ, (೧೯೯೨), ಕಟ್ಟು ೬೦೧ - ೭೦೦ (೩೦೬ ಪ್ರತಿ)

೪೭. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೮ : ಡಾ. ವಿ. ಬಿ. ರಾಜೂರ, (೧೯೯೨), ಕಟ್ಟು ೭೦೧ - ೮೦೦ (೨೭೯ ಪ್ರತಿ)

೪೮. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೯ : ಡಾ. ವಿ. ಬಿ. ರಾಜೂರ, (೧೯೯೨), ಕಟ್ಟು ೮೦೧ - ೯೦೦ (೩೯೨ ಪ್ರತಿ)

೪೯. ಕನ್ನಡ ಅಧ್ಯಯನ ಪೀಠ ಹಸ್ತಪ್ರತಿ ಸೂಚಿ - ಸಂಪುಟ - ೧೦ : ಡಾ. ವಿ. ಬಿ. ರಾಜೂರ, (೧೯೯೨), ಕಟ್ಟು ೯೦೧ - ೧೦೦೦ (೨೪೫ ಪ್ರತಿ)

## ಬೆಂಗಳೂರು ಮತ್ತು ಹೈದ್ರಾಬಾದ ಹಸ್ತಪ್ರತಿ ಸೂಚಿಗಳು

೫೦. ಕನ್ನಡ ಹಸ್ತಪ್ರತಿಗಳ ವರ್ಣಾನಾತ್ಮಕ ಸೂಚಿ - ಸಂಪುಟ - ೧ (ಬೆಂಗಳೂರು ಕನ್ನಡ ಅಧ್ಯಯನ ಕೇಂದ್ರ) : ಎಸ್. ಶಿವಣ್ಣ (೧೯೮೨), ಪ್ರತಿ ೪೪೯

೫೧. ಕನ್ನಡ ಹಸ್ತಪ್ರತಿಗಳ ವರ್ಣಾನಾತ್ಮಕ ಸೂಚಿ (ಬಿ. ಎಂ ಶ್ರೀ ಪ್ರತಿಷ್ಠಾನ, ಬೆಂಗಳೂರು), ಸಂಪುಟ - ೧, ಕೆಳದಿ ಗುಂಡಾಜೋಯಿಸ ಮತ್ತು ನಾ. ಗೀತಾಚಾರ್ಯ (೧೯೮೩), ಪ್ರತಿ ೯೬

೫೨. ಎ. ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಉಸ್ಮಾನಿಯಾ ಯುನಿವರ್ಸಿಟಿ ಲೈಬ್ರರಿ, ಬಿ. ರಾಮಚಂದ್ರರಾವ್ ಮತ್ತು ಟಿ. ವಿ. ವೆಂಕಟಾಚಲಶಾಸ್ತ್ರಿ; (೧೯೬೬), ಪ್ರತಿ ೨೯೪

## ಇತರ ಸೂಚಿಗಳು

೫೩. ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚೀ, ಕೆ. ಭುಜಬಲಶಾಸ್ತ್ರಿ; (೧೯೮೪), ಪ್ರತಿ ೩೫೩೮

೫೪. ಶ್ರವಣಬೆಳಗೊಳ ಶ್ರೀ ಜೈನಮಠದ ತಾಡಪತ್ರೀಯ ಗ್ರಂಥಗಳ ವಿವರ, ದೇವಕುಮಾರ ಶಾಸ್ತ್ರಿ; (೧೯೮೦), ಪ್ರತಿ ೪೪೮೮೯

೫೫. ಕೊಲ್ಲಾಪುರ ಲಕ್ಷ್ಮೀಸೇವೆ ಬಸದಿಯ ಹಸ್ತಪ್ರತಿ ಸೂಚಿ, (೧೯೦೦)

೫೬. ಕೊಲ್ಲಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಬಸದಿಯ ಹಸ್ತಪ್ರತಿ ಸೂಚಿ, ಎಂ. ಎಂ. ಕಲಬುರ್ಗಿ - ಬಿ. ಆರ್. ಹಿರೇಮಠ ಮತ್ತು ಎಸ್. ವ್ಹಿ. ಅಯ್ಯನಗೌಡರ, (೧೯೮೮) ಪ್ರತಿ ೮೫೧

೫೭. ಗದುಗಿನ ತೋಂಟದಾರ್ಯಮಠದ ಹಸ್ತಪ್ರತಿ ಸೂಚಿ, ಎಸ್. ಶಿವಣ್ಣ (೧೯೮೫) ಪ್ರತಿ ಕನ್ನಡ ೧೧೪೦, ಇತರ ೨೫೬

೫೮. ವೀರಶೈವ ಅಪ್ರಕಟಿತ ಗ್ರಂಥಸೂಚಿ, ಎಸ್. ಶಿವಣ್ಣ; (೧೯೮೨), ಕೃತಿ ೧೭೧೨

೫೯. ಎ ಕ್ಲಾಸಿಫೈಯ್ಡ ಕ್ಯಾಟಲಾಗ್ ಆಫ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ ಇನ್ ದಿ ಸರಸ್ವತೀ ಭಂಡಾರಮ್ (ಪ್ಯಾಲೇಸ್ ಸಂಸ್ಕೃತ ಲೈಬ್ರರಿ) ಆಫ್ ಎಚ್. ಎಚ್. ಮಹಾರಾಜಾ ಆಫ್ ಮೈಸೂರು ಕಲೆಕ್ಷನ್ ಆಫ್ (೧೯೦೦ - ೧೯೦೫), ಪ್ರತಿ ३೦೦

೬೦. ದಿ ಲಿಸ್ಟ್ ಆಫ್ ದಿ ಅನ್‌ಪ್ರಿಂಟೆಡ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ್, ಇನ್ ದಿ. ಪ್ಯಾಲೇಸ್ ಸರಸ್ವತಿ ಭಂಡಾರ (ಮಹಾರಾಜಾ ಸಂಸ್ಕೃತ ಕಾಲೇಜು, ಮೈಸೂರು (೧೯೪೩), ಪ್ರತಿ ೧೦೩

೬೧. ಎ ಕ್ಯಾಟಲಾಗ್ ಆಫ ಸಂಸ್ಕೃತ, ಪ್ರಾಕೃತ ಆ್ಯಂಡ್ ಹಿಂದಿ ವರ್ಕ್ಸ್ ಇನ್ ದಿ ಜೈನ ಸಿದ್ಧಾಂತ ಭವನ ಆರಾ. ಸಂ. ಪಾರ್ಶ್ವದಾಸ ಗುಪ್ತ ಮತ್ತು ಮೂಲಚಂದ್ರ ಜೈನ; (೧೯೧೯), ಪ್ರತಿ ೫೦೦

ಕೊಲ್ಲಾಪುರ

# ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಮಠದ ಹಸ್ತಪ್ರತಿಸೂಚಿ

ಸಂಪಾದಕರು :

ಡಾ. ಎಂ. ಎಂ. ಕಲಬುರ್ಗಿ

ಡಾ. ಬಿ. ಆರ್. ಹಿರೇಮಠ

ಡಾ. ಎಸ್. ವ್ಹಿ. ಅಯ್ಯನಗೌಡರ



ಕನ್ನಡ ಅಧ್ಯಯನಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೮೮

## ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಮಠದ ಹಸ್ತಪ್ರತಿಸೂಚಿ

| ಅ.ನಂ. | ಕ್ರಮಾಂಕ | ಕೃತಿ | ಕರ್ತೃ | ವಸ್ತು | ಪ್ರಕಾರ |
|---|---|---|---|---|---|
| ೧ | ೨ | ೩ | ೪ | ೫ | ೬ |
| ೧ | ೧೪೮ | ಅಂಜನೆಯ ಚರಿತೆ | ಶಿಶುಮಾಯಣ | ತಾಳೆಗರಿ | ಸಾಂಗತ್ಯ |
| ೨ | ೨೬೩ | ,, | ,, | ,, | ,, |
| ೩ | ೩೩೫ | ,, | ,, | ,, | ,, |
| ೪ | ೨೭೧\|೧೦ | ಅಂತರಾಯ ಕ್ರಮ | ? | ಕಾಗದ | ಗದ್ಯ |
| ೫ | ೨೦\|೫ | ಅಕಳಂಕಸ್ತೋತ್ರಟೀಕೆ | ಮೂಲ: ಅಕಲಂಕ | ತಾಳೆಗರಿ | ಪದ್ಯ, ಗದ್ಯ |
| ೬ | ೧೮೯\|೪ | ,, | ,, | ,, | ,, |
| ೭ | ೨೦೩\|೨ | ,, | ,, | ,, | ,, |
| ೮ | ೨೮೯\|೨ | ,, | ,, | ,, | ,, |
| ೯ | ೨೮೧\|೩ | ,, | ,, | ,, | ,, |
| ೧೦ | ೨೪೩\|೧ | ,, | ,, | ಕಾಗದ | ,, |
| ೧೧ | ೨೭೦\|೯ | ,, | ,, | ,, | ,, |
| ೧೨ | ೫೨\|೨ | ,, | ,, | ,, | ,, |
| ೧೩ | ೫೩\|೩ | ,, | ,, | ,, | ,, |
| ೧೪ | ೧೯೮\|೧ | ,, | ,, | ,, | ,, |
| ೧೫ | ೩೧೪\|೫ | ,, | ,, | ,, | ,, |
| ೧೬ | ೩೩ | [ಅಜಿತಸೇನ ಪರಿಚಯ]* | ? | ತಾಳೆಗರಿ | ಸಾಂಗತ್ಯ, ವಾರ್ಧಕಷಟ್ಪದಿ |
| ೧೭ | ೧೪೧\|೧೫ | ಅನುಪ್ರೇಕ್ಷೆ | ? | ಕಾಗದ | ಸಾಂಗತ್ಯ |
| ೧೮ | ೨೬೧\|೧೨ | ,, | ,, | ,, | ,, |
| ೧೯ | ೫೧\|೧೩ | ,, | ,, | ,, | ,, |
| ೨೦ | ೨೨೦\|೪ | ,, | ,, | ,, | ,, |
| ೨೧ | ೨೬೩\|೩ | ,, | ,, | ,, | ,, |
| ೨೨ | ೨೬೮\|೨ | ಅನಂತ ಚತುಷ್ಟಯ ರೂಪ | ? | ,, | ಗದ್ಯ |
| ೨೩ | ೫೪\|೧ | ಅನಂತಾಷ್ಟಕ | ? | ತಾಳೆಗರಿ | ವೃತ್ತ |
| ೨೪ | ೧೮೨/೪ | ಅನಂತ ಸೌಂದರ್ಯನೋಂಪಿ ಕಥೆ | ? | ಕಾಗದ | ಗದ್ಯ |
| ೨೫ | ೧೭೦\|೩ | ಅನಂತ ನೋಂಪಿಯ ಕಥೆ | ? | ,, | ಗದ್ಯ |
| ೨೬ | ೧೭೭\|೩ | ಅಪರಾಜಿತೇಶ್ವರ ಶತಕ | ರತ್ನಾಕರವರ್ಣಿ | ತಾಳೆಗರಿ | ವೃತ್ತ |
| ೨೭ | ೧೭೯\|೬ | ,, | ,, | ,, | ,, |
| ೨೮ | ೨೧೫/೨ | ,, | ,, | ,, | ,, |

* ಕರ್ನಾಟಕ ಭಾರತಿ: ಸಂಪುಟ ೮, ಸಂಚಿಕೆ ೪.

೬೨. ಕ್ಯಾಟಲಾಗ್ ಆಫ್ ಸಂಸ್ಕೃತ ಆ್ಯಂಡ್ ಪ್ರಾಕೃತ ಮ್ಯಾನ್ಯುಸ್ಕಿಪ್ಟ್ ಇನ್ ದಿ ಸೆಂಟ್ರಲ್ ಪ್ರಾವಿನ್ಸಿಸ್ ಆ್ಯಂಡ್ ಬೆರಾರ್ (ಅನುಬಂಧ) ರಾವಬಹಾದ್ದೂರ ಹೀರಾಲಾಲ್; (೧೯೨೬), ಪ್ರತಿ ೪೩

೬೩. ದಿ ಅನ್‌ನೋನ್ ಪೇಜಿಸ್ ಇನ್ ದಿ ಹಿಸ್ಟರಿ ಆಫ್ ಕನ್ನಡ ಲಿಟರೇಚರ್, ಸಿ. ಮಹಾದೇವಪ್ಪ, (೧೯೬೦), ಪ್ರತಿ ೧೩

೬೪. ಶ್ರೀ ಜಗದ್ಗುರು ಮೂರುಸಾವಿರ ಮಠದ ವರ್ಣನಾತ್ಮಕ ಹಸ್ತಪ್ರತಿ ಸೂಚಿ - ಕೆಳದಿ ಗುಂಡಾಜೋಯಿಸ್ (೧೯೮೯) ಪ್ರತಿ ೩೯೦

೬೫. ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿ ಸೂಚಿ - ಎಸ್. ಶಿವಣ್ಣ (೧೯೯೧) ಪ್ರತಿ ೪೬೬೧

೬೬. ಕೆಳದಿ ಸಂಗ್ರಹಾಲಯ ಮತ್ತು ಐತಿಹಾಸಿಕ ಸಂಶೋಧನ ಕೇಂದ್ರ ವರ್ಣನಾತ್ಮಕ ಹಸ್ತಪ್ರತಿ ಸೂಚಿ - ಎಸ್. ಆರ್. ರಾವ್ ಮತ್ತು ಕೆಳದಿ ಗುಂಡಾಜೋಯಿಸ

## ೪.೬.೨ : ಲೇಖನರೂಪದ ಸೂಚಿಗಳು

೬೭. ಅ) ಸ್ವಾದಿಯ ಜೈನಮಠದೊಳಗಿರುವ ಕನ್ನಡ ಗ್ರಂಥಗಳು ಪ್ರತಿ ೨೯

ಆ) ಧರಣೇಂದ್ರಪ್ಪ ಅಣ್ಣ ಆಲೂರು, ಶಿರ್ಸಿ, ಇವರಲ್ಲಿಯ ತಾಡೋಲೆ ಗ್ರಂಥಗಳು ಪ್ರತಿ ೮ + ೨

ಇ) ಇಸ್ಲೂರ ಮಠದಲ್ಲಿರುವ ವೀರಶೈವ ಗ್ರಂಥಗಳು - ಕೆ. ಜಿ. ಕುಂದಣಗಾರ, ಜ. ಕ. ೭ + ೮ (೧೯೨೯) ಪ್ರತಿ ೨ + ೭

೬೮. ಕೈಬರಹದ ಗ್ರಂಥಗಳ ಸಂಶೋಧನೆಯು, ಎಸ್. ಸಿ. ನಂದಿಮಠ; ಶಿ. ವಾ. ೭ - ೧ (೧೯೩೨) ಪ್ರತಿ ೨೧೫

೬೯. ಹೈದರಾಬಾದ್ ಪ್ರಾಂತದಲ್ಲಿ ಕನ್ನಡ ಗ್ರಂಥಗಳ ಸಂಶೋಧನೆ, ಡಿ. ಕೆ. ಭೀಮಸೇನರಾವ್; ಕ. ಸಾ. ಪ. ೨೧ - ೩ (೧೯೩೬), ಪ್ರತಿ ೨೦

೭೦. ಐನೂಲಿ ಗುಂಡಯ್ಯನ ಮನೆಯ ಸಂಗ್ರಹ, ಕಪಟರಾಳ ಕೃಷ್ಣರಾಯ, ಶ. ಶಾ. ೪ - ೨, (೧೯೪೧), ಪ್ರತಿ ೮೩

೭೧. ಹೊಂಬುಜ ಮಠದ ಗ್ರಂಥಗಳ ಪಟ್ಟಿ ಸಂಗ್ರಾಹಕ ? ಶ. ಸಾ. ೧೯೮೪, ಪ್ರತಿ

೭೨. ಕಂಚಿಗಲ್ಲ - ಬಂದರೆ ದೊಡ್ಡಮಠದಲ್ಲಿ ದೊರೆತ ತಾಡವೋಲೆ ಗ್ರಂಥಗಳು, ಜಿ. ಎಂ. ಉಪಾಪತಿಶಾಸ್ತ್ರಿ, ಸುಕುಮಾರ ೪ - ೩, ೪ - ೯, (೧೯೫೪), ಪ್ರತಿ

೭೩. ಗದಗ ತೋಂಟದಾರ್ಯಮಠದ ತಾಡವೋಲೆ, ಜಿ. ಎಂ. ಉಮಾಪತಿಶಾಸ್ತ್ರಿ, ಸುಕುಮಾರ ೫ - ೩, (೧೯೫೪-೫೫), ಪ್ರತಿ

೭೪. ಹಾವೇರಿ ಹುಕ್ಕೇರಿ ಮಠದ ಓಲೆ ಸಂಗ್ರಹ, ಜಿ. ಎಂ. ಉಮಾಪತಿಶಾಸ್ತ್ರಿ, ಸುಕುಮಾರ ೫ - ೫, (೧೯೫೫) ಪ್ರತಿ

೭೫. ಹಾರ್ನಹಳ್ಳಿ ಕೋಡಿಮಠದ ಓಲೆಗಳು, ಜಿ. ಎಂ. ಉಮಾಪತಿಶಾಸ್ತ್ರಿ, ಸುಕುಮಾರ, ೫ - ೮೯ (೧೯೫೫)

೭೬. ಮದರಾಸು ಅಡಿಯಾರು ಪುಸ್ತಕಾಲಯದಲ್ಲಿರುವ ಕನ್ನಡ ಗ್ರಂಥಗಳು, ಶ. ಸಾ. ೨೦ - ೬, (೧೯೫೭), ಪ್ರತಿ ೫೬

೭೭. ಶರಣಸಾಹಿತ್ಯ ಕಾರ್ಯಾಲಯದಲ್ಲಿರುವ ತಾಳೆಯೋಲೆ ಹಾಗೂ ಕಾಗದ ಪ್ರತಿಗಳು - ಶ. ಸಾ. ೨೧ - ೫, (೧೯೮೫)

೭೮. ಬಳ್ಳಾರಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿ ಸಂಸ್ಥಾನಮಠದ ಗ್ರಂಥಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿಗ್ರಂಥಗಳ ಸೂಚಿ, ಜಿ. ಎಂ. ಉಮಾಪತಿಶಾಸ್ತ್ರಿ ಹೇಮಕೂಟ ೧ - ೨, (೧೯೭೫), ೩೩ ಕಟ್ಟು, ೧೧೬ ಪ್ರತಿ

೭೯. ಬಳ್ಳಾರಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿ ಸಂಸ್ಥಾನಮಠದ ಗ್ರಂಥಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿ ಗ್ರಂಥಗಳ ಸೂಚಿ, ಎಸ್. ಎಸ್. ಹಿರೇಮಠ ಹೇಮಕೂಟ ೧ - ೧೧, (೧೯೭೬), ಪ್ರತಿ

೮೦. ಶ್ರೀ ಬಾಹುಬಲಿ ಬ್ರಹ್ಮಚರ್ಯಾಶ್ರಮದಲ್ಲಿ ಮೈಕ್ರೋಫಿಲ್ಮ್ ಮಾಡಿರುವ ಗ್ರಂಥಗಳು, ಬಿ. ಎಸ್. ಸಣ್ಣಯ್ಯ ಸನ್ಮತಿ, ೧೧ - ೧, (೧೯೭೮), ಪ್ರತಿ ೩೭

೮೧. ಶ್ರೀ ತಾತನವರ ಮಠದ ಗ್ರಂಥಭಂಡಾರ ಸೂಚಿ, ಜಿ. ಎಂ. ಉಮಾಪತಿಶಾಸ್ತ್ರಿ, ಹೇಮಕೂಟ, ೪ - ೧೨ (೧೯೭೯), ಪ್ರತಿ ೧೪

೮೨. ಇಂಗ್ಲೆಂಡಿನಲ್ಲಿರುವ ಕನ್ನಡ ಹಸ್ತಪ್ರತಿಗಳು, ಎಂ. ಎಂ. ಕಲಬುರ್ಗಿ ಮಾರ್ಗ - ೧, ಪ್ರತಿ ೮೦

## ೪.೨.೪.೩ : ಹಸ್ತಪ್ರತಿಗಳು : ಮೆಕೆಂಝಿ ಸಂಗ್ರಹ

೧೦ನೆಯ ಶತಮಾನದಿಂದ ಅವ್ಯಾಹತವಾಗಿ ಬೆಳೆದು ಬಂದ ಕನ್ನಡ ಭಾಷೆ, ಸಾಹಿತ್ಯಗಳು ೧೮ ನೆಯ ಶತಮಾನದ ಕೊನೆಯ ಅವಧಿಯಲ್ಲಿ ಮತ್ತೊಂದು ಅಪೂರ್ವವಾದ ಬೆವಣಿಗೆಗೆ ಕಾರಣವಾದವು. ಈ ಬೆಳವಣಿಗೆ ಕನ್ನಡಕ್ಕೆ ಮಾತ್ರ ಸೀಮಿತವಾಗಿರದೆ, ದಕ್ಷಿಣ ಭಾರತದ ಎಲ್ಲ ಭಾಷೆಗಳಲ್ಲೂ ಕಂಡುಬಂದಿತು. ಭೂಮಿಯ ಅಡಿಯಲ್ಲಿ ಅಡಗಿಕೊಂಡಿರುವ ನಮ್ಮ ಚರಿತ್ರೆಯನ್ನು ತಿಳಿಸುವ ಶಾಸನಗಳ ನಕಲುಗಳನ್ನು ತೆಗೆಯುವ ಕಾರ್ಯ

ಮೊಟ್ಟಮೊದಲು ಆರಂಭವಾಯ್ತು. ಎಷ್ಟೋ ಜನರ, ಮನೆಗಳಲ್ಲಿ, ದೇವಾಲಯಗಳಲ್ಲಿ ಗೆದ್ದಲು ಹಿಡಿಯುತ್ತಿದ್ದ ಸಾಹಿತ್ಯ, ಪುರಾಣ, ವ್ಯಾಕರಣ ಮುಂತಾದವುಗಳಿಗೆ ಸಂಬಂಧಿಸಿದ ತಾಳೆಗ್ರಂಥಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸುವ ಕಾರ್ಯ ಆರಂಭವಾಯ್ತು. ಇದರೊಂದಿಗೆ ಪ್ರತಿ ಹಳ್ಳಿ ಹಳ್ಳಿಯಲ್ಲಿ ದೊರೆಯಬಹುದಾದ ಪ್ರತಿ ಸಮಾಜದ ಆಚಾರ - ವಿಚಾರ ಮತ್ತು ಅಲ್ಲಿಯ ಸ್ಥಳಪುರಾಣ, ಚಾರಿತ್ರಿಕ ಹಿನ್ನೆಲೆಗಳನ್ನು ಕೂಡ ಅಲ್ಲಿಯ ಜನರಿಂದಲೇ ಕೇಳಿ ತಿಳಿದು ಬರೆದುಕೊಳ್ಳಲಾಯ್ತು. ಭೂಪಟಗಳನ್ನೂ ಮೊತ್ತಮೊದಲಿಗೆ ತಯಾರಿಸಲಾಯ್ತು. ಇಂತಹ ಮಹತ್ಕಾರ್ಯವನ್ನು ಪ್ರಾರಂಭಿಸಿದವನು ಕರ್ನಲ್ ಕೊಲಿನ್ ಮೆಕೆಂಝಿ (Colonel Colin Mackenzie).

ಸ್ಕಾಟ್‌ಲೆಂಡಿನ ಸಮೀಪ ಇರುವ ಲೆವೀಸ್ ದ್ವೀಪದಲ್ಲಿ ಈತನ ಜನನವಾಯ್ತು (೧೭೫೩). ಇವನಿಗೆ ಚಿಕ್ಕವನಿದ್ದಾಗಿನಿಂದಲೇ ಗಣಿತಶಾಸ್ತ್ರದ ಕಡೆಗೆ ಹೆಚ್ಚಿನ ಒಲವು. ವಿಶ್ವಗಣಿತಕರ್ತನಾದ ಜಾನ್ ನೇಪಿಯರನ ಜೀವನಚರಿತ್ರೆಯನ್ನು ಪ್ರಾರಂಭಿಸಿದ್ದ, ಆತನ ವಂಶಸ್ಥನಾದ ಫ್ರಾನ್ಸಿಸ್ ಜೊತೆ ಮೆಕೆಂಝಿ ಸೇರಿಕೊಂಡ. ಆದರೆ ವಿಧಿ ಈ ಕಾರ್ಯ ಮುಗಿಸುವ ಮುಂಚೆಯೇ ಫ್ರಾನ್ಸಿಸ್‌ನನ್ನು ತನ್ನತ್ತ ಎಳೆದುಕೊಂಡಿತು. ಈ ಸಮಯಕ್ಕಾಗಲೇ ಮೆಕೆಂಝಿಗೆ ಭಾರತೀಯ ಗಣಿತ ಶಾಸ್ತ್ರವನ್ನು ಅಭ್ಯಸಿಸುವ ಅಭಿಲಾಷೆ ಉಂಟಾಗಿ, ಇದೇ ಉದ್ದೇಶದಿಂದ ಅಂದಿನ ಈಸ್ಟ್ ಇಂಡಿಯಾ ಕಂಪನಿಯ ಮದರಾಸು ವಿಭಾಗದಲ್ಲಿ ಕ್ಯಾಡೆಟ್ ಇಂಜಿನಿಯರ್ ಹುದ್ದೆ ಹಿಡಿದು ೨-೯-೧೭೮೩ ರಲ್ಲಿ ಮದರಾಸಿಗೆ ಬಂದನು. ಈ ಸಮಯದಲ್ಲೇ ನೇಪಿಯರನ ಬಗ್ಗೆ ಮಾಹಿತಿ ಸಂಗ್ರಹಿಸುತ್ತಿದ್ದ ಶ್ರೀಮತಿ ಜೋನ್‌ಸ್ಟನ್ನಳ ಪರಿಚಯವಾಯ್ತು. ಇವಳಿಂದ ಮಧುರೆಯಲ್ಲಿದ್ದ ಭಾರತೀಯ ವಿದ್ವಾಂಸರ ಪರಿಚಯ ಮಾಡಿಕೊಂಡನು. ಅಲ್ಲಿ ಖಗೋಳಶಾಸ್ತ್ರ, ವೇದಾಂತ, ಗಣಿತಶಾಸ್ತ್ರ ಮತ್ತು ಲೌಕಿಕ ಶಾಸ್ತ್ರಗಳನ್ನು ಬಲ್ಲ ವಿದ್ವಾಂಸರಿದ್ದರು. ಈ ಪಂಡಿತರ ಸಂಪರ್ಕ ಗಾಢವಾದಂತೆಲ್ಲ ಮೆಕೆಂಝಿಗೆ ಭಾರತದ ವೇದ, ಪುರಾಣ, ಇತಿಹಾಸ, ವಿಜ್ಞಾನಗಳಿಗೆ ಸಂಬಂಧಿಸಿದ ಸಾಹಿತ್ಯಗಳನ್ನು ಸಂಗ್ರಹಿಸಬೇಕೆಂಬ ಮಹತ್ವಾಕಾಂಕ್ಷೆ ಸ್ವಾಭಾವಿಕವಾಗಿಯೇ ಉಂಟಾಯಿತು. ೧೭೯೬ ರಿಂದ ೧೮೧೧ ರ ವರೆಗೆ ಇವನ ಕಾರ್ಯಕ್ಷೇತ್ರ ದಕ್ಷಿಣ ಭಾರತವೇ ಆಗಿತ್ತು. ಇವನನ್ನು ದಕ್ಷಿಣ ಭಾರತದ ಭೂಪಟ ತಯಾರಿಸುವ ಕಾರ್ಯಕ್ಕೆ ನೇಮಿಸಿದ್ದರು. ಈ ಸಮಯದಲ್ಲಿ ದೇಶೀಯ ವಿದ್ವಾಂಸರ ಸಹಾಯದಿಂದ ಸಾವಿರಾರು ಹಸ್ತಪ್ರತಿ, ಪ್ರಾಚ್ಯವಸ್ತು, ಕೈಫಿಯತ್ತು, ಬಖೈರು, ರಾಜವಂಶಾವಳಿ ಮುಂತಾದವುಗಳನ್ನು ಸಂಗ್ರಹಿಸಿದನು. ತನಗೆ ನೆರವು ನೀಡಿದ ಕಾವಲಿ ವೆಂಕಟಬೋರಯ್ಯ ಎಂಬ ವಿದ್ವಾಂಸನನ್ನು ಬಹುವಾಗಿ ಪ್ರಶಂಸಿಸಿದ್ದಾನೆ. ಇವನ ಸಂಗಡ ಕನ್ನಡ, ತಮಿಳು, ತೆಲುಗು, ಸಂಸ್ಕೃತ, ಮರಾಠಿ ಮತ್ತು ಪರ್ಷಿಯನ್ ಬಲ್ಲ ದೇಶೀಯ ಪಂಡಿತರಿದ್ದರು. ಕನ್ನಡಕ್ಕೆ ರಾಮದಾಸ ಮತ್ತು ನಾರಾಯಣರಾವ್ ಎಂಬುವರಿಬ್ಬರಿದ್ದರು. ಇವರಿಗೆ ತಮಿಳು ಕೂಡ ಚೆನ್ನಾಗಿ ತಿಳಿದಿತ್ತು. ಇವರೆಲ್ಲರಿಗೂ ಮೆಕೆಂಝಿ ತನ್ನ ಕೈಯಿಂದಲೇ ಸಂಬಳವನ್ನು ಕೊಡುತ್ತಿದ್ದನು; ಕೆಲವು ಪ್ರಾಚ್ಯವಸ್ತುಗಳನ್ನು ಕೊಳ್ಳುವುದಕ್ಕೆ ತನ್ನ ಕೈಯಿಂದಲೇ ೧೫ ಸಾವಿರ ಪೌಂಡ್ ಹಾಕಿದ್ದನು. ಈತನ ಕಾರ್ಯಕ್ಷೇತ್ರ ಭಾರತಕ್ಕಷ್ಟೇ ಸೀಮಿತವಾಗಿರದೆ,

ಜಾವಾ, ಸುಮಾತ್ರಾ, ಬರ್ಮಾ, ಶ್ರೀಲಂಕಾಗಳವರೆಗೂ ವ್ಯಾಪಿಸಿತ್ತು. ಅಲ್ಲಿಯೂ ಕೂಡ ಈ ಸಂಗ್ರಹ ಕಾರ್ಯವನ್ನು ನಡೆಸಿಯೇ ಇದ್ದ. ೩೮ ವರ್ಷಗಳ ಕಾಲ ಒಂದು ದಿನ ಕೂಡಾ ರಜೆ ತೆಗೆಯದೆ ಕಾರ್ಯ ನಿರ್ವಹಿಸಿದ್ದ ಇವನ ಆರೋಗ್ಯ ಹದಗೆಟ್ಟಿತು. ಈ ಪರಿಣಾಮದಿಂದಾಗಿ ಮೆಕೆಂರಿಝಿ (೮ - ೫ - ೧೮೨೧) ಹೂಗ್ಲಿನದಿಯ ದಡದಲ್ಲಿ ಅಸುನೀಗಿದ.

ಮೆಕೆಂರಿಝಿಯ ಮರಣದ ತರುವಾಯ ಅವನ ಸಂಗ್ರಹವನ್ನು ಈಸ್ಟ್ ಇಂಡಿಯಾ ಕಂಪೆನಿಯವರು ಸ್ವಲ್ಪ ಹಣಕೊಟ್ಟು ಅವನ ಹೆಂಡತಿಯಿಂದ ಪಡೆದುಕೊಂಡರು. ಹೀಗೆ ಪಡೆದುಕೊಂಡ ಸಂಗ್ರಹಗಳನ್ನು ೧೮೨೧ ರಲ್ಲಿ ೩ ವಿಭಾಗ ಮಾಡಿ ಒಂದನ್ನು ಇಂಗ್ಲೆಂಡಿಗೂ, ಇನ್ನೊಂದನ್ನು ಕಲಕತ್ತಾಗೂ, ಉಳಿದವುಗಳನ್ನು ಮದ್ರಾಸಿಗೂ ಹಂಚಿ ಹಾಕಿದರು. ಈ ಸಂಗ್ರಹಗಳಲ್ಲಿ ಭಾಷೆಗಳಿಗೆ ಸಂಬಂಧಿಸಿದವು, ನಾಣ್ಯಗಳು, ಮೂರ್ತಿಗಳೂ ಸೇರಿದ್ದವು. ಇಂಗ್ಲೆಂಡಿಗೆ ಸಾಗಿಸಿದವುಗಳಲ್ಲಿ ಮುಖ್ಯವಾಗಿ ನಾಣ್ಯಗಳು, ಮೂರ್ತಿಗಳು, ಬರ್ಮೀಯ ಹಸ್ತಪ್ರತಿ ಮುಂತಾದುವುಗಳು ಸೇರಿವೆ.

ಮೆಕೆಂರಿಝಿ ಸಂಗ್ರಹಿಸಿದ ಕನ್ನಡ ಕೈಫಿಯತ್ತುಗಳಲ್ಲಿ ಚಾರಿತ್ರಿಕ ಮಹತ್ವ ಉಳ್ಳಂಥವು, ಪೌರಾಣಿಕ ಮಹತ್ವ ಉಳ್ಳವು, ಒಂದೊಂದು ಸಮಾಜದ ಆಚಾರ - ವಿಚಾರಗಳಿಗೆ ಸಂಬಂಧಿಸಿದವು, ಮತ್ತು ಸ್ಥಳನಾಮ ಪರಿಚಯ ಉಳ್ಳವು ಗಮನಾರ್ಹವಾಗಿವೆ.

**ಚಾರಿತ್ರಿಕ ಹಿನ್ನೆಲೆ ಉಳ್ಳ ಸಿರ್ಸಿ ಕೈಫಿಯತ್ತುಗಳು :** ಶಿರಸಿ, ಮೂಡಸಿ, ಭಾಗಿ ಕೈಫಿಯತ್ತುಗಳಲ್ಲಿ ಅಂದು ಆಳಿದ ಮಾಂಡಲಿಕರ ಬಗೆಗೆ ಮಾಹಿತಿ ಇದೆ. ಅವರ ಆಡಳಿತಕ್ಕೆ ಒಳಪಟ್ಟ ಕೆಲ ಊರುಗಳ ಹೆಸರೂ ಇವೆ. ಬಿಚ್ಚನಾಮೆ, ಯಸಳೆ, ಕಬ್ಬಗಾರು, ಸುರಕಲ ಕೊಪ್ಪ, ಬಿದ್ರಾಪುರ, ಕೆರೆಕೊಪ್ಪ, ಹುಸುರೆ, ವಡುಗನಹಳ್ಳಿ, ಬಗೇರಿಕೊಪ್ಪ ಮೊದಲಾದವು. ಇವು ಒಟ್ಟು ೧೪ ಗ್ರಾಮುಗಳು. ಜಂಬೇ ಹಳ್ಳಿಗಾಡಿಗೆ ಸೇರಿದ ಕಿಲ್ಲೆಗಳು ಮೂರು. ಇವುಗಳಲ್ಲಿ ಒಂದು ಚನ್ನಪಟ್ಟಣ ಕಿಲ್ಲೆ. ಇದನ್ನು ಕಟ್ಟಿಸಿದವರು ಸೋದೆ ರಾಮಚಂದ್ರ ನಾಯಕರು. ಬಶೆಟ್ಟಿಯ ಕೆರೆಯ ಮೇಲೆ ಇರುವ ಕಿಲ್ಲೆ ಬಸಲಿಂಗರಾಜರ ಕಾಲಕ್ಕೆ ಕಟ್ಟಿಸಿದ್ದು. ಹಿತ್ತಲಗದ್ದೆ ಮೇಲಿರುವ ಕಿಲ್ಲೆ ಹಿಂದೆ ಮೂಡಶಿ ಬಾಗಿ ಪಾಳೇಗಾರನ ಕಾಲದ್ದು. ಈಗ ಕಿಲ್ಲೆಯ ಪಾಯ ಮಾತ್ರ ಕಾಣುತ್ತದೆ.

"ಭಾವ ಸಂವತ್ಸರದ ಆಶಾಢ ಶುದ್ಧ ೬ ರಲ್ಲು ಹುಣಿಶೆಕೊಪ್ಪದ ಪುಟ್ಟಯ್ಯ ಹೆಗ್ಗಡೆ, ನರಸಪ್ಪ ಹೆಗ್ಗಡೆ, ವಿಘ್ನೇಶ್ವರ ಹೆಗ್ಗಡೆ, ಭೀಷ್ಮಪ್ಪನ ಪುಟ್ಟಯ್ಯ ಹೆಗ್ಗಡೆ ಮುಂತಾದವರು ಬರೆಸಿಕೊಟ್ಟ ಕೈಫಿಯತ್ತು. ಶಿರಸಿ ಕಸುಬೆಯು ಬೆಡಳ್ಳಿ ಭಾಗಿವಳಗಣ ಪುಟ್ಟನ ಮನೆ ಗ್ರಾಮಕ್ಕೆ ಸೇರಿದ್ದು. ಇಲ್ಲಿ ಮಠದ ಬೇಣಾ ಇದ್ದು ಇದಕ್ಕೆ ಹೊಲತಿಕೋಟೆ ಅಂತಾ ಹೇಳುತ್ತಾರೆ. ನಂತರ ಇದಕ್ಕೆ ಹೊಲತಿ ಕಾನಕೋಟೆ ಅಂತ ಹೆಸರಾಯಿತು. ನಂತರ ಈ ಮೇಲಘಟ್ಟ ಸೀಮೆಯ ಅಲಾಹಿದೆ ವಂಶಾವಳಿ ಬರೆದ ಸೋದೆ ಅರಸರ ವಂಶಸ್ಥರಾದ ರಾಮಚಂದ್ರ ನಾಯಕರ ಕಾಲದಲ್ಲು ಮೇಲೆ ಹೇಳಿದ ಎರಡು ಕೋಟೆ ಮಧ್ಯದಲ್ಲು, ದೇವೀಕೇರೆಗೆ ದಕ್ಷಿಣ ದಿಕ್ಕಿನಲ್ಲು ಕೋಟೆ ಕಟ್ಟಿ 'ಚನ್ನಪಟ್ಟಣ' ಎಂಬ

ಹೆಸರಿಟ್ಟು ಯಾವತ್ತೂ ಮೇಲುಸೀಮೆ ರಾಜ್ಯಭಾರವನ್ನು ಈ ಕೋಟೆಯೊಳಗಿದ್ದು ಮಾಡುತ್ತಾ ಬಂದರು." (ಚನ್ನಪಟ್ಟಣ ಇಂದಿಗೂ ಸಿರ್ಸಿಯ ಪ್ರಮುಖ ಪೇಟೆಯಾಗಿದೆ.) "ಇದೇ ಸಮಯದಲ್ಲಿ ಬಿದರೂರ ಅರಸು ಕೆಳದಿ ಚನ್ನಮ್ಮಾಜಿಯ ಮಗ ವೀರಭದ್ರನು ಫೌಜು ತಂದು, ಯುದ್ಧ ಮಾಡಿ ಚನ್ನಪಟ್ಟಣ ಕಿಲ್ಲೆಗೆ ಠಾಣೆ ಹಾಕಿದನು. ಆದ್ದರಿಂದ ಅರಸು ಅಲ್ಲಿಂದ ಕೆಂಗೆರೆ ಬದಿಯಲ್ಲಿರುವ ಕೋಟೆಗೆ ಹೋದನು. ಅಲ್ಲೂ ಆವಾಂದ್ರ ಬಂದ ಕಾರಣ ಕುಕ್ಕಳಿಗೆ ಹೋದನು. ಕುಕ್ಕಳಿಂದ ಅವರ ತಮ್ಮ ಸದಾಶಿವ ನಾಯಕರು ವಿಜಾಪುರದ ಬಾದಶಾಹಿನ ಬಳಿ ಹೋಗಿ, ಆತನ ಭೇಟಿ ಮಾಡಿ 'ದಶಾವತಾರ' ಯಕ್ಷಗಾನವನ್ನು ಆಡಿತೋರಿಸಿ ಅವನನ್ನು ಸುಸಂತೋಷಗೊಳಿಸಿದನು. ಇದರಿಂದಾಗಿ ಖಾನ ಎಂಬ ಸರದಾರನಿಗೆ ಅಪ್ಪಣೆ ಆಯ್ತು. ಸಂಗಡ ೪೦,೦೦೦ ಫೌಜು ನೇಮಕ ಮಾಡಿಕೊಟ್ಟು, ಆ ಮೇಲೆ ನಾಯಕರಿಗೆ ಊಟಕ್ಕೆ ಬರಲು ಅಪ್ಪಣೆ ಆಯ್ತು. ಆದರೆ ನಾಯಕರಿಗೆ ಊಟಕ್ಕೆ ಹೋಗಲು ಮನಸ್ಸಿರಲಿಲ್ಲ. ತಪ್ಪಿಸಲು ಪ್ರಯತ್ನಿಸಿದರು. ಅದು ಸಾಧ್ಯವಾಗದಾದಾಗ ಊಟಕ್ಕೆ ಹೋದರು. ಅಲ್ಲಿ ವಜೀರರೆಲ್ಲಾ ಊಟಕ್ಕೆ ಕುಳಿತಿದ್ದರು. ಎಲ್ಲರಿಗೂ ಚಿನ್ನದ ಕವುಳಿಗೆಯಲ್ಲಿ ಊಟದ ವ್ಯವಸ್ಥೆ ಮಾಡಿದ್ದರು. ಅದೇ ಸಮಯಕ್ಕೆ ಸದಾಶಿವ ನಾಯಕರು ಎದ್ದು ಶ್ರೀದೇವರ ಪ್ರಸಾದ ಬಿಡಾರದಲ್ಲಿ ಬಿಟ್ಟಿರುವೆ ಎಂದು ಹೇಳಿ, ಅದನ್ನು ತರಿಸಿ ವಸ್ತ್ರ ಮುಚ್ಚಿಟ್ಟಿದ್ದ ಊಟದ ಕವುಳಿಗೆಯ ಮೇಲೆ ತೀರ್ಥ ಹಾಕಿದರು. ನಂತರ ವಸ್ತ್ರ ತೆಗೆದು ನೋಡಲಾಗಿ ಅಲ್ಲೊಂದು ಪವಾಡವೇ ನಡೆದಿತ್ತು. ಯಾವತ್ತೂ ಪದಾರ್ಥಗಳೆಲ್ಲಾ ನಾನಾ ತರದ ಹೂಗಳಾಗಿದ್ದವು! ಇದೇನಾಶ್ಚರ್ಯ! ಎಂದು ಬಾದಶಹ ಉದ್ಗಾರ ತೆಗೆದನು. ನೀನು ಮಹಾಪುರುಷ, ಪುಣ್ಯವಂತ ಅಂತ ಹೇಳಿ ಫೌಜು ಮುಂದೆ ಹೋಗಲು ಅಪ್ಪಣೆ ಮಾಡಿದನು. ಅಲ್ಲಿ ಕೆಲವು ದಿನ ನಿಂತು ಬಾವಲಿ ರಾಜರು ಅಂತ ಕಿತಾಬು ಕೊಟ್ಟು ಕಳಿಸಿದರು. ಅಲ್ಲಿಂದ ಊರಿಗೆ ಬಂದು, ಯಾವತ್ತೂ ತಮ್ಮ ಶೀಮೆಗೆ ಬಂದು ಠಾಣೆ ಹಾಕಿ ರಾಮಚಂದ್ರ ರಾಜರು, ಸದಾಶಿವ ರಾಜರು ಉಭಯತರು ಬಿರೂರಿಗೆ 'ರಾಮಚಂದ್ರಪುರ' ಎಂದು ಹೆಸರಿಟ್ಟು ಆಳಿದರು.

**ಶಿರಶಿ ಮಾರ‍್ಯಮ್ಮದೇವರ ಕೈಫಿಯತ್ತು** : ಈ ಕೈಫಿಯತ್ತಿನಲ್ಲಿ ಮಾರ‍್ಯಮ್ಮ ಸಿರ್ಸಿಗೆ ಬಂದ ಕುತೂಹಲಕರ ಹಿನ್ನೆಲೆ ಇದೆ. ಈ ಕೈಫಿಯತ್ತಿನ ಸಾರಾಂಶ ಹೀಗಿದೆ: ಒಮ್ಮೆ ಮೊಗಲರ ಆಜ್ಞೆಯಂತೆ ಗಡಿಪಾರಾಗಬೇಕಾಯ್ತು. ಆ ಸಮಯಕ್ಕಾಗಲೇ ಅಲ್ಲಿದ್ದ ಮಾರಿದೇವತೆಯನ್ನು ಪೆಟ್ಟಿಗೆಯಲ್ಲಿ ಹಾಕಿ ಅರಗಿನ ಸೀಲು ಹಾಕಿದ್ದರು. ಗಡಿಪಾರಾದ ಜನರ ಪೈಕಿ ಒಬ್ಬ ಕೋಟೆಯಿಂದ ಹೊರಬರುವಾಗ ಆ ಪೆಟ್ಟಿಗೆಯನ್ನು, ಏನೋ ಬೆಲೆಬಾಳುವ ವಸ್ತು ಇರಬೇಕೆಂದು ಹೊತ್ತು ತಂದ. ಈ ಜನರೆಲ್ಲಾ ಸಿರ್ಸಿಯ ಕೋಟೆಗೆರೆ ಮೇಲೆ ಇಳಿದುಕೊಂಡರು. ಆ ಸಮಯದಲ್ಲಿ ಆ ದೇವರು ಅಲ್ಲಿದ್ದ ಹುಡುಗನೊಬ್ಬನ ಮೇಲೆ ಬಂದು, 'ನಾನು ಬಂಕಾಪುರದ ಮಾರಿ. ನನಗೆ ಇಲ್ಲಿ ಇರಲು ಸರಿಯಾದ ಸ್ಥಳ ಮಾಡಿಕೊಡಿ' ಎಂಬ ಅಪ್ಪಣೆ ಆಯ್ತು. ಅದೇ ಪ್ರಕಾರ ಸಿರ್ಸಿ ಊರಿನ ಜನರೆಲ್ಲಾ ಕೂಡಿ ವಿಜೃಂಭಣೆಯಿಂದ ಆ ದೇವತೆಯನ್ನು ಪೇಟೆಯೊಳಗೆ ತಂದು ಸ್ಥಾಪಿಸಿದರು. ಪೂಜೆ ಪುನಸ್ಕಾರಗಳಿಗೆ ಕೆಲವು ಜಮೀನು ಬಿಡಲಾಯಿತು.

ಅದೇ ಸಮಯಕ್ಕೆ ಮೂರು ವರ್ಷಕ್ಕೊಮ್ಮೆ ಹಬ್ಬ ಮಾಡಬೇಕೆಂತ ಅಪ್ಪಣೆಯೂ ಆಯ್ತು. ಪೂಜೆಗೆ ಸಂಬಾಳ ನರಸಣ್ಣಯೆಂಬುವವನನ್ನು ನೇಮಿಸಲಾಯ್ತು. ಈಗಲೂ ಸಿರ್ಸಿಯ ಮಾರ್‍ಯಮ್ಮ ಈ ಕಡೆ ಜನರಿಗೆ ಪ್ರಸಿದ್ಧ ದೇವತೆಯಾಗಿದ್ದಾಳೆ. ಇಲ್ಲಿ ಬ್ರಾಹ್ಮಣೇತರಿಂದಲೇ ಪೂಜೆ ನಡೆಯುತ್ತಾ ಬಂದಿದೆ.

**ಗೋಕರ್ಣದ ಕೈಫಿಯತ್ತು** : ಪೌರಾರಿಕ ಹಿನ್ನೆಲೆಯುಳ್ಳ ಈ ಕೈಫಿಯತ್ತಿನಲ್ಲಿ ಗೋಕರ್ಣದ ಮಹತ್ವ, ಅಲ್ಲಿಯ ದೇವರು, ತೀರ್ಥಗಳ ಮಹತ್ವ ಮತ್ತು ಹೆಸರುಗಳನ್ನು ನಮೂದಿಸಿದ್ದಾರೆ. ಕೈಫಿಯತ್ತಿನ ಮಧ್ಯದಲ್ಲಿ ಸಂಸ್ಕೃತ ಶ್ಲೋಕಗಳನ್ನು ಬಳಸಿಕೊಂಡಿದ್ದು, ಬರಹ ಶುದ್ಧವಾಗಿಲ್ಲದ ಕಾರಣ ಅರ್ಥ ಮಾಡುವುದು ಕಷ್ಟ. ಇದರ ಸಾರಾಂಶ ಹೀಗಿದೆ : ಪೂರ್ವದಲ್ಲಿ ತ್ರೇತಾಯುಗದ ಪ್ರಥಮ ಪಾಪದಲ್ಲಿ ಪರಶುರಾಮನು ಕ್ಷತ್ರಿಯರ ಸಂಹಾರ ಮಾಡಿ ಬ್ರಾಹ್ಮಣರಿಗೆ ಭೂಮಿ ಸಮಗ್ರದಾನ ಮಾಡಿ ಮಹೇಂದ್ರ ಪರ್ವತದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. ಈ ಸಮಯದಲ್ಲಿ ಕಶ್ಯಪ ಮೊದಲಾದ ಮಹರ್ಷಿಗಳು, ತಮಗೆ ತಪಸ್ಸನ್ನಾಚರಿಸಲು ಸ್ಥಳವಿಲ್ಲ; ಅನಾದಿಯಿಂದ ಸಂಸಿದ್ಧಿಯಾದ ಗೋಕರ್ಣ ಸಮುದ್ರದ ಒಳಗೆ ಮುಳುಗಿ ಹೋಗಿದೆ; ಇದನ್ನು ಪುನಃ ಉದ್ಧಾರ ಮಾಡುವವರು ಯಾರು ? ಮಾಡಿದರೆ ಪರಶುರಾಮನೊಬ್ಬನೇ. ಆತನ ಮೂಲಕ ಗೋಕರ್ಣವನ್ನು ಉದ್ಧಾರ ಮಾಡಿಸಿ, ಇಲ್ಲಿ ತಪಸ್ಸು ಮಾಡಿದರೆ ಸಕಲ ಇಷ್ಟಸಿದ್ಧಿಯಾಗುವುದು ಎಂದು ಯೋಚಿಸಿ, ಮಹೇಂದ್ರ ಪರ್ವತಕ್ಕೆ ಹೋಗಿ ಕಾದುಕೊಂಡಿದ್ದರು. ಕೆಲವು ದಿವಸಗಳ ಅನಂತರ ಪರಶುರಾಮನ ತಂದೆಯ ಶ್ರಾದ್ಧ ದಿವಸ ಬಂತು. ಆಗ ಋಷಿಗಳನ್ನು ನಿಮಂತ್ರಿಸಲಾಗಿ ಅವರು ಬಂದರು. ಆಪೋಶನ ತೆಗೆದುಕೊಳ್ಳುವ ಸಮಯದಲ್ಲಿ, ತಮ್ಮ ಒಂದು ಹೇಳಿಕೆ ಇದೆ. ಇದನ್ನು ಈಡೇರಿಸಿದರೆ ಮಾತ್ರ ಆಪೋಶನ ತೆಗೆದುಕೊಳ್ಳುವುದಾಗಿ ಕೇಳಿದನು. ಋಷಿಗಳು ಸಮುದ್ರದ ಒಳಗೆ ಮುಳುಗಿದ್ದ ಗೋಕರ್ಣ ಸ್ಥಳವನ್ನು ಉದ್ಧಾರ ಮಾಡಬೇಕಾಗಿ ಕೇಳಿಕೊಂಡರು. ಆಗ ಪರಶುರಾಮನು, ತಪಸ್ಸಿಗೆ ಇದೇ ಸ್ಥಳ ಯೋಗ್ಯವಾದುದು ಹೇಗೆ ? ಎಂದು ಕೇಳಿದಾಗ, ಅದಕ್ಕೆ ಋಷಿಗಳು ಗೋಕರ್ಣದ ಪುರಾಣವನ್ನೇ ಹೇಳುವರು. ಅದು ತುಂಬಾ ವಿವರವಾಗಿ ಬಂದಿದೆ. ಕೊನೆಯಲ್ಲಿ ೩೩ ಕೋಟಿ ದೇವತೆಗಳಿಗೆ ೩೩ ತೀರ್ಥಗಳ ಹೆಸರು ಕೊಟ್ಟಿದ್ದಾರೆ. ಈ ತೀರ್ಥಗಳು ಹುಟ್ಟಿದ ಸ್ಥಳವನ್ನು ತಿಳಿಸಿ, ಅನಂತರ ಭೂಮಿಗೆ ಅಡಿಗಾದ ತೀರ್ಥಗಳನ್ನೂ ಹೆಸರಿಸಿದ್ದಾರೆ.

**ಸ್ಥಳನಾಮ ಪರಿಚಯಿಸುವ ಕೈಫಿಯತ್ತು** : " ಕಸುಬಾ ಶಿರಸಿಗೆ ಪಶ್ಚಿಮ ದಿಗ್ಭಾಗ ಲಿಂಗದಕೊಣಾ ಯಂತ ಒಂದು ತಟಾಕ ಉಂಟು. ಇದಕ್ಕೆ ಲಿಂಗದಕೊಣಾಯಂತ ಹೆಸರು ಬಂದದ್ದು ಹ್ಯಾಗೆಂದರೆ, ಕೆಳಗೆ ' ಕೊಣಾ ' ಮೇಲೆ ' ಲಿಂಗಾ ' ಇರುವುದರಿಂದ ಜನರು ಈ ಎರಡೂ ಕೂಡಿಸಿ ' ಲಿಂಗದ ಕೊಣದ ರಾಮೇಶ್ವರ ದೇವರ ' ಂತ ಹೇಳುತ್ತಾರೆ. " ಇಂದಿಗೂ ಈ ಸ್ಥಳವನ್ನು ನೋಡಬಹುದಾಗಿದೆ. ಇಂದು ಈ ಸ್ಥಳಕ್ಕೆ ' ಲಿಂಗದ ಕೊಣ ' ದ ಬದಲಾಗಿ ' ಲಿಂಗದ ಕೋಣ ' ಎಂತ ಹೇಳುತ್ತಾರೆ. ಈ ಸ್ಥಳನಾಮಗಳು ಒಂದು ನಾಡಿನ ಸಾಂಸ್ಕೃತಿಕ, ರಾಜಕೀಯ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಸರಿಯಾದ ಆಧಾರಗಳನ್ನು ಒದಗಿಸಬಲ್ಲವು.

**ಜಾತಿಗೆ ಸಂಬಂಧಿಸಿದ ಕೈಫಿಯತ್ತು :** ಭಾರತವು ಹಲವು ಧರ್ಮಗಳ ನೆಲೆವೀಡು. ಹಿಂದೂ ಧರ್ಮದಲ್ಲೂ ಅನೇಕ ಪಂಗಡಗಳಿದ್ದು, ಇವರ ಆಚಾರ ವಿಚಾರ ವಿಶಿಷ್ಟವಾಗಿದೆ. ಇವರು ಆಚರಿಸುವ ಹಬ್ಬ ಹರಿದಿನ ಇವುಗಳು ಒಂದು ಸಮಾಜದಿಂದ ಇನ್ನೊಂದು ಸಮಾಜಕ್ಕೆ ಭಿನ್ನವಾಗಿವೆ. ಇವುಗಳನ್ನು ಈ ಕೈಫಿಯತ್ತು ಸ್ಪಷ್ಟಪಡಿಸುತ್ತದೆ. " ಮೇದಾರ ಜಾತಿಯಲ್ಲಿ ಹಡೆದರೆ ಹೊಲೆ (ಸೂತಕ) ಆಯಿತು ದಿನಕ್ಕೆ ಹೋಗುವುದು. ಅನಂತರ ಅರವಿ, ಹಚ್ಚಡ ಎಲ್ಲವನ್ನು ತೊಳೆದು, ಮನೆ ಸಾರಿಸಿ, ಕೂಸಿನ ತೊಟ್ಟಿಲ ಒಳಗೆ ಹಾಕಿ ಕುಲದವರು ಕೂಡಿ ಊಟಮಾಡಬೇಕು. ಈ ಸಮಾಜದಲ್ಲಿ ಹೆಣ್ಣಿಗೆ ತೆರ ಕೊಡುವ ಪದ್ಧತಿ ಇದೆ ಜೋಯಿಸರ ಮನೆಗೆ ಹೋಗಿ ಲಗ್ನ ಕಟ್ಟಿಸಿಕೊಡಬೇಕಾದರೆ, ಒಂದು ಶಿದ್ದೆ ಅಕ್ಕಿ, ೫ ತೊಂಡೆಕಾಯಿ ತೆಗೆದುಕೊಂಡು ಹೋಗಿ ಕಟ್ಟಿಸಿಕೊಂಡು ಬರಬೇಕು. ಇದಾದ ಮೂರು ದಿನಕ್ಕೆ ಲಗ್ನಾ ಮಾಡಬೇಕು. ಉಡಿ ತುಂಬುವ ಪದ್ಧತಿ ಇದೆ. ಬಿಳಿ ಶೀರೆ, ಕುಬಸದ, ಒಂದು ಕಡಗ ಜೋಡು, ಒಂದು ಹೊಸ ಚಾಪೆ, ಪೂಜೆ ಮಾಡಿ ಉಡಿ ತುಂಬಿ, ಗುರುಗಳು, ಗೌಡ, ಬುದ್ಧಿವಂತ ಇವರುಗಳಿಗೆ ವೀಳ್ಯೆ ಹಂಚಬೇಕು. ಸೋದರಮಾವ ಧಾರೆಯೆರೆಯಬೇಕು. ಮಂಗಳಸೂತ್ರ, ಬಾಸಿಂಗಗಳನ್ನು ಕುಲದವರು ತರಬೇಕು. ಜೋಯಿಸರಿಗೆ ಗಂಡಿನವರು ಹತ್ತಣೆ, ಹೆಣ್ಣಿನವರು ಹತ್ತಣೆ ಕೊಡಬೇಕು. ನಾಲ್ಕನೇ ದಿವಸಕ್ಕೆ ನಾಗೋಲೆ ಶಾಸ್ತ್ರ ಮಾಡಿ ಕುಲದವರೆಲ್ಲಾ ಕೂಡಿ ಊಟಾಮಾಡಿ ಗಂಡಿನ ಮನೆಗೆ ಕರೆದುಕೊಂಡು ಹೋಗಿ ಮನೆ ತುಂಬಿಸಿ ವೀಳ್ಯೆ ಕೊಂಡು ಬರಬೇಕು. " ಇದಲ್ಲದೆ ಇನ್ನೂ ಕೆಲವು ಜಾತಿಗಳಿಗೆ ಸಂಬಂಧಿಸಿದ ಕೈಫಿಯತ್ತುಗಳಿವೆ. ಅವುಗಳಲ್ಲಿ ' ಹಳೇ ಪೈಕದ ಜಾತಿರಿವಾಜು ಕೈಫಿಯತ್ತು ', ' ಕೊಂಕಣಿ ಅವರ ಕೈಫಿಯತ್ತು ', ಮುಂತಾದುವುಗಳನ್ನು ಹೆಸರಿಸಬಹುದು.

**ಮಠಮಾನ್ಯಗಳ ಕೈಫಿಯತ್ತು :** ಇಂದು ಸಾರ್ವಜನಿಕ ಶಾಲೆ, ವಾಚನಾಲಯಗಳಿಗಿರುವ ಮಹತ್ವ ಹಿಂದೆ ಮಠಗಳಿಗಿದ್ದವು. ಮಠಗಳಲ್ಲಿ ಉಪಯುಕ್ತ ಗ್ರಂಥಗಳಿರುತ್ತಿದ್ದು, ಅವು ಗ್ರಂಥಭಂಡಾರಗಳೇ ಆಗಿರುತ್ತಿದ್ದವು. ಈ ಕೈಫಿಯತ್ತುಗಳಲ್ಲಿ ಮಠಗಳಲ್ಲಿರಬಹುದಾದ ಪುಸ್ತಕ ಪಟ್ಟಿಯನ್ನೆ ಕೊನೆಯಲ್ಲಿ ಕೊಟ್ಟಿದ್ದಾರೆ. ಪೇಜಾವರ ಮಠದ ಕೈಫಿಯತ್ತು : ' ಮಹಾಜ್ಞಾನ ವಿಶೇಷರಾಗಿ ಸ್ವಮತ ಪ್ರತಿಸಾರಕಗಳಾದ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಮಾಡುತ್ತಾ, ಭಾಗೀರಥಿ ಯಾತ್ರೆಯನ್ನು ಮಾಡಿ ನಳಸಂವತ್ಸರದ ವೈಶಾಖ ಶು॥ ೨ ರಲ್ಲು ವೈಕುಂಠ ಯಾತ್ರೆಯನ್ನು ಮಾಡಿದರು. ಅವರ ಶಿಷ್ಯ ವಿಶ್ವನಿಧಿ ತೀರ್ಥರು ಮಹಾವಿರಕ್ತವಂತರಾಗಿ ಮಹಾತಪೋನಿಷ್ಠರಾಗಿ ಪೇಜಾವರದಲ್ಲೂ ವಿಭವ ಸಂವತ್ಸರದ ಪಾಲ್ಗುಣ ಶು ೭॥ ರಲ್ಲು ದೇವರ ಯಾತ್ರೆ ಮಾಡಿದರು.

ಘಟ್ಟದ ಕೆಳಗಿನ ಭಾಷೆಗಳ ಕುರಿತು ಒಂದು ದಾಖಲೆ ಇದೆ. ಇದರಲ್ಲಿ ಕೆಲವು ಶಬ್ದಗಳನ್ನು ಕೊಟ್ಟು, ಅದಕ್ಕೆ ಉತ್ತರ ಕನ್ನಡದ ಘಟ್ಟದ ಕೆಳಗಿನ ಭಾಗಗಳಲ್ಲಿ ಉಪಯೋಗಿಸುವ ಸಮಾನ ಅರ್ಥವನ್ನು ಕೊಟ್ಟಿದೆ. ' ದೊಡ್ಡ ಕೆರೆಗೆ – ಮರುಗಾಯೆಂಬ ಹೆಸರು ', ' ಹೊಗೆಯೆಂದರೆ – ಮಳಲು ', ' ಸಂಬಳಿಗೆಯೆಂದರೆ – ಗೂಡಿಗೆ ಹೆಸರು ', ' ಜೆನ್ನಾಯೆಂದರೆ – ಭೂಮಾಲಿಕರು ' – ಹೀಗೆ ಅನೇಕ ಶಬ್ದಗಳ ಅರ್ಥಗಳನ್ನು ಸಂಗ್ರಹಿಸಿದ್ದಾರೆ.

ಹಿಂದಿನ ಕೆಲವು ಪತ್ರ ಮತ್ತು ಅರ್ಜಿಗಳ ಮಾದರಿ ಸಹ ಮೆಕೆಂಝಿ ಸಂಗ್ರಹಿಸಿದ್ದಾನೆ. ಒಬ್ಬ ಪ್ರಜೆ ಸಬ್ ಕಲೆಕ್ಟರ್ ಅವರಿಗೆ ಬರೆದ ಒಂದು ಅರ್ಜಿಯ ಮಾದರಿ ಹೀಗಿದೆ : " ಸನ್ ೧೨೪೮ ನೇ ಫಸಲ್ ಮಾಹೆ ಜೂನ್ ತಾರೀಖು ೧ ರಲ್ಲಿ ಹಾಲಿ ಪುತ್ತೂರಿನಲ್ಲಿರುವ ಶಾಂತಪ್ಪನು ಅದಬಿನಿಂದಾ ಬರಕೊಂಡ ಅರ್ಜಿ. ನಾನು ಸಕುಟುಂಬಸ್ತ. ಕೇವಲ ಗರೀಬಾ. ನನಗೆ ಯಿದ್ದ ಕೇರ್ಟು ಯಿಲಾಖೆ..... ಖಾವಂದರು ದಯವಿಟ್ಟು ಯಾವುದಾದರೊಂದು ಯಿಸಂ ನನಗೆ ಮೊತ್ತ ಜರೂರು ಕೊಡುವಂತೆ ಅಪ್ಪಣೆ ಆಗಿ ನನ್ನ ಕುಟುಂಬ ಸಮೇತ ರಕ್ಷಣೆ ಮಾಡಿಕೊಡಬೇಕಾಗಿ ಪ್ರಾರ್ಥಿಸುತ್ತೇನೆ."

—ಶಾಂತಪ್ಪನ ರುಜು

ಮೆಕೆಂಝಿ ಸಂಗ್ರಹವು ಬೃಹದಾಕಾರವಾಗಿದ್ದು, ಎಷ್ಟು ಅಧ್ಯಯನ ಮಾಡಿದರೂ ಮುಗಿಯದಂತಹುದು. ಈ ಮೇಲೆ ನೀಡಿದ ದಾಖಲೆಗಳಲ್ಲದೆ, ಪಶುಪಕ್ಷಿ ವಿವರ, ಗಿಡಮರಗಳ ಹೆಸರಿನ ಪಟ್ಟಿ, ಬೆಳೆ ಬೇಸಾಯಗಳ ಮಾಹಿತಿ ಇವುಗಳೆಲ್ಲಾ ಸೇರಿವೆ.

ದೂರದ ದೇಶದಲ್ಲಿ ಹುಟ್ಟಿ, ತನ್ನದಲ್ಲದ ಭಾಷೆ, ಜನಾಂಗಗಳ ಮೇಲೆ ಅಭಿಮಾನವಿಟ್ಟು, ಹಳ್ಳಿ ಹಳ್ಳಿಗಳಲ್ಲೆಲ್ಲಾ ಕುದುರೆಯ ಮೇಲೆ ಸಂಚರಿಸಿ, ಹಳ್ಳಿ ನಿಷ್ಕಲ್ಮಷ ಬುದ್ಧಿಯ ಜನರಿಂದ ಇಷ್ಟೆಲ್ಲಾ ದಾಖಲೆಗಳನ್ನು ಸಂಗ್ರಹಿಸಿದ ಈ ಮಹಾಶಯನನ್ನು ಎಷ್ಟು ಸ್ಮರಿಸಿದರೂ ಕಡಿಮೆಯೇ. ದಕ್ಷಿಣ ಭಾರತದ ಇತಿಹಾಸದಲ್ಲಿ ಇವನಿಗೊಂದು ಉಚ್ಚ ಸ್ಥಾನವಿದೆ.

### ಮೆಕೆಂಝಿ ಸಂಗ್ರಹಿಸಿದ್ದ ಕನ್ನಡ ಹಸ್ತಪ್ರತಿಗಳ ವಿವರ

(ಎಚ್. ಎಚ್. ವಿಲ್ಸನ್ ಅವರ The Mackenzie collection descriptive catalogue ನ ಪ್ರಕಾರ)

| | |
|---|---|
| ಜೈನ ಸಾಹಿತ್ಯ | ೨೧ |
| ಹಳಗನ್ನಡ ಗ್ರಂಥಗಳು | ೪೮ |
| ಸ್ಥಳ ಪುರಾಣ, ಜೀವನ ಚರಿತ್ರೆ | ೧೭ |
| ಕಥೆ, ಕವನ, ನೀತಿ, ಧರ್ಮ | ೧೮ |
| ವ್ಯಾಕರಣ, ಜ್ಯೋತಿಷ್ಯ, ವೈದ್ಯ ಇತ್ಯಾದಿ | ೧೬ |
| ಕಡಿತದಲ್ಲಿ ಚರಿತ್ರೆ, ಕೈಗಾರಿಕೆ, ವಂಶಾವಳಿ ಇತ್ಯಾದಿ | ೩೨ |
| ಒಟ್ಟು | ೧೫೨ |

(ಕ್ಯಾಟಲಾಗಿನ ಪೀಠಿಕೆಯಲ್ಲಿ (ಪುಟ ೧೪) ಕೊಟ್ಟಿರುವ ಪಟ್ಟಿಯಲ್ಲಿರುವಂತೆ)

* ಹಳೆಯ ಮೈಸೂರಿನ ಸ್ಥಳಪುರಾಣ, ಚರಿತ್ರೆ ಮುಂತಾದವು : ೨೦ ಸಂಪುಟಗಳಲ್ಲಿ ೧೪೬
* ಪಶ್ಚಿಮತೀರಕ್ಕೆ (Western Coast) ಸಂಬಂಧಿಸಿದವು ೯ ಸಂಪುಟಗಳಲ್ಲಿ ೯೩

* ಕನ್ನಡ ಶಾಸನ ನಕಲುಗಳು : ೨೮ ಬೃಹತ್ ಸಂಪುಟಗಳಲ್ಲಿ — ೪,೦೦೦
* ಸ್ಥಳೀಯ ವೃತ್ತಾಂತಗಳು (Local tracts, etc.), ಶಾಸನಗಳ ನಕಲುಗಳು (Inscriptions), ಆಂಗ್ಲಾನುವಾದಗಳು (Translations, etc.) ಇತ್ಯಾದಿ ಕರ್ನಾಟಕದ ಇತಿಹಾಸ ಸಂಸ್ಕೃತಿಗಳಿಗೆ ನೇರವಾಗಿ ಸಂಬಂಧಪಟ್ಟ ಕನ್ನಡ ಕೈಬರಹಗಳು — ೨೦೭
* ಸ್ಥಳಪುರಾಣ, ಚರಿತ್ರೆ ಮುಂತಾದವುಗಳ ಆಂಗ್ಲಾನುವಾದಗಳು (ಸಂಪುಟಗಳಲ್ಲಿ) — ೭೪

(ಇವು ಈಗ ಕಾಮನ್‌ವೆಲ್ತ್ ಲೈಬ್ರರಿಯಲ್ಲಿವೆ.)

(ಮೆಕೆಂಝಿಯ ಈ ಎಲ್ಲ ಸಂಗ್ರಹಗಳೂ ಈಗ ಮದರಾಸಿನ ಪ್ರಾಚೀನ ಹಸ್ತಪ್ರತಿ ಭಂಡಾರದಲ್ಲಿವೆ.)

**ಮೆಕೆಂಝಿಯ ಒಟ್ಟು ಸಂಗ್ರಹ**

* ದಕ್ಷಿಣ ಭಾರತದ ಶಾಸನಗಳ ನಕಲುಗಳ ಸಂಖ್ಯೆ — ೮,೦೭೬
* ಬರ್ಮೀ ಮತ್ತು ಜಾಪನೀಸ್ ಭಾಷೆಗಳೂ ಸೇರಿ ೧೩ ಭಾಷೆಗಳ ಹಸ್ತಪ್ರತಿಗಳು — ೧,೫೬೮
* 'Local Tracts' ಎಂಬ ಸ್ಥಳಪುರಾಣ, ಕೈಫಿಯತ್, ಬಖೈರ್, ರಾಜರ ವಂಶಾವಳಿ ಮುಂತಾದವುವನ್ನೊಳಗೊಂಡ ಬೃಹತ್ ಸಂಪುಟಗಳು (ಒಟ್ಟು ೨೦೭೦ ವೃತ್ತಾಂತಗಳು) — ೨೬೪
* ಇವುಗಳ ಅನುವಾದಗಳನ್ನೊಳಗೊಂಡ ಸಂಪುಟಗಳು — ೭೫
* ನಕ್ಷೆಗಳು (Plans) — ೭೯
* ಚಿತ್ರಗಳು (Drawings) — ೨,೬೩೦
* ಬೇರೆ ಬೇರೆ ಕಾಲದ, ದೇಶೀಯ ಮತ್ತು ವಿದೇಶೀಯ ಚಿನ್ನದ, ಬೆಳ್ಳಿಯ, ತಾಮ್ರದ ನಾಣ್ಯಗಳು — ೬,೨೧೮
* ಬೆಳ್ಳಿ, ಕಂಚು, ಹಿತ್ತಾಳೆ, ತಾಮ್ರದ ಮೂರ್ತಿಗಳು : — ೧೦೬
* ಅನೇಕ ಶಿಲಾಮೂರ್ತಿಗಳು, ಒಂದು ಹಳಗನ್ನಡ ಶಿಲಾಶಾಸನ (ಅಮರಾವತಿಯಲ್ಲಿದ್ದದ್ದು), ತಾಮ್ರ ಶಾಸನಗಳು ಕೆಲವು.
* ಹಳೆಯಕಾಲದ ತೂಕದ ಬಟ್ಟುಗಳು, ಮಣಿ, ಉಂಗುರ, ಉಂಡಿಗೆ ಇತ್ಯಾದಿ ಇನ್ನೂ ಅನೇಕ ಪ್ರಾಚ್ಯವಸ್ತುಗಳು ಮೆಕೆಂಝಿಯ ಸಂಗ್ರಹದಲ್ಲಿದ್ದವು.

**೪.೨.೪.೪ : ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಸಂಪುಟ - ೧**

ಕೆಳದಿ ಗೂಂಡಾ ಜೋಯಿಸ ಮತ್ತು ನಾ. ಗೀತಾಚಾರ್ಯ ಸಂಪಾದಕರಾಗಿದ್ದು ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು ಅವರು ೧೯೮೭ ರಲ್ಲಿ ಪ್ರಕಟಿಸಿದ್ದಾರೆ. ಒಟ್ಟು ೯೬ ಕೃತಿಗಳ ಪಟ್ಟಿ ಇದೆ ಕೊನೆಗೆ ಲೇಖಕ ಸೂಚಿ, ವಿಷಯ ಸೂಚಿ ಇದೆ.

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದಲ್ಲಿರುವ ತಾಡವೋಲೆ ಹಸ್ತಪ್ರತಿಗಳ ಪೈಕಿ ತೊಂಬತ್ತಾರು ಹಸ್ತಪ್ರತಿಗಳ ವರ್ಣನಾತ್ಮಕ ವಿವರಗಳನ್ನು ಈ ಪ್ರಥಮ ಸಂಪುಟದ ಮೂಲಕ ನಾಡಿನ ವಿದ್ವಜ್ಜನರ ಮುಂದಿಡಲಾಗಿದೆ. ಪ್ರತಿಷ್ಠಾನದ ಭಂಡಾರದಲ್ಲಿರುವ ಕನ್ನಡ ಹಸ್ತಪ್ರತಿಗಳ ವಿಷಯವನ್ನು ಮಾತ್ರ ಈ ಸಂಪುಟದಲ್ಲಿ ಅಡಕಗೊಳಿಸಲಾಗಿದೆ. ಇನ್ನು ಒಂದು ಸಂಪುಟಕ್ಕಾಗುವಷ್ಟು ಕನ್ನಡ ಹಸ್ತಪ್ರತಿಗಳು ಇವೆ: ಇವುಗಳಲ್ಲಿ ಕೆಲವು ಕಾಗದದ ಹಸ್ತಪ್ರತಿಗಳು, ಜೊತೆಗೆ ಸಂಸ್ಕೃತ ಭಾಷೆಯ ಹಾಗೂ ತಮಿಳು, ತೆಲುಗು, ತಿಗಳಾರಿ ಲಿಪಿಗಳ ಗ್ರಂಥಗಳೂ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದಲ್ಲಿ ಇವೆ.

ಈ ಸಂಪುಟದಲ್ಲಿ ಕನ್ನಡ ಗ್ರಂಥಗಳ ಮಾಹಿತಿಯನ್ನು ಅಳವಡಿಸಲಾಗಿದೆ. ಕನ್ನಡ ಲಿಪಿಯಲ್ಲಿರುವ ಸಂಸ್ಕೃತ ಹಸ್ತಪ್ರತಿಗಳ ಪ್ರವೇಶಿಕೆಗಳನ್ನೂ ಈ ಸಂಪುಟದಲ್ಲಿ ಕಾಣಬಹುದು.

ಒಟ್ಟು ೧೫ ವಿವರಾಂಶಗಳಲ್ಲಿ ಹಸ್ತಪ್ರತಿಗಳ ವರ್ಣನೆಯನ್ನು ನೀಡಲಾಗಿದೆ. ಅವುಗಳು ಕೆಳಕಂಡಂತಿವೆ :

೧) ಇಂಗ್ಲೀಷ ಅಂಕಿ : ಹಸ್ತಪ್ರತಿಯ ಕ್ರಮಾಂಕ : ೨) ಕೃತಿಯ ಹೆಸರು : ೩) ಸಣ್ಣ ಅಕ್ಷರಗಳ ಮೂರು ಸಾಲುಗಳಲ್ಲಿ ಗ್ರಂಥ ಸ್ವರೂಪ ವಿವರಗಳನ್ನು ನೀಡಿದೆ: ಕ್ರಮವಾಗಿ ಮೊದಲನೆಯ ಸಾಲಿನಲ್ಲಿ ಹಸ್ತಪ್ರತಿಯ ಸಂಖ್ಯೆ : ಕವಿಯ ಹೆಸರು : ಪ್ರತಿಪುಟದ ಪ್ರತಿಯೊಂದು ಸಾಲಿನಲ್ಲಿರುವ ಸರಾಸರಿ ಅಂದಾಜು ಅಕ್ಷರಸಂಖ್ಯೆ : ಎರಡನೆಯ ಸಾಲಿನಲ್ಲಿ ಹಸ್ತಪ್ರತಿಯ ಉದ್ದ ಮತ್ತು ಅಗಲದ ಅಳತೆ : ಕವಿಯ ಕಾಲ : ಪ್ರತಿ ಪುಟದಲ್ಲಿಯ ಸಾಲುಗಳ ಅಂದಾಜು ಸಂಖ್ಯೆ : ಮತ್ತು ಮೂರನೆಯ ಸಾಲಿನಲ್ಲಿ, ಗ್ರಂಥದ (ಓಲೆಗರಿ ಕಟ್ಟಿನ) ಪತ್ರ (ಗರಿ) ಗಳ ಸಂಖ್ಯೆ : ಕೃತಿಯ ರೂಪಾಂಶ (ಅಂದರೆ ಗದ್ಯವೇ, ಪದ್ಯವೇ, ಪದ್ಯವಾದರೆ ಪದ್ಯದ ಛಂದಸ್ಸು) : ಗ್ರಂಥದ ಭಾಷೆ ಈ ವಿವರಗಳನ್ನು ಕೊಡಲಾಗಿದೆ. ಅನಂತರ ಕೃತಿಯ ವಿಷಯ, ಅದರ ಆದಿ ಅಂತ್ಯ ಮತ್ತು ವಿಶೇಷ ವಿವರಗಳಲ್ಲಿ ಗ್ರಂಥದ ಸ್ವರೂಪವನ್ನು ಸೂಚಿಸಿದೆ.

ಗ್ರಂಥದ ಸ್ವರೂಪ ವಿವರಗಳನ್ನು ನೀಡುವಾಗ ಕನ್ನಡ ಅಂಕಿಗಳನ್ನೇ ಬಳಸಿದೆ. ಪ್ರತಿಯ ಉದ್ದಗಲವನ್ನು ದಶಮಾನ ಪದ್ಧತಿಯ ಅಳತೆಯಲ್ಲಿ (ಸೆಂ. ಮೀ.) ಕೊಟ್ಟಿದೆ. ಮೊದಲನೆಯ ಅಂಕಿ ಉದ್ದದ ಅಳತೆ : ಎರಡನೆಯದು ಅಗಲದ ಅಳತೆ.

ಕೆಲವು ಸಂಕೇತಾಕ್ಷರಗಳ ವಿವರಣೆ : ಓ-ಓಲೆಗರಿಯ ಪ್ರತಿ : ಕಾ-ಕಾಗದದ ಪ್ರತಿ (ಕಾದೊ – ಕಾಗದದ ಪ್ರತಿ ದೊಡ್ಡ ಪ್ರಮಾಣದ್ದು : ಕಾ. ಚಿ. – ಕಾಗದದ ಪ್ರತಿ ಚಿಕ್ಕ ಪ್ರಮಾಣದ್ದು). ಈ ಸಂಕೇತಾಕ್ಷರಗಳ ಬಳಿಕ ಓಲೆಗೆರೆಯೆಳೆದು ಹಸ್ತಪ್ರತಿಯ ಸಾಂಕೇತಾಂಕವನ್ನು ನೀಡಿದೆ. ಒಂದೇ ಓಲೆಗರಿ ಕಟ್ಟಿನಲ್ಲಿ ಅಥವಾ ಕಾಗದದ

ಹಸ್ತಪ್ರತಿಯಲ್ಲಿ ಬೇರೆ ಬೇರೆ ಕೃತಿಗಳು ಇದ್ದರೆ ಆ ಕೃತಿ ಆ ಕಟ್ಟಿನಲ್ಲಿ ಎಷ್ಟನೆಯದು ಎಂಬುದನ್ನು ತಿಳಿಸುವುದಕ್ಕಾಗಿ ಪ್ರತಿಯ ಸಂಕೇತಾಂಕದ ಮುಂದೆ ಇನ್ನೊಂದು ಓಲೆಗೆರೆ ಎಳೆದು ಆ ಗ್ರಂಥದ ಸಂಖ್ಯೆಯನ್ನು ಕೊಟ್ಟಿದೆ.

ಕವಿ ವಿಷಯಕ ವಿವರಗಳಿಗೆ ಕರ್ನಾಟಕ ಕವಿ ಚರಿತೆ, ಮತ್ತು ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಹಾಗೂ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯ ಚರಿತ್ರೆಗಳನ್ನು ಅವಲಂಬಿಸಿದೆ. ಕವಿಯ ಕಾಲಗಳು ತಿಳಿಯದಿದ್ದಾಗ ಆ ಸ್ಥಳಗಳಲ್ಲಿ ಪ್ರಶ್ನೆ ಚಿಹ್ನೆ (?) ಬಳಸಿದೆ.

ಕೆಲವು ಕಡೆ ಪತ್ರ ಸಂಖ್ಯೆಯ ಮುಂದೆ ÷ ಚಿಹ್ನೆಯ ಮುಂದೆ ಕೆಲವು ಸಂಖ್ಯೆಗಳನ್ನು ಕೊಡಲಾಗಿದೆ. ಅಂತಹ ಸಂದರ್ಭದಲ್ಲಿ ÷ ಚಿಹ್ನೆಯ ನಂತರದ ಸಂಖ್ಯೆಯ ಪತ್ರಗಳು ಆ ಗ್ರಂಥಕ್ಕೆ ಸೇರದ, ಆದರೆ ಆ ಕಟ್ಟಿನಲ್ಲೇ ಇರುವ ಪ್ರತ್ಯೇಕ ಗರಿಗಳು ಎಂದು ತಿಳಿಯಬೇಕು.

ವಿಷಯ ವಿಭಾಗದಲ್ಲಿ ಕೃತಿಯ ವಸ್ತುವಿಷಯವನ್ನು ಒಂದೊಂದು ವಾಕ್ಯದಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಅನಂತರ ಆದಿ ಅಂತ್ಯ ವಿಭಾಗಗಳಲ್ಲಿ ಕೃತಿಯ ಆಯಾ ಭಾಗಗಳ ಬರಹವನ್ನು ಯಥಾಲಿಖಿತವಾಗಿ ಕೊಟ್ಟಿದೆ. ಇಲ್ಲಿ ಆ ಭಾಗವಿರುವ ಗರಿಗಳು ಆ ಕಟ್ಟಿನಲ್ಲಿ ಎಲ್ಲಿವೆ ಎಂದು ಸೂಚಿಸಲು ಅವು ಲಿಖಿತವಾಗಿರುವ ಪುಟ ಸಂಖ್ಯೆಯನ್ನು ನಿರ್ದೇಶಿಸಿದೆ (ಪುಟ ಸಂಖ್ಯೆ ಎಂದರೆ ಆ ಗ್ರಂಥದ ಪತ್ರ ಸಂಖ್ಯೆ). ಪತ್ರ ಸಂಖ್ಯೆ ಇರುವ ಪತ್ರದ ಪಾರ್ಶ್ವವನ್ನು ಮುಂಭಾಗವೆಂದೂ ಪತ್ರ ಸಂಖ್ಯೆಯಿಲ್ಲದ ಪಾರ್ಶ್ವವನ್ನು ಹಿಂಭಾಗವೆಂದೂ ಸೂಚಿಸಿದೆ.

'ಆದಿ' ಅಂತ್ಯಗಳ ಮುಂದೆ ಓಲೆಪುಟವನ್ನೂ ಅದರ ಮುಂದೆ ಸಾಲಿನ ಸಂಖ್ಯೆಯನ್ನು ಸೂಚಿಸಲಾಗಿದೆ. ಸಾಲಿನ ಸಂಖ್ಯೆಯನ್ನು ಸೂಚಿಸುವ ಕಡೆ ಉದ್ಧೃತ ಭಾಗವು ಆ ಸಂಖ್ಯೆಯ ಸಾಲಿನಿಂದ ಪ್ರಾರಂಭವಾಗಿದೆಯೆಂದೂ ಸಾಲಿನ ಸಂಖ್ಯೆಯನ್ನು ಸೂಚಿಸಿಲ್ಲದ ಕಡೆ ಪತ್ರದ ಮೊದಲನೆಯ ಸಾಲಿನಿಂದಲೇ ಆರಂಭವಾಗುತ್ತದೆಂದೂ ತಿಳಿಯತಕ್ಕದ್ದು. ಆದಿ ಮತ್ತು ಅಂತ್ಯ ವಿಭಾಗಗಳಲ್ಲಿ ಗ್ರಂಥದ ಸ್ವರೂಪ ತಿಳಿಯಲಾಗುವಂತೆ ಯಥಾವತ್ತಾಗಿ ಗ್ರಂಥ ಪಾಠವನ್ನು ಉದ್ಧರಿಸಲಾಗಿದೆ. ಈ ಉದ್ಧೃತ ಭಾಗಗಳಲ್ಲಿ ಇರುವ () ಚಿಹ್ನೆಗಳು ಗರಿ ತ್ರುಟಿತವಾಗಿರುವುದನ್ನು () ಈ ಚಿಹ್ನೆ ತ್ರುಟಿತವಾಗಿರುವ ಭಾಗ ಮುಂದುವರಿದಿರುವುದನ್ನು ಸೂಚಿಸುತ್ತದೆ..... ಈ ಚಿಹ್ನೆಯು ಗ್ರಂಥಪಾಠದ ಮುಂದುವರಿಕೆಯನ್ನು ಸೂಚಿಸುತ್ತದೆ. ಮತ್ತು ಕೆಲವು ಕಡೆ [ ] ಈ ಚೌಕ ಕಂಸವನ್ನು ಬಳಸಿದ್ದು ಈ ಕಂಸದೊಳಗೆ ಇರುವ ಪಾಠವನ್ನು ಆ ಭಾಗದ ಗರಿ ತ್ರುಟಿತವಾಗಿದ್ದು ಅಥವಾ ಅಸ್ಪಷ್ಟವಾಗಿದ್ದು ಸಂಪಾದಕರು ಊಹಿಸಿ ನಿರ್ಧರಿಸಿರುವ ಪಾಠವಾಗಿರುತ್ತದೆ.

ವಿಶೇಷ ವಿವರಣೆ ಭಾಗದಲ್ಲಿ ಗ್ರಂಥಪಾಠಕ್ಕೆ ಮತ್ತು ಹಸ್ತಪ್ರತಿ ಸ್ವರೂಪಕ್ಕೆ ಸಂಬಂಧಪಟ್ಟಂತೆ ಲಿಪಿಯ ಸ್ವರೂಪ ಪ್ರತಿಯ ಸ್ಥಿತಿಗತಿ ಶಕಟರೇಫದ ಬಳಕೆ, ಪಾಠದ ಸಮಗ್ರತೆ, ಲುಪ್ತಗರಿಗಳ ವಿವರ, ಅದೇ ಕಟ್ಟಿನಲ್ಲಿರುವ

ಇತರ ಗ್ರಂಥಗಳ ವಿವರ ಲಿಪಿಗಾರರು, ಅಂಕಿತಗಳು ಇತ್ಯಾದಿ ವಿವರಗಳನ್ನು ಕೊಟ್ಟಿದೆ. ಕೆಲವು ಕಟ್ಟುಗಳಲ್ಲಿರುವ ಕನ್ನಡ ಲಿಪಿಯ ಸಂಸ್ಕೃತ ಅಥವಾ ತೆಲುಗು ಭಾಷೆಗಳ ಗ್ರಂಥಗಳನ್ನು ಅನುಬಂಧದಲ್ಲಿ ಪ್ರತ್ಯೇಕ ಪಟ್ಟಿ ಮಾಡಲಾಗಿದೆ.

ಸೂಚಿಯಲ್ಲಿ ಕೊಟ್ಟಿರುವ ಗ್ರಂಥ ಭಾಗಗಳು ಪಾಠ ದೃಷ್ಟಿಯಿಂದ ಮೂಲ ಪ್ರತಿಯನ್ನೇ ಸಂಪೂರ್ಣವಾಗಿ ಹೋಲುತ್ತವೆ. ಗದ್ಯ ಭಾಗಗಳನ್ನು ಮೂಲದಲ್ಲಿರುವಂತೆಯೇ ಕೊಟ್ಟಿದೆ. ಪದ್ಯ ಭಾಗಗಳನ್ನು ಆಯಾ ಪದ್ಯಗಳ ಛಂದಸ್ಸಿಗೆ ಅನುಗುಣವಾಗಿ ಪದ್ಯಪಾದಗಳನ್ನು ಬಿಡಿಸಿ ಮುದ್ರಿಸಿದೆ. ಕೃತಿಯ ಉದ್ಧೃತ ಭಾಗಗಳಲ್ಲಿ ಪಾಠದ ಸ್ವರೂಪವನ್ನು ಇದ್ದುದಿದ್ದಂತೆ ಕಾಣಗೊಡುವ ಉದ್ದೇಶದಿಂದ ಲಿಪಿ ಲೇಖನ ಸ್ಖಾಲಿತ್ಯಗಳು ಶಬ್ದರೂಪಗಳು ವ್ಯಾಕರಣ ದೋಷಗಳು ಮುಂತಾದ ವೈಲಕ್ಷಣ್ಯಗಳನ್ನು ಯಥಾವತ್ತಾಗಿ ಉಳಿಸಿಕೊಳ್ಳಲಾಗಿದೆ.

ಉದ್ಧೃತ ಗ್ರಂಥಭಾಗದ ಆದಿ, ಅಂತ್ಯಗಳಲ್ಲಿ ಕವಿ ಅಥವಾ ಲಿಪಿಕಾರರು ಮಾಡಿರುವ ಇಷ್ಟದೇವತಾ ಸ್ತುತಿಗಳೂ ಶ್ರೀಕಾರಬರಹಗಳೂ ಅಧಿಕವಾಗಿದ್ದಲ್ಲಿ ಅಂತಹ ಕಡೆ ಸಂಗ್ರಹಗೊಳಿಸಿ ಆ ಬಿಟ್ಟಿರುವ ಭಾಗದ ಪಾಠವನ್ನು ಸೂಚಿಸಲು..... ಈ ಚಿಹ್ನೆ.

ಉ ಸೂಚಿಯಲ್ಲಿರುವ ಬಹು ಸಂಖ್ಯೆಯ ಹಸ್ತಪ್ರತಿಗಳು ಲಿಪಿಕಾರರಿಂದ ಪ್ರತಿ ಮಾಡಲ್ಪಟ್ಟವುಗಳು. ಆದರೆ ತಿಮ್ಮಪ್ಪ ದಾಸರ ಕೀರ್ತನೆಗಳು, ಹಾಗೂ ಅವರ ಇತರ ಕೃತಿಗಳು ಮತ್ತು ನಾರಾಯಣದಾಸರ ಕೀರ್ತನೆಗಳ ಪ್ರತಿಗಳು ಸ್ವಹಸ್ತಾಕ್ಷರ ಪ್ರತಿಗಳಾಗಿರುವಂತೆ ತೋರುತ್ತದೆ. ಇದರ ಒಂದು ಮುಖ್ಯ ಕೊರತೆಯೆಂದರೆ ಇದಕ್ಕೆ 'ಪರಿವಿಡಿ ಇಲ್ಲದುದರಿಂದ ಸಂಶೋಧಕರಿಗೆ ತಮಗೆ ಬೇಕಾದ ಲೇಖನಗಳನ್ನು ಆಯ್ದುಕೊಳ್ಳುವಲ್ಲಿ ಬಹಳಷ್ಟು ಗಲಿಬಿಲಿ ಉಂಟಾಗುವ ಸಂಭವವಿದೆ.'

**ಕನ್ನಡ ಗ್ರಂಥಸೂಚಿ : ವಿವರಣಾತ್ಮಕ ಪುಸ್ತಕಗಳ ಪಟ್ಟಿ**

**ಕ್ರಿ. ಶ. ೧೮೧೭ ರಿಂದ ೧೯೬೭ ರ ವರೆಗೆ**

| ಸಂಪುಟ | ವಿಷಯ | ವರ್ಷ | ಒಟ್ಟು ನಮೂದುಗಳು | ಶರಾ |
|---|---|---|---|---|
| ೧. | ಶುದ್ಧ ವಿಜ್ಞಾನಗಳು | ೧೯೭೧ | ೧,೯೪೦ | |
| ೨. | ಸಾಮಾನ್ಯ, ಕಲೆ, ಕಲಾ, ಧರ್ಮ, ಭಾಷೆ, ತತ್ವಶಾಸ್ತ್ರ | ೧೯೭೫ | ೫,೩೨೭ | |
| ೩. | ಸಾಹಿತ್ಯ ಮತ್ತು ಕಾವ್ಯ | ೧೯೭೪ | ೪,೧೨೯ | |
| ೪. | ಗದ್ಯ, ನಾಟಕ, ಸಣ್ಣ ಕತೆ, ಪ್ರಬಂಧ | ೧೯೭೯ | ೩,೭೭೩ | |

| | | | |
|---|---|---|---|
| ೫. | ಕಾದಂಬರಿ | ೧೯೭೯ | ೨,೫೭೧ |
| ೬. | ಶಿಶು ಸಾಹಿತ್ಯ | ೧೯೭೯ | ೩,೪೨೧ |
| ೭. | ಅನುವಾದ ಸಾಹಿತ್ಯ | ೧೯೮೪ | ೧,೯೭೪ |
| ೭. | ಅ) ಎಲ್ಲ ವಿಷಯಗಳು (೧೯೬೯ - ೭೧) | ೧೯೭೪ | ೨,೭೨೨ |
| | ಬ) ಎಲ್ಲ ವಿಷಯಗಳು (೧೯೭೨ - ೭೩) | ೧೯೭೭ | ೨,೪೮೮ |
| | ಕ) ಎಲ್ಲ ವಿಷಯಗಳು (೧೯೭೪ - ೭೫) | ೧೯೮೧ | ೩,೩೫೫ |
| | ಡ) ಎಲ್ಲ ವಿಷಯಗಳು (೧೯೭೭ - ೮೦) | ೧೯೮೫ | ೫,೧೬೩ |

**ಕನ್ನಡ ಸಂಶೋಧನಾ ಸಂಸ್ಥೆಯ ವರ್ಣನಾತ್ಮಕ ಹಸ್ತಪ್ರತಿ ಸೂಚಿಗಳು**

ಕನ್ನಡ ಸಂಶೋಧನಾ ಸಂಸ್ಥೆಯು ಹದಿಮೂರು ಸಂಪುಟಗಳಲ್ಲಿ ಕನ್ನಡ ಹಸ್ತಪ್ರತಿ ಸೂಚಿಗಳನ್ನು ಪ್ರಕಟಿಸಿದೆ. ೧೯೫೩ - ೧೯೭೬ ರ ವರೆಗಿನ ಕಾಲಾವಧಿಯಲ್ಲಿ ಸಂಗ್ರಹವಾದ ಹಸ್ತಪ್ರತಿಗಳ ವರ್ಣನಾತ್ಮಕ ವಿವರಗಳನ್ನು ಸಂಪುಟಗಳು ಒಳಗೊಂಡಿವೆ.

| ಸಂಪುಟ | ಸಂಪಾದಕರು | ಪುಟಗಳು | ವರ್ಷ |
|---|---|---|---|
| ಸಂ. ೧ | ಆರ್. ಎಸ್. ಪಂಚಮುಖಿ - ಎ. ಎಂ. ಅಣ್ಣಿಗೇರಿ | IV+138 | 1955 |
| ಸಂ. ೨ | ಎಸ್. ಎಸ್. ಮಾಳವಾಡ ಮತ್ತು ಬಿ. ಎಸ್. ಕುಲಕರ್ಣಿ | XII+125 | 1957 |
| ಸಂ. ೩ | ಬಿ. ಎಸ್. ಕುಲಕರ್ಣಿ | XII+199 | 1957 |
| ಸಂ. ೪ | ಎ. ಎಂ. ಅಣ್ಣಿಗೇರಿ ಮತ್ತು ಬಿ. ಎಸ್. ಪುರೋಹಿತ | V+3+180 | 1961 |
| ಸಂ. ೫ | ಬಿ. ಎಸ್. ಕುಲಕರ್ಣಿ ಮತ್ತು ಬಿ. ಎಸ್. ಪುರೋಹಿತ | XIV+147 | 1964 |
| ಸಂ. ೬ | ಬಿ. ಎಸ್. ಕುಲಕರ್ಣಿ ಮತ್ತು ಬಿ. ಎಸ್. ಪುರೋಹಿತ | XIV+166 | 1965 |
| ಸಂ. ೭ | ಬಿ. ಎಸ್. ಕುಲಕರ್ಣಿ ಮತ್ತು ಬಿ. ಎಸ್. ಪುರೋಹಿತ | XVII+196 | 1967 |
| ಸಂ. ೮ | ಬಿ. ಎಸ್. ಕುಲಕರ್ಣಿ ಮತ್ತು ಬಿ. ಎಸ್. ಪುರೋಹಿತ | XVII+196 | 1968 |
| ಸಂ. ೯ | ಬಿ. ಎಸ್. ಕುಲಕರ್ಣಿ ಮತ್ತು ಬಿ. ಎಸ್. ಪುರೋಹಿತ | — | 1970 |
| ಸಂ. ೧೦ | ಬಿ. ಎಸ್. ಕುಲಕರ್ಣಿ | IV+2+146 | 1976 |

| | | | |
|---|---|---|---|
| ಸಂ. ೧೧ | ಬಿ. ಎಸ್. ಕುಲಕರ್ಣಿ : ಸಹಾಯಕರು<br>ಸಿ. ಬಿ. ಕಡಕೋಳ<br>ಕೆ. ಪಿ. ಈರಣ್ಣ | II+172 | 1982 |
| ಸಂ. ೧೨ | ಬಿ. ಎಸ್. ಕುಲಕರ್ಣಿ : ಸಹಾಯಕರು<br>ಸಿ. ಬಿ. ಕಡಕೋಳ<br>ಕೆ. ಪಿ. ಈರಣ್ಣ | 146 | 1983 |
| ಸಂ. ೧೩ | ಪ್ರಧಾನ ಸಂಪಾದಕರು : ಎಸ್. ಎಂ. ವೃಷಭೇಂದ್ರಸ್ವಾಮಿ<br>ಸಹ ಸಂಪಾದಕರು : ಸಿ. ಬಿ. ಕಡಕೋಳ<br>ಕೆ. ಪಿ. ಈರಣ್ಣ | XI+3+169 | 1990 |

**ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ :**

೧೯೩೫ ರಿಂದ ೧೯೮೫ ರ ವರೆಗಿನ 'ಕನ್ನಡ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿ' ಮದ್ರಾಸ್ ಸರಕಾರ ಪ್ರಕಟಿಸಿದೆ. ಇದರ ಸಂಪಾದಕ ವರ್ಗದಲ್ಲಿ ಎಸ್. ಕುಪ್ಪುಸ್ವಾಮಿ ಶಾಸ್ತ್ರಿ, ಪಿ. ಪಿ. ಸುಬ್ರಹ್ಮಣ್ಯಶಾಸ್ತ್ರಿ, ಮತ್ತು ಟಿ. ಚಂದ್ರಶೇಖರನ್ ಅವರಿದ್ದಾರೆ. ೭ ಸಂಪುಟಗಳಲ್ಲಿ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು ನೀಡಲಾಗಿದೆ.

| ಸಂಪುಟ | ಹಸ್ತಪ್ರತಿಗಳು | ಕೃತಿಗಳ ವಿಷಯ |
|---|---|---|
| ೧ | ೫೩ | – |
| ೨ | ೮೦ | ಪುರಾಣ, ಅರ್ಥಶಾಸ್ತ್ರ, ಕಾಮಶಾಸ್ತ್ರ, ಯೋಗ, ವೇದಾಂತ |
| ೩ | ೬೧ | ಜೈನ ಹಾಗೂ ವೀರಶೈವ ಧರ್ಮಗಳು |
| ೪ | ೩೪೯ | ವೀರಶೈವ, ಶ್ರೀ ವೈಷ್ಣವ ಧರ್ಮ, ಕ್ರೈಸ್ತಧರ್ಮ (ಕನ್ನಡ ಮತ್ತು ಇಂಗ್ಲೀಷಿನಲ್ಲಿ) |
| ೫ | ೨೧೩ | ಸ್ತೋತ್ರ ಕಾವ್ಯ, ಶ್ರೀ ವೈಷ್ಣವ ಧರ್ಮ |
| ೬ | ೨೨೩ | ಚಂಪೂ, ಗದ್ಯ, ಲಕ್ಷಣ ಗ್ರಂಥಗಳು |
| ೭ | ೧೪೪ | ಸಂಗೀತ, ವಸ್ತುಶಿಲ್ಪ, ಸ್ಥೂಪ ಶಾಸ್ತ್ರ, ವೈದ್ಯಶಾಸ್ತ್ರ |

ಹೀಗೆ ಮದ್ರಾಸ್ ಸರಕಾರವು ಯೋಜನೆಗಳನ್ನು ರೂಪಿಸಿಕೊಂಡು ಹಲವು ಗ್ರಂಥಸೂಚಿಗಳನ್ನು ಪ್ರಕಟಿಸಿದೆ. ಅವುಗಳಲ್ಲಿ ಕೆಲವು ಕೆಳಗಿನಂತಿವೆ.

## ೪.೨.೪.೫ : ಸಾರ್ವಜನಿಕ ಗ್ರಂಥಾಲಯ ಇಲಾಖೆ

**ಗ್ರಂಥಸೂಚಿ :** ೧೯೮೨ ರಲ್ಲಿ ಗ್ರಂಥ ಭಂಡಾರವನ್ನು ಕಟ್ಟುವ ಕೆಲಸ ಮಾಡುವ ಸಾರ್ವಜನಿಕ ಗ್ರಂಥಾಲಯವೇ ಹೊರತಂದಿರುವ ಗ್ರಂಥಸೂಚಿ ಇದು. ೭೧೪ ಕನ್ನಡ ಪುಸ್ತಕಗಳ ಬಗೆಗಿನ ಸೂಚಿಯಾಗಿದೆ. ಇನ್ನೂ ವಿಶೇಷವೆಂದರೆ ಇವು ಸಾರ್ವಜನಿಕ ಗ್ರಂಥಾಲಯಕ್ಕೆ ೧೯೮೦ ರಲ್ಲಿ ಸೇರ್ಪಡೆಯಾದ ಹೊಸ ಪುಸ್ತಕಗಳು ಎಂದರೆ ಆಶ್ಚರ್ಯದ ಮತ್ತು ವಿಷಾದದ ಸಂಗತಿ. ಇಡೀ ರಾಜ್ಯದ ತುಂಬೆಲ್ಲ ಜಾಲವನ್ನು ಹೊಂದಿರುವ ಸಾಕಷ್ಟು ಸಿಬ್ಬಂದಿಯನ್ನು ಹೊಂದಿರುವ ಜವಾಬ್ದಾರಿಯುತ ಇಲಾಖೆಯ ಕೆಲಸವೆಂದರೆ ಅತಿಶಯೋಕ್ತಿಯಲ್ಲ !

೧೮೬೪ ರಲ್ಲಿ ಕನ್ನಡ ಪುಸ್ತಕಗಳ ಬಗೆಗಿನ ಗ್ರಂಥಸೂಚಿ ಪ್ರಕಟವಾಗಿದೆ. ಅಲ್ಲಿಂದ ಇಲ್ಲಿಯವರೆಗೆ ಇದರ ಬಗೆಗಿನ ಅಧ್ಯಯನ, ಪ್ರಕಟಣೆ, ಆಸಕ್ತಿಗಳು ಇನ್ನೂ ಆಶಾದಾಯಕವಾಗಿಲ್ಲ. ಎಲ್ಲೋ ಕೆಲವರು ವಿದ್ವಾಂಸರು ಇಂಥ ಆಸಕ್ತಿದಾಯಕ ಕೆಲಸಗಳನ್ನು ಮಾಡಿದ್ದಾರೆ. ಏನೇ ಆದರೂ ಇಂತಹ ಉಪಯುಕ್ತ ಕೆಲಸಗಳು ಆಗಲೇಬೇಕು. ಅಲ್ಲಿಂದ ಇಲ್ಲಿಯವರೆಗೆ ಮತ್ತೆ ಗ್ರಂಥಸೂಚಿಗಳು ಬಂದಿದ್ದು ಕಂಡುಬರುವುದಿಲ್ಲ. ಇಂದು ತಂತ್ರಜ್ಞಾನ ಬೆಳೆದಿದೆ. ಪರಿಣಿತರು ಇದ್ದಾರೆ. ಆದರೆ ಇಂತಹ ಆಸಕ್ತಿದಾಯಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುವ ನಿಭಾಯಿಸುವ, ವ್ಯವಸ್ಥೆಗೊಳಿಸುವ, ಸಿಬ್ಬಂದಿಗೆ ಉತ್ಸಾಹ ಹುರುಪನ್ನು ತುಂಬಿ ಪ್ರೇರೇಪಿಸುವ, ಉದ್ದೀಪಿಸುವ, ಚಾಲನೆಗೊಳಿಸುವ ಶಕ್ತಿ ಸಂಸ್ಥೆಯ ಮುಖ್ಯಸ್ಥರಿಗೆ ಆ ದೇವರೇ ಕೊಡಬೇಕು. ಇಲ್ಲವೆ ಅವರಿಗೆ ಬುದ್ಧನಿಗೆ ಜ್ಞಾನೋದಯವಾದಂತೆ ಯಾವುದೋ ಒಂದು ಶಕ್ತಿ ಪ್ರೇರಣೆ ನೀಡಬೇಕಷ್ಟೆ ?

## ೪.೨.೫ : ಸಂಸ್ಥೆಗಳ ಪ್ರಕಟಣೆಗಳು

**ವೀರಶೈವ ಅಧ್ಯಯನ ಸಂಸ್ಥೆ : ಬೆಳಗಾವಿ**

೧೯೯೪ ರಲ್ಲಿ ಜಿ. ಎಂ. ಹೆಗಡೆ, ಬೆಳಗಾವಿಯ ವೀರಶೈವ ಅಧ್ಯಯನ ಅಕಾಡೆಮಿಯಿಂದ ಪ್ರಕಟಿಸಲ್ಪಟ್ಟ ಈ ಪುಸ್ತಕದಲ್ಲಿ ವೀರಶೈವ ಸಾಹಿತ್ಯ ಕುರಿತು ಬಂದಿರುವ ಸಂಶೋಧನಾ ಸಂಪ್ರಬಂಧಗಳ ಪಟ್ಟಿ, ವಚನ ಸಾಹಿತ್ಯ ಸಂಪುಟಗಳ ಬಗ್ಗೆ ಕುರಿತಾಗಿರುವ ಪುಸ್ತಕಗಳ ಪಟ್ಟಿ ಹೀಗೆ ವಚನ ಸಾಹಿತ್ಯ, ಸ್ವರವಚನ ಸಾಹಿತ್ಯ, ಪ್ರಾಚೀನ ಸಾಹಿತ್ಯ, ಆಧುನಿಕ ಸಾಹಿತ್ಯ, ವೀರಶೈವ ಪುಣ್ಯ ಪುರುಷರ ಮಾಲೆ ಈ ಶಿರೋನಾಮೆಗಳ ಅಡಿಯಲ್ಲಿ ಪ್ರಕಟವಾಗಿರುವ ಪುಸ್ತಕಗಳ ಕುರಿತು ವಿಷಯ ವಿವೇಚಿಸಲ್ಪಟ್ಟಿದೆ. ಇದು ಒಂದು ಬಗೆಯ ಸೂಚಿಯೇ ಆಗಿದೆ ಎಂಬುದರಲ್ಲಿ ಸಂಶಯವಿಲ್ಲ. ಹೆಚ್ಚಾಗಿ ವೀರಶೈವರು ಮಾಡಿರುವ ಸಾಹಿತ್ಯಸೇವೆ, ಅವರ ಪುಸ್ತಕಗಳು, ಪ್ರಶಸ್ತಿಗಳು ಇತ್ಯಾದಿಯಾಗಿ ಮಾಹಿತಿಯನ್ನು ಸಂಗ್ರಹಿಸಬಹುದು.

## ೪.೩.೫.೨ : ಕನ್ನಡ ಬಡಗ ಗ್ರಂಥಸೂಚಿ

ಇದು ೧೯೧೦ ರಲ್ಲಿ ಇಂಗ್ಲೆಂಡಿನ ಬ್ರಿಟಿಷ ಸಂಗ್ರಹಾಲಯದಲ್ಲಿ ಸಂಗ್ರಹಿಸಿ ಕನ್ನಡ, ಬಡಗ ಪುಸ್ತಕಗಳ ಸೂಚಿ ಇದಾಗಿದ್ದು, ಸುಮಾರು ೧,೫೦೦ ನಮೂದುಗಳನ್ನು ಒಳಗೊಂಡಿದೆ. ಇದರ ೨ ನಿರ್ದೇಶಿಗಳನ್ನು ಒಳಗೊಂಡಿದ್ದು; ಸಾಮಾನ್ಯ ನಿರ್ದೇಶಿಗಳು ಮತ್ತು ವಿಷಯ ನಿರ್ದೇಶಿಗಳೆಂಬ ಎರಡು ವಿಭಾಗಗಳನ್ನು ಇಲ್ಲಿ ಮಾಡಿದ್ದಾರೆ. ಈ ಸೂಚಿಯು ೧೪೦ ಪುಟಗಳದ್ದಾಗಿದ್ದು ೪ ಕೂರ್ಗ್ ಪುಸ್ತಕಗಳು ೫ ಬಡಗ ಪುಸ್ತಕಗಳು ಉಳಿದವುಗಳು ಕನ್ನಡ ಪುಸ್ತಕಗಳಾಗಿವೆ. [೨೨]

**ಕೆಲವು ಕಾಲೇಜು ಗ್ರಂಥಾಲಯಗಳ ಪ್ರಕಟಣೆಗಳು :**

ಕೆಲವು ಕಾಲೇಜು ಗ್ರಂಥಾಲಯಗಳು ಸೂಚಿಗಳನ್ನು ಪ್ರಕಟಿಸಿದ್ದು ಕಂಡುಬರುತ್ತದೆ. ಬೆಂಗಳೂರಿನ ಸೆಂಟ್ರಲ್ ಕಾಲೇಜು, [೨೩] ಮೈಸೂರಿನ ಮಹಾರಾಜಾ ಕಾಲೇಜು, ಧಾರವಾಡದ ಕರ್ನಾಟಕ ಕಾಲೇಜುಗಳು, ಮುಖ್ಯವಾದವುಗಳಾಗಿವೆ. ಅವುಗಳಲ್ಲಿ ಕರ್ನಾಟಕ ಕಾಲೇಜಿನ ಧಾರವಾಡದ [೨೪] ಗ್ರಂಥಾಲಯ ೧೯೬೭ ರಲ್ಲಿ ಪ್ರಕಟಿಸಿರುವ ಗ್ರಂಥಸೂಚಿಯಲ್ಲಿ ೨೬೭ ಕನ್ನಡ ಪುಸ್ತಕಗಳ ನಮೂದು ಇದಾಗಿದೆ. ಇದನ್ನು ಸಂಕಲಿಸಿ ಸಂಪಾದಿಸಿದವರು ಡಾ. ಎಸ್. ಆರ್. ಗುಂಜಾಳ ಅವರು. ವೀರಶೈವ ಸಾಹಿತ್ಯ ಮತ್ತು ಧರ್ಮಗಳಿಗೆ ಮೀಸಲಾದ ಪುಸ್ತಕಗಳ ವಿವರಣಾ ಪಟ್ಟಿಯನ್ನು ಈ ಸೂಚಿಯಲ್ಲಿ ಒದಗಿಸಲಾಗಿದೆ. ಹಾಗೆಯೇ ಮೈಸೂರಿನ ಸಂಸ್ಕೃತ ಮಹಾರಾಜಾ ಕಾಲೇಜು ಗ್ರಂಥಾಲಯ ೧೯೪೧ ರಲ್ಲಿ ಪ್ರಕಟಿಸಿರುವ ಪುಸ್ತಕಗಳಲ್ಲಿ ಮಹಾರಾಜರ ಅರಮನೆಯಲ್ಲಿನ ಪುಸ್ತಕಗಳನ್ನು ಬಳಸಿಕೊಳ್ಳಲಾಗಿದ್ದು, ವಿಶೇಷವಾಗಿ ಬ್ರಾಹ್ಮಣ ಸಾಹಿತ್ಯ ಮತ್ತು ಧರ್ಮದ ಪುಸ್ತಕಗಳ ಪಟ್ಟಿ ಅದಾಗಿತ್ತು.

## ೪.೨.೫.೪ : ಲೋಚನ ಲೇಖನಸೂಚಿ

'ಲೋಚನ' ೧೯೮೩ ರಲ್ಲಿ ಪ್ರಾರಂಭವಾದ ವಿದ್ವತ್ ಪತ್ರಿಕೆ ಪ್ರತಿಷ್ಠಾನದ ಸಂಸ್ಥಾಪಕ ಎಂ. ವಿ. ಸೀತಾರಾಮಯ್ಯನವರ ದೂರದೃಷ್ಟಿ ಫಲ. ಯಶಸ್ವಿ ಹದಿನೈದು ವರ್ಷಗಳನ್ನು ಪೂರೈಸಿ ನಾಡಿನ ವಿದ್ವಾಂಸರಿಗೆ ವೇದಿಕೆಯಾಗಿ, ಮೌಲಿಕ ಚರ್ಚೆಗಳಿಗೆ ಕಾರಣವಾಗಿ ಹೊಸ ಇತಿಹಾಸದ ಆಕರಗಳನ್ನು ಸಾಹಿತ್ಯ ಲೋಕಕ್ಕೆ ನೀಡಿ ತನ್ನ ಪಾಲಿನ ಕರ್ತವ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದೆ. ಇಂದಿಗೂ ಕರ್ನಾಟಕದಲ್ಲಿ ನಿಯತವಾಗಿ ಪ್ರಕಟವಾಗುತ್ತಿರುವ ಏಕೈಕ 'ವಿದ್ವತ್ ಪತ್ರಿಕೆ' ಎಂಬ ಹೆಗ್ಗಳಿಕೆಗಳಿಗೆ ಪಾತ್ರವಾಗಿದೆ.

ಹದಿನೈದು ವರ್ಷಗಳಿಂದ ಈ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಲೇಖನಗಳು ಮತ್ತು ಇತರ ಮಾಹಿತಿಗಳನ್ನು ಒಳಗೊಂಡ ಲೇಖನಸೂಚಿ ಸಾಹಿತ್ಯ ಮತ್ತು ಸಂಶೋಧನಾಸಕ್ತರಿಗೆ ಉಪಯುಕ್ತವಾಗಿದೆ.

# ಲೋಚನ ಲೇಖನ ಸೂಚಿ

(ಜೂನ್ ೧೯೮೩ ರಿಂದ ಡಿಸೆಂಬರ್ ೧೯೯೭. ೩೦ ಸಂಚಿಕೆಗಳು)

ಸಂಕಲನ

ಪಿ. ವಿ. ಕೃಷ್ಣಮೂರ್ತಿ

ನಾ. ಗೀತಾಚಾರ್ಯ



## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು-೫೬೦ ೦೧೯

೧೯೯೯

## ಪರಿವಿಡಿ



# ಲೋಚನ : ಲೇಖನ ಸೂಚಿ

'ಲೋಚನ' ಸಂಪುಟ 1 ರಿಂದ 5 ಜೂನ್ 1983 ರಿಂದ ಡಿಸೆಂಬರ್ 1987ರ ವರೆಗೆ

(ಹಾಗೂ ಕರ್ನಾಟಕ ಲೋಚನ ಸಂ. 1 ರಿಂದ ಜೂನ್ 1988 ರಿಂದ ಡಿಸೆಂಬರ್ 1997ರ ವರೆಗೆ ಒಟ್ಟು 30 ಸಂಚಿಕೆಗಳು)

ಸಂಕಲನಕಾರ : ಪಿ. ವಿ. ಕೃಷ್ಣಮೂರ್ತಿ

ಸಂಲೇಖಗಳ ಜೋಡಣೆಯ ಕ್ರಮ :

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನವು ತನ್ನ ಧ್ಯೇಯೋದ್ದೇಶಗಳಿಗನುಗುಣವಾಗಿ 1983 ರಿಂದ 'ಲೋಚನ' ಎಂಬ ಷಾಣ್ಮಾಸಿಕ ಅರ್ಧ ವಾರ್ಷಿಕ ವಿದ್ವತ್ ಪತ್ರಿಕೆಯನ್ನು ಪ್ರಕಟಿಸತೊಡಗಿತು. 1988ರಲ್ಲಿ ಈ ಪತ್ರಿಕೆಯು 'ಕರ್ನಾಟಕ ಲೋಚನ' ಎಂಬ ಹೊಸ ಹೆಸರಿನಿಂದ ಪ್ರಕಟವಾಗತೊಡಗಿದೆ. ಈ ಪತ್ರಿಕೆಗೆ ಒಟ್ಟು ಹದಿನೈದು ವರ್ಷವಾಗಿದ್ದು, ಲೇಖನಗಳ ಸೂಚಿಯನ್ನು ಸಿದ್ಧಪಡಿಸಿ ಪ್ರಕಟಿಸುವ ಅಗತ್ಯ ಕಂಡು ಬಂದಿತು. ಅಂತೆಯೇ ಈ ಲೇಖನ ಸೂಚಿ. ಈ ಸೂಚಿಯಲ್ಲಿ ಲೇಖಕರ ಹೆಸರುಗಳನ್ನು ಅಕಾರಾದಿಯಾಗಿ ಜೋಡಿಸಲಾಗಿದೆ. ಪ್ರತಿಯೊಂದು ಸಂಲೇಖದಲ್ಲಿ ಲೇಖಕರ ಹೆಸರಿನ ಅನಂತರ ಅವರ ಲೇಖನಗಳ ಶೀರ್ಷಿಕೆ, ಸಂಪುಟ-ಸಂಚಿಕೆಗಳ ಸಂಖ್ಯೆ, ಸಂಚಿಕೆಯ ತಿಂಗಳು ಹಾಗೂ ವರ್ಷ, ಅನಂತರ ಲೇಖನದ ಪ್ರಾರಂಭ ಪುಟದ ಸಂಖ್ಯೆಯನ್ನು ಸೂಚಿಸಲಾಗಿದೆ. 1987ರ ವರೆಗಿನವನ್ನು 'ಲೋಚನ' ಸಂಚಿಕೆಗಳೆಂದೂ 1988ರ ನಂತರದವನ್ನು 'ಕರ್ನಾಟಕ ಲೋಚನ' ಸಂಚಿಕೆಗಳೆಂದೂ ಪರಿಭಾವಿಸುವುದು.

ಉದಾ : 1. ಲೋಚನ
ಶೇಷಗಿರಿರಾವ್ ಎಲ್. ಎಸ್:
ಗ್ರೀಕ್ ನಾಟಕಗಳ ಹಿನ್ನೆಲೆಯಲ್ಲಿ 'ಅಶ್ವತ್ಥಾಮನ್''
ಮತ್ತು 'ಅಗ್ರಹ', 2-2, ಡಿಸೆಂಬರ್ 84, ಪು. 167.

2. ಕರ್ನಾಟಕ ಲೋಚನ
ಸಂಪತ್ಕುಮಾರಾಚಾರ್ಯ ವಿ. ಎಸ್.
ಸಂಗೀತದ ಮೇಲೆ ಸಾಮವೇದದ ಪ್ರಭಾವ, 1-1, ಜೂನ್ 88, ಪು. 26.

ಲೋಚನ ವಿದ್ವತ್ ಪತ್ರಿಕೆಯಲ್ಲಿ ' ವಸ್ತು ಸಂಗ್ರಹ ' ಒಂದು ವಿಶಿಷ್ಟ ಅಂಕಣ. ಆಯಾ ಅವಧಿಯಲ್ಲಿ ಬಂದ ಸಾಹಿತ್ಯ - ಪಾಂಡಿತ್ಯ - ಸಂಶೋಧನೆಗೆ ಸಂಬಂಧಿಸಿದ ಸುದ್ದಿಗಳ - ಟಿಪ್ಪಣಿಗಳ - ವಿಶೇಷ ಸಂಗತಿಗಳನ್ನು ಒಳಗೊಂಡಿರುತ್ತದೆ. ಈ ಅಂಕಣದಲ್ಲಿ ಒಮ್ಮೊಮ್ಮೆ ದೀರ್ಘ ಲೇಖನಗಳೂ ವಿವರಣಾತ್ಮಕ ಟಿಪ್ಪಣಿಗಳೂ ಇವೆ. ಇವೂ ಸಹ ಸಂಶೋಧಕರಿಗೆ ಉತ್ತಮ ಆಕರವಾಗಬಹುದೆಂಬ ಆಶಯದಿಂದ ಇಲ್ಲಿ ಅಂತಹ ಟಿಪ್ಪಣಿಗಳ ಸೂಚಿಯನ್ನು ನೀಡಲಾಗಿದೆ. ಸಾಮಾನ್ಯವಾಗಿ ಈ ಟಿಪ್ಪಣಿಗಳನ್ನು ಎಂ. ವಿ. ಸೀ ಅವರು ಇರುವವರೆಗೆ ಅವರೇ ಸಿದ್ಧಪಡಿಸಿದ್ದಾರೆ. ಅನಂತರ ನಾ ಗೀತಾಚಾರ್ಯ ಅವರು ಅದನ್ನು ಮುಂದುವರಿಸಿದ್ದಾರೆ. ಬೇರೆ ಬೇರೆಯವರೂ ಕೆಲವೊಮ್ಮೆ ನೀಡಿದ್ದಾರೆ. ಅಂಥದೊಂದು ಸದುದ್ದೇಶ ನಿಂತುಹೋಗಬಾರದೆಂಬ ಕಾರಣದಿಂದ ಸಣ್ಣ ಸಣ್ಣ ಟಿಪ್ಪಣಿಗಳಲ್ಲಿ ಉಳಿಸಿಕೊಂಡು ಬರಲಾಗಿದೆ. ಸಂಶೋಧನಾ ಪತ್ರಿಕೆಯೊಂದು ಸಂಶೋಧನೆಗೆ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸಮಕಾಲೀನ ಸಂಗತಿಗಳನ್ನು ಗಮನಿಸುತ್ತಿತ್ತು ಎಂಬ ಅಂಶ ಇದರಿಂದ ದಾಖಲೆಯಾಗುತ್ತದೆ.

ಅನುಬಂಧಗಳಲ್ಲಿ ಸಂಪಾದಕ ವರ್ಗದ ಪದಾಧಿಕಾರಿಗಳ, ಕಾರ್ಯಸಮಿತಿ ಸದಸ್ಯರ, ಮತ್ತು ಗೌರವ ಸದಸ್ಯರ ಅಧಿಕಾರ ಅವಧಿಯನ್ನು ನೀಡಲಾಗಿದೆ. ಒಂದು ಸಮರ್ಥ ವಿದ್ವಾಂಸರ ತಂಡವೇ ಈ ಸಂಸ್ಥೆಯ ಬೆಳವಣಿಗೆಯ ಹಿಂದೆ ಇದೆ. ಇದು ದಾಖಲೆಯಲ್ಲಿ ನಿಲ್ಲುವ ಅಂಶ. ದಾಖಲೆಯಾಗದ ಇನ್ನೊಂದು ಅಂಶವೂ ಈ ಸಂಸ್ಥೆಯ ದಾಖಲೆಗಳ ಪುಟಗಳಲ್ಲಿ ಮಿಂಚುತ್ತಿರುವುದನ್ನು ಯಾರೂ ಮರೆಯಲಾಗುವುದಿಲ್ಲ. ಪ್ರತಿಷ್ಠಾನದ ಪ್ರಕಟನೆಗಳ ಪಟ್ಟಿಯನ್ನೂ ಇಲ್ಲಿ ಕೊಟ್ಟಿದೆ. ಪ್ರಕಟಿತ ಪುಸ್ತಕಗಳ ವರ್ಷವಾರು, ಲೇಖಕರು / ಸಂಪಾದಕರ ಹೆಸರುಗಳೊಂದಿಗೆ ಕ್ರಮವಾಗಿ ನೀಡಿದೆ. ಮೊದಲು ಹತ್ತು ವರ್ಷಗಳಲ್ಲಿ ವರ್ಷಕ್ಕೆ ೩ - ೪ ಪುಸ್ತಕಗಳನ್ನು ಪ್ರಕಟಿಸಿ ೫೦ ಪ್ರಕಟನೆಗಳನ್ನು ಸಮೀಪಿಸಿರುವದು ವಿಶೇಷವಾಗಿ ಗಮನಕ್ಕೆ ಬರುತ್ತದೆ. ಒಂದು ಸಂಶೋಧನಾ ಸಂಸ್ಥೆ, ಸಂಶೋಧನೆಗೆ ಮೀಸಲಾದ ಕಥೆ - ಕವನ, ಕಾದಂಬರಿಗಳಂತಹ ಸೃಜನಶೀಲ ಪ್ರಕಾರಕ್ಕೆ ಹೊರತಾಗಿ –ಪಾಂಡಿತ್ಯ ಪ್ರಧಾನ ಗ್ರಂಥಗಳನ್ನೇ ಪ್ರಕಟಿಸುತ್ತಿರುವದು ಗಮನಾರ್ಹ.

ವಾಸ್ತವವಾಗಿ ಲೋಚನದಲ್ಲಿ ವಸ್ತು ಸಂಗ್ರಹದ ನಂತರ ' ಪ್ರತಿಷ್ಠಾನ ವಾರ್ತೆ ', ' ಅಭಿನಂದನೆ ' ಮತ್ತು ' ಶ್ರದ್ಧಾಂಜಲಿ ' ಭಾಗಗಳು ಇವೆ. ಇವುಗಳಲ್ಲಿ ಆಯಾ ಸಂಚಿಕೆಯ ಅವಧಿಯಲ್ಲಿ ನಡೆದ ಮುಖ್ಯ ಸಂಗತಿಗಳಿರುತ್ತವೆ. ಅಭಿನಂದನೆಯಲ್ಲಿ ಸಾಹಿತಿ ಗಣ್ಯರಿಗೆ ಲಭಿಸಿದ ಬಹುಮಾನ, ಪ್ರಶಸ್ತಿ, ಸನ್ಮಾನಗಳೂ ಶ್ರದ್ಧಾಂಜಲಿಯಲ್ಲಿ ನಿಧನರಾದವರ ವಾರ್ತೆಯೂ ಇರುತ್ತದೆ ಎಂಬುದನ್ನು ಗಮನಿಸಬಹುದು.

ಅಂದ ಹಾಗೆ ' ಲೋಚನ ' ವನ್ನು ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು ಇ ಪಿ. ವಿ. ಕೃಷ್ಣಮೂರ್ತಿ ಮತ್ತು ನಾ. ಗೀತಾಚಾರ್ಯ ಸಂಪಾದಕತ್ವದಲ್ಲಿ ಪ್ರಕಟವಾಗುತ್ತದೆ.

**ಲೋಚನ ಲೇಖನಸೂಚಿ** (ಜೂನ್ ೧೯೮೩ ರಿಂದ ಡಿಸೆಂಬರ್ ೧೯೯೭, ೩೦ ಸಂಚಿಕೆಗಳು) ೩೦ ಸಂಚಿಕೆಗಳಲ್ಲಿನ ಕನ್ನಡ ಸಾಹಿತ್ಯ ಮತ್ತು ಭಾಷೆಯ ಲೇಖನಗಳಿಗೆ ಸೂಚಿಯನ್ನು ಒದಗಿಸುತ್ತದೆ. ಇದನ್ನು ಸಂಕಲಿಸಿದವರು, ಪಿ. ವಿ. ಕೃಷ್ಣಮೂರ್ತಿ ಮತ್ತು ನಾ. ಗೀತಾಚಾರ್ಯ ಅವರು. ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು ಇವರು ೧೯೯೯ ರಲ್ಲಿ ಇದು ಪ್ರಕಟನೆಯಾಗಿದೆ.

## ೪.೨.೩.೫ : ತರಳಬಾಳು ತ್ರೈಮಾಸಿಕ ಲೇಖನ ಸೂಚಿ (ಅಕ್ಟೋಬರ ೧೯೭೫ - ಜುಲೈ ೨೦೦೦)

ಈ ಮೊದಲೇ ಪ್ರಕಟವಾದ ಸಂಚಿಕೆ ೧ ರಿಂದ ೪೦ ಹಾಗೂ ೪೧ ರಿಂದ ೮೦ ರ ವರೆಗಿನ ಎಲ್ಲ ಲೇಖನಗಳನ್ನಲ್ಲದೆ ಸಂಚಿಕೆ ೮೧ ರಿಂದ ೧೦೦೦ ರ ವರೆಗಿನ ಲೇಖನಗಳನ್ನೆಲ್ಲಾ ಒಟ್ಟುಗೂಡಿಸಲಾಗಿದೆ. ಈ ರೀತಿ ಕ್ರೋಢೀಕರಿಸಿದ ೧೦೦ ಸಂಚಿಕೆಗಳ ಲೇಖನಗಳ ಒಟ್ಟು ಸಂಖ್ಯೆ ೧೪೧೧. ಈ ಪ್ರಕಟಿತ ಎಲ್ಲ ಲೇಖನಗಳನ್ನು ಗ್ರಂಥಾಲಯ ಪಿತಾಮಹ ಡಾ. ಎಸ್. ಆರ್. ರಂಗನಾಥನ್ ಅವರ ದ್ವಿ ಬಿಂದು ವರ್ಗೀಕರಣ (Colon Classification) ಹಿನ್ನೆಲೆಯಲ್ಲಿ, ಅಲ್ಲಿ - ಇಲ್ಲಿ, ಅಲ್ಪ - ಸ್ವಲ್ಪ ಬದಲಾವಣೆಗಳೊಂದಿಗೆ ಈ ವಿಷಯಾಧಾರಿತ ವರ್ಗೀಕರಣ ಸೂಚಿಯನ್ನು (Classified - Index) ಸಿದ್ಧಪಡಿಸಲಾಗಿದೆ. ಇದಕ್ಕೆ ' ಲೇಖನ ಸೂಚಿ ' ಎಂದು ಹೆಸರಿಸಲಾಗಿದೆ. ಈ ಸೂಚಿಯಲ್ಲಿ ವಿಷಯಗಳ ವಿಭಜನೆ (ವರ್ಗೀಕರಣ) ಈ ರೀತಿಯಲ್ಲಿದೆ.

ವಿಭಾಗ ೧ ರಿಂದ ೧೧ – ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಲೇಖನಗಳು

ವಿಭಾಗ ೧೨ ರಿಂದ ೨೦ – ಸಾಹಿತ್ಯ ವಿಷಯಕ್ಕೆ ಸಂಬಂಧಿಸಿದ ಲೇಖನಗಳು

ವಿಭಾಗ ೨೧ ರಿಂದ ೨೮ – ವಿವಿಧ ವಿಷಯಗಳಿಗೆ ಸಂಬಂಧಿಸಿದ ಪ್ರಬಂಧಗಳು

ವಿಭಾಗ ೨೯ ಹಾಗೂ ೩೦ – ಪುಸ್ತಕ ವಿಮರ್ಶೆ ಹಾಗೂ ವರದಿ

ವಿಭಾಗದ ಆರಂಭದಲ್ಲಿ ಮುಖ್ಯ ವಿಷಯಕ್ಕೆ ಸಂಬಂಧಿಸಿದ ಲೇಖನಗಳನ್ನು ನಂತರ ವಿಭಾಗಗಳಿಗೆ ಆ ವಿಷಯದ ಉಪವಿಭಾಗಗಳಿಗೆ ಸಂಬಂಧಿಸಿದ ಲೇಖನಗಳನ್ನು ಉಲ್ಲೇಖಿಸಲಾಗಿದೆ.

ಉದಾ : ವಿಭಾಗ ೧ – ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಲೇಖನಗಳು

ವಿಭಾಗ ೨ – ಹಿಂದೂ ಧರ್ಮಕ್ಕೆ ಸಂಬಂಧಿಸಿದ ಲೇಖನಗಳು

ವಿಭಾಗ ೩ – ಇತರ ಧರ್ಮಗಳಿಗೆ ಸಂಬಂಧಿಸಿದ ಪ್ರಬಂಧಗಳು

ವಿಭಾಗ ೪ – ವೀರಶೈವಕ್ಕೆ ಧರ್ಮಕ್ಕೆ ಸಂಬಂಧಿಸಿದ ಲೇಖನಗಳು

ಈ ರೀತಿಯಲ್ಲಿಯೇ ಮುಖ್ಯ ವಿಷಯವಾದ ಸಾಹಿತ್ಯವನ್ನು ವಿಭಾಗಿಸಿ ಕವನ, ನಾಟಕ, ಕಥೆ ಹಾಗೂ ಅವುಗಳ ವಿಮರ್ಶೆಗೆ ಕಾಯ್ದಿರಿಸಿದೆ. ಈ ರೀತಿ ವಿಂಗಡನೆಯಾದ ನಂತರ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಲೇಖನಗಳನ್ನು ಪ್ರಬಂಧಗಳೆಂದು ಹೆಸರಿಸಿ, ಅವುಗಳನ್ನು ವಿಜ್ಞಾನ, ಆರೋಗ್ಯ, ಶಿಕ್ಷಣ, ಇತಿಹಾಸ, ರಾಜಕೀಯ, ಸಾಮಾಜಿಕ ಹಾಗೂ ಸಂಕೀರ್ಣ - ಪ್ರಬಂಧಗಳೆಂದು ವಿಂಗಡಿಸಲಾಗಿದೆ. ವಿಭಾಗ ೧೯ ಪುಸ್ತಕ ವಿಮರ್ಶೆಯ ಲೇಖನಗಳಿಗೆ ಹಾಗೂ ವಿಭಾಗ - ೨೦ ವರದಿಗಾಗಿ ಮೀಸಲಾಗಿರಿಸಿದೆ.

**ಲೇಖನ ಸೂಚಿಯ ಉಲ್ಲೇಖನ ಪದ್ಧತಿ :**

ಇಲ್ಲಿ ಉಲ್ಲೇಖಿತವಾದ ಪ್ರತಿಯೊಂದು ಲೇಖನದ ಬಗೆಗೆ ಆರಂಭದಲ್ಲಿ ಕ್ರಮಸಂಖ್ಯೆ ನೀಡಿ, ನಂತರ ಅದನ್ನು ಬರೆದ ಲೇಖಕನ ಹೆಸರು ನಂತರ ಲೇಖನದ ಶಿರೋನಾಮೆ, ಹಾಗೂ ತ್ರೈಮಾಸಿಕ ಪ್ರಕಟವಾದ ತಿಂಗಳು - ವರುಷ ನಂತರ ಸಂಪುಟ ಹಾಗೂ ಸಂಚಿಕೆಯ ಸಂಖ್ಯೆ ನೀಡಿ ಕೊನೆಗೆ ಲೇಖನ ಪ್ರಕಟವಾದ ಪುಟಗಳ ಸಂಖ್ಯೆಯನ್ನು ನೀಡಿದೆ ಉದಾ : ೪೨೨ ಸಿ. ಪಿ. ಕೆ.

ಕಾವ್ಯ ವಿಮರ್ಶೆಗೆ ಸಂಬಂಧಪಟ್ಟಂತೆ ಹತ್ತು ಲೇಖನಗಳನ್ನು ನೀಡಿದ್ದಾರೆ. ಆ ಲೇಖನಿಗಳಿಗೆಲ್ಲಾ ಒಂದೇ ಕ್ರಮಸಂಖ್ಯೆ ನೀಡಲಾಗಿದೆ.

ಪ್ರಕಟಿತ ತಿಂಗಳು, ವರುಷ, ಸಂಪುಟ, ಸಂಚಿಕೆ, ಪುಟಗಳು—

..............................................................................................

..............................................................................................

ಹೀಗೆ ಅವರ ಹತ್ತು ಲೇಖನಗಳನ್ನು ಒಂದೇ ಕ್ರಮಸಂಖ್ಯೆಯ ಅಡಿಯಲ್ಲಿ ಜೋಡಿಸಿ ಕೊಡಲಾಗಿದೆ.

ಲೇಖಕ ಸೂಚಿಯಲ್ಲಿ ೧೦೦ ಸಂಚಿಕೆಗಳನ್ನು ಒಂದೇ ಕ್ರಮ ಸಂಖ್ಯೆಯ ಅಡಿಯಲ್ಲಿ ಜೋಡಿಸಿ ಕೊಡಲಾಗಿದೆ.

ಲೇಖಕ ಸೂಚಿಯಲ್ಲಿ ೧೦೦ ಸಂಚಿಕೆಗಳಲ್ಲಿನ ೪೦೫ ಲೇಖಕರ ೧೪೧೦ ಲೇಖನಗಳು ಪ್ರಕಟವಾಗಿದ್ದು ಲೇಖಕರ ಅಕಾರಾದಿ ಪಟ್ಟಿಯನ್ನು ಕೊನೆಗೆ ನೀಡಲಾಗಿದೆ. ಇದಕ್ಕೆ 'ಲೇಖಕ ಸೂಚಿ' ಎಂದು ಹೆಸರಿಸಲಾಗಿದೆ. ವಿವರಣಾತ್ಮಕ ವಿಷಯ ಪದಸೂಚಿಯನ್ನು ಅಕರಾದಿಯಲ್ಲಿ ಜೋಡಿಸಲಾಗಿದೆ. ಒಟ್ಟಿನಲ್ಲಿ ಕ. ಚ. ಪಾಟೀಲ ಈ ಸೂಚಿ ವೀರಶೈವ ಸಾಹಿತ್ಯ, ಧರ್ಮ, ಸಾಮಾನ್ಯ ವಿಮರ್ಶೆ ಇತ್ಯಾದಿ ವಿಷಯಗಳನ್ನು ಒಳಗೊಂಡಿದ್ದು ಸಂಶೋಧಕರಿಗೆ, ಆಸಕ್ತರಿಗೆ ಒಂದು ಉಪಯುಕ್ತ ಕೈಪಿಡಿಯಾಗುತಿದೆ. ಇದನ್ನು ಸಂಪಾದಿಸಿದ ಕ. ಚ. ಪಾಟೀಲರು ಸ್ತುತ್ಯ ಕೆಲಸ ಮಾಡಿದ್ದಾರೆ.

## ೪.೨.೬ : ಕನ್ನಡ ನಿರ್ದೇಶಿಗಳು :

ಕನ್ನಡ ಗ್ರಂಥಗಳಿಗೆ ನಿರ್ದೇಶಿಗಳನ್ನು ರಚಿಸುವಾಗ ಗ್ರಂಥಸೂಚಿಯ ನೆರವು ಇತ್ತೀಚಿನದೆಂದು ಈಚೆಗಿನ ಅಧ್ಯಾಯಗಳು ಸ್ಪಷ್ಟಪಡಿಸುತ್ತವೆ. ನಿರ್ದೇಶಿಗಳ ಬಗ್ಗೆ ಕನ್ನಡದಲ್ಲಿ ಇನ್ನೂ ಅಧ್ಯಯನ ಆರಂಭವಾಗಬೇಕಾಗಿದೆ. ಅಲ್ಲೊಂದು ಇಲ್ಲೊಂದು ಅಧ್ಯಯನಗಳು ನಡೆದರೂ ಪರಿಪೂರ್ಣ ನಡೆದಂತೆ ಕಾಣುವದಿಲ್ಲ.

### ೪.೨.೬.೧ : ನಿರ್ದೇಶಿಗಳು :

**ಪರಿಚಯ :** ಮಾಹಿತಿ ಸೇವೆಯಲ್ಲಿ ನಿರ್ದೇಶಿಯು ಅತ್ಯಂತ ಅವಶ್ಯವಾಗಿ ಬಳಸುವ ಸಂದರ್ಭ ಸೇವೆ. ಸಂದರ್ಭ ಸೇವೆಯ ಕೇಂದ್ರಬಿಂದುವೆಂದು ವಿದ್ವಾಂಸರು ಗುರುತಿಸಿದ್ದಾರೆ. ಪುಸ್ತಕದ ಕೊನೆಗೆ ಅಥವಾ ಅಡಿಟಿಪ್ಪಣಿಯನ್ನು ಸಾಮಾನ್ಯವಾಗಿ ಬಳಸುವದು ಅತ್ಯಂತ ಸಾಮಾನ್ಯದ ಸಂಗತಿಯಾಗಿದ್ದು, ಯಾವ ಪುಟಗಳಲ್ಲಿ ವಿವರಗಳು ದೊರೆಯುತ್ತವೆಯೆಂಬುದನ್ನು ತೋರಿಸವ ಅಕಾರಾದಿ ಪಟ್ಟಿಯಾಗಿರುತ್ತದೆ.

"ನಿರ್ದೇಶಿಯು ಪ್ರತ್ಯೇಕ ಮಾರ್ಗದರ್ಶಿಯಾಗಿ ಪತ್ರಿಕೆಗಳಲ್ಲಿನ ಲೇಖನಗಳಿಗೆ, ಪುಸ್ತಕದ ಭಾಗಗಳಲ್ಲಿ ವಿಶೇಷವಾಗಿ ಉಪಯೋಗಿಸಲ್ಪಡುವ ಮಾಹಿತಿ ಸೇವೆಯಾಗಿರುತ್ತದೆ. ನಿರ್ದೇಶಿಗಳು ಸರಳವಾಗಿದ್ದು, ಗುರುತಿಸಲು ಕೂಡಾ ಸಾಧ್ಯವಿದ್ದು ಮಾಹಿತಿಯ ಮಾರ್ಗದಲ್ಲಿ ಇವು ಅತ್ಯವಶ್ಯಕವಾಗಿ ಸಂದರ್ಭ ಸಾಹಿತ್ಯದ ಭಾಗಗಳೆಂದು ವಿದ್ವಾಂಸರು ಈಚೆಗೆ ಪರಿಗಣಿಸುತ್ತಿದ್ದಾರೆ.[೨೬]

ಇದು ಮಾಹಿತಿ ಯುಗ. ಅತ್ಯಂತ ಆವಶ್ಯಕ ವಸ್ತುವಾಗಿರುವ ಮಾಹಿತಿಯು ಗುಂಪುಗಳ ರಾಶಿಯಲ್ಲಿ ಅತ್ಯಂತ ಸಣ್ಣ ಘಟಕವನ್ನು ನಾವು ಗುರುತಿಸುವಂತೆ ಮಾಹಿತಿಯ ಮೂಲ ಘಟಕಕ್ಕೆ ನುಗ್ಗಬೇಕಾಗಿದೆ.

ಯುನೆಸ್ಕೊ (೧೯೪೮) ವ್ಯಾಖ್ಯಾನಿಸುವಂತೆ "ಶಿಸ್ತುಬದ್ಧವಾಗಿ ವ್ಯವಸ್ಥೆಗೊಳಿಸಲ್ಪಟ್ಟ ಪಟ್ಟಿ ಅಥವಾ ಯಾದಿಯು ಇದಾಗಿರುತ್ತದೆ"[೨೭] ಇದು ಅತ್ಯಂತ ಸಣ್ಣ ಘಟಕವೆನಿಸಿದರೂ ಇದಕ್ಕೆ ಅತೀ ಮಹತ್ವವನ್ನು ಸಂದರ್ಭಸೇವೆಯಲ್ಲಿ ನೀಡಲಾಗಿದೆ. ಮುನ್ನುಡಿ, ಬೆನ್ನುಡಿಗಳು, ತಿದ್ದುಪಡಿಗಳು, ಪ್ರಸ್ತಾವನೆಗಳು, ಅಡಿಟಿಪ್ಪಣಿಗಳು, ಅನುಬಂಧಗಳು, ಗ್ರಂಥಸೂಚಿಗಳು, ವಿಮರ್ಶಾಲೇಖನಗಳು ಇತ್ಯಾದಿಗಳು ನಿರ್ದೇಶಿಗೆ ಉದಾಹರಣೆಗಳಾಗುತ್ತವೆ.

### ೪.೨.೬.೨ : ಇತಿಹಾಸ ಮತ್ತು ಬೆಳವಣಿಗೆ :

ನಿರ್ದೇಶಿಗೆ ಬಹುದೊಡ್ಡ ಇತಿಹಾಸವೆ ಇದೆ. ಬಹುಶಃ ಅಕ್ಷರ ಹುಟ್ಟಿದಾಗಿನಿಂದಲೇ ಇದರ ಹುಟ್ಟು ಆಗಿರಬಹುದೆನಿಸುತ್ತದೆ. ಇದು ಅಡುಗೆಮನೆಯ ಸಾಹಿತ್ಯವಿದ್ದಂತೆ. ಊಟ ಮಾಡುವಾಗಿನ ರುಚಿಗೆ ಅದರ ಹಿಂದಿನ

Periodicals form a very important element in reference work in any library, supplementing the book collections in several important ways.

Periodicals often contain articles on subjects about which the library has no books or even about which no books have yet been written. This is especially true in the case of small or obscure subjects or subjects of local or temporary interest.

Periodical articles are often useful as showing contemporary opinion on a given event, subject, person, book etc.

To make the best use of the periodical literature the reference librarian needs the **Index** to periodicals. This index furnishes a guide to contents of the periodicals.

**ISADORE GILBERT MUDGE**

Guide to Reference Books

Page 5

ಪರಿಶ್ರಮವೂ ಗೊತ್ತಾಗದೆ ಹೋದಂತೆ. ಯಾವುದೇ ವಸ್ತುವನ್ನು ಕ್ರಮಬದ್ಧವಾಗಿ, ಅನುಕ್ರಮವಾಗಿ, ಕಾಲಾನುಕ್ರಮವಾಗಿ ಜೋಡಿಸಿ ವ್ಯವಸ್ಥೆಗೊಳಿಸುತ್ತೇವೆ. ಬಹುಶಃ ಈ ಪದ್ಧತಿಯೇ ನಿರ್ದೇಶಿಗೆ ಮೂಲವೆಂದು ಪರಿಗಣಿಸಿದ್ದಾರೆ. ಇದಕ್ಕೆ ಅಮರಕೋಶಗಳಲ್ಲಿ, ಪುರಾಣನಾಮ ಚೂಡಾಮಣಿಯಲ್ಲಿ, ರಾಮಾಯಣ, ಮಹಾಭಾರತದ ಉದಾಹರಣೆಗಳು ಸಾಕು ಎನಿಸುತ್ತವೆ. ಪದಪ್ರಯೋಗ ಕೋಶಗಳು, ಶಬ್ದಕೋಶಗಳು ಅನೇಕ ಪುರಾವೆಗಳನ್ನು ಒದಗಿಸುತ್ತವೆ. ಇದರ ಇತಿಹಾಸವೇ ಇಲ್ಲಿಂದ ಶುರು ಮಾಡಬಹುದು.

**ಬೈಬಲ್ ಸೂಚಿ :** ಅಲೆಕ್ಸಾಂಡರನು ಬೈಬಲ್ಲಿಗಾಗಿ ತಯಾರಿಸಿರುವ ನಿರ್ದೇಶಿಯು ಇದಕ್ಕೆ ಒಳ್ಳೆಯ ಉದಾಹರಣೆ ಮತ್ತು ಪುರಾವೆ. ಅವನು ೧೯೩೭ ರಲ್ಲಿ ಈ ಪ್ರಯೋಗ ಮಾಡಿ ತೋರಿಸಿದನು. ಇದು ಒಂದು ಸಾಧನೆ ಎಂದು ಪರಿಗಣಿಸಲಾಗಿದೆ. ಡಾ. ಸ್ಯಾಮುಯೆಲ್ ಜಾನ್‌ಸನ್‌ನು ಇಡೀ ಇಂಗ್ಲೀಷ್ ಭಾಷೆಗೆ ನಿರ್ದೇಶಿಯನ್ನು ೧೭೫೫ ರಲ್ಲಿ ರಚಿಸಿ ಮಾರ್ಗವನ್ನು ಸರಳಗೊಳಿಸಿಕೊಟ್ಟಿದ್ದಾನೆ.

ವಿಲಿಯಂ ಫೆಡರಿಕ್ ಪತ್ರಿಕಾಲೇಖನ ನಿರ್ದೇಶಿಯನ್ನು ರಚಿಸಿಕೊಟ್ಟನು. ಪೀಲೆಯು ಪತ್ರಿಕಾ ಸಾಹಿತ್ಯಕ್ಕೆ (ಲೇಖನ) (Periodical Literature) ನಿರ್ದೇಶಿಯನ್ನು ರಚಿಸಿದನು. ಅದು ೬ ಸಂಪುಟಗಳು ೫ ಪುರವಣಿಗಳನ್ನು ಒಳಗೊಂಡಿದೆ. ೧೯೦೧ ರಲ್ಲಿ ಎಚ್. ಡಬ್ಲ್ಯೂ ವಿಲ್ಸನ್ ಈ ಕ್ಷೇತ್ರದಲ್ಲಿ ಬೃಹತ್ತಾದ ಕಾರ್ಯ ಮಾಡಿ ಜಗತ್‌ಪ್ರಸಿದ್ಧನಾದನು. " Readers Guide to Periodical Literature " ಪತ್ರಿಕೆಯನ್ನು ಅವನು ಹೊರತಂದನು. ಎಚ್. ಎಚ್. ವಿಲ್ಸನ್ ಈ ಕ್ಷೇತ್ರದಲ್ಲಿ ದೊಡ್ಡ ಹೆಸರು. ಅವನನ್ನು ಈ ಕ್ಷೇತ್ರದಲ್ಲಿ ಯಾರೂ ಸರಿಗಟ್ಟಲಾರರು. ಅವನ ಜಾಣ್ಮೆ, ಅವನ ವಿದ್ವತ್ತು ಈ ಕ್ಷೇತ್ರದಲ್ಲಿ ಅವನನ್ನು ದೊಡ್ಡ ಉದ್ಯಮಿಯನ್ನಾಗಿ ಮಾಡಿದವು. ಅವನಿಗೆ ಜಗತ್ತಿನಲ್ಲೆಲ್ಲ ಖ್ಯಾತಿ, ಪ್ರಸಿದ್ಧಿ ತಂತಾನೆ ಹರಿದು ಬಂದುವು. ಇಂದು ಅಮೆರಿಕಾದಲ್ಲಿ ಅವನ ಹೆಸರಿನಲ್ಲೆ ನಿರ್ದೇಶಿ ಸಂಸ್ಥೆ ಸ್ಥಾಪಿಸಲ್ಪಟ್ಟು ಸಂಶೋಧಕರಿಗೆ ಅನುಕೂಲ ಮಾಡಿಕೊಟ್ಟಂತಾಗಿದೆ. [೫]

**೪.೨.೬.೩ : ನಿರ್ದೇಶಿಯ ಪ್ರಬೇಧಗಳು :**

**I. ನಿಯತಕಾಲಿಕೆಗಳು :**

೧. ಸಾಮಾನ್ಯವಾಗಿ ನಿಯತಕಾಲಿಕೆಗಳ ನಿರ್ದೇಶಿಗಳು

೨. ವಿಷಯ ನಿರ್ದೇಶಿಗಳು (ಪಟ್ಟಿಕೆಗಳು, ಹೊಸ ಪುಸ್ತಕಗಳ ನಿರ್ದೇಶಿ, ಕರಪತ್ರಗಳ ನಿರ್ದೇಶಿ, ವರದಿಗಳ.....)

೩. ಒಂದು ಪತ್ರಿಕೆಗಾಗಿ – ಕೊನೆಯಲ್ಲಿ ನಿರೂಪಿಸಲ್ಪಟ್ಟ ಅಡಿಟಿಪ್ಪಣಿಗಳು / ಪ್ರತ್ಯೇಕವಾಗಿ ಪ್ರಕಟವಾದ ಪುಸ್ತಕಗಳು.

**II. ದಿನಪತ್ರಿಕೆಗಳು :**

೧. ಸಾಮಾನ್ಯವಾಗಿ ನಿಯತಕಾಲಿಕೆಗಳ ನಿರ್ದೇಶಿಗಳು

**III. ಸಂಗ್ರಹ ರೂಪದಲ್ಲಿ :**

ಕಾವ್ಯಸಂಗ್ರಹ, ನಾಟಕ ಸಂಗ್ರಹ, ಕಥಾ ಸಂಕಲನಗಳು, ಪದ್ಯಗಳು ಇತ್ಯಾದಿಗಳ ಅಕಾರಾದಿ ಪಟ್ಟಿಗಳು.

ಈ ಎಲ್ಲ ಮೂಲಾಂಶಗಳನ್ನು ಗಮನದಲ್ಲಿಟ್ಟುಕೊಂಡು ಕನ್ನಡದಲ್ಲಿ ರಚಿಸಲ್ಪಟ್ಟ ಕೆಲವು ಸೂಚಿ ಕಾರ್ಯಗಳನ್ನು ಚರ್ಚಿಸಬಹುದಾಗಿದೆ. ಸಾಮಾನ್ಯವಾಗಿ ನಿಯತಕಾಲಿಕೆಗಳು ಲೇಖಕ ನಿರ್ದೇಶಿಗಳ ಬಗ್ಗೆ ಬಂದಿರುವ ಬೆಳವಣಿಗೆಯನ್ನು ಗಮನಿಸಿ ಕನ್ನಡದಲ್ಲಿ ಬಂದಿರುವ ಕೃತಿಗಳನ್ನು ಗಮನಿಸಿದಾಗ ಇದು ಸ್ಪಷ್ಟಗೊಳ್ಳಬಹುದು.

ಉದಾಹರಣೆಗಳು :

ಅ) ಲೇಖಕರ ಸೂಚಿ (೧೯೬೭)

ಬ) ಕನ್ನಡ ನಿಯತಕಾಲಿಕೆಗಳ ಬರಹಸೂಚಿ (೧೯೬೯ - ೭೦)

ವಿಷಯ ನಿರ್ದೇಶಿಗಳು :

ಅ) ಕನ್ನಡ ಭಾಷಾಸಾಹಿತ್ಯ ಲೇಖನ ಸೂಚಿ (೧೯೭೩)

**ಪತ್ರಿಕೆಗಳ ಲೇಖನ ಸೂಚಿಗಳು :**

ಅ) ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಲೇಖನಗಳ ಸೂಚಿ (೧೯೭೧)

ಬ) ಸಂಕ್ರಮಣ ಶತಕ (೧೯೮೧)

ಕ) ಪ್ರಬುದ್ಧ ಕರ್ನಾಟಕ ಪತ್ರಿಕೆಗಳಲ್ಲಿ ಬಂದ ಬರಹಗಳ ಲೇಖನ ಸೂಚಿ ೫೦ ಸಂಪುಟಗಳಲ್ಲಿ, ಸಂಕಲನ ಎನ್. ಅಂತರಂಗಾಚಾರ್

ಡ) ಲೋಚನ - ಲೇಖನ ಸೂಚಿ (೧೯೯೯)

**೪.೨.೬.೪ : ದಿನಪತ್ರಿಕೆಗಳು :**

ಕನ್ನಡದಲ್ಲಿ ಈ ಬಗೆಯ ಸಾಹಿತ್ಯ ನಿರ್ಮಾಣವಾಗಿಲ್ಲವಾದರೂ ಅಲ್ಲಲ್ಲಿ ಬಿಡಿ ಬಿಡಿಯಾಗಿ ಪ್ರಯತ್ನಗಳು ನಡೆದಿವೆ. ಉದಾಹರಣೆಯೆಂದರೆ ಹೈದರಾಬಾದ್‌ದಿಂದ ಪ್ರಕಟಗೊಳ್ಳುವ " ಸಮಾಜ ವಿಜ್ಞಾನ ಲೇಖಕ ದರ್ಶಕ ". ಇದರ ಪ್ರಧಾನ ಸಂಪಾದಕರು ಕನ್ನಡದ ಖ್ಯಾತ ವಿದ್ವಾಂಸರು, ಗ್ರಂಥಾಲಯ ವಿಜ್ಞಾನ ಮತ್ತು ಮಾಹಿತಿ ಕ್ಷೇತ್ರದಲ್ಲಿ ಅದ್ವಿತೀಯ ತಜ್ಞರೆಂದು ಹೆಸರು ಗಳಿಸಿದ ಡಾ. ಎಸ್. ಆರ್. ಗುಂಜಾಳ ಅವರು. ಅವರು ಸುಮಾರು ಹದಿನೈದು ವರ್ಷಗಳಿಂದ ಈ ಪತ್ರಿಕೆಗೆ ಕನ್ನಡದಲ್ಲಿ ಪ್ರಕಟವಾದ ಸಮಾಜವಿಜ್ಞಾನ ವಿಷಯಗಳ ಲೇಖನ ಸೂಚಿಯನ್ನು

' ಸಮಾಜ ವಿಜ್ಞಾನ ಲೇಖನ ದರ್ಶಕ ' ದಲ್ಲಿ ಪ್ರಕಟಿಸುತ್ತಾ ಬಂದಿದ್ದಾರೆ. ಸಂಶೋಧಕರಿಗೆ ಇದೊಂದು ಕನ್ನಡಿಯಿದ್ದಂತೆ. ಅಪರೂಪದ ಕೆಲಸಕ್ಕೆ ನಾವೆಲ್ಲ ಡಾ. ಗುಂಜಾಳರಿಗೆ ಋಣಿಯಾಗಿರಬೇಕು.

ಸಂಗ್ರಹರೂಪದಲ್ಲಿ ಪುಸ್ತಕದ ಕೊನೆಗೆ ಕೊಟ್ಟಿರುವ ಅಭ್ಯಾಸ ಪೂರ್ಣ ಅನುಕ್ರಮವಾಗಿ ಪದಗಳ ಸೂಚಿಗೆ ಕೆಲವು ಉದಾಹರಣೆಗಳನ್ನು ನೋಡಬಹುದು.

೧) ಕನ್ನಡ ಚಂಪೂ ಕಾವ್ಯಗಳ ಪದ್ಯಾನುಕ್ರಮ (೧೯೭೨)

೨) ರಂಗಸೌರಭ (೧೯೮೦)

ಕನ್ನಡದಲ್ಲಿ ಘಟನಾವಳಿಗಳ ಕುರಿತು ನಡೆದ ಸಂಶೋಧನೆಗಳ ಮಾದರಿಗಳನ್ನು ಕುರಿತು ಕೃತಿಗಳು ರಚನೆಯಾದದ್ದು ಕಂಡು ಬಂದಿವೆ. ಒಂದೊಂದೇ ವಿಷಯಗಳನ್ನು ಕುರಿತು ಕೋಶಗಳ (Dictionaries) ಪದಪ್ರಯೋಗಕೋಶ (Concordances) ಗಳು ರಚನೆಗಳಾಗಿವೆ. ಆಯಾ ಕಾಲಘಟ್ಟದ ಶಾಸನಗಳ ಸೂಚಿಗಳಾಗಿರಬಹುದು. ಆಯಾ ಸಾಹಿತ್ಯದಲ್ಲಿ ಉಪಯೋಗಿಸಿದ ಪದಪುಂಜಗಳ, ಅರ್ಥ, ವಿವರಣೆ, ಸೂಚಿಗಳನ್ನು ರಚಿಸುವ ಕೆಲಸಗಳು ಕನ್ನಡದಲ್ಲಿ ನಡೆದಿವೆ. ಇವೆಲ್ಲ ಮಾಹಿತಿಯ ಸೇವೆಯ ಸಂದರ್ಭದಲ್ಲಿ ಆವಶ್ಯಕಗಳೆಂದೇ ಭಾವಿಸಲಾಗಿದೆ.

**೪.೨.೭ : ಪದಪ್ರಯೋಗ ಕೋಶಗಳು :** ಅಕಾರಾದಿ ಪದಗಳ ಯಾದಿ / ಪಟ್ಟಿಯನ್ನು ನೀಡಿ ಅದು ಎಲ್ಲಿ (ಯಾವ ಪುಟ, ಅಧ್ಯಾಯ, ಅಡಿಟಿಪ್ಪಣಿ) ನೋಡಲು ಸಿಗುತ್ತದೆ ಅಥವಾ ಆ ಮಾಹಿತಿ ಲಭ್ಯತೆಯ ಪ್ರಮಾಣವನ್ನು ತಿಳಿಸುವ ಮಾದರಿ ಕೃತಿಗಳು ಕನ್ನಡದಲ್ಲಿ ರಚಿತವಾಗಿ ಕನ್ನಡ ಸಾಹಿತ್ಯವನ್ನು ಅಭ್ಯಸಿಸುವವರಿಗೆ ವಿಪುಲ ಮಾಹಿತಿಯನ್ನು ನೀಡುತ್ತವೆ. ಇವರಿಂದ ಮೊದಲು ಅಧ್ಯಾಪಕರಿಗೆ ನಂತರ ವಿದ್ಯಾರ್ಥಿಗಳಿಗೆ, ವಿದ್ವಾಂಸರಿಗೆ ಅಗಾಧ ಲಾಭಗಳಾಗಿವೆ. ವಿಷಯದ ಲಭ್ಯತೆಯಿಂದ ಸರಳವಾದ ಸಿದ್ಧ ಊಟ (Instant Food) ಸಿಕ್ಕಂತಾಗುತ್ತದೆ.

**ಈ ಮಾದರಿಯ ಕನ್ನಡ ಕೃತಿಗಳು :**

ಎ) ಬಸವಣ್ಣನವರ ವಚನ ಪದಪ್ರಯೋಗ ಕೋಶ : ಎಸ್. ಆರ್. ಗುಂಜಾಳ

ಬಿ) ತೋಂಟದ ಸಿದ್ಧಲಿಂಗ ಯತಿಗಳ ವಚನ ಪದಪ್ರಯೋಗ ಕೋಶ : ಎಸ್. ಆರ್. ಗುಂಜಾಳ ಮತ್ತು ಬ್ಯಾಡಗಿ ಟಿ. ಎಲ್.

ಸಿ) ಜನ್ನನ ಕೃತಿಗಳ ಅಧ್ಯಯನ ಮತ್ತು ಪದಪ್ರಯೋಗ ಕೋಶ : ಸರಸ್ವತಿ ಕುಮಾರಿ (ಮುಂಬಯಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಸಂಪ್ರಬಂಧ ಅಪ್ರಕಟಿತ)

ಡಿ) ಅಲ್ಲಮನ ವಚನಗಳ ಪದಪ್ರಯೋಗ ಕೋಶ : ಹ. ನಂ. ವಿಜಯಕುಮಾರ

ಇ) ಅಕ್ಕಮಹಾದೇವಿ ವಚನ ಪದಪ್ರಯೋಗ ಕೋಶ : ಎಸ್. ಆರ್. ಗುಂಜಾಳ ಮತ್ತು ಸಂಗಮೇಶ ಸವದತ್ತಿಮಠ

ಎಫ್) ರಾಷ್ಟ್ರಕವಿ ಗೋವಿಂದ ಪೈ ಪದಪ್ರಯೋಗ ಕೋಶ : ಎ. ವಿ. ನಾವಡ

ಜಿ) ಶ್ರೀ ಜಗದ್ಗುರು ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲ ಜ್ಞಾನ ಸಾರಮೃತ : ಆರ್. ಸಿ. ಹಿರೇಮಠ

ಎಚ್) ಅಂಬಿಕಾತನಯನ ನಂಬಿಕೆಯ ಹಾಡು : ಕೆ. ಸಿ. ಶಿವಾರೆಡ್ಡಿ, ೧೯೯೯

ಐ) ಭಕ್ತವಾಣಿ (ವಚನ ಮಾಲಿಕೆ) ಸಿ. ಆರ್. ಕಾಮತ್, ೧೯೩೮

ಜೆ) ಹರಿಹರನ ರಗಳೆಗಳ ಪದಕೋಶ : ಡಾ. ಬಸವರಾಜ ಮಲಶೆಟ್ಟಿ

ಕೆ) ವಿಮರ್ಶೆಯ ಪರಿಭಾಷೆ : ಓ. ಎಲ್. ನಾಗಭೂಷಣಸ್ವಾಮಿ

ಎಲ್) ಕುಮಾರವ್ಯಾಸನ ನಿಘಂಟು ಎನ್ಕೆ

ಎಮ್) ಕಾವ್ಯಾರ್ಥ ಪದಕೋಶ : ಶಿವರುದ್ರಪ್ಪ (ಜಿ. ಎಸ್.) ಮತ್ತು ನಾರಾನಣ (ಕೆ. ವಿ.)

ಎನ್) ವಚನ ಪರಿಭಾಷಾಕೋಶ : ಎಸ್. ವಿದ್ಯಾಶಂಕರ

ಓ) ಕರಾವಳಿ ಜಾನಪದ ಬಿಳಿಮಲೆ : ಪುರುಷೋತ್ತಮ ರಗಳೆಗಳ ನಾಮಕೋಶ : ಮೃತ್ಯುಂಜಯ ರುಮಾಲೆ

## ೪.೨.೮ : ಘಟನಾವಳಿ (Fact Index) ನಿರ್ದೇಶಿಗಳು :

ಘಟನೆಗಳನ್ನು ಅಥವಾ ಆಯಾ ಕಾಲದ ಮಹತ್ವದ ಕಾಲಘಟ್ಟಗಳನ್ನು ಸೂಚಿಸುವ ಕೃತಿಗಳು ಕನ್ನಡದಲ್ಲಿ ರಚಿಸಲ್ಪಟ್ಟಿವೆ. ಹಾಗೆ ನೋಡಿದರೆ ಕನ್ನಡ ಸಾಹಿತ್ಯದಲ್ಲಿ ಈ ಪರಂಪರೆ ಪಂಪನಿಂದಲೂ ರನ್ನನವರೆಗೆ, " ಆದಿಕವಿ ಪಂಪ ಅಂತ್ಯ ಕವಿ ಚಂಪಾ " ಎಂದು ಕನ್ನಡದ ಪ್ರಸಿದ್ಧ ಕವಿ, ನಾಟಕಕಾರ, ಸಂಕ್ರಮಣ ಪತ್ರಿಕೆಯ ಸಂಪಾದಕ ಪ್ರೊ. ಚಂದ್ರಶೇಖರ ಪಾಟೀಲರ ಮಾತಿನಲ್ಲಿಯ ಗೌಪ್ಯತೆಯನ್ನು ಗಮನಿಸಬಹುದು. ಆಯಾ ಕಾಲಘಟ್ಟದಲ್ಲಿ ನಡೆದ ಮುಖ್ಯ ಘಟನೆಗಳಿಗೆ ಅಲ್ಲಿಯ ಪ್ರೇರಣೆಗಳು, ಪ್ರೋತ್ಸಾಹ, ಪ್ರೇರಕಗಳಾಗಿದ್ದವೆ ? ಆಗಿಲ್ಲದಿದ್ದರೆ ಯಾಕೆ ? ಅದಕ್ಕೆ ಆಯಾ ಕಾಲಘಟ್ಟದ ಅಭ್ಯಾಸಗಳು, ಅಧ್ಯಯನಗಳು ವಿವರಣೆಗಳನ್ನು ನೀಡುತ್ತವೆ. ಇಂತಹ ಅಭ್ಯಾಸಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಿಗುತ್ತವೆ.[೨೦]

೧) ಪ್ರಾಚೀನ ಸಾಹಿತ್ಯ

೨) ಪಂಪ ಯುಗ

೩) ಬಸವ ಯುಗ

೪) ಮಧ್ಯಕಾಲೀನ ಯುಗ

೫) ಆಧುನಿಕ : ನವೋದಯ, ನವ್ಯ, ನವ್ಯೇತರ, ಬಂಡಾಯ, ದಲಿತ

ಇತ್ಯಾದಿ ಘಟ್ಟಗಳನ್ನು ಸೃಷ್ಟಿಸಿದ್ದಾರೆ.

ಅದೇ ರೀತಿ ಕನ್ನಡ ನಾಡಿನಲ್ಲಿಯ ಘಟನೆಗಳನ್ನು ನೋಡಬಹುದು. ಚಾಲುಕ್ಯ ಯುಗ, ಹೊಯ್ಸಳ ಯುಗ, ವಿಜಯನಗರದ ಕಾಲದ ಯುಗ, ನಿಜಾಂದಾರಿ ಯುಗಗಳು, ಮೊಗಲ್ ಶಾಹಿ ಯುಗ, ಮರಾಠ ಯುಗ, ಇತ್ಯಾದಿಗಳನ್ನು ನಾವು ಚರಿತ್ರೆಗಳಲ್ಲಿ ಓದಿದ್ದೇವೆ. ಆದರೆ ಅವುಗಳನ್ನು ಸಾಮಾನ್ಯವಾಗಿ ಗಮನಿಸಿ ಪ್ರತ್ಯೇಕಿಸಿ ನೋಡಿದರೆ ಅನೇಕ ಸಂಶೋಧನಾ ಸಮಸ್ಯೆಗಳು ಮತ್ತು ಉತ್ತರಗಳು ಸಿಗುತ್ತವೆ. ಈ ವಿಭಜನೆ ಸಮಸ್ಯೆಗಳು ಮತ್ತು ಉತ್ತರಗಳು ಸಿಗುತ್ತವೆ. ಈ ವಿಭಜನೆ ಮತ್ತು ವಿಘಟನೆಗಳನ್ನು ಮಾಡಿಕೊಂಡು ಸಾಹಿತ್ಯ ಅಭ್ಯಾಸ ಮಾಡುವುದರಿಂದ ಒಂದು ಯುಗದ, ಕಾಲಘಟ್ಟದ ಸಾಮಾನ್ಯ ಸಂಗತಿಗಳು, ಮಹತ್ವದ ಅಂಶಗಳನ್ನು ನಾವು ಪಟ್ಟಿ ಮಾಡಬಹುದು. ಕನ್ನಡದಲ್ಲಿ ಈ ಕುರಿತು ಡಾ. ಎಸ್. ಶೆಟ್ಟರ್, ಎಸ್. ರಾಜಶೇಖರ, ಮುಂತಾದ ಇತಿಹಾಸ ತಜ್ಞರು ನಮ್ಮ ಗಮನ ಸೆಳೆಯುತ್ತಾರೆ. ಅವು ಅಭ್ಯಾಸಿಗಳಿಗೆ ಸಂಶೋಧಕರಿಗೆ ಆಪತ್ಕಾಲೀನ ಬಂಧುಗಳಂತೆ ಸಂಶೋಧಕರಿಗೆ ಆಕರಗಳನ್ನು ಸೂಚಿಸುತ್ತವೆ. ಉದಾಹರಣೆ : ವಿಜಯನಗರ ಕಾಲದ ಘಟನಾವಳಿ ಸೂಚಿ, ಎಸ್. ರಾಜಶೇಖರ –೧೯೭೭

ಅಭ್ಯಾಸ ಸೂಚಿಯು ಕನ್ನಡದಲ್ಲಿ ರಚಿಸುವ ಗ್ರಂಥಗಳಿಗೆ ಮತ್ತು ಆಂಗ್ಲ ಗ್ರಂಥಗಳಿಗೆ ಕೂಡಾ ಅವಶ್ಯವಾದ ಆಕರಗಳಾಗಿರುತ್ತವೆ. ಶಾಸ್ತ್ರೀಯವಾದ ಗ್ರಂಥಗಳಿಗೆ ಅಭ್ಯಾಸ ಸೂಚಿ ಬೇಕೇ ಬೇಕು. ಇದನ್ನು ಗಣನೆಗೆ ತೆಗೆದುಕೊಂಡೇ ಗಣ್ಯರು ಪುಸ್ತಕ ರಚನೆಗೆ ಕೈ ಹಾಕಬೇಕು. ಪುಸ್ತಕ ರಚನೆಯ ಜೊತೆಗೆ ಗ್ರಂಥರಚನೆಗೆ ಸಹಾಯಕವಾಗುವ ಎಲ್ಲ ಸಂದರ್ಭಗಳನ್ನು ಟಿಪ್ಪಣಿ ಮಾಡಿಕೊಂಡು ಅವುಗಳನ್ನು ಸಂದರ್ಭಕ್ಕಾಗಿ ಕೊಡಬೇಕು. ಅಡಿಟಿಪ್ಪಣಿಗಳ ಜೊತೆಗೆ ಪುಸ್ತಕದ ಕೊನೆಗೆ ಅಭ್ಯಾಸ ಸೂಚಿಯನ್ನು ನೀಡಿದರೆ ಅದಕ್ಕೆ ವಿದ್ವಾಂಸರ ಮನ್ನಣೆಯಿದೆ. ಅಡಿಟಿಪ್ಪಣಿಯಲ್ಲಿ ಲೇಖಕ, ಲೇಖನದ ಹೆಸರು, ಪುಟಗಳನ್ನು ಕೊಟ್ಟು ಪುಸ್ತಕದ ಕೊನೆಗೆ ಆ ಸಂದರ್ಭ ಗ್ರಂಥಗಳ ಅಭ್ಯಾಸ ಸೂಚಿಯನ್ನು ಇಂದು ನೀಡಬೇಕಾಗಿದೆ.

ಇದರ ಜೊತೆಗೆ ಪದಸೂಚಿಗಳ ಅಧ್ಯಯನವು ಆಶ್ಚರ್ಯಕರ ಸಂಗತಿಗಳನ್ನು ತಿಳಿಯಪಡಿಸುತ್ತದೆ. ಇಲ್ಲಿ ಉಪಯೋಗಿಸಿದ ಪದಗಳು (–) ಪುಟಗಳಲ್ಲಿ ಬಂದಿರುತ್ತವೆ, ಹಾಗೆಯೇ ಅದರ ವಿವರವನ್ನು ತಕ್ಷಣವೇ ಅರಿಯಲು ಸಹಾಯಕವಾಗುತ್ತದೆ. ಗ್ರಂಥಸೂಚಿ ರಚನೆಗೆ ಸಹಾಯಕ ಅಂಶಗಳಾದುದರಿಂದ ಇಲ್ಲಿ ವಿವರಿಸಲಾಗಿದೆ. ಅಭ್ಯಾಸ ಸೂಚಿಯನ್ನು ರಚಿಸಲು ವಿದ್ವಾಂಸರೇ ಆಗಬೇಕು. ಅದು ಎಲ್ಲರ ಸ್ವತ್ತಲ್ಲ, ಆಳವಾದ ಅಧ್ಯಯನ, ಪ್ರಯತ್ನ, ತಾಳ್ಮೆ, ಆ ಕ್ಷೇತ್ರದಲ್ಲಿನ ಅಭ್ಯಾಸ ಇದಕ್ಕೆ ಸಹಾಯವಾಗಬಲ್ಲುದು. ರಂ. ಶ್ರೀ. ಮುಗಳಿಯವರು ರಚಿಸಿದ ಕನ್ನಡ

ಸಾಹಿತ್ಯ ಚರಿತ್ರೆ (೧೯೫೩) ಗೆ ಕನ್ನಡದ ಪ್ರಸಿದ್ಧ ವಿದ್ವಾಂಸರಾದ ಕೆ. ಜಿ ಶಾಸ್ತ್ರಿ, ಎಸ್. ಪ್ರಹ್ಲಾದರಾವ್, ಮತ್ತು ಪಿ. ಟಿ. ಕುಲಕರ್ಣಿಯವರು ಅಭ್ಯಾಸ ಸೂಚಿಯನ್ನು ರಚಿಸಿದ್ದಾರೆ. ಇದು ವೈಜ್ಞಾನಿಕವಾಗಿ ೧೯೬೦ ರಲ್ಲಿ ಎಲ್ಲ ಅಂಶಗಳನ್ನು ಒಳಗೊಂಡು ಮತ್ತೆ ಮುದ್ರಣಕ್ಕೊಳಪಟ್ಟಿತು. ಹಾಗೆಯೇ ೧೯೭೮. ಹೀಗೆ ಮರುಮುದ್ರಣಗೊಂಡ ಪುಸ್ತಕಕ್ಕೆ ಇತ್ತೀಚೆಗೆ ಎಸ್. ಶಿವಣ್ಣನವರು ಅಭ್ಯಾಸ ಸೂಚಿಯನ್ನು ರಚಿಸಿ ಕೊಟ್ಟಿದ್ದಾರೆ.

ಎಂ. ಆರ್. ಸಣ್ಣರಾಮೇಗೌಡರ "ಲೇಖಕರ ಸೂಚಿ"ಯು ಆಗಿನ ಕಾಲದ ಪ್ರಸಿದ್ಧ ನಿಯತಕಾಲಿಕೆಗಳಾದ 'ಶಿವಾನುಭವ', 'ಜಯಕರ್ನಾಟಕ' ಮತ್ತು 'ಜೀವನ'ದಲ್ಲಿ ಬಂದ ಲೇಖನಗಳ ಲೇಖಕರ ಸೂಚಿ ಇದಾಗಿದೆ. ೧೯೬೭ ರಲ್ಲಿ ಇದನ್ನು ಮೈಸೂರು ವಿಶ್ವವಿದ್ಯಾಲಯವು ಪ್ರಕಟಿಸಿ ಕನ್ನಡ ಸಾಹಿತ್ಯಕ್ಕೆ ಉಪಕಾರವನ್ನು ಮಾಡಿತು. ಇದು ಕನ್ನಡದಲ್ಲಿ ಬಂದ ಲೇಖನಗಳ ಬಗೆಗಿನ ಮಾಹಿತಿ ಮತ್ತು ಲೇಖಕನ ಬಗೆಗಿನ ಮಹತ್ವ ಗ್ರಂಥಸೂಚಿಯಾಗಿದೆ.

### ೪.೨.೮.೧ : ಕನ್ನಡ ಸಾಹಿತ್ ಪರಿಷತ್ ಪತ್ರಿಕೆಯ ಲೇಖನಗಳ ಸೂಚಿ :

ದಿ. ಟಿ. ವಿ. ಸುಬ್ರಹ್ಮಣ್ಯಂ ಸಂಪಾದಿಸಿರುವ ಈ ಲೇಖನಗಳ ಸೂಚಿಯು ೧೯೬೨ ರಿಂದ ೧೯೭೦ ರ ವರೆಗಿನ ಕನ್ನಡ ಸಾಹಿತ್ ಪರಿಷತ್ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳ ಸೂಚಿಯಾಗಿದೆ. ೧೯೭೧ ರಲ್ಲಿ ಮೈಸೂರು ವಿಶ್ವವಿದ್ಯಾಲಯವು ಈ ಲೇಖನಗಳ ಸೂಚಿಯನ್ನು ಪ್ರಕಟಿಸಿದ್ದುದೊಂದು ಮಹತ್ವದ ವಿಷಯವಾಗಿದೆ. ವಿಷಯ ನಿರ್ದೇಶಿ ಮತ್ತು ಪುಸ್ತಕ ವಿಮರ್ಶೆಯನ್ನು ಈ ಸೂಚಿ ಒಳಗೊಂಡಿದೆ. ಇದರಿಂದ ಮೈಸೂರು ವಿಶ್ವವಿದ್ಯಾಲಯವು ಅನೇಕ ಸೂಚಿಗಳನ್ನು ಪ್ರಕಟಿಸಲು ಇದೊಂದು ಅಡಿಗಲ್ಲಾಯಿತು ಎಂದು ಹೇಳಬಹುದು.

### ೪.೨.೮.೨ : ಕನ್ನಡ ನಿಯತಕಾಲಿಕ ಬರಹಗಳ ಸೂಚಿ :

ಮೈಸೂರು ವಿಶ್ವವಿದ್ಯಾಲಯದ ಮತ್ತೊಂದು ಮಹತ್ವಾಕಾಂಕ್ಷೆ ಯೋಜನೆ ೧೯೬೯ ರಲ್ಲಿ ಮೈದಾಳಿತು. ಅದು ಮತ್ತೆ ಪ್ರಕಟವಾಗಲಿಲ್ಲ. ೧೯೬೯ ರಲ್ಲಿ ಪ್ರಕಟವಾಗಿ ಈ ಯೋಜನೆ ಅಲ್ಲಿಗೆ ನಿಂತುದು ಕಾಣಿಸುತ್ತದೆ. ಇದರಿಂದ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ, ಮತ್ತು ಸಂಶೋಧಕರಿಗೆ ಅನಾನುಕೂಲವಾಯಿತು ಎಂದು ಹೇಳದೆ ವಿಧಿಯಿಲ್ಲ. ಅಲ್ಲದೆ ಆಡಳಿತದಲ್ಲೊಂದು ಅಡೆತಡೆಗಳು, ವಿದ್ವಾಂಸರ ಸಣ್ಣ ಪುಟ್ಟ ವೈಮನಸ್ಸುಗಳು ಇಂತಹ ಯೋಜನೆಗಳು ನಿಲ್ಲಲು ಕಾರಣವಾಗಬಹುದು.

ಕ್ರಿ. ಶ. ೧೮೬೪ ರಲ್ಲಿ ಕನ್ನಡ ಗ್ರಂಥಸೂಚಿಯ ಅಡಿಗಲ್ಲನ್ನಿಟ್ಟರೆ ಸುಮಾರು ಶತಮಾನಗಳ ಅಂತರದಲ್ಲೂ ಅಪರೂಪವೆಂಬಂತೆ ಕನಿಷ್ಠ ಕೈಪಿಡಿಗಳಾಗಿಯೋ ಗ್ರಂಥಸೂಚಿಗಳು ಹೊರಬಂದದ್ದು ಅಪರೂಪ. ಅಷ್ಟೇ ವ್ಯವಸ್ಥಿತವಾಗಿ, ವೈಜ್ಞಾನಿಕವಾಗಿಯೂ ಗ್ರಂಥಸೂಚಿಗಳು ಹೊರಬಂದಿವೆ. ಕೆಲವು ವಿದ್ವಾಂಸರು ಈ ಕ್ಷೇತ್ರದಲ್ಲಿ ತಮ್ಮನ್ನು

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

## ಲೇಖನಗಳ ಸೂಚಿ

ಟಿ. ವಿ. ಸುಬ್ರಹ್ಮಣ್ಯಂ



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೧

ತೊಡಗಿಸಿಕೊಂಡಿದ್ದಾರೆ. ಕೆ. ಎಸ್. ದೇಶಪಾಂಡೆ, ಶ್ರೀನಿವಾಸ ಹಾವನೂರ, ಟಿ. ವಿ. ವೆಂಕಟರಮಣಯ್ಯ, ಸುಬ್ರಹ್ಮಣ್ಯ, ಪಿ. ಕೆ. ಪಾಟೀಲ, ಡಾ. ಹಾ. ಮಾ. ನಾಯಕ, ಎಚ್. ದೇವೀರಪ್ಪ, ಎಸ್. ಶಿವಣ್ಣ, ಡಾ. ಸಿ. ಪಿ. ಕೃಷ್ಣಕುಮಾರ, ಆರ್. ಎಲ್. ಅನಂತರಾಮಯ್ಯ, ಬಿ. ಎಸ್. ಸಣ್ಣಯ್ಯ, ಇವರಲ್ಲದೆ ಕನ್ನಡದ ಹೆಸರಾಂತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಎರಡು (ಧಾರವಾಡ ಮತ್ತು ಬಿಜಾಪುರ) ಜಿಲ್ಲೆಯ ಶಾಸನ ಸೂಚಿಗಳನ್ನು ಹೊರತಂದು ಸೂಚೀಕರಣ ಮತ್ತು ಸೂಚಿ ಮಾದರಿ ಕುರಿತು ಲೇಖನಗಳನ್ನು ಬರೆದಿದ್ದಾರೆ. ಇತಿಹಾಸಜ್ಞರಾದ ಎಸ್. ಶೆಟ್ಟರ್, ಎಸ್. ರಾಜಶೇಖರ ಕೂಡ ಕರ್ನಾಟಕ ಭಾರತಿಗಳಲ್ಲಿ ಶಾಸನ ಸೂಚಿ ಲೇಖನಗಳನ್ನು ಪ್ರಕಟಿಸಿದ್ದಾರೆ. ಎಸ್. ರಾಜಶೇಖರ ಅವರ " ವಿಜಯನಗರ ಕಾಲದ ಘಟನಾವಳಿ ಸೂಚಿ " ಸುಜಾತಾ ಪಬ್ಲಿಕೇಶನ್, ಧಾರವಾಡ ಅವರು ಪ್ರಕಟಿಸಿದ್ದಾರೆ.

ಡಾ. ಎಸ್. ಆರ್. ಗುಂಜಾಳ ಅವರದು ಈ ಕ್ಷೇತ್ರದಲ್ಲಿ ಕೆಲಸ ಮಾಡಿ ಬಸವಣ್ಣನವರ ವಚನ ಪದಪ್ರಯೋಗಕೋಶ, ಅಕ್ಕಮಹಾದೇವಿ ವಚನ ಪದಪ್ರಯೋಗಕೋಶ, ಸಿದ್ಧಲಿಂಗಯತಿಗಳ ಪದಪ್ರಯೋಗಕೋಶ, ಅಲ್ಲದೆ ವೀರಶೈವ ಸಾಹಿತ್ಯ ಮತ್ತು ಧರ್ಮ ಕುರಿದಾಗಿ ಪ್ರಕಟವಾಗಿರುವ ಪುಸ್ತಕಗಳ ಗ್ರಂಥಸೂಚಿ, ಮತ್ತು ಲೇಖನಸೂಚಿಗಳನ್ನು ಕುರಿತು ಆರು ಕೃತಿಗಳನ್ನು ನೀಡಿದ್ದಾರೆ. ಅವರೊಬ್ಬ ಗ್ರಂಥಾಲಯ ವಿಜ್ಞಾನಿಯಾದಂತೆ ಕನ್ನಡದಲ್ಲಿ ವಿದ್ವಾಂಸರಾಗಿದ್ದುದು ಒಂದು ವಿಶೇಷವೆ ಸರಿ.

### ೪.೨.೮.೩ : ಕನ್ನಡ ಚಂಪೂಕಾವ್ಯಗಳ ಪದ್ಯಾನುಕ್ರಮ :

ವಿದ್ವಾಂಸ ಎನ್. ಅನಂತರಂಗಾಚಾರ್ ಅವರು ಪದ್ಯಾನುಕ್ರಮದ ನಿರ್ದೇಶಿಯನ್ನು ತಯಾರಿಸಿದ್ದಾರೆ. ಮೈಸೂರು ವಿಶ್ವವಿದ್ಯಾಲಯವು ೧೯೭೨ ರಲ್ಲಿ ಈ ಕೃತಿಯನ್ನು ಪ್ರಕಟಿಸಿದ್ದಾರೆ ಕನ್ನಡ ಚಂಪೂ ಕಾವ್ಯಗಳ ಅಭ್ಯಾಸದಲ್ಲಿ ನಿರತರಾದವರಿಗೆ ಇದೊಂದು ಉಪಯುಕ್ತ ಕೈಪಿಡಿ.

ಇದೇ ರೀತಿ ಕನ್ನಡದಲ್ಲಿ ಹರಿಹರನ ರಗಳೆಗಳ ಕೋಶ ಡಾ. ಬಸವರಾಜ ಮಲಶೆಟ್ಟಿಯವರು ಎನ್ಕೆಯವರ ' ಕುಮಾರವ್ಯಾಸ ನಿಘಂಟು ', ಎಸ್. ವಿದ್ಯಾಶಂಕರ ಅವರ ' ವಚನ ಪರಿಭಾಷಾಕೋಶ ', ಓ. ಎಲ್. ನಾಗಭೂಷಣಸ್ವಾಮಿ ಯವರ ' ವಿಮರ್ಶೆಯ ಪರಿಭಾಷೆ ', ಜಿ. ಎಸ್ ಶಿವರುದ್ರಪ್ಪ ಮತ್ತು ಕೆ. ವಿ. ನಾರಾಯಣರ ' ಕಾವ್ಯಾರ್ಥ ಪದಕೋಶ ', ಮಲ್ಲೇಪುರಂ ಜಿ. ವೆಂಕಟೇಶರ ' ಭಾರತೀಯ ಕಾವ್ಯ ಪರಿಭಾಷೆ ', ಮೃತ್ಯುಂಜಯ ರುಮಾಲೆಯವರ ' ರಗಳೆಗಳ ನಾಮಕೋಶ ' ಈ ನಿಟ್ಟಿನಲ್ಲಿ ಹೆಸರಿಸತಕ್ಕ ಕೃತಿಗಳು ಪ್ರಕಟವಾಗಿವೆ. ಕಾವ್ಯ ಮತ್ತು ವಿಮರ್ಶೆಯಲ್ಲಿ ತೊಡಗುವವರಿಗೆ ಇವೆಲ್ಲವುಗಳು ಮಹತ್ವದ ಆಕರಗಳಾಗಿವೆ.

### ೪.೨.೮.೪ : ರಂಗಸೌರಭ :

ಕನ್ನಡ ರಂಗ ನಾಟಕ ಕೇಂದ್ರ " Kannada Natya sangh theatre centre) ಬೆಂಗಳೂರು ೧೯೮೦ ರಲ್ಲಿ ನಾಟಕ ಸೂಚಿಯನ್ನು ಪ್ರಕಟಿಸಿದ್ದಾರೆ. ಆರ್. ಎಲ್. ಅನಂತರಾಮಯ್ಯ ಈ ' ರಂಗಸೌರಭ ' ದ ಸಂಪಾದಕರು, ಅಭ್ಯಾಸಪೂರ್ಣ ನಿರ್ದೇಶಿಯನ್ನು ಲೇಖನ ಮತ್ತು ಲೇಖಕರಿಬ್ಬರಿಗೂ ನೀಡಲಾಗಿದೆ.

### ೪.೨.೮.೫ : ಕನ್ನಡ ಅಭಿನಂದನಾ ಗ್ರಂಥಗಳ ಲೇಖನ ಸೂಚಿ :

೧೯೭೨ ರಲ್ಲಿ ಪಿ. ಕೆ. ಪಾಟೀಲರು ಸಂಪಾದಿಸಿದ ಕನ್ನಡ ಅಭಿನಂದನಾ ಗ್ರಂಥಗಳಲ್ಲಿನ ಲೇಖನಸೂಚಿ ಇದಾಗಿದೆ. ಮೈಸೂರು ವಿಶ್ವವಿದ್ಯಾಲಯವು ಈ ಕೃತಿಯನ್ನು ಪ್ರಕಟಿಸಿದೆ. ಐವತ್ತರ ದಶಕದಿಂದ ಎಪ್ಪತ್ತರ ದಶಕದ ವರೆಗೆ ಅಭಿನಂದನಾ ಗ್ರಂಥಗಳನ್ನು ಸಂಗ್ರಹಿಸಿ ಅದರಲ್ಲಿನ ಲೇಖನಗಳ ಸೂಚಿಯನ್ನು ಇಲ್ಲಿ ಒದಗಿಸಿಕೊಟ್ಟಿದ್ದಾರೆ. ಈ ಅವಧಿಯಲ್ಲಿ ವಿದ್ವಾಂಸರಿಗೆ, ವಿಜ್ಞಾನಿಗಳಿಗೆ, ಲೇಖಕರಿಗೆ, ತತ್ವಜ್ಞಾನಿಗಳಿಗೆ, ಶಿಕ್ಷಣ ತಜ್ಞರಿಗೆ ಅನೇಕ ಅಭಿನಂದನಾ ಗ್ರಂಥಗಳನ್ನು ಪ್ರಕಟಿಸುವ ಅವಕಾಶವನ್ನು ಅವರ ಬಂಧುಗಳು, ವಿಶ್ವಾಸಿಗಳು, ಅಭಿಮಾನಿಗಳು, ಶಿಷ್ಯರು, ಮಾಡಿದ್ದು ಕಂಡುಬರುತ್ತದೆ. ಅವರ ಅಭಿಮಾನಕ್ಕೆ ವಿಶ್ವಾಸಕ್ಕೆ ದ್ಯೋತಕವಾಗಿ ಕುರುಹಾಗಿ ಅಭಿನಂದನಾ ಗ್ರಂಥಗಳು ಹೊರಬಂದವು. ಇದರಲ್ಲಿ ಸಾಕಷ್ಟು ಉಪಯುಕ್ತ ಲೇಖನಗಳು ಇರುತ್ತವೆ. ಇಂತಹ ಲೇಖನಗಳೂ ವಿದ್ವಾಂಸರಿಗೂ, ಸಂಶೋಧಕರಿಗೂ ಉಪಯೋಗ ಇರುತ್ತವೆ. ಅಂತಹ ಲೇಖನಗಳನ್ನು ಇಲ್ಲಿ ಸಂಕಲಿಸಿ ನಿರ್ದೇಶಿಗಳನ್ನು ಪಿ. ಕೆ. ಪಾಟೀಲ ಮಾಡಿದ್ದಾರೆ. ಮುಂದೆ ಈ ಯೋಜನೆಯನ್ನು ಯಾರೂ ಮುಂದುವರಿಸಿಲ್ಲ ಎಂದು ಕಾಣುತ್ತದೆ. ಹಾಗೆ ಮಾಡಿದರೆ ಮತ್ತೆ ೩೦ ವರ್ಷಗಳ ಅವಧಿಯಲ್ಲಿ ಬಂದ ಅಭಿನಂದನ ಗ್ರಂಥಗಳನ್ನು ಗಣನೆಗೆ ತೆಗೆದುಕೊಂಡ ಸೂಚಿ ಗ್ರಂಥ ಪ್ರಕಟಿಸಬಹುದು.

### ೪.೨.೯ : ಚರಿತ್ರೆಯ ರೂಪದ ಗ್ರಂಥಸೂಚಿಗಳು :

ಕನ್ನಡ ಸಾಹಿತಿಗಳ ಒಟ್ಟು ಚರಿತ್ರೆಯೊಂದಿಗೆ ಅವರ ಕೃತಿಗಳ, ಪ್ರಶಸ್ತಿಗಳ, ಬಗ್ಗೆ ವಿವರಿಸುವ ಕೃತಿಗಳನ್ನು ಕನ್ನಡದಲ್ಲಿ ಸಾಕಷ್ಟು ನೋಡಬಹುದು. ಅವುಗಳು ಸಾಹಿತಿಯ ಹುಟ್ಟುಗಳಿಂದ ಹಿಡಿದು ಅನೇಕ ಮಹತ್ವದ ಘಟನೆಗಳನ್ನು ವಿವರಿಸಲು ಸಹಾಯಕವಾಗುತ್ತದೆ. ಇಲ್ಲಿ ಅವರವರ ವೈಯಕ್ತಿಕ ಸಾಧನೆಗಳನ್ನು ಪಟ್ಟಿಯ ರೂಪದಲ್ಲಿ ನೀಡುವುದರಿಂದ ಅನೇಕ ಅಧ್ಯಯನಗಳಿಗೆ ಇದು ಅವಶ್ಯಕ ಮಾಹಿತಿಯನ್ನು ನೀಡುತ್ತದೆ. ಇಂತಹ ಅನೇಕ ಕೃತಿಗಳು ಕನ್ನಡವಲ್ಲಿ ಸಿಗುತ್ತವೆ. ಇವುಗಳನ್ನು ಸ್ಮರಣೆಗಳೆಂದೂ ಸಂಸ್ಮರಣ ಗ್ರಂಥಗಳೆಂದರೂ ನಡೆದೀತು.

ಇನ್ನೊಂದು ಬಗೆಯ ಗ್ರಂಥಗಳಿರುತ್ತವೆ ಆತ್ಮಚರಿತ್ರೆಗಳೆಂದು ಕರೆಯುತ್ತಾರೆ. ಇಲ್ಲಿ ಚರಿತ್ರಕಾರನು ತನ್ನ ಚರಿತ್ರೆಯನ್ನು ತಾನೇ ಬರೆದುಕೊಳ್ಳುತ್ತಾನೆ. ಕೆಲವೊಮ್ಮೆ ಸತ್ಯ ಘಟನೆಗಳನ್ನಾಧರಿಸಿ ಬರೆದ ಕತೆಗಳು ನಮ್ಮಲ್ಲಿ ರೋಚಕವಾಗಿರುತ್ತವೆ. ಕನ್ನಡದಲ್ಲಿ ಲಂಕೇಶರ ಆತ್ಮಚರಿತ್ರೆ ಬಹಳ ಪ್ರಸಿದ್ಧಿಯನ್ನು ಪಡೆಯಿತು. ಅನೇಕ ಪ್ರಸಿದ್ಧ ಕೃತಿಗಳು ಸಾಹಿತ್ಯ ಕೃತಿಗಳಾಗಿ ಹೆಸರು ಪಡೆದಿವೆ. ಅವು ಲೇಖಕರ ಆತ್ಮಚರಿತ್ರೆಗಳಾಗಿರುತ್ತವೆ. ಅನೇಕ ಕುತೂಹಲ, ಕಾತುರವನ್ನು ನಮ್ಮ ಕನ್ನಡ ಸಾಹಿತ್ಯ ಪಡೆದುಕೊಂಡೀತು.

ಆತ್ಮಚರಿತ್ರೆಗಳೆಂದರೆ ಈಗಾಗಲೇ ಚರ್ಚಿಸಿದಂತೆ ನಮ್ಮ ಜೀವನದ ಎಲ್ಲ ಮಗ್ಗುಲಗಳ ಕುರಿತು ಬರೆದುಕೊಳ್ಳುವದೇ " ಆತ್ಮಚರಿತ್ರೆ " ಎಂದು ಅರ್ಥೈಸಬಹುದು. ಈ ಕುರಿತು ಬಂದಿರುವ ಕೃತಿಗಳ ಕೊನೆಗೆ ಅವರ

# KARNATAKA KAVI CHARITE

# ಕರ್ಣಾಟಕ ಕವಿಚರಿತೆ

## Volume III

(18th and 19th Centuries)

ತೃತೀಯ ಸಂಪುಟ

(18ನೆಯ ಮತ್ತು 19ನೆಯ ಶತಮಾನಗಳು)

BY


*Praktana Vimarsa Vichakshana, Rao Bahadur*

R. NARASIMHACHARYA, M.A., M.R.A.S.,

*Honorary Correspondent of the Government of India Archaeological Department*

*Director of Archaeological Researches in Mysore (Rtd.)*


*Author of*

Karnataka-Kavi-Charite, Volumes I and II, Sasanapadyamanjari, Nitimanjari Parts I and II, Nagegadalu, Nitivakyamanjari, Etc.


BANGALORE:
PRINTED AT S. L. N. PRESS

1929


 [Price Rs.4.



ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದುರ್
ಆರ್. ನರಸಿಂಹಾಚಾರ್ಯ, ಎಂ.ಎ.,ಎಂ.ಆರ್.ಎ.ಎಸ್.

CONTENTS.

I. ವಿಷಯಸೂಚಿಕೆ.

—:o:—

### I. Alphabetical List of Poets.

ಈ ಸಂಪುಟದಲ್ಲಿ ಹೇಳಿರುವ ಕರ್ಣಾಟಕ ಕವಿಗಳ ವರ್ಣಾನುಕ್ರಮವಾದ ಹೆಸರುಗಳು.

* ಈ ಗುರುತಿರುವ ಕವಿಗಳು ಶಾಸನಗಳನ್ನು ಬರೆದಿದ್ದಾರೆ.



ಮೈಸೂರು ಸಂಸ್ಥಾನದ ಮಹಾಪ್ರಭುಗಳಾದ
ಶ್ರೀ ಕೃಷ್ಣರಾಜ ಒಡೆಯಾರ್ ಬಹಾದುರ್
ಜಿ.ಸಿ.ಎಸ್.ಐ., ಜಿ.ಬಿ.ಇ.

*Dedicated*

*By Gracious Permission*

*to*

*His Highness*

*Sri Krishna Raja Odeyar Bahadur*

*G.C.S.I., G.B.E.,*

*Maharaja of Mysore.*

---

ಈ ಸಂಪುಟವು

ಮೈಸೂರು ಸಂಸ್ಥಾನದ ಮಹಾಪ್ರಭುಗಳಾದ

ಶ್ರೀಕೃಷ್ಣರಾಜ ಒಡೆಯರ್ ಬಹಾದುರ್

ಜಿ.ಸಿ.ಎಸ್.ಐ., ಜಿ.ಬಿ.ಇ.,

ಮಹಾಸ್ವಾಮಿಯವರಿಗೆ

ಅಪ್ಪಣೆಯನ್ನು ಪಡೆದು

ಅರ್ಪಿಸಲ್ಪಟ್ಟಿದೆ

# Extracts from

## Opinions on Volume I ( Revised Edition ) of the Karnataka Kavicharite or Lives of Kannada Poets, and on Sasana-padya-manjari.

The revised edition of Volume I of your Karnataka-Kavicharite is a vast improvement on the original. The Introduction is admirable, and I see that several criticisms have arisen regarding points in your work, of which you take notice. The inclusion of the inscription in the Bijapur Museum is interesting. I am very glad to hear that Volume III is near completion and hope soon to welcome a copy. The whole work will perpetuate your name as a benefactor to the Kannada speaking peoples.

*Mr. B. Lewis Rice, C.I.E.*

Let me offer you my hearty congratulations on the new edition of this most useful book; the reprinting shows that there is a real demand for good things in literature.

*Dr. L. D. Barnett.*

I am very glad you have already been able to issue this new edition, and to embody in it the fuller information your researches have brought to light, and your latest judgment on points still obscure.

When one recalls the state of our knowledge of Kanarese literature as recently as 50 years ago, when it consisted of a mass of material unclassified, mostly undated, by authors of whose personal history and times we knew nothing, and largely in manuscript form, difficult of access and difficult to read; and then turns to your volumes and finds a vast fund of information about each author, and all displayed luminously in chronological order, one cannot but be grateful for the splendid foundation that has thus been laid for the studies of all future Kanarese scholars. Together with the historical knowledge also obtained of the same period, it enables us to follow in detail the development of the genius of the Kanarese people. For your very large contribution to this result we are deeply grateful.

*Rev. E. P. Rice, B.A.*

You have certainly added a good deal of information about the Vachana Literature in your new volume. In the preface you have referred to some comments made against you in certain newspapers of this part. When I read them, I felt very great pain as they were entirely undeserved. They should have applauded you for your work.

*Mr P. G. Halkatti, B.A., LL B.*

No scholar has devoted more zeal and ability to the study of ancient Kanarese literature and history than Rao Bahadur Narasimhacharya, and it is gratifying to see in the appearance of a second and enlarged edition of his admirable *Karnataka-Kavi-Charite* a proof that his labours have succeeded in arousing a fitting interest is this pleasant *hortus Musarum*. The work, as students of Kanarese know, gives what is known of the lives of the poets in their chronological order, with specimens of their verses, where time has spared them, beginning with Samantabhadra (*C.* 400); and this new edition has been enlarged by the addition of notices of about fifty more poets, chiefly composers of inscriptions, thus marking a notable advance.—*Journal of the Royal Asiatic Society of Great Britain and Ireland.*

The history of the Kannada language and the treasures of its literature are collected together in the volumes dealing with the Lives of Kannada poets. Great as has been the distinguished services of Mr. Narasimhachar in the cause of antiquarian research, especially in Southern India, his contributions to our stock of knowledge of the Kannada



language itself are still more great. It is gratifying to note that the "Lives" appears as a Mysore University Publication and its get-up leaves nothing to be desired.

*Mythic Society Journal.*

ತಾವು ಕರ್ಣಾಟಕ ಪ್ರಾಣಸ್ವರೂಪವಾದ ಬಹು ಪ್ರಾಚೀನಕಾಲದ ಕಾಳವಾಲಿಯ ಗ್ರಂಥಗಳನ್ನೂ ತಾಮ್ರಶಿಲಾಲೇಖಗಳನ್ನೂ ಅತ್ಯಗಾಧಮಾನಸಿಕ, ಶಾರೀರಕಶ್ರಮಪಟ್ಟು ಶೋಧಿಸಿ ಲೌಕಿಕ ಪಾರಮಾರ್ಥಿಕ ತತ್ವಜ್ಞರು ಮೆಚ್ಚಿ ಸಾನಂದಾಶ್ಚರ್ಯಪಡುವಂಥ ಸಾರತರವಾದ ವಿಷಯಗಳನ್ನೇ ಸಾದರಿಗಾಗಿ ಸಂಗ್ರಹಿಸಿ ಸರ್ವಾಂಗ ಸುಂದರವಾದ ಕರ್ಣಾಟಕ ಕವಿಚರಿತೆ ಎಂಬ ಹೆಸರಿಟ್ಟು ಕರ್ಣಾಟಕ ಭಾಷಾಮಾತೆಯ ಸೀಮಂತ ರತ್ನದಂತೆ ಕನ್ನಡಿಗರ ಕರಭೂಷಣವಾಗುವಂತೆ ಮಾಡಿರುವಿರಿ. ತಾವು ೩೦ ವರುಷಗಳಿಂದಲೂ ಭಾಷಾಸೇವೆಗಾಗಿ ಶ್ರಮಪಡುತ್ತಿರುವುದು ಈಗಿನ ನಮ್ಮಂಥ ಕನ್ನಡ ಭಾಷಾನವಸೇವಕರಿಗೆ ಒಂದು ತರದ ನವಚೈತನ್ಯವನ್ನುಂಟುಮಾಡತಕ್ಕ ಮಾದರಿಯ ಉದಾಹರಣೆಯಾಗಿದೆ. ಇಂಥ ಮಹತ್ವಗ್ರಂಥವನ್ನು ರಚಿಸಿರುವ ತಮಗೆ ಪ್ರತಿಯೊಬ್ಬ ಕರ್ಣಾಟಕನೂ ಋಣಿಯಾಗಿದ್ದಾನೆ.

ದಾವಣಗೆರೆ ಸಿರಾನಿಮಠದ ಶಾಂತವೀರಾರ್ಯರು.

ಒಟ್ಟಿನಮೇಲೆ ವಿಚಾರಮಾಡಿ ನೋಡಿದರೆ ಕರ್ಣಾಟಕ ಭಾಷಾಭಿವೃದ್ಧಿಗೆ ಅನೇಕ ಮುಖವಾಗಿ ನುಗ್ಗಿ ಭಾಷಾಸೇವೆಯನ್ನು ಮಾಡಬೇಕೆಂಬ ಕುತೂಹಲವೂ ಕನ್ನಡಭಾಷೆಗೆ ಹಿಂದಿನಿಂದಲೂ ಎಷ್ಟು ಗೌರವವು ದೊರಕಿರುತ್ತದೆ ಎಂಬ ವಿಷಯವೂ ಇವೇ ಮೊದಲಾದ ಅಸಂಖ್ಯ ವಿಷಯಗಳ ತಿಳುವಳಿಕೆಗೆ ಮೂಲಪುರುಷರು ತಾವೇ ಆಗಿರುತ್ತೀರೆಂದು ಹೇಳಲು ಆವ ಅಡ್ಡಿಯೂ ಇಲ್ಲ. ಕನ್ನಡಕ್ಕೆ ತಮ್ಮನ್ನು "ಅಭಿನವ ಕನ್ನಡಸೀಮಾ ಪುರುಷ" ಎಂದು ಕನ್ನಡ ನಾಡೇ ಕೈಯೆತ್ತಿ ಸಾರಬಲ್ಲದು. ಇಂಥಾದ್ದರಲ್ಲಿ ಅಭಿಮಾನಶಾಲಿಗಳಾದ ಚೇರಿಗೆ ಬಸವಲಿಂಗಪ್ಪನವರು ಸ್ತವನವನ್ನು ರಚಿಸಿರುವುದು ಯುಕ್ತವೇಸರಿ.

ಎತ್ತಿಗದ ಮಠದ ದೊಡ್ಡರಾಮಾರಾಧ್ಯರು.

ಕನ್ನಡ ಭಾಷಾಭಿಮಾನಿಗಳಲ್ಲಿ ಈ ಗ್ರಂಥವನ್ನು (ಕರ್ನಾಟಕ ಕವಿಚರಿತೆಯನ್ನು) ಅರಿಯದವರು ಯಾರೂ ಇರಲಾರರೆಂದು ಹೇಳಿದರೆ ಅತ್ಯುಕ್ತಿಯಾಗ

ಬಗ್ಗೆ ಇರುವ ಘಟನೆಗಳ ಪಟ್ಟಿ, ಪ್ರಶಸ್ತಿ, ಬಹುಮಾನಗಳ ಪಟ್ಟಿ, ಇತ್ಯಾದಿ ಕೊಟ್ಟರೆ ಆ ಪುಸ್ತಕದ ಮೆರಗು ಹೆಚ್ಚಾಗುತ್ತದೆ. ಹೆಚ್ಚಾಗಿ ಈ ಎಲ್ಲ ಘಟನೆಗಳು ಪುಸ್ತಕದ ಕೊನೆಗೆ ಕಟ್ಟಿಯಾಗಿ ನೀಡಲ್ಪಟ್ಟಿರುತ್ತವೆ. ಅವರ ಕೃತಿಗಳ ಕುರಿತು ಇರಬಹುದು.

ಹೀಗೆ ಸ್ಮರಣ, ಸಂಸ್ಮರಣ, ಆತ್ಮಚರಿತ್ರೆಗಳು ಕನ್ನಡ ಸಾಹಿತ್ಯತದಲ್ಲಿ ಬೆಳೆದು ಬಂದಿವೆ.

i) ನನ್ನ ಬರಹಗಳು (೧೯೭೨) ಗುರುರಾಜ ಭಟ್ಟ

ii) ಚಂಪಾ ಸಾಹಿತ್ಯ (೧೯೯೨) ಚಂದ್ರಶೇಖರ ಪಾಟೀಲ

iii) ಉರಿ ಬರಲಿ ಸಿರಿ ಬರಲಿ (೧೯೯೮) ಆರ್. ಸಿ. ಹಿರೇಮಠ

iv) ಹುಳಿ ಮಾವಿನ ಮರ (೧೯೯೬) ಪಿ. ಲಂಕೇಶ

v) ಭಾವ –ಮಾಸ್ತಿ, ೩ ಸಂಪುಟಗಳಲ್ಲಿ

vi) ಹೋರಾಟದ ಬದುಕು –ದೇಜಗೌ

vii) ಕೊಟ್ರ ಹೈಸ್ಕೂಲ್ ಸೇರಿದ್ದು –ಕುಂ. ವೀರಭದ್ರಪ್ಪ (ಆತ್ಮಚರಿತ್ರಾತ್ಮಕ ಕಾದಂಬರಿ)

ಮುಂತಾದ ಕೃತಿಗಳ ಮೂಲಕ ಸ್ಮರಣ, ಸಂಸ್ಮರಣ ಮತ್ತು ಆತ್ಮಚರಿತ್ರೆಗಳು ಕನ್ನಡ ಸಾಹಿತ್ಯಕ್ಕೆ ಹೊಸ ಮೆರಗನ್ನು ನೀಡಿದೆ.

ಕನ್ನಡ ಸಂಸ್ಮರಣ ಗ್ರಂಥಗಳ ಪಟ್ಟಿಯು ದೊಡ್ಡದಿದೆ.

i) ಗೋವಿಂದ ಪೈ –ವಾಙ್ಮಯ ದರ್ಶನ (೧೯೬೬)

ii) ಗೋಕಾಕ –ಗ್ರಂಥಾವಳಿ (೧೯೮೦) –ಹಾ. ಮಾ. ನಾಯಕ

iii) ಹಾಮಾನಾ –ಹೊತ್ತಗೆಗಳು (೧೯೯೧) –ಎಚ್. ಎಸ್. ಸುಜಾತಾ

iv) 'ಕೃತಿ ಕರಂಡ' (೧೯೯೧) –ಶೇಖರ ಇಡ್ಯ

v) 'ಕೃತಿ ಪರಿಚಯ' (೨೦೦೨) –ಸಿ. ಆರ್. ಚಂದ್ರಶೇಖರ್

vi) ಹಾಮಾನಾ ಅವರನ್ನು ಕುರಿತು –ಎನ್. ಎಸ್. ಶಾರದಾಪ್ರಸಾದ್ (೧೯೯೧)

vii) ಸಿ. ಪಿ. ಕೆ. ಇನ್ನೂರು ಇನ್ನಷ್ಟು (೨೦೦೧)

ಇವೆಲ್ಲ ಒಂದು ಗುಂಪಿನ ಪುಸ್ತಕಗಳಾಗಿದ್ದು, ಒಂದು ಕಾಲಘಟ್ಟವನ್ನು ಮುಗಿಸಿದ ಲೇಖಕರ ಸ್ಮರಣೆಗಾಗಿ ಇಂಥಹ ಕೃತಿಗಳು ಪ್ರಕಟವಾಗಿರುತ್ತವೆ. ಇಲ್ಲಿ ಲೇಖಕರ ಬಗ್ಗೆ ಅಭಿಮಾನಿಗಳು ಬರೆದು ಪ್ರಕಟಿಸಿದ ಗ್ರಂಥಗಳಾಗಿರಬಹುದು. ಇಂಥ ಗ್ರಂಥಗಳಲ್ಲಿ ಬೇರೆ ಬೇರೆ ಲೇಖಕರು ತಮ್ಮ ನೆಚ್ಚಿನ ಸಾಹಿತಿಗಳ ಕುರಿತಾದ ಸ್ಮೃತಿಗಳು, ಸಂತಸದ ಕ್ಷಣಗಳನ್ನು ಕುರಿತು, ಒಂದು ವಿಶೇಷ ನೆಪಮಾಡಿಕೊಂಡು ಲೇಖನಗಳು ಬರೆಯಲ್ಪಟ್ಟಿರುತ್ತವೆ. ಇಲ್ಲಿ ಲೇಖಕರಿಗೆ

ಸ್ವತಃ ತಮ್ಮ ಬಗ್ಗೆ ಹೇಳಿಕೊಳ್ಳಲು ಹೆಚ್ಚಿನ ಅವಕಾಶಗಳಿರುವುದಿಲ್ಲ. ಆ ಎಲ್ಲ ಅವಕಾಶಗಳು ಆತ್ಮಚರಿತ್ರೆಗಳಲ್ಲಿ ಹೇಳಲು ಹೆಚ್ಚಿನ ಅವಕಾಶಗಳನ್ನು ದೊರಕಿಸಿಕೊಳ್ಳಬುದು. ಅಂತಹ ಅನೇಕ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಹೇರಳವಾಗಿ ಹುಟ್ಟಿವೆ. ಸಂಶೋಧನಾ ಸಂಪ್ರಬಂಧ ಬರೆಯುವಷ್ಟು ಅವಕಾಶಗಳನ್ನು ದಕ್ಕಿಸಿಗೊಳ್ಳಬಹುದು.

## ೪.೨.೧೦ : ಶಾಸನ ಪದಸೂಚಿ

ಈಗಾಗಲೇ ಈ ಕುರಿತು ಚರ್ಚಿಸಲಾಗಿದೆಯಾದರೂ ಆ ಚರ್ಚೆ ಅಪೂರ್ಣವೆಂದೆನಿಸಿ ಕನ್ನಡದಲ್ಲಿ ಸಿಕ್ಕ ಕೆಲವು ಲೇಖನಗಳಿಂದ ಮತ್ತೆ ಈ ಬಗ್ಗೆ ವಿವರಗಳನ್ನು ನೀಡಬಹುದೆನಿಸಿದೆ. ಈಗಾಗಲೇ ಎಸ್. ರಾಜಶೇಖರ ಅವರ 'ವಿಜಯನಗರ ಕಾಲದ ಘಟನಾವಳಿ ಸೂಚಿ' ಯನ್ನು ನಾವು ನೋಡಿದ್ದೇವೆ.

"ಶಾಸನ ಪದಸೂಚಿ" ಎಂದರೆ ಶಾಸನಗಳಲ್ಲಿ ಉಪಯೋಗಿಸಿದ ಶಬ್ದಗಳ ನಿರ್ದೇಶಿ ಇದಾಗಿದ್ದು ಇಂತಹ ಅನೇಕ ಅಧ್ಯಯನಗಳು ಕನ್ನಡದಲ್ಲಿ ನಡೆದು ಕುತೂಹಲಕಾರಕ ಅಂಶಗಳನ್ನು ನಮ್ಮ ಮುಂದೆ ಇಡುತ್ತಾರೆ. ಶಾಸನಗಳ ಅಧ್ಯಯನಗಳಲ್ಲಿ ಅಭ್ಯಾಸ ಮಾಡುವ ಸಂಶೋಧಕರಿಗೆ, ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೂ ಇವು ಉಪಯೋಗವಾಗುತ್ತವೆ. ಯಾರು ಶಾಸನಗಳ ಅಭ್ಯಾಸದಲ್ಲಿ ತೊಡಗಿಕೊಂಡಿದ್ದಾರೆ ಅಂತಹವರಿಗೂ ಇನ್ನೂ ಹೆಚ್ಚಿನ ಉಪಯೋಗ ಶಾಸನಪದಸೂಚಿಗಳಿಂದ ದೊರಕುತ್ತದೆ.

ದಕ್ಷಿಣ ಭಾರತದ ಶಾಸನಗಳು ಸಂಪುಟ IX ಭಾಗ - ೧ ರಲ್ಲಿನ ಕೆಲವು ಶಾಸನಪದಸೂಚಿಗಳನ್ನು ಕರ್ನಾಟಕ ಭಾರತಿ ಸಂಚಿಕೆ - ೨ - ೪. ೧೯೮೯ - ೭೧ ರಲ್ಲಿ ಈ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ. ಇಲ್ಲಿ ಬರುವ ಎಲ್ಲ ಪದಗಳನ್ನು ಗಂಡು, ಹೆಣ್ಣು, ದೇವರು, ಆಡಳಿತ ಮುಖ್ಯಸ್ಥರು, ರಾಜ, ಕವಿ, ಸ್ಥಳ, ಮೇಲ್ವರ್ಗದ ಕುಟುಂಬ, ರಾಜಧಾನಿ, ಹಳ್ಳಿಗಳಿಗೂ ನಿರ್ದೇಶಿಗಳನ್ನು ನೀಡಲಾಗಿದೆ. ಇದೇ ಆಧಾರದ ಮೇಲೆ ಡಾ. ಚನ್ನಕ್ಕ ಯಲಿಕಾರರು ಶಾಸನಪದಸೂಚಿಯನ್ನು ಕರ್ನಾಟಕ, ಭಾರತಿ, ಸಂಪುಟ ೧೦ ಮತ್ತು ೧೧ ರಲ್ಲಿ ೧೯೭೭ ರಲ್ಲಿ ಪ್ರಕಟಿಸಿದ್ದಾರೆ. ಡಾ. ಎಸ್. ಶೆಟ್ಟರ್ ಮತ್ತು ಎಸ್. ರಾಜಶೇಖರ ಜೊತೆಗೂಡಿ ಕರ್ನಾಟಕ ಭಾರತಿ, ಸಂಪುಟ ೭ - ೮ ರಲ್ಲಿ ಸುಮಾರು ೮ ಸಂಚಿಕೆಗಳಲ್ಲಿ ೧೯೭೪, ೧೯೭೫, ೧೯೭೬ ರಲ್ಲಿ ಪ್ರಕಟಿಸಿದ್ದಾರೆ.

## ೪.೨.೧.೧ : ಕನ್ನಡ ಭಾಷಾ ಸಾಹಿತ್ಯ ಲೇಖನ (೧೯೭೩)

ಟಿ. ವಿ. ವೆಂಕಟರಮಣಯ್ಯನವರ " ಕನ್ನಡ ಭಾಷಾ ಸಾಹಿತ್ಯ ಲೇಖನ ಸೂಚಿ ನಿರ್ದೇಶಿಕೆಗೊಂದು ಮೈಲಿಗಲ್ಲು. ಕನ್ನಡ ಭಾಷೆ ಮತ್ತು ಸಾಹಿತ್ಯ ಕುರಿತು ಬರೆದ ಲೇಖನಗಳನ್ನು ಒಗ್ಗೂಡಿಸಿ, ಅವುಗಳು ಒಮ್ಮೊಮ್ಮೆ ಅನೇಕ ನಿಯತಕಾಲಿಕೆಗಳಲ್ಲಿ ಹಂಚಿಹೋಗಿರುತ್ತವೆ. ಲೇಖಕ ಟಿ. ವಿ. ವೆಂಕಟರಮಣಯ್ಯ ಅನೇಕ ನಿಯತಕಾಲಿಕೆಗಳಲ್ಲಿ,

ಪತ್ರಿಕೆಗಳಲ್ಲಿ ಹಂಚಿ ಹೋದ ಕನ್ನಡ ಭಾಷೆಗಳ ಲೇಖನಗಳನ್ನು ಒಂದೇ ಕಡೆ ಬರುವಂತೆ ಸಂಕಲಿಸಿದ್ದಾರೆ. ಲೇಖನ ಶೀರ್ಷಿಕೆ, ಲೇಖನ ನಿರ್ದೇಶಿಯನ್ನು ಇದು ಒಳಗೊಂಡಿರುತ್ತದೆ. ಇದರ ಮಿತಿಯೆಂದರೆ ಕನ್ನಡ ಭಾಷೆ ಮತ್ತು ಕನ್ನಡ ಸಾಹಿತ್ಯಕ್ಕೆ ಈ ಕೃತಿ ಮೀಸಲಾಗಿದೆ.

ಇದರ ವಿಶೇಷತೆಯೆಂದರೆ ಪ್ರತಿವರ್ಷವು ಇಂಥ ಲೇಖನಗಳನ್ನು ಬರೆಯಿಸಿ ಸಾಹಿತ್ಯ ವಾರ್ಷಿಕದಲ್ಲಿ (ಬೆಂಗಳೂರು, ವಿಶ್ವವಿದ್ಯಾಲಯ ಪ್ರಕಟಣೆ) ಪ್ರಕಟಿಸುತ್ತಿದ್ದರು.

## ೪.೨.೧೦.೨ : ಸಂಕ್ರಮಣ ಶತಕ : ಡಾ. ಆರ್. ಕರಿಸಿದ್ದಪ್ಪ ೧೯೮೧

ಸಂಕ್ರಮಣ ಸಾಹಿತ್ಯ ಪತ್ರಿಕೆ ೧ ರಿಂದ ೧೦೦ (೧೯೬೪ - ೧೯೮೦) ಸಂಚಿಕೆಗಳ ಲೇಖನ ಸೂಚಿ ಹಾಗೂ ಲೇಖನ ನಿರ್ದೇಶಿಯನ್ನು ಡಾ. ಸಿ. ಆರ್. ಕರಿಸಿದ್ದಪ್ಪ ರಚಿಸಿ ೧೯೮೧ ರಲ್ಲಿ ಸಂಕ್ರಮಣ ಪ್ರಕಾಶನ ಧಾರವಾಡ ಅವರು ಪ್ರಕಟಿಸಿದ್ದಾರೆ.

ಇಲ್ಲಿ ನೂರು ಸಂಚಿಕೆಗಳಲ್ಲಿ ಪ್ರಕಟವಾದ ಕನ್ನಡ ಭಾಷೆಯ ಸಾಹಿತ್ಯದ ನೋಟ ಸಿಗುತ್ತದೆ. ಆಳವಾದ ಅಧ್ಯಯನ, ಅನುಭವಗಳಿಂದ ಅವುಗಳ ಪಟ್ಟಿಕೆಗಳನ್ನು ತಯಾರು ಮಾಡಿದ್ದಾರೆ. ನಂತರ ಅವುಗಳ ಬಗ್ಗೆ ಬಂದ ವಿಮರ್ಶೆ, ಕ್ರಿಯೆ, ಪ್ರತಿಕ್ರಿಯೆಗಳಿಗೆ, ಉತ್ತರ - ಮಾರುತ್ತರಗಳನ್ನು ಸಂಬಂಧಿಸಿದ ಲೇಖಿಯ ಸಂಗಡವೇ ಅ, ಬ, ಕ, ಡ..... ಎಂಬ ಸಂಕೇತಗಳ ಮೂಲಕ ತಿಳಿಯಪಡಿಸಿದ್ದಾರೆ. ಸೂಚಿಯ ಎಲ್ಲ ಲೇಖಿಗಳು ಕ್ರಮಸಂಖ್ಯೆಯನ್ನು ಹೊಂದಿರುತ್ತವೆ.

ಮಾದರಿ ಲೇಖಿ :

ಕವನ

ಅಕಬರ ಅಲಿ ಎಂ

ಗಾಮರ

೧(೨)೨; ಅಕ್ಟೋಬರ ೧೯೭೪; ೪೯ - ೫೦

**ಲೇಖಕ ನಿರ್ದೇಶಿ :**

ಲೇಖಕ ನಿರ್ದೇಶಿಯು ಸಂಕ್ರಮಣ ಲೇಖಕರ ಸ್ವಂತ ಬರವಣಿಗೆಗಳನ್ನು ಮತ್ತು ಇತರೆಯವರು ಅವರ ಬಗ್ಗೆ ಮತ್ತು ಅವರ ಕೃತಿಗಳ ಬಗ್ಗೆ ಬರೆದಿರುವ ಎಲ್ಲಾ ಲೇಖನಗಳನ್ನು ಒಂದು ಕಡೆ ಕೂಡಿಡುತ್ತದೆ. ಸಂಕ್ರಮಣ ಶತಕ ಸೂಚಿಯ ಕ್ರಮ ಸಂಚಿಕೆಗಳನ್ನೂ ಈ ನಿರ್ದೇಶಿಯ ಸಂದರ್ಭ ಸಂಖ್ಯೆ (Referencenumber) ಗಳನ್ನೂ ಮಾಡಿಕೊಂಡಿದೆ.

# ಸಂಕ್ರಮಣ ಶತಕ

ಸಂಕ್ರಮಣ ಸಾಹಿತ್ಯ ಪತ್ರಿಕೆಯ
೧ ರಿಂದ ೧೦೦ (೧೯೬೪-೧೯೮೦) ಸಂಚಿಕೆಗಳ
ಲೇಖನ-ಸೂಚಿ ಹಾಗೂ ಲೇಖಕ-ನಿರ್ದೇಶಿ

ಸಿ. ಆರ್. ಕರಿಸಿದ್ದಪ್ಪ

೧೯೮೧

ಸಂಕ್ರಮಣ ಪ್ರಕಾಶನ, ಧಾರವಾಡ-೫೮೦ ೦೦೮

## ಪರಿವಿಡಿ



## ಕವನ

1. ಅಕಬರ ಅಲಿ (ಎಂ).
ಗಾಳಿಮರ.
೧(೨)೨; ಅಕ್ಟೋ ೧೯೬೪; ೪೯-೫೦

2. ——
ಲೋಕವೇ ಸಾಕ್ಷಿ.
೧(೬)೬; ಜೂನ ೧೯೬೫; ೩೧-೩೨

3. ——
ಗಾಳಿ-ಕೋಳಿ.
೨(೫)೧೧; ಏಪ್ರಿಲ ೧೯೬೬: ೪೫

4. ——
ಯಾರೆಂತು ಕೊರೆದರೋ ಚಲುವಿನೀ ನಕ್ಷೆಯ !
೩(೩)೧೫; ಡಿಶೆಂ ೧೯೬೬; ೫-೬

5. ಅರ್ಕಸಾಲಿ (ವೃಷಭೇಂದ್ರ).
ಇಲ್ಲವೆ ? ತಂದೆ ! ಇಲ್ಲವೆ ?
೧೫(೮) ೯೬; ಜನ ೧೯೮೦; ೪೫೫

6. ಅಡಿಗ (ಎಂ ಗೋಪಾಲಕೃಷ್ಣ).
ಪ್ರಾರ್ಥನೆ.
೧(೬)೬; ಜೂನ ೧೯೬೫; ೯-೧೧

7. ಅಡಿಗ (ಟಿ ಎಲ್ ಸುಬ್ರಹ್ಮಣ್ಯ).
ದಾಹ.
೪(೪)೨೨; ಫೆಬ್ರು ೧೯೬೮; ೨೧-೨೨

8. ಅಣಿವಿ (ಸತ್ಯನಾರಾಯಣರಾವ್).
ಹಿಂದು ಮುಂದಿನ ಹೆಜ್ಜೆ.
೪(೨)೨೦: ಅಕ್ಟೋ ೧೯೬೭; ೪೨

9. ——
ಒಂಟಿಮಂಗ್ಗ.
೬(೩)೩೩; ಡಿಶೆಂ ೧೯೬೯; ೩೫-೩೬

10. ——
ಬಾತು.
೭(೧)೩೭; ಅಗಸ್ಟ ೧೯೭೦; ೭೩-೭೪

11. ——
ಪ್ರಾಯ.
೯(೨)೫೦; ಅಕ್ಟೋ ೧೯೭೨; ೬೨

12. ——
ಸರ್ವಜ್ಞ.
೧೧(೨)೬೨; ಅಕ್ಟೋ ೧೯೭೪; ೬೪

13. ಅಕ್ತಾರ (ಬಾಬಾಜಾನ).
ಭುಂಗಾ.
೧೩(೩)೭೩ ಅಕ್ಟೋ-ನ ೧೯೭೭: ೭-೮

14. ಅನಂತಮೂರ್ತಿ (ಯು ಆರ್).
ಮೋಹಿನಿ.
೧(೬)೬; ಜೂನ ೧೯೬೫; ೩೩-೩೪

15. ——
ಬಾವಲಿ.
೨(೩)೯; ಡಿಶೆಂ ೧೯೬೫; ೩-೪

16 ಅನವಟ್ಟಿ (ರಾಜೇಶ್ವರಿ).
ಆದರೆ.
೧೨(೪)೬೮; ಡಿಶೆಂ-ಜನ ೧೯೭೭; ೪೪

ಸಂದರ್ಭ ಸಂಖ್ಯೆಯು ಸಾದಾ ರೂಪದಲ್ಲಿ ಮುದ್ರಿತವಾಗಿದ್ದರೆ ಅದು ಲೇಖಕನ ಸ್ವಂತ ಬರವಣಿಗೆಯೆಂದೂ ಮತ್ತು ಆವರಣದಲ್ಲಿ ಮುದ್ರಿತವಾಗಿದ್ದರೆ ಅದು ಲೇಖಕನ ಬಗ್ಗೆ ಮತ್ತು ಅವನ ಕೃತಿಗಳ ಬಗ್ಗೆ ಇತರರು ಬರೆದ ಲೇಖನವೆಂದೂ ತಿಳಿದುಕೊಳ್ಳಬೇಕು.

**ಮಾದರಿ ಲೇಖಕ :**

ಕಣವಿ ಚನ್ನವೀರ.

೭೬. ೭೭. ೭೮. ೭೯. ೮೦. ೬೭೨. ೬೯೫. (೧೭೭೧). (೭೧೨). ೭೨೦. ೧೧೩೮. ೧೧೬೧

ವಿಪುಲವಾಗಿ ಬೆಳೆಯುತ್ತಿರುವ ಕನ್ನಡ ಸಾಹಿತ್ಯಕ್ಕೆ ಲೇಖನ ಸೂಚಿಗಳನ್ನು ರಚಿಸುವ ಅಗತ್ಯತೆಯ ಬಗ್ಗೆ ಹೇಳುವದಾದರೆ ಇದು ಅತ್ಯಂತ ವೈಜ್ಞಾನಿಕವಾಗಿ, ಸೈದ್ಧಾಂತಿಕವಾಗಿ ರಚಿಸಲ್ಪಟ್ಟ ನಿಯತಕಾಲಿಕೆ ಲೇಖನಸೂಚಿ ಇದೆಂದು ಧೈರ್ಯವಾಗಿ ಹೇಳಬಹುದು.

## ೪.೨.೧೦.೩ : ಜಯಂತಿ ಲೇಖಕರ ಸೂಚಿ

ಅನಿಲ ಧಾರವಾಡಕರ ಸಂಗ್ರಹಿಸಿದ ಜಯಂತಿ ಲೇಖಕರ ಸೂಚಿಯು; ಕರ್ನಾಟಕದಲ್ಲಿ ಮೊದಲನೆಯ ತಲೆಮಾರು ಲೇಖಕರ ಲೇಖನ ಸೂಚಿಗಳನ್ನು ಒಳಗೊಂಡಿದೆ. ಪ್ರೊ. ಶಿ. ಶಿ. ಬಸವನಾಳ, ಕೆ. ಜಿ. ಕುಂದಣಕಾರ, ಶಿ. ಚ. ನಂದೀಮಠ, ಪ್ರೊ. ಸಂ. ಶಿ. ಭೂಸನೂರಮಠ, ಸ. ಸ. ಮಾಳವಾಡ, ಸಂಗಣ್ಣ ಕುಪ್ಪಸದ, ಶಿವರಾಮ ಕಾರಂತ, ದ. ರಾ. ಬೇಂದ್ರೆ ಯವರಂಥವರು ತಮ್ಮ ಬರಹಗಳನ್ನು ಪ್ರಕಟಿಸಲು ಜಯಂತಿಯನ್ನು ಬಳಸಿಕೊಳ್ಳುತ್ತಿದ್ದರು. ಕವಿಭೂಷಣ ಬೆಟಗೇರಿ ಕೃಷ್ಣಶರ್ಮರು ೧೯೩೮ ರಲ್ಲಿ ಈ ಪತ್ರಿಕೆಯನ್ನು ಪ್ರಾರಂಭಿಸಿದ್ದರು.

ಜಯಂತಿಯ ಎಲ್ಲ ಸಂಪುಟಗಳನ್ನು ಸಂಗ್ರಹಿಸಿ, ಪರಾಮರ್ಶಿಸಿ, ಈ ಸೂಚಿಯನ್ನು ತಯಾರಿಸಿದುದು ಅವರು ಪಟ್ಟ ಶ್ರಮ ಮತ್ತು ವಹಿಸಿದ ಶ್ರದ್ಧೆಯ ಧ್ಯೋತಕವಾಗಿದೆ. ಬೆಟಗೇರಿ ಕೃಷ್ಣಶರ್ಮರ ಜೀವನ ಮತ್ತು ಸಾಹಿತ್ಯ ಸಾಧನೆಗಳನ್ನು ಕುರಿತ ಪ್ರಬಂಧವನ್ನು ಸೇರಿಸಿದುದು ತುಂಬಾ ಉಪಯುಕ್ತವಾಗಿದೆ. ಈ ಪುಸ್ತಕದ ಕೊನೆಯಲ್ಲಿ ಲೇಖಕರ ಅನುಬಂಧವನ್ನು ಸೇರಿಸಿದ್ದರೆ, ಈ ಗ್ರಂಥದ ಉಪಯುಕ್ತತೆ ಇನ್ನೂ ಹೆಚ್ಚುತ್ತಲಿತ್ತು. ೧೯೮೨ ರಲ್ಲಿ ' ಸತ್ಯದೀಪ ', ಸಾರಸ್ವತಪುರ, ಧಾರವಾಡ ಇದರ ಪ್ರಕಾಶಕರು.

### ೪.೨.೧.೪ : ಸಂಶೋಧನಾ ಪ್ರಬಂಧ ಸೂಚಿ - ೧೯೯೮

' ಸಂಶೋಧನಾ ವ್ಯಾಸಂಗ ' ದ್ವೈಮಾಸಿಕ ಪುಟ್ಟ ಪತ್ರಿಕೆಯೊಂದು ಕನ್ನಡ ಸಂಶೋಧನಾ ಕ್ಷೇತ್ರದ ಜಂಗಮವಾಗಿ ರಾಷ್ಟ್ರದಾದ್ಯಂತ ಅಷ್ಟೇ ಏಕೆ ಅಮೇರಿಕೆಯ ಕೆಲವು ವಾಚನಾಲಯಗಳಲ್ಲಿ ಕೂಡ ಇದೆಯೆಂದರೆ ಆಶ್ಚರ್ಯವಾಗಲಾರದೆ

ಇರದು. ೧೯೮೮ ರಲ್ಲಿ ಇದು ಪ್ರಾರಂಭವಾಯಿತು. ಇದರ ಸಂಪಾದಕರು ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಾಧ್ಯಾಪಕರಾದ ಡಾ. ಸಂಗಮೇಶ ಸವದತ್ತಿಮಠರು. ಹತ್ತನೆಯ ವರ್ಷದ ವಿಶೇಷ ಸಂಚಿಕೆಯನ್ನು ಹೊರಡಿಸಲು ನಿರ್ಧರಿಸಿದಾಗ ಕನ್ನಡದಲ್ಲಿ ಈವರೆಗಾದ ಪಿಎಚ್.ಡಿ., ಎಂ.ಫಿಲ್., ಡಿ.ಲಿಟ್. ಮುಂತಾದ ಸಂಶೋಧನಾ ಪದವಿಗಳಿಗೆ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಸಾದರಪಡಿಸಲಾದ ಸಂಶೋಧನ ಪ್ರಬಂಧಗಳ ಸೂಚಿಯನ್ನು ಪ್ರಕಟಿಸುವ ನಿರ್ಧಾರ ತುಂಬ ಉಪಯುಪ್ತವಾದುದು. ಇಂತಹ ಮಾಹಿತಿಯು ಕನ್ನಡದ ಉಳಿದ ಸಾಹಿತ್ಯಿಕ ಪತ್ರಿಕೆಗಳಲ್ಲಿ ಕಂಡುಬಂದಿಲ್ಲ. ಈಗ ಹಂಪಿ ಕನ್ನಡ ವಿಶ್ವವಿದ್ಯಾಲಯವು ಚೆಲುವ ಕನ್ನಡದಲ್ಲಿ ವಿಶ್ವವಿದ್ಯಾಲಯದ ಪದವಿ ಪಡೆದವರ ವಿವರ ಕೊಡುತ್ತಿದೆ. ಸಂಶೋಧನಾ ವ್ಯಾಸಂಗದಲ್ಲಿ ಆಯಾ ವರ್ಷ ಪ್ರಕಟವಾದ ಪದವಿಗಳ ಪಟ್ಟಿಯಲ್ಲಿ ಇಲ್ಲಿ ಒಗ್ಗೂಡಿಸಿ ಕೊಟ್ಟಿರುವದು ಸಂಶೋಧಕರಿಗದೊಂದು ಕನ್ನಡಿಯಾಗಿದೆ.

| ಅ.ಸಂ. | ವಿಶ್ವವಿದ್ಯಾಲಯಗಳ ಹೆಸರು | ಪಿಎಚ್.ಡಿ. | ಡಿ.ಲಿಟ್. | ಎಂ.ಫಿಲ್ |
|---|---|---|---|---|
| ೧. | ಮೈಸೂರು ವಿಶ್ವವಿದ್ಯಾಲಯ, ಮೈಸೂರು | ೧೫೦ | ೦೧ | — |
| ೨. | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | ೧೮೮ | — | ೯೫ |
| ೩. | ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು | ೦೬೩ | — | — |
| ೪. | ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ | ೦೪೭ | — | ೩೮ |
| ೫. | ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು | ೦೫೪ | — | — |
| ೬. | ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ | ೦೦೮ | — | ೧೦ |
| ೭. | ಕನ್ನಡ ವಿಶ್ವವಿದ್ಯಾಲಯ, ಹಂಪಿ | ೦೦೮ | ೦೩ | — |
| ೮. | ಮದ್ರಾಸ್ ವಿಶ್ವವಿದ್ಯಾಲಯ, ಮದ್ರಾಸ್ | ೦೧೦ | — | ೪೪ |
| ೯. | ಕಾಮರಾಜ ವಿಶ್ವವಿದ್ಯಾಲಯ, ಮಧುರೈ | ೦೦೫ | — | ೨೦ |
| ೧೦. | ಅಣ್ಣಾಮಲೈ ಹಾಗೂ ಡೆಕ್ಕನ್ ಕಾಲೇಜು, ಪುಣೆ | ೦೧೫ | — | — |
| ೧೧. | ಪುಣೆ ವಿಶ್ವವಿದ್ಯಾಲಯ, ಪುಣೆ | ೦೧೦ | — | — |
| ೧೨. | ಮುಂಬೈ ವಿಶ್ವವಿದ್ಯಾಲಯ, ಮುಂಬೈ | ೦೦೮ | — | ೧೪ |
| ೧೩. | ಲಂಡನ್ ವಿಶ್ವವಿದ್ಯಾಲಯ, ಲಂಡನ್ | ೦೦೩ | | — |
| ೧೪. | ಇಂಡಿಯಾನ ವಿಶ್ವವಿದ್ಯಾಲಯ, ಅಮೇರಿಕಾ | ೦೦೧ | — | — |
| | ಒಟ್ಟು | ೫೭೦ | ೦೪ | ೨೨೧ |

ಇನ್ನು ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದ್ರಾಬಾದ್, ವಾರಣಾಸಿ ವಿಶ್ವವಿದ್ಯಾಲಯಗಳ ಪಟ್ಟಿ ಇಲ್ಲಿ ದಾಖಲಾಗಿಲ್ಲ. ಆದರೆ ಇವತ್ತಿನವರೆಗೂ ಪ್ರಕಟವಾದ ಪಟ್ಟಿ ಸಿಕ್ಕರೆ ಇನ್ನೂ ಕುತೂಹಲಕಾರಿ ಬೆಳವಣಿಗೆಗಳು ಸಿಕ್ಕುತ್ತವೆ. ಕೆಲವು ವಿಶ್ವವಿದ್ಯಾಲಯಗಳ ಪಟ್ಟಿ ನೋಡಿದರೆ ಉದ್ದವಾಗಿದ್ದರೆ ಕೆಲವು ವಿಶ್ವವಿದ್ಯಾಲಯಗಳ ಪಟ್ಟಿ ಚಿಕ್ಕದಾಗಿದೆ. ಹೆಚ್ಚಿನ ಉತ್ಸಾಹ ತೋರಿದಂತಿಲ್ಲ. ಅಂತಲ್ಲಿ ಬರಿ ಕಾನೂನು ಮತ್ತು ಬಿಗಿಯಾದ ಉತ್ಸಾಹ ಶಿಸ್ತುಗಳಿಂದ ಹೆಚ್ಚಿನ ವಿದ್ಯಾರ್ಥಿಗಳು ಉತ್ತೇಜಿತರಾಗುವುದಿಲ್ಲ. ಇದು ಗುರು - ಶಿಷ್ಯರ ಸಂಬಂಧವನ್ನು ಗಾಢಗೊಳಿಸುವದಲ್ಲದೆ ಶಿಸ್ತನ್ನು ಅಭ್ಯಾಸಕ್ಕೆ ಒಂದು ಚೌಕಟ್ಟನ್ನು, ಓದಿನ ಹರವುಗಳನ್ನು ಹೆಚ್ಚಿಸುವುದಲ್ಲದೆ, ಯಾವುದೇ ಮಾಹಿತಿಯನ್ನು ಸೂಕ್ಷ್ಮವಾಗಿ ಕೂಲಂಕುಷವಾಗಿ ನೋಡಲು ಹಚ್ಚುತ್ತದೆ. ಕ್ಷೇತ್ರಕಾರ್ಯದಿಂದ ಸಂಶೋಧಕನಿಗೆ ಹೆಚ್ಚಿನ ದಾಖಲೆಗಳು ಸಿಗುವದಲ್ಲದೆ ಪ್ರಬಂಧ ಇನ್ನೂ ತೀಕ್ಷ್ಣವಾಗುತ್ತದೆ ಮತ್ತು ನಿಶ್ಚಿತಮತಿಯಾಗುತ್ತದೆ.

ಇಲ್ಲಿ ಇನ್ನೊಂದು ಪ್ರಮುಖ ವಿಷಯವೆಂದರೆ ೧೯೯೭ ರಿಂದ ೧೯೯೮ ರ ವರೆಗಿನ ಪ್ರಕಟಿತ ಲೇಖನ ಸೂಚಿಯನ್ನು ಓದುಗರಿಗೆ ನೀಡಿ ಉಪಕರಿಸಿದ್ದಾರೆ. ಅದೇ ರೀತಿ ಸಂಶೋಧಕರ ಪಟ್ಟಿಯನ್ನು ನೀಡಿದ್ದಾರೆ.

ಒಂದು ಪುಟ್ಟ ದ್ವೈಮಾಸಿಕ ಪತ್ರಿಕೆ ಸೀಮಿತ ವಲಯದಲ್ಲಿ ಮಾಡಬಹುದಾದ ಕೆಲಸವನ್ನು ಈ ಪತ್ರಿಕೆ ಅರ್ಥಪೂರ್ಣವಾಗಿ ಮಾಡಿದೆ. ಸಂಪಾದಕರು ತುಂಬಾ ಸ್ತುತ್ಯವಾದ ಕೆಲಸ ನಿರ್ವಹಿಸಿದ್ದಾರೆ. ಅಲ್ಲದೆ ಸಂಶೋಧನೆಗೆ ಬೇಕಾದ ಆಕರಗಳು ವಿಷಯಗಳನ್ನು ಈ ಪತ್ರಿಕೆ ಒಳಗೊಂಡಿದೆ.

### ೪.೨.೧೦.೫ : ಸಂಗಮ ಸಾಹಿತ್ಯ

ನವೋದಿತ ಬಾಗಲಕೋಟ ಜಿಲ್ಲೆಯಲ್ಲಿ ಮೊದಲ ಬಾರಿಗೆ ನಡೆದ ಅಖಿಲ ಭಾರತ ೬೮ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸವಿನೆನಪಿಗಾಗಿ ೬೮ ಕೃತಿಗಳನ್ನು ಪ್ರಕಟಿಸಿ ಕನ್ನಡ ಸಹೃದಯರೆದುರು ಇಟ್ಟಿದ್ದಾರೆ. ಕಾವ್ಯ, ಕಲೆ, ನಾಟಕ, ಪ್ರಬಂಧಗಳಂಥ ಸೃಜನ ಕೃತಿಗಳಲ್ಲದೆ, ವಿಮರ್ಶೆ, ಸಂಶೋಧನೆ, ವೈದ್ಯಕೀಯ ಹಾಗೂ ವಾಣಿಜ್ಯ ಕ್ಷೇತ್ರಗಳಿಗೆ ಸಂಬಂಧಿಸಿದ ಸೃಜನೇತರ ಕೃತಿಗಳೂ ಕೂಡಾ ಈ ಸಂಗಮ ಸಾಹಿತ್ಯ ಮಾಲೆಯಲ್ಲಿ ಸಮಾವೇಶಗೊಂಡಿವೆ. ಕರ್ನಾಟಕದ ಅನೇಕ ಲೇಖಕರು ಇಲ್ಲಿ ಪಾಲ್ಗೊಂಡಿದ್ದಾರೆ.

ಪ್ರತಿ ವರುಷವೂ ನಡೆಯುತ್ತಿರುವ ಸಾಹಿತ್ಯ ಸಮ್ಮೇಳನಗಳ ಸಂದರ್ಭದಲ್ಲಿ ಸಮ್ಮೇಳನದ ಸಂಖ್ಯೆಗೆ ಸಮವಾಗಿ ಕೃತಿಗಳನ್ನೂ ಪ್ರಕಟಿಸುವ ಯೋಜನೆ ಕಳೆದ ಕೆಲ ವರುಷಗಳಿಂದ ಕಾರ್ಯಗತಗೊಳ್ಳುತ್ತಿದೆ. ಈ ಸಾರಸ್ವತ ಸತ್ಪರಂಪರೆಯ ಮುಂದುವರಿಕೆಗಾಗಿ ಬಾಗಿಲುಕೋಟೆಯಲ್ಲಿ ನಡೆದ ಅಖಿಲ ಭಾರತ ಸಮ್ಮೇಳನದಲ್ಲಿ ೬೮ ಕೃತಿಗಳನ್ನು ಪ್ರಕಟಿಸುವುದರ ಜೊತೆಗೆ ಬಾಗಲಕೋಟ ಜಿಲ್ಲೆಯ ಕೃಷಿ, ನೀರಾವರಿ, ಉದ್ದಿಮೆ, ಇತ್ಯಾದಿ ವಿಷಯಗಳ 'ಜಿಲ್ಲಾ ದರ್ಶನ'

ಜಿಲ್ಲೆಯ ಲೇಖಕರ ಪರಿಚಯವಿರುವ ' ಶಬ್ದಶಿಲ್ಪಿಗಳು ' ಈ ಮಾಲಿಕೆಯ ವಿಶೇಷ ಆಕರಣೆಯಾಗಿದೆ. ' ಬಾಗಿಲು ' ಬಾಗಲಕೋಟ ಜಿಲ್ಲೆಯ ಸಾಹಿತ್ಯ ಸಂಸ್ಕೃತಿಗಳನ್ನು ಕುರಿತಾದ ಲೇಖನಗಳ ಸಂಪುಟ. ಸಮ್ಮೇಳನಾಧ್ಯಕ್ಷರಾದ ಶ್ರೀಮತಿ ಶಾಂತಾದೇವಿ ಮಾಳವಾಡರ ಎರಡು ಕೃತಿಗಳನ್ನೂ ಈ ಮಾಲಿಕೆ ಒಳಗೊಂಡಿದೆ. ಇದನ್ನು ಹೀಗೆ ಪಟ್ಟಿ ಮಾಡಬಹುದೆನಿಸುತ್ತದೆ.

| | | |
|---|---|---|
| ಸಂಗಮ ಸಾಹಿತ್ಯ ಮಾಲೆ | – | ೬೮ |
| ಲೇಖನಗಳ ಸಂಪುಟ | – | ೦೧ |
| ಜಿಲ್ಲಾ ದರ್ಶನ | – | ೦೧ |
| ಶಬ್ದಶಿಲ್ಪಿಗಳು | – | ೦೧ |
| **ಪುಸ್ತಕಗಳು ಒಟ್ಟು** | – | ೭೧ |

ಹೀಗೆ ಇದೊಂದು ಮಾದರಿಯ ಕಾರ್ಯವಾಗಿದ್ದು ಇದನ್ನು ಇನ್ನು ಮುಂದೆ ನಡೆಯಬೇಕಾದ ಸಾಹಿತ್ಯ ಸಮ್ಮೇಳನದ ಸಂಘಟಕರು ಈ ರೀತಿ ಮುಂದುವರಿಸಿಕೊಂಡು ಹೋಗಬಹುದೆನಿಸುತ್ತದೆ ಇನ್ನೊಂದು ಮಹತ್ವದ ಕೆಲಸವೆಂದರೆ ಸಾಹಿತ್ಯ ಸಮ್ಮೇಳನದಲ್ಲಿ ಪ್ರದರ್ಶಿಸಿದ ಪುಸ್ತಕಗಳ ಸೂಚಿಯೊಂದನ್ನು ತಯಾರಿಸಿದರೆ ಆಸಕ್ತರಿಗೆ ಬಹು ಉಪಯೋಗವಾಗುವುದರಲ್ಲಿ ಸಂಶಯವಿಲ್ಲ. ಏನೇ ಆಗಲಿ ಇದೊಂದು ದಾಖಲೆಯ ಕಾರ್ಯ.

## ಸಂಗಮ ಸಾಹಿತ್ಯ ಮಾಲೆಯಲ್ಲಿ ಪ್ರಕಟಿತ ಕೃತಿಗಳು

| ಅ. ನಂ. | ಶೀರ್ಷಿಕೆ | ಲೇಖಕರ ಹೆಸರು |
|---|---|---|
| ೧. | ಬಾಗಿಲು | ಸಂ. ಮಲ್ಲಿಕಾರ್ಜುನ ಹಿರೇಮಠ / ಬಾಳಾಸಾಹೇಬ ಲೋಕಾಪುರ |
| ೨. | ಬಾಗಲಕೋಟ ಜಿಲ್ಲಾ ದರ್ಶನ | ಸಂ. ಹನುಮಂತರಾಯ ಕಂಠಿ / ಮಲ್ಲಿಕಾರ್ಜುನ ಹುಲಬಾಗಳಿ |
| ೩. | ಶಬ್ದಶಿಲ್ಪಿಗಳು | ಸಂ. ಮಲ್ಲಿಕಾರ್ಜುನ ಬನ್ನಿ / ಅಬ್ಬಾಸ್ ಮೇಲಿನಮನಿ |
| ೪. | ಬಾಗಲಕೋಟೆ ಕಾವ್ಯ | ಸಂ. ಬಿ. ಆರ್. ಪೋಲಿಸ್‌ಪಾಟೀಲ / ಸಿದ್ಧರಾಜ ಪೂಜಾರಿ |
| ೫. | ಬಾಗಲಕೋಟೆ ಕತೆ | ಸಂ. ಬಿ. ಆರ್. ಪೋಲಿಸ್‌ಪಾಟೀಲ / ಮಹಾದೇವ ಕಣವಿ |
| ೬. | ಬಾಗಲಕೋಟೆ ನಾಟಕ | ಸಂ. ಬಿ. ಆರ್. ಪೋಲಿಸ್‌ಪಾಟೀಲ / ದೊಡ್ಡಣ್ಣ ಗದ್ದನಕೇರಿ |
| ೭. | ಬಾಗಲಕೋಟೆ ಚುಟುಕು | ಸಂ. ಬಿ. ಆರ್. ಪೋಲಿಸ್‌ಪಾಟೀಲ / ಅಶೋಕ ಸಮಗಂಡಿ |
| ೮. | ಬಾಗಲಕೋಟೆ ಮಕ್ಕಳ ಕತೆ | ಸಂ. ಬಿ. ಆರ್. ಪೋಲಿಸ್‌ಪಾಟೀಲ / ಗುರುಸ್ವಾಮಿ ಗಣಾಚಾರಿ |
| ೯. | ಬಸವ ಪ್ರಕಾಶ | ಶಾಂತಾದೇವಿ ಮಾಳವಾಡ |
| ೧೦. | ಮುನ್ನುಡಿ ಮುನ್ನುಡಿ | ಸ. ಸ. ಮಾಳವಾಡ / ಶಾಂತಾದೇವಿ ಮಾಳವಾಡ |

| | | |
|---|---|---|
| ೧೧. | ಬಟ್ಟೇನೆಂದರೆ.... | ಕೃಷ್ಣ ಪಾಟೀಲ |
| ೧೨. | ತುಳಸೀಮಣಿ | ಬಿ. ಎಚ್. ಬಾಲರಡ್ಡಿ |
| ೧೩. | ಚಿಣ್ಣರ ನಾಟಕಗಳು | ದೊಡ್ಡಣ್ಣ ಗದ್ದನಕೇರಿ |
| ೧೪. | ಭಾವ - ಬಿಂದು | ಜಯಶ್ರೀದೇವಿ ದೇಶಪಾಂಡೆ |
| ೧೫. | ಭಕ್ತಿ ಗೊಂಚಲು | ಶಾಂತಾದೇವಿ ಕೆ. ಶಾಬಾದಿ |
| ೧೬. | ದಡ್ಡನ ಮಾಡಯ್ಯ ತಂದೆ | ಚಿದಂಬರ ಇನಾಮದಾರ |
| ೧೭. | ಹಬ್ಬ | ಗುರುಸ್ವಾಮಿ ಗಣಾಚಾರಿ |
| ೧೮. | ನಿಲುಕದ ನಕ್ಷತ್ರ | ಸುರೇಖಾ ದ. ಕುಲಕರ್ಣಿ |
| ೧೯. | ನಗುವ ಹೂಗಳು | ಪರಶುರಾಮ ಚಿತ್ರಗಾರ |
| ೨೦. | ಇಮ್ಮಡಿ ಪುಲಿಕೇಶಿ | ನಿಂಗೇಶ ಬುಳ್ಳಾ |
| ೨೧. | ಆ ಸಂಜೆ ಹೋದವರು | ಎಸ್ಕೆ. ಕೊನೆಸಾಗರ |
| ೨೨. | ಜನತಂತ್ರ ಪರ್ವ | ಧ್ರುವರಾಜ ದೇಶಪಾಂಡೆ |
| ೨೩. | ಕಥೆಯಾದಳು ಸಂಯುಕ್ತೆ | ಜಗದೀಶ ದುದ್ಗಿ |
| ೨೪. | ನೀಲಕಂಠನ ವಚನಗಳು | ನೀ. ಮ. ಕಾಳಗಿ |
| ೨೫. | ಚೈತ್ರೋದಯ | ಡಾ. ಸುಭಾಸ ಪೋರೆ |
| ೨೬. | ಚಪ್ಪಾ - ಚರಿಪ್ಪಾ | ಮಲ್ಲಿಕಾರ್ಜುನ ಹಲಗಬಾಳಿ |
| ೨೭. | ಅಜ್ಜರ ಕಾಡು | ಸತ್ಯಕಾಮ |
| ೨೮. | ಇನ್ನಷ್ಟು ಕತೆಗಳು | ದು. ನಿಂ. ಬೆಳಗಲಿ |
| ೨೯. | ಚುಚ್ಚುಮದ್ದು | ನೀ. ಶ್ರೀಶೈಲ |
| ೩೦. | ಹಕ್ಕಿಯ ಹೆಗಲೇರಿ | ಆನಂದ ಝುಂಜರವಾಡ |
| ೩೧. | ಜಾಣರ ಜಾಣ | ವ್ಹಿ. ಎಸ್. ಶಿರಹಟ್ಟಿಮಠ |
| ೩೨. | ಮೃಗ ಮಾಯೆಗಳ ನಡುವೆ | ಸರೋಜ ಇಟ್ಟಣ್ಣವರ |
| ೩೩. | ಮುಟ್ಟೋಣ ಪ್ರೀತಿ ಚುಕ್ಕಿ | ಸಿದ್ದಪ್ಪ ಬಿದರಿ |
| ೩೪. | ಮಾದಯ್ಯನ ಮಗಳು | ಕಂಠಿ ಹನುಮಂತರಾಯ |

| | | |
|---|---|---|
| ೩೫. | ಚಿಂವ್ ಚಿಂವ್ ಗುಬ್ಬಿ | ಈಶ್ವರ ಕಾಪಸೆ |
| ೩೬. | ಚಿನ್ನದ ಚೆಂಡು | ರಾಜೇಂದ್ರ ಹಿರೇಮಠ |
| ೩೭. | ಪಾರಿಜಾತ ಮತ್ತು ಇತರ ಪ್ರಬಂಧಗಳು | ಬಿ. ಎಸ್. ಕೌಜಲಗಿ |
| ೩೮. | ಸತ್ಯಜ್ಞಾನ ವಚನಗಳು ಭಾಗ - ೩ | ಸಿದ್ಧರಾಮ ಪೋಲಿಸ್‌ಪಾಟೀಲ |
| ೩೯. | ಲಲಿತ ಪ್ರಬಂಧಗಳು | ವೀರೇಂದ್ರ ಸಿಂಪಿ |
| ೪೦. | ಸಂತೆ ಮುಗಿಯುವ ಸಮಯ | ಪ್ರಹ್ಲಾದ ಅಗಸನಕಟ್ಟೆ |
| ೪೧. | ಫಿನಿಕ್ಸ ಹಾರಿದ ಹಾದಿ | ದೇಶಪಾಂಡೆ ಸುಬ್ಬರಾಯ |
| ೪೨. | "ಡಾಕು" ವಿನ ಹರಟೆಗಳು | ಡಾ. ವಸಂತ ಕುಲಕರ್ಣಿ |
| ೪೩. | ನನ್ನ ಹೆಜ್ಜೆಗಳು | ಮಹದೇವ ಮಿತ್ರ |
| ೪೪. | ಜಗದ್ಗುರು ಇಬ್ರಾಹಿಂ | ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ |
| ೪೫. | ಬೆಂಕಿ ಇರದ ಬೆಳಕು | ಚೆನ್ನಪ್ಪ ಕಟ್ಟಿ |
| ೪೬. | ಸೀತಾಳೆ ಹೂ ಮತ್ತು ಇತರ ಕಥೆಗಳು | ಸುಮಂಗಲಾ ಬಾದರದಿನ್ನಿ |
| ೪೭. | ಸಾಮ್ರಾಟ್ ಅಶೋಕ | ಕಾ. ಹು. ಬಿಜಾಪೂರ |
| ೪೮. | ದಾಳ | ಶರಣಗೌಡ ಎರಡೆತ್ತಿನ |
| ೪೯. | ಅನಾಮಿಕ ಹಕ್ಕಿಯ ಸ್ವಾಗತ | ಬಾ. ಹ. ರಮಾಕುಮಾರಿ |
| ೫೦. | ಬೃಂದಾವನ ಮತ್ತು ಇತರ ಕಥೆಗಳು | ಅದೀಬ್ ಅಖ್ತರ |
| ೫೧. | ಬಸವ ಚಿಂತನ | ಡಾ. ಎಸ್. ಆರ್. ಗುಂಜಾಳ |
| ೫೨. | ಅಚ್ಚುಕಟ್ಟು | ಡಾ. ಶಾಮಸುಂದರ ಬಿದರಕುಂದಿ |
| ೫೩. | ಮೂಳೆ ಭಕ್ಷಕರು | ಡಾ. ಎಸ್. ಎಸ್. ಪಾಟೀಲ |
| ೫೪. | ಸೀಳು ನೋಟಗಳು | ಬಸವರಾಜ ಡೋಣೂರ |
| ೫೫. | ಪರಿಶೋಧನೆ | ಡಾ. ಎಸ್. ಕೆ. ಕೊಪ್ಪ |
| ೫೬. | ಅರಿವು - ಹರವು | ಮಹೇಶ ತಿಪ್ಪಶೆಟ್ಟಿ |

೫೭. ಅಂತರ್ಗತ — ಮಲ್ಲಿಕಾರ್ಜುನ ಹಿರೇಮಠ

೫೮. ಹಳೆಗನ್ನಡ ವ್ಯಾಕರಣ ಮತ್ತು ಬಾದಾಮಿ ಉಪಭಾಷೆ — ಡಾ. ಎಂ. ಜಿ. ತಿವಾರಿ

೫೯. ಆರ್ಥಿಕ ಚಿಂತನೆ — ಎಂ. ಎಸ್. ಬದಾಮಿ

೬೦. ಬೆಳಗು ಮಹಾಬೆಳಗು — ಬ. ಗಿ. ಯಲ್ಲಟ್ಟಿ

೬೧. ಆರೋಗ್ಯ ಭಾಗ್ಯ ಪ್ರದಾಯಕ ವ್ಯಾಯಾಮ — ಶ್ರೀಪಾದ ಕುಲಕರ್ಣಿ

೬೨. ಪ್ರತಿಫಲನ — ಬಾಳಾಸಾಹೇಬ ಲೋಕಾಪುರ

೬೩. ವಾಣಿಜ್ಯೋದ್ಯಮ — ಸಿದ್ದಣ್ಣ ಸಾತಲಗಾಂವ

೬೪. ಆಕೃತಿ — ಎ. ರಘುರಾಮ್

೬೫. ಜನಕನ ಕನಸು — ಚಿಂತಾಮಣಿ ಕೂಡ್ಲೆಕೆರೆ

೬೬. ವೈದ್ಯಕೀಯ ವಿಸ್ಮಯಗಳು — ಡಾ. ಕರವೀರಪ್ರಭು ಕ್ಯಾಲಕೊಂಡ

೬೭. ಸಿರಿ — ದ. ರಾ. ಪುರೋಹಿತ

೬೮. ಮಲಗಿದರೆ ಮರೆ ಮಿಂಚು — ಕೆ. ಡಿ. ಮುತ್ತೂರ

## ೪.೨.೧೧ : ವಿಶ್ವವಿದ್ಯಾಲಯಗಳ ಸೂಚಿ : ಪ್ರಕಟಣೆಗಳು

ಆಯ್ದ ಕೆಲವು ವಿಶ್ವವಿದ್ಯಾಲಯಗಳು ವಿಶ್ವವಿದ್ಯಾಲಯದ ಗ್ರಂಥಾಲಯಕ್ಕೆ ಸೇರ್ಪಡೆಯಾದ ಕನ್ನಡ ಹೊಸ ಪುಸ್ತಕಗಳ ಅಂಕಿ ಅಂಶಗಳಿಂದ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಮೈಸೂರು ವಿಶ್ವವಿದ್ಯಾಲಯಗಳು ಸೂಚಿಗಳನ್ನು ಹೊರತಂದಿವೆ.

## ೪.೨.೧೧.೧ : ಹೊಸ ಪುಸ್ತಕಗಳು / ಸೇರ್ಪಡೆಗಳು (Latest additions)

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಗ್ರಂಥಾಲಯ ೧೯೬೫ ರಲ್ಲಿ ಹೊರತಂದಿರುವ ೫೮೭ ಕನ್ನಡ ಪುಸ್ತಕಗಳ ನಮೂದುಗಳನ್ನು ಒಳಗೊಂಡಿದ್ದರೆ, ೧೯೭೩ - ೭೫ ರಲ್ಲಿ ೪,೬೦೦ ನಮೂದುಗಳಾಗಿದ್ದುದು ಕಂಡುಬರುತ್ತದೆ. ಇದರಿಂದ ಕನ್ನಡ ಪುಸ್ತಕಗಳ ಬೆಳವಣಿಗೆ ಮತ್ತು ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ನಾವಿಲ್ಲಿ ಗಮನಿಸಬಹುದು.

ಮೈಸೂರು ವಿಶ್ವವಿದ್ಯಾನಿಲಯ

# ಲೇಖಕರ ಸೂಚಿ

(ಜೀವನ, ಜಯಕರ್ನಾಟಕ ಮತ್ತು ಶಿವಾನುಭವ)

ಎಂ. ಆರ್. ಸಣ್ಣರಾಮೇಗೌಡ, ಎಂ.ಎ., ಬಿ.ಲಿಬ್, ಎಸ್‌ಸಿ.
ಸಹಾಯಕ ಗ್ರಂಥಪಾಲಕ
ಮೈಸೂರು ವಿಶ್ವವಿದ್ಯಾನಿಲಯ



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು.
೧೯೬೭

# ಜೀವನ

## ಪರಿವಿಡಿ



**ಸೂಚನೆ:** ಪ್ರತಿಯೊಂದು ಹೆಸರಿನ ಮೊದಲಿನಲ್ಲಿಯೂ ಸೂಕ್ತಾನುಸಾರ ಶ್ರೀಮಾನ್ ಅಥವಾ ಶ್ರೀಮತಿ ಎಂದು ಸೇರಿಸಿಕೊಳ್ಳಬೇಕು.

**ಸಂಕೇತಗಳು :**

ಅನು=ಅನುವಾದ.
ಕ=ಕವನ.
ಪ್ರ=ಪ್ರಬಂಧ.
ವ=ವಚನ.
[illegible] ವಿಮರ್ಶೆ.
[illegible] ಸಣ್ಣ ಕತೆ.

**೪.೨.೧೧.೨ : ಮೈಸೂರು ವಿಶ್ವವಿದ್ಯಾಲಯವು** ೧೯೬೭ - ೬೮ ರಲ್ಲಿ ೧,೩೯೫ ಕನ್ನಡ ಪುಸ್ತಕಗಳ ಸೇರ್ಪಡೆಯನ್ನು ಗ್ರಂಥಾಲಯಪಕ್ಕೆ ಸೇರಿಸಲಾಗಿತ್ತು. ಇದರಿಂದ ವಿಶ್ವವಿದ್ಯಾಲಯಗಳು ಕನ್ನಡ ವಿಷಯಕ್ಕೂ ಮಹತ್ವ ನೀಡಿದ್ದು ತಿಳಿದುಬರುತ್ತದೆ. ಆಯಾ ಅವಧಿಯಲ್ಲಿ ಕನ್ನಡದಲ್ಲಿ ಪ್ರಕಟಿಸಲ್ಪಟ್ಟ ಪುಸ್ತಕಗಳ ವಿವರಗಳು ಸಿಕ್ಕು ಕನ್ನಡ ಸಾಹಿತ್ಯ ಅಭಿವೃದ್ಧಿಗೆ ಸಹಾಯಕವಾದುದು ಕಂಡುಬಂದಿದೆ.

ಎಲ್ಲ ವಿಶ್ವವಿದ್ಯಾಲಯಗಳು, ಕಾಲೇಜುಗಳು ಪ್ರತಿವರ್ಷ ತಮ್ಮ ತಮ್ಮ ಗ್ರಂಥಾಲಯಗಳಿಗೆ ಖರೀದಿಸಿದ ವಿಷಯವಾರು ಪಟ್ಟಿಯನ್ನಾ ತಯಾರು ಮಾಡುತ್ತವೆ. ಅದೇ ರೀತಿಯಾಗಿ ಆಯಾ ವರ್ಷ ಹೊಸ ಸೇರ್ಪಡೆಗಳ ಕುರಿತು ಒಂದು ಕೈಪಿಡಿಯನ್ನೋ (Bulletin, Handbill, Typewritten copy) ಕರಪತ್ರವನ್ನೊ, ಬೆಳರಚ್ಚಿಸಿದ ಪ್ರತಿಯನ್ನೋ ತಂದು ಸೂಚನಾ (Notice board) ಫಲಕಕ್ಕೆ ಅಂಟಿಸಿದ್ದಾದರೆ ಸಂಶೋಧಕರಿಗೆ ಮಹದುಪಕಾರ ಮಾಡಿದಂತಾಗುತ್ತದೆ. ಆದರೆ ಈ ಪಟ್ಟಿ ಆಯಾ ವರ್ಷ ತಯಾರಾಗಿರುತ್ತದೆ. ಆದರೆ ಇದನ್ನು ಹೊರತರುವ ಪ್ರಯತ್ನವನ್ನು ಯಾರೂ ಮಾಡುವುದಿಲ್ಲ. ಮಾಡಿದರೂ ಬೆರಳೆಣಿಕೆಯಲ್ಲಿ ಏಣಿಸುವಷ್ಟು ಜನ ಮಾತ್ರ !

## ೪.೨.೧೧.೩ : ಕನ್ನಡ ಜಾನಪದ ಗ್ರಂಥಸೂಚಿ

ಡಾ. ಹಾ. ಮಾ. ನಾಯಕ, ಕೆ. ಎಸ್. ದೇಶಪಾಂಡೆ, ಪ್ರಭುಶಂಕರ, ಓ. ಕೆ. ಪಾಟೀಲ, ಕೆ. ಟಿ. ವೀರಪ್ಪ, ಆರ್. ಎಲ್. ಅನಂತರಾಮಯ್ಯನವರು ಸಂಪಾದಕ ಮಂಡಳಿಯಲ್ಲಿದ್ದು ಮೈಸೂರು ವಿಶ್ವವಿದ್ಯಾಲಯವು ಕನ್ನಡ ಅಧ್ಯಯನ ಸಂಸ್ಥೆ ರೂಪಿಸಿದ ಮಹತ್ವಾಕಾಂಕ್ಷಿ ಯೋಜನೆಗಳಲ್ಲಿ ಇದು ಒಂದಾಗಿತ್ತು. ೧೯೭೪ ರಲ್ಲಿ ಪ್ರಕಟಿಸಲಾಗಿ ಮುದ್ರಿತ ಕನ್ನಡ ಕೃತಿಗಳ ವಿವರಣಾತ್ಮಕ ಗ್ರಂಥಸೂಚಿ. ಕಾವ್ಯ, ಲಾವಣಿ, ಕತೆ, ಐತಿಹ್ಯ; ಭಾಷಾಂತರ, ರೂಪಾಂತರ, ಗಾದೆ, ಒಗಟು, ನಾಟಕ, ರಂಗಭೂಮಿ, ವಿಚಾರ - ವಿಮರ್ಶೆ, ಸಂಕೀರ್ಣ; ಹೆಚ್ಚಿನ ನಮೂದುಗಳು, ಕೃತಿಗಳು, ಕೃತಿಕಾರರು ಎಂಬ ನಾಲ್ಕು ಸೂಚಿಗಳು, ಅನುಬಂಧದಲ್ಲಿ ಇನ್ನೂ ಹೆಚ್ಚಿನ ನಮೂದುಗಳು ಇವೆ ಹೀಗೆ ಒಟ್ಟು ೩೨ ನಮೂದುಗಳಿವೆ. ೫೩೨ ಪುಸ್ತಕಗಳ ನಮೂದುಗಳು ಇವೆ. ಈ ಕೃತಿಯನ್ನು ದೇ. ಜವರೇಗೌಡರಿಗೆ ಅರ್ಪಿಸಲಾಗಿದೆ. ಅಲ್ಲದೆ ಕನ್ನಡ ಜಾನಪದ ಗ್ರಂಥಸೂಚಿಯ ಮುದ್ರಿತ ಕನ್ನಡ ಕೃತಿಗಳ ವಿವರಣಾತ್ಮಕ ಗ್ರಂಥಸೂಚಿಯ ವಾರ್ಷಿಕ ಪುರವಣಿ ಮಾಲಿಕೆಯಲ್ಲಿ ನಾಲ್ಕು ಸಂಪುಟಗಳನ್ನು ಹೊರತರಲಾಗಿದೆ. ೧೯೭೭, ೧೯೭೮, ೧೯೭೯, ೧೯೮೦ ಈ ನಾಲ್ಕು ವರ್ಷಗಳಲ್ಲಿನ ಪ್ರಕಟಿತ ವಾಙ್ಮಯವನ್ನು ಒಳಗೊಂಡಿದೆ.

ಹಾ. ಮಾ. ನಾಯಕ ಅವರ ಮೂಲ ಸೆಲೆಯಲ್ಲಿಯೇ ಇನ್ನೊಬ್ಬ ಕನ್ನಡ ಗ್ರಂಥಸೂಚಿಕಾರ ಆರ್. ಎಲ್. ಅನಂತರಾಮಯ್ಯನವರ ಅವಿರತ ದುಡಿಮೆ, ಪರಿಶ್ರಮಗಳಿಲ್ಲದಿದ್ದರೆ ಇಂತಹ ಬೃಹತ್ ಕಾರ್ಯಗಳು ಕನ್ನಡಿಗರಿಗೆ

ಲಭ್ಯವಾಗುತ್ತಿದ್ದವು. ಕನ್ನಡದಲ್ಲಿ ತುಂಬ ಪರಿಶ್ರಮ ಮತ್ತು ಯೋಜನಾಬದ್ಧವಾಗಿ ಪ್ರಕಟವಾದ ಗ್ರಂಥಸೂಚಿ ಇದು. ಇಂತಹ ಕಾರ್ಯ ಮಾಡಿದ ಈ ಸಂಪಾದಕ ಮಂಡಳಿ ಅಭಿನಂದನಾರ್ಹರು. ಅರೆಕೊರೆಗಳೇನಿದ್ದರೂ ಕೂಡ ಅವರ ಅಪಾರ ಅನುಭವ, ನಿಸ್ವಾರ್ಥ ದುಡಿಮೆ, ತೊಡಗಿಸಿಕೊಳ್ಳುವಿಕೆಯಿಲ್ಲದಿದ್ದರೆ ಇಂಥ ಗ್ರಂಥಸೂಚಿಗಳು ನಮಗಿಂದು ನೋಡಲು ಕೂಡ ಸಿಗುತ್ತಿರಲಿಲ್ಲ.

### ೪.೨.೧೧.೪ : ಜನಪದ ಕಲಾವಿದರ ಸೂಚಿ

೧೯೮೨ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುವ ಜನಪದ ಕಲಾವಿದರ ಸೂಚಿ ಇದು. ಇದರ ಸಂಪಾದಕರು ಹಂಪಾನಾಗರಾಜಯ್ಯ ಅವರು. ೧೯೭೬ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ವತಿಯಿಂದ ಸುಮಾರು ಒಂಬತ್ತು ಸಾವಿರದ ಐನೂರು ಹಳ್ಳಿಗಳನ್ನು ಭೇಟಿ ಮಾಡಿ ಹತ್ತು ಸಾವಿರ ಕಲಾ ತಂಡಗಳನ್ನು ಗುರುತಿಸಿ ಒಂದುನೂರಾ ನಲವತ್ತೈದು ಜನಪದ ಕಲೆಗಳ ಬಗ್ಗೆ ಮಾಹಿತಿ ಸಂಗ್ರಹಣೆ ನಡೆದಿದೆ. ಮುಖ್ಯವಾಗಿ ಇಲ್ಲಿ ೫೨೦೮ ಜನಪದ ಕಲಾವಿದರ ಪೂರ್ಣ ವಿಳಾಸಗಳನ್ನು ಕಲೆ ಹಾಕಲಾಗಿದೆ.

### ೪.೨.೧೧.೫ : ಕನ್ನಡ ಜಾನಪದ ಗ್ರಂಥಸೂಚಿ

೨೦೦೦ ದಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಪ್ರಕಟಿಸಿರುವ ಗ್ರಂಥ ಸೂಚಿ ಇದು. ಇದನ್ನು ಸಂಕಲಿಸಿದವರು ಸಿ. ಟಿ. ಗುರುಪ್ರಸಾದ ಅವರು. ಇದರ ಕಾಲಾವಧಿ ೧೯೭೫ ಜನೇವರಿಯಿಂದ ೨೦೦೦ ಜನೆವರಿಯವರೆಗೆ. ಇಲ್ಲಿ ೧೦೧೪ ಪುಸ್ತಕಗಳ ಬಗೆಗಿನ ವಿವರಣೆಯಿರುತ್ತದೆ.

ಇದಕ್ಕೆ ಮಾದರಿಯಾಗಿದ್ದುದು ಡಾ. ಹಾ. ಮಾ. ನಾಯಕ ೧೮೦೦ ರಿಂದ ೧೯೭೪ ರ ವರೆಗೆ ಕನ್ನಡ ಅಧ್ಯಯನ ಸಂಸ್ಥೆಯ ಮೂಲಕ " ಕನ್ನಡ ಜಾನಪದ ಗ್ರಂಥಸೂಚಿ " ಎಂಬ ಹೆಸರಿನಿಂದ ಪ್ರಕಟಿಸಿದ್ದು ಸುಮಾರು ಐನೂರು ಮೂವತ್ತೆರಡು ಗ್ರಂಥಗಳ (೫೩೨) ಗ್ರಂಥಗಳ ಬಗೆಗಿನ ಸಂಕ್ಷಿಪ್ತ ಪರಿಚಯ ಮಾಡಿದ್ದಾರೆ. ಇದು ಸಮಗ್ರವಾಗಿದ್ದು ಭೌಗೋಳಿಕವಾಗಿ, ಭಾಷಿಕವಾಗಿ, ಸಾಹಿತ್ಯಿಕವಾಗಿ ಸಮಂಜಸವಾಗಿದೆ ಎನ್ನಬಹುದು.

ಡಾ. ಹಾ. ಮಾ. ನಾಯಕ ಅವರ ಕೃತಿಯ ಮುಂದುವರಿದ ಕೆಲಸ ಜಾನಪದ ಕ್ಷೇತ್ರದಲ್ಲಿ ತುಂಬಾ ಅಗತ್ಯವಾಗಿ ಆಗಬೇಕಾಗಿತ್ತು. ಆದ್ದರಿಂದ ಅಂಥ ಗ್ರಂಥಸೂಚಿಯ ಕೆಲಸವನ್ನು ಮಾಡಲು ಇಲ್ಲಿ ಪ್ರಯತ್ನ ಮಾಡಲಾಗಿದೆ.

ಕನ್ನಡದಲ್ಲಿ ೧೯೭೫ ರಿಂದ ಈಚೆಗೆ ಅಂದರೆ ೨೦೦೦ ಜನೆವರಿಯವರೆಗೆ ಪ್ರಕಟವಾಗಿರುವ ಎಲ್ಲಾ ಪ್ರಕಾರದ ಜಾನಪದ ಗ್ರಂಥಗಳನ್ನು ಈ ಸೂಚಿಯಲ್ಲಿ ಸೇರಿಸಬೇಕೆಂದು ಈ ಸೂಚಿಯ ಮುಖ್ಯ ಉದ್ದೇಶ. ಹಾಗೆಯೇ ಈ ವರೆಗೆ ಪ್ರಕಟವಾಗಿರುವ ಬಹುಪಾಲು ಗ್ರಂಥಗಳು ಇಲ್ಲಿ ಸೇರಿವೆ ಎಂಬುದರಲ್ಲಿ ಸಂಶಯವಿಲ್ಲ.

ಈ ಗ್ರಂಥಸೂಚಿಯಲ್ಲಿ ಇಲ್ಲಿಯ ವರೆಗೆ ಪ್ರಕಟವಾಗಿರುವ ೧೦೦೭ ಕೃತಿಗಳ ಒಟ್ಟು ಸಂಕ್ಷಿಪ್ತ ಪರಿಚಯುವನ್ನು ಡಾ. ಹಾ. ಮಾ. ನಾಯಕ ಅವರ ಆವೃತ್ತಿಗಿಂತ ಅಲ್ಪ ಸ್ವಲ್ಪ ಬದಲಾವಣೆಯಿಂದ ಪೂರೈಸಲಾಗಿದೆ. ಇದರಲ್ಲಿ ಕಾವ್ಯ, ಕಥನಕಾವ್ಯ, ಮಹಾಕಾವ್ಯ, ಕಥೆ, ಐತಿಹ್ಯ, ಗಾದೆ - ಒಗಟು, ವಿಚಾರ - ವಿಮರ್ಶೆ, ವೈಚಾರಿಕ, ನಾಟಕ - ರಂಗಭೂಮಿ - ಕಲೆಗಳು, ಭಾಷಾಂತರ, ಸಂಕೀರ್ಣ ಎಂಬುದಾಗಿ ಒಂಬತ್ತು ಭಾಗ ಮಾಡಲಾಗಿದೆ. ಪ್ರತಿಯೊಂದು ಪುಸ್ತಕದ ಪರಿಚಯದಲ್ಲಿ ಎರಡು ಭಾಗಗಳಿವೆ. ಮೊದಲನೆ ಭಾಗದಲ್ಲಿ ಪುಸ್ತಕದ ಸಂಪಾದಕರ ಇಲ್ಲವೆ ಲೇಖಕರ ಹೆಸರು, ಪ್ರಕಾಶಕರ ಹೆಸರು ಮತ್ತು ಊರು, ಪ್ರಕಟನೆಯ ವರ್ಷ ಹಾಗೂ ಪುಟಸಂಖ್ಯೆಗಳೊಂದಿಗೆ ಆಕಾರದ ವಿವರಗಳನ್ನು ನಮೂದಿಸಲಾಗಿದೆ. ಪ್ರತಿಯೊಂದು ಪುಸ್ತಕದ ವಿವರವನ್ನು ಅರ್ಧವಿರಾಮ ಚಿಹ್ನೆಯಿಂದ ಪ್ರತ್ಯೇಕಿಸಿ ತೋರಿಸಲಾಗಿದೆ. ಎರಡನೆ ಭಾಗದಲ್ಲಿ ಪುಸ್ತಕದ ವಿಷಯುವನ್ನು ಆದಷ್ಟು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಈ ಗ್ರಂಥಸೂಚಿ ಕನ್ನಡದಲ್ಲಿ ಸಮೃದ್ಧವಾದ ಜಾನಪದ ಸಂಬಂಧದ ಸಾಹಿತ್ಯವನ್ನು ಪರಿಚಯ ಮಾಡಿಕೊಡುತ್ತದೆ. ಕನ್ನಡ ಜಾನಪದ ಅಧ್ಯಯನದಲ್ಲಿ ಆಸಕ್ತರಾದವರಿಗೆಲ್ಲಾ ಇದೊಂದು ಉಪಯುಕ್ತ ಮಾರ್ಗದರ್ಶಿ, ಕೈಪಿಡಿ ಎಂದರೂ ನಡೆದೀತು.

## ೪.೨.೧೧.೬ : ಕರ್ನಾಟಕ ಕವಿಚರಿತ್ರೆಯ ಅನುಕ್ತ ಕೃತಿಸೂಚಿ : ಸಂಪುಟಗಳು

ಎಸ್. ಶಿವಣ್ಣನವರ ಕರ್ನಾಟಕ ಕವಿಚರಿತ್ರೆಯ ಅನುಕ್ತ ಕೃತಿಸೂಚಿ - ಮೈಸೂರು ವಿಶ್ವವಿದ್ಯಾಲಯವು ೧೯೬೭ ರಲ್ಲಿ ಪ್ರಕಟಿಸಿದೆ.[೩೫] ಇದರ ವಿಶೇಷತೆಯೆಂದರೆ ಆರ್. ನರಸಿಂಹಚಾರ್ ಪ್ರಕಟಿಸಿದ ೩ ಸಂಪುಟಗಳನ್ನು ಹೊರತುಪಡಿಸಿದರೆ. ಆರ್. ನರಸಿಂಹಚಾರ್ ಮೂರು ಸಂಪುಟಗಳಲ್ಲಿ ಪ್ರಕಟಿಸಿದ ' ಕರ್ನಾಟಕ ಕವಿಚರಿತೆ ' ಒಂದು ಅದ್ಭುತ ಮಹತ್ಕಾರ್ಯವಾಗಿದೆ. ಪಂಡಿತ ಕೆ. ಭುಜಬಲಶಾಸ್ತ್ರಿ ಯವರ " ಅಮುದಿತ್ರ ಜೈನ ಕನ್ನಡ ಗ್ರಂಥಗಳು " ಕರ್ನಾಟಕ ಭಾರತಿ, ಸಂಚಿಕೆ, ೨, ೧೯೬೯ ರಲ್ಲಿ ಪ್ರಕಟವಾಗಿದೆ.

ಎಸ್. ಶಿವಣ್ಣನವರ ' ವೀರಶೈವ ಅಪ್ರಕಟಿತ ಗ್ರಂಥಗಳು ' ಗ್ರಂಥಸೂಚಿ ಕರ್ನಾಟಕ ಭಾರತಿ ಸಂಚಿಕೆ (೨); ಸಂಚಿಕೆ (೩), ಸಂಪುಟ (೩) ೧೯೭೮ ರಲ್ಲಿ ಪ್ರಕಟನೆ ಕಂಡವು. ನಂತರ ಈ ಎರಡು ಪತ್ರಿಕೆಗಳಲ್ಲಿ ಬೆಳಕು ಕಂಡ ಗ್ರಂಥಸೂಚಿಯನ್ನು ೧೯೮೨ ರಲ್ಲಿ ಗದಗಿನ ವೀರಶೈವ ಅಧ್ಯಯನ ಸಂಸ್ಥೆ ಪ್ರಕಟಿಸಿ ಗ್ರಂಥಸೂಚಿ ಅಭ್ಯಾಸಿಗಳಿಗೆ ಆಕರವನ್ನು ಒದಗಿಸಿದೆ.

' ವೈದಿಕ ಅಪ್ರಕಟಿತ ಗ್ರಂಥಗಳ ಸೂಚಿ ' ಯನ್ನು ಕರ್ನಾಟಕ ವಿಶ್ವವಿದ್ಯಾಲಯ, ಕರ್ನಾಟಕ ಭಾರತೀಯ ಸಂಚಿಕೆ (೩) ಸಂಪುಟ (೪); ಸಂಚಿಕೆ (೪) ಸಂಪುಟ (೪) ರಲ್ಲಿ ಕ್ರಮವಾಗಿ ಪ್ರಕಟಿಸಲ್ಪಟ್ಟವು. ಇಲ್ಲಿ ವೈದಿಕ ಮತ್ತು ಬ್ರಾಹ್ಮಣ ಸಾಹಿತ್ಯದ ಕುರಿತು ಅಪ್ರಕಟಿತ ಗ್ರಂಥಗಳ ಪಟ್ಟಿ ಇದಾಗಿದೆ.

## ೪.೨.೧೧.೭ : ಗ್ರಂಥಾಲಯ ಮತ್ತು ಮಾಹಿತಿ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಸೂಚಿಗಳು

ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯ, ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗದ ಸ್ನಾತಕ ಪದವಿ ಪಡೆಯುವ ವಿದ್ಯಾರ್ಥಿಗಳ ಸಂಪ್ರಬಂಧ ರಚನೆಯು ಅಧ್ಯಯನದ ಒಂದು ಭಾಗವಾಗಿದ್ದು; ಈ ವಿಭಾಗದ ಪ್ರಾಧ್ಯಾಪಕರಾದ ಡಾ. ಎಸ್. ಎಲ್. ಸಂಗಮ ಅವರು ತಮ್ಮ ವಿಭಾಗದ ಐವರು ವಿಧ್ಯಾರ್ಥಿಗಳ ಗ್ರಂಥಸೂಚಿ ರಚನೆಯ ಪ್ರಯತ್ನಗಳು ಇಲ್ಲಿ ಉಲ್ಲೇಖನೀಯ. ಈ ವಿಭಾಗದ ಕೀರ್ತಿಯನ್ನು ಹೆಚ್ಚಿಸಬಲ್ಲವು.

೧. ಡಾ. ಗಿರಡ್ಡಿ ಗೋವಿಂದರಾಜ ಸಾಹಿತ್ಯ ಕೃತಿಗಳ ಗ್ರಂಥಸೂಚಿ : ಕುಂಬಾರ ಐ. ಬಿ., ೧೯೯೪

೨. ಶ್ರೀರಂಗರ ನಾಟಕ ಮತ್ತು ಸಾಹಿತ್ಯ ಕೃತಿಗಳ ಗ್ರಂಥಸೂಚಿ : ಚವ್ಹಾಣ ಸಿ. ಟಿ., ೧೯೯೯

೩. ಡಾ. ಶಾಂತಿನಾಥ ದೇಸಾಯಿ ಕೃತಿಗಳ ಅಕಾರಾದಿ ಗ್ರಂಥಸೂಚಿ : ವೈ. ಎನ್. ಮುದಕವಿ, ೧೯೯೯ - ೨೦೦೦

೪. ಡಾ. ಎಂ. ಎಂ. ಕಲಬುರ್ಗಿ ಅವರ ಕೃತಿಗಳ ಗ್ರಂಥಸೂಚಿ : ಹನುಮಂತ ಚಿಗರಿ, ೨೦೦೦

೫. ಡಾ. ಜಿ. ಎಸ್. ಆಮೂರ ಅವರ ಕೃತಿಗಳ ಗ್ರಂಥಸೂಚಿ : ಸಾಲಮಂಟಪ, ೨೦೦೨

ಹೀಗೆ ಒಟ್ಟು ಐವರು ಸಾಹಿತಿಗಳ ಮತ್ತು ಅವರ ಕೃತಿಗಳ ಸೂಚಿಯೊಂದಿಗೆ ಕೃತಿಗಳ ಸಾರಸಂಗ್ರಹ, ಪ್ರಶಸ್ತಿಗಳು, ಅವರ ಜೀವನದಲ್ಲಿ ನಡೆದ ಮಹತ್ವದ ಘಟನೆಗಳನ್ನು ಇಲ್ಲಿ ದಾಖಲಿಸಲಾಗಿದೆ. ವಿದ್ಯಾರ್ಥಿಗಳಿಗೆ ಇದೊಂದು ಪ್ರಾಯೋಗಿಕ ತರಬೇತಿ ಆಗಿದ್ದರೂ ವಿದ್ಯಾರ್ಥಿಗಳು ಈ ದಿಶೆಯಲ್ಲಿ ಬೆಳೆಯಲು ಮತ್ತು ತಮ್ಮ ನಿರಂತರ ಅಧ್ಯಯದಲ್ಲಿ ಇಂತಹ ಹವ್ಯಾಸಗಳನ್ನು ಬೆಳೆಸಿಕೊಂಡು ಹೆಚ್ಚೆಚ್ಚು ಕೃತಿಗಳನ್ನು ರಚನೆ ಮಾಡಬಹುದು. ಇವೆಲ್ಲ ಅಪ್ರಕಟಿತವಾಗಿದ್ದು ಈಗಾಗಲೇ ದೇಸಾಯಿ ಮತ್ತು ಕಲಬುರ್ಗಿಯವರು ಈ ಕೃತಿಸೂಚಿಗಳನ್ನು ಬಳಸಿಕೊಂಡಿರಬಹುದು ಎಂದು ಹೇಳಲಾಗಿದೆ.

ಈ ಕೃತಿಸೂಚಿಗಳಿಗೆ ಮಾರ್ಗದರ್ಶನ ನೀಡಿದವರು ಡಾ. ಎಸ್. ಎಲ್. ಸಂಗಮ ವರ್ಷಕ್ಕೊಂದಾದರೂ ಕೃತಿಸೂಚಿಗಳನ್ನು ರಚಿಸಲು ಇನ್ನೂ ಪ್ರೇರೇಪಣೆ ನೀಡಲಿ. ವಿದ್ವಾಂಸರು ಇವನ್ನು ಬೆಳೆಸಿಕೊಳ್ಳಲಿ. ವಿಭಾಗದ ಮತ್ತು ಪ್ರಾಧ್ಯಾಪಕರ ಕೆಲಸ ಹೆಮ್ಮೆ ಮತ್ತು ಅಭಿಮಾನದ ವಿಷಯವೇ ಸರಿ. ಹೀಗಾಗಿ ಇದೊಂದು ಗಮನಾರ್ಹ ಮತ್ತು ಅಭಿನಂದನೀಯ ಕಾರ್ಯಕ್ರಮ. ಇವು ಆಕರಸೂಚಿಗಳಾಗುವುದರಲ್ಲಿ ಸಂಶಯವಿಲ್ಲ.

## ೪.೨.೧೧.೮ : ಹತ್ತೊಂಬತ್ತನೆಯ ಶತಮಾನದ ಪುಸ್ತಕಗಳು

ಇದು ಬೆಂಗಳೂರು ವಿಶ್ವವಿದ್ಯಾಲಯ, ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗದಡಿಯಲ್ಲಿ ಡಾ. ಅಶೋಕ ಯ. ಅಸುಂಡಿಯವರ ಮಾರ್ಗದರ್ಶನದಲ್ಲಿ ಸ್ನಾತಕ ಪದವಿಗಾಗಿ ಕೃಷ್ಣಮೂರ್ತಿ ಎನ್. ಟಿ. ಅವರು ರಚಿಸಿದ ಪ್ರಬಂಧ. ಈ ಪ್ರಬಂಧದಲ್ಲಿ ಹತ್ತೊಂಬತ್ತನೆಯ ಶತಮಾನದ ಪುಸ್ತಕಗಳ ಪರಿಚಯ ಮತ್ತು ಪರಿಶೀಲನೆ ಇದೆ.

ಮೊದಲ ಅಧ್ಯಾಯದಲ್ಲಿ ಪುಸ್ತಕಗಳ ಉದ್ದೇಶ, ಲಕ್ಷಣ ಮತ್ತು ವಿವರಣೆಗಳಿವೆ. ಸಂದರ್ಭ ಗ್ರಂಥಗಳು, ಉಗಮ, ವಿವಿಧತೆಗಳ ಬಗೆಗೆ ಚರ್ಚೆ ಇದೆ.

ಎರಡನೆಯ ಅಧ್ಯಾಯದಲ್ಲಿ ಗ್ರಂಥಗಳ ವಿಮರ್ಶಾತ್ಮಕ ವಿವರಗಳಿದ್ದು ಈ ಶತಮಾನದ ಪುಸ್ತಕಗಳು, ಗ್ರಂಥಸೂಚಿಗಳು, ಕೈಪಿಡಿಗಳು, ಶಬ್ದಾರ್ಥ ಕೋಶಗಳು, ನಿಘಂಟುಗಳು, ವಿಶ್ವಕೋಶಗಳು, ಗಾದೆಗಳು, ಒಡಬುಗಳು, ವಾರ್ಷಿಕ, ಪಂಚಾಂಗ, ಭೌಗೋಲಿಕ ಕೋಶಗಳು, ಜೀವನ ಚರಿತ್ರೆ ಕೋಶಗಳು ಇತ್ಯಾದಿಗಳನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ದಾಖಲೆಯ ರೂಪ ಮತ್ತು ವಿವರಗಳು, ಸಂದರ್ಭ ಗ್ರಂಥಗಳ ವಿವರಣಾತ್ಮಕ ಸೂಚಿ ಇದೆ. ಸಾಮಗ್ರಿಗಳನ್ನು ಸಂಗ್ರಹ ಮಾಡಿರುವ ರೀತಿ ರಿವಾಜುಗಳು ಇತ್ಯಾದಿ ವಿವರಿಸಿದ್ದಾರೆ.

ಹತ್ತೊಂಬತ್ತನೆ ಶತಮಾನದ ಪುಸ್ತಕಗಳು ಯಾವ ರೀತಿ ಇದ್ದವು, ಅವುಗಳ ರೂಪ-ರೇಷೆಗಳೇನು ? ಆ ರಚನೆಗಳ ಹಿಂದಿನ ಪ್ರೇರಣೆಗಳನ್ನು ಸಂದರ್ಭಗಳನ್ನು ಕುರಿತು ವಿವೇಚಿಸಲಾಗಿದೆ. ಹೀಗಾಗಿ ಆಸಕ್ತರಿಗೆ ಸಂಶೋಧಕರಿಗೆ ಇದೊಂದು ಅತ್ಯುತ್ತಮ ಆಕರಗ್ರಂಥವಾಗಿದೆ. ಇದಕ್ಕೆ ವಿಷಯ ಸೂಚಿಸಿ ಮಾರ್ಗದರ್ಶನ ಮಾಡಿದ ಡಾ. ಅಶೋಕ ಅಸುಂಡಿ ಅವರು ಅಭಿನಂದನಾರ್ಹರು. ಈ ದಿಶೆಯಲ್ಲಿ ಡಾ. ಸಿ. ಆರ್. ಕರಿಸಿದ್ದಪ್ಪ ೧೯ ನೇ ಶತಮಾನದ ಕನ್ನಡ ಸಂದರ್ಭ ಗ್ರಂಥಗಳು : ಒಂದು ತಾಂತ್ರಿಕ ಅಧ್ಯಯನ (೧೮೦೦ - ೧೯೦೦) ಒಂದು ಮಹತ್ವದ ಸಂಶೋಧನಾ ಸಂಪ್ರಬಂಧ (ಅಪ್ರಕಟಿತ) ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾಕ್ಕೆ ೧೯೮೩ ರಲ್ಲಿ ಸಾದರಪಡಿಸಲಾಗಿದೆ.

## ೪.೨.೧೧.೯ : ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ, ಸಂಪುಟ - ೧

ಕನ್ನಡ ವಿಶ್ವವಿದ್ಯಾಲಯವು ಸ್ಥಾಪನೆಯಾಗಿ ಹತ್ತು ವರುಷಗಳು ಸಂದಿವೆ. ಅದು ಕನ್ನಡದ ವಿವಿಧ ಕ್ಷೇತ್ರಗಳಲ್ಲಿ ಮಹತ್ವದ ಯೋಜನೆಗಳನ್ನು ರೂಪಿಸಿಕೊಂಡು ಕ್ಷೇತ್ರಕಾರ್ಯ ಮಾಡಿ, ವಿಸ್ತಾರವಾದ ಪ್ರಸ್ತಾವನೆಗಳೊಂದಿಗೆ ಪುಸ್ತಕಗಳನ್ನು ಪ್ರಕಟಿಸುತ್ತದೆ. ಹಾಗೆ ನೋಡಿದರೆ ಉಳಿದ ವಿಶ್ವವಿದ್ಯಾಲಯಗಳಿಗಿಂತಲೂ ಭಿನ್ನವಾಗಿ ಕೆಲಸ ನಿರ್ವಹಿಸುವದರ ಮೂಲಕ ಅದು ತನ್ನ ದಾಖಲೆಯನ್ನು ನಿರ್ಮಾಣ ಮಾಡುತ್ತ ಹೊರಟಿದೆ. ಅದರ ಯೋಜನೆಗಳಲ್ಲಿ ಪ್ರಮುಖವಾಗಿ ಪುಸ್ತಕ ಪರಿಚಯ, ದ್ರಾವಿಡ, ಜಾನಪದ, ಕನ್ನಡ ಅಧ್ಯಯನ, ಇವೆಲ್ಲ ಪತ್ರಿಕೆಗಳು ಸಂಬಂಧಿಸಿದ ಕ್ಷೇತ್ರದಲ್ಲಿ ಮಹತ್ವದ ಸೃಷ್ಟಿಗಳನ್ನೆ ಸೃಷ್ಟಿಸುತ್ತವೆ. ವಿಶ್ವಕೋಶ ಯೋಜನೆಗಳನ್ನು ರೂಪಿಸಿಕೊಂಡು ಸಮಾಜ ಕಾರ್ಯ, ದೇವಾಲಯ ಕೋಶ, ವೈದ್ಯಕೋಶ ಕಿರಿಯರ ವಿಶ್ವಕೋಶ ಮುಂತಾದ ವಿಶ್ವಕೋಶಗಳನ್ನು ಪ್ರಕಟಿಸಿದೆ. ಅಲ್ಲದೆ ' ಕನ್ನಡ ವಾರ್ಷಿಕ ' ವೆಂಬ ವಾರ್ಷಿಕವನ್ನು ಇದು ಪ್ರಕಟಿಸುತ್ತಿರುವುದು ತುಂಬಾ ಮಹತ್ವದ ಬೆಳವಣಿಗೆಯೇ ಸರಿ.

ಹೀಗೆ ಅದು ಹಸ್ತಪ್ರತಿಸೂಚಿ ಸಂಪುಟ - ೧ ಕೃತಿಯು ಕ್ಷೇತ್ರಕಾರ್ಯದ ಮೂಲಕ ಮಾಡಿದ ಮಹತ್ವಪೂರ್ಣ ಯೋಜನೆಗಳಲ್ಲಿ ಮುಖ್ಯವಾದುದು. ಏಳುನೂರಾ ಇಪ್ಪತ್ಮೂರು ಕೃತಿಗಳನ್ನು ಒಳಗೊಂಡಿದೆ. ಅನುಬಂಧದಲ್ಲಿ ಕೃತಿಕಾರರ ಸೂಚಿ, ಸ್ಥಳನಾಮ, ಲಿಪಿಕಾರರ, ಹಸ್ತಪ್ರತಿ ನೀಡಿದವರ ಸೂಚಿಗಳನ್ನು ಪ್ರಕಟಿಸಿದ್ದಾರೆ. ಇದನ್ನು ಸಂಪಾದಿಸಿದವರು ಎಫ್. ಟಿ. ಹಳ್ಳಿಕೇರಿ ಮತ್ತು ಕೆ. ರವೀಂದ್ರನಾಥ ಅವರು.

## ೪.೨.೧೧.೧೦ : ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂಪುಟ - ೨

ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದ ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂಪುಟ - ೩ ನೆಯದಾಗಿದೆ. ಇದನ್ನು ಸಂಪಾದಿಸಿದವರು ವೀರೇಶ ಬಡಿಗೇರ ಮತ್ತು ಎಸ್. ಆರ್. ಚನ್ನವೀರಪ್ಪನವರು. ಐದುನೂರಾ ನಲವತ್ತೈದು ಕನ್ನಡ ಕೃತಿಗಳ ಸೂಚಿಯಿದೆ.

ಅನುಬಂಧದಲ್ಲಿ – ೧. ಕವಿಸೂಚಿ

೨. ಸ್ಥಳನಾಮ ಸೂಚಿ

೩. ಲಿಪಿಕಾರ ಸೂಚಿ

೪. ಬರೆಸಿದವರ ಸೂಚಿ

೫. ದಾನಿಗಳ ಸೂಚಿ

ಈ ರೀತಿ ಸಮಸ್ತ ವಿವರಗಳನ್ನು ನೀಡಿದ್ದಾರೆ. ಸಂಪುಟ - ೧ ರಲ್ಲಿ ಬರೆಸಿದವರ ಕುರಿತು ಸೂಚಿ ಇಲ್ಲ. ಇಲ್ಲಿ ಅದನ್ನು ವಿವರಿಸಿದ್ದಾರೆ. ಹೀಗಾಗಿ ಇವೆಲ್ಲ ಸಂಶೋಧಕರಿಗೆ ಮೂಲ ಆಕರಗಳಾಗಿ ಪರಿಣಮಿಸುತ್ತವೆ. ಇಲ್ಲಿ ಸವಿಸ್ತಾರವಾದ ಪ್ರಸ್ತಾವನೆಯನ್ನು ಅದು ಜಾಗತೀಕರಣ ಮತ್ತು ಅದರ ಪರಿಣಾಮಗಳ ದಿಶೆಯಲ್ಲಿ ದೇಶೀಯ ಸಾಹಿತ್ಯದ ಮೇಲಾಗುವ ಪ್ರಮಾದವನ್ನು ವಿವರಿಸಿದ್ದಾರೆ. ಹೀಗಾಗಿ ಇದೊಂದು ವೈವಿಧ್ಯಮಯ ಸೂಚಿ. ಹೀಗೆ ಕನ್ನಡ ವಿಶ್ವವಿದ್ಯಾಲಯ ಒಂದು ಮಹತ್ವದ ದಾಖಲೀಕರಣವನ್ನು ಮುಂದಿನ ಪೀಳಿಗೆಯವರೆಗೆ ನಿರ್ಮಿಸುವುದು ಸಂತಸ ಮತ್ತು ಅಭಿನಂದನೀಯ ಕೆಲಸ. ಇಲ್ಲಿಯ ೨ ಸೂಚಿಗಳು ಎಲ್ಲಿಂದ ಎಲ್ಲಿಯವರೆಗಿನ ಕಾಲಾವಧಿಯಲ್ಲಿ ಒಳಗೊಂಡಿರುತ್ತವೆ ಎಂಬುದನ್ನು ತಿಳಿಸಿಲ್ಲ.

## ೪.೨.೧೧.೧೧ : ಕನ್ನಡ ಅಧ್ಯಯನ : ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯವು ತಾನೊಂದು ಸಂಶೋಧನ ಸಂಸ್ಥೆಯಾಗಿ ಪ್ರಕಟಿಸುತ್ತಿರುವ ಹಲವು ನಿಯತಕಾಲಿಕೆಗಳಲ್ಲಿ, ' ಕನ್ನಡ ಅಧ್ಯಯನ ' ವು ಒಂದು. ವಿದ್ವತ್ ಪತ್ರಿಕೆಯಾಗಿದೆ. ಇದು ಕರ್ನಾಟಕದ ಅಧ್ಯಯನಗಳಿಗೆ

ಮೀಸಲಾದ ಪತ್ರಿಕೆ, ಕರ್ನಾಟಕದ ಜನ, ಸಮಾಜ, ಭಾಷೆ, ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ಧರ್ಮ, ಆರ್ಥಿಕತೆ, ರಾಜಕಾರಣ, ಪರಿಸರ, ಕಲೆ, ಮುಂತಾದ ಕ್ಷೇತ್ರಗಳಲ್ಲಿ ನಡೆಯುವ ಚರ್ಚೆ - ಶೋಧಗಳು ಇಲ್ಲಿ ಪ್ರಕಟವಾಗುತ್ತವೆ. 'ಕನ್ನಡ ಅಧ್ಯಯನ'ವು ಏಕಕಾಲಕ್ಕೆ ನಾಡಿನ ಗತಕಾಲದ ತಡಕಾಟವನ್ನು, ವರ್ತಮಾನದ ಮುಖಾ-ಮುಖಿಯನ್ನು ಹಾಗೂ ಭವಿಷ್ಯದ ಕನಸು ಕಟ್ಟುವಿಕೆಯನ್ನು ಮಾಡಬಯಸುತ್ತದೆ. ಈ ಮೂಲಕ ವಿದ್ವಾಂಸರಿಗೆ ಸಾಂಸ್ಕೃತಿಕ ವೇದಿಕೆಯಂತೆಯೂ, ಓದುಗರಿಗೆ ಬೌದ್ಧಿಕ ಸಂಗಾತಿಯಂತೆಯೂ ಕೆಲಸ ಬೇಕೆಂಬುದು ಇದರ ಹಂಬಲ.

'ಕನ್ನಡ ಅಧ್ಯಯನ'ವು ಸೊಲ್ಲು, ಲೇಖನ, ಹಿಂದಣ ಹೆಜ್ಜೆ, ಕನ್ನಡಿ, ಎಲೆಮರೆ, ಮುಖಾಮುಖಿ, ಹೊಳವು, ಪುಸ್ತಕ ಪರಿಚಯ, ಆಕರ ಸೂಚಿ– ಮುಂತಾದ ವಿಭಾಗಗಳಲ್ಲಿ ಬರಹಗಳನ್ನು ಒಳಗೊಂಡಿರುತ್ತದೆ. ಪತ್ರಿಕೆಯ ಪ್ರತಿ ಸಂಪುಟದಲ್ಲಿ ಮಳೆ, ಚಳಿ, ಗಾಳಿ, ಬಿಸಿಲು ಎಂಬ ಹೆಸರಿನ ನಾಲ್ಕು ಸಂಚಿಕೆಗಳು ಇರುತ್ತವೆ.

ಡಾ. ರಹಮತ್ ತರೀಕೆರೆ ಸಂಪಾದಕರಾಗಿರುವ ಹಾಗೆಯೆ ಪತ್ರಿಕೆಗೆ ಒಂದು ಹರವು ನೀಡಿದ್ದಾರೆ. ಪತ್ರಿಕೆಗಳಲ್ಲಿ ಬರುವ ಲೇಖನಗಳೆಲ್ಲ ಕತೆ, ಕಾದಂಬರಿಗಳನ್ನು ಓದುವ ಹಾಗೆ ಓದಿದರೆ ನಡೆದೀತು ಅನ್ನುವ ಹಾಗಿಲ್ಲ. ಹಾಗೆ ಓದಿಸಿಕೊಂಡು ಹೋಗುತ್ತದೆ. ಜೊತೆಗೆ ಚಿಂತನಕ್ಕೀಡು ಮಾಡುತ್ತವೆ. ಶೋಧನೆಗೆ ಹಚ್ಚುತ್ತವೆ. ಬಹುಶಃ ಈ ಕೆಲಸ ಸಣ್ಣದಲ್ಲ. ಪತ್ರಿಕೆಗೆ ಈ ರೂಪ ಕೊಡುವದರಲ್ಲಿ ತರೀಕೆರೆಯವರ ಚಿಂತನಾ ಕ್ರಮ, ಅಭ್ಯಾಸಗಳು ಕಾರಣವಾಗಿರಬಹುದು. ಇವರು ಕಟ್ಟಿಕೊಡುವ ಆಶಯ ಮಾತ್ರ ಬಹಳ ದೊಡ್ಡದು.

ಇಲ್ಲಿ ವಿಶೇಷವಾಗಿ ಪ್ರಕಟವಾಗುವ ಆಕರಸೂಚಿಗಳು ಆಯಾ ಕ್ಷೇತ್ರದಲ್ಲಿ ಅಧ್ಯಯನದಲ್ಲಿ ತೊಡಗುವವರಿಗೆ, ಸಂಶೋಧಕರಿಗೆ ಬಹಳ ಉಪಯುಕ್ತವಾಗಿದೆ. ಇಂತಹ ಪ್ರಯತ್ನ ಬಹುಶಃ ಕನ್ನಡದಲ್ಲಿ ಇದೇ ಮೊದಲಿರಬಹುದು.

## ೪.೨.೧೧.೧೨ : ಕನ್ನಡ ವಿಶ್ವವಿದ್ಯಾಲಯದ ನಿಯತಕಾಲಿಕೆಗಳು

ಕರ್ನಾಟಕದ ಸರ್ವತೋಮುಖ ಸಂಶೋಧನೆಗೆ ತೊಡಗಿಸಿಕೊಂಡಿರುವ ಕನ್ನಡ ವಿಶ್ವವಿದ್ಯಾಲಯ ಪ್ರಕಟಣೆಯ ಮೂಲಕ ಅಧ್ಯಯನದ ದಾಖಲೀಕರಣಕ್ಕೆ ಮುಂತಾದರೆ, ಪತ್ರಿಕೆಗಳ ಪ್ರಕಟಣೆಗಳು ಮೂಲಕ ಆ ಅಧ್ಯಯನದ ಫಲಿತಗಳ ಸಂವಾದ, ಚರ್ಚೆ, ಹಾಗೂ ಉಪಯುಕ್ತತೆ, ಪ್ರಸ್ತುತತೆಯನ್ನು ಸಂವಹನಗೊಳಿಸುವ ಉದ್ದೇಶವನ್ನಿರಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಈಗಾಗಲೇ ಕನ್ನಡ ಅಧ್ಯಯನ, ಮಹಿಳಾ ಅಧ್ಯಯನ, ವಿಜ್ಞಾನ ಸಂಗಾತಿ, ಪುಸ್ತಕ ಮಾಹಿತಿ, ನಮ್ಮ ಕನ್ನಡ, ಚೆಲುವ ಕನ್ನಡ ಪತ್ರಿಕೆಗಳನ್ನು ಪ್ರಕಟಿಸುತ್ತ ಬಂದಿದೆ. ಇತ್ತೀಚೆಗೆ ಹೊಸದಾಗಿ ದ್ರಾವಿಡ ಅಧ್ಯಯನ, ಅಭಿವೃದ್ಧಿ ಅಧ್ಯಯನ ಮತ್ತು ಜಾನಪದ ಕರ್ನಾಟಕಗಳೆಂಬ ಪತ್ರಿಕೆಗಳು ಹೊರಡುತ್ತಲಿವೆ.

ಈ ಹೊಸ ನಿಯತಕಾಲಿಕೆಗಳ ಸಂಪಾದಕರ ಆಶಯ ಮಹತ್ವಾಕಾಂಕ್ಷೆಯಿಂದ ಹೊಸ ಮತ್ತು ಪರಿಣಾಮಕಾರಿ ಮನೋಧರ್ಮದಿಂದ ಕೂಡಿದ್ದು, ಕನ್ನಡ - ಗನ್ನಡಿಗ - ಕರ್ನಾಟಕದ ನೆಲೆಯಲ್ಲಿ ದ್ರಾವಿಡ ಮೂಲವಾದ ಕನ್ನಡ ಭಾಷೆ, ಕನ್ನಡಿಗರ ಸಾಮಾಜಿಕ ಬದುಕು ಮತ್ತು ಕರ್ನಾಟಕದ ಒಟ್ಟು ಜನಪದ ಧೋರಣೆಗಳನ್ನು ಕಟ್ಟಿಕೊಡುವಲ್ಲಿ, ಪರಿಚಲನೆಗೊಳಿಸುವಲ್ಲಿ ವಿಶ್ವವಿದ್ಯಾಲಯದ ಈ ಕಾರ್ಯ ಅಭಿನಂದನೀಯವಾದದ್ದು.

'ಪುಸ್ತಕ ಮಾಹಿತಿ'ಯು ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಹತ್ವದ ಪ್ರಕಟಣೆಗಳಲ್ಲೊಂದು. ಪುಸ್ತಕೋದ್ಯಮದ ಸಮೃದ್ಧ ಸಂಚಿಕೆಯಾದ ಇದು ಪುಸ್ತಕ ಬಿಡುಗಡೆಯ, ಪ್ರಶಸ್ತಿಗಳ ಪಟ್ಟಿಯನ್ನು ಪುಸ್ತಕ ಮಾಹಿತಿಯ ಹಿಂಬದಿ ಪುಟದಲ್ಲಿ ಪ್ರಕಟಿಸುತ್ತಿದೆ. ಇದರಲ್ಲಿ ಕರ್ನಾಟಕದಲ್ಲೆಲ್ಲ ಬಿಡುಗಡೆಯಾದ ಪುಸ್ತಕಗಳ ವಿವರವಿರುತ್ತದೆ. ಹಾಗೆಯೇ ವರ್ಷವಾರು, ಆಯಾ ತಿಂಗಳು ಪ್ರಶಸ್ತಿಗಳು ಪ್ರಕಟವಾದಲ್ಲಿ ಆ ಬಗ್ಗೆಯು ಸುದ್ದಿಯ ಮಾಹಿತಿಯನ್ನು ಒದಗಿಸುತ್ತದೆ.

i) **ತಿಂಗಳ ಪುಸ್ತಕ :** ಪ್ರಕಟವಾಗುವ ಪುಸ್ತಕಗಳನ್ನು ಆಯ್ಕೆ ಮಾಡಿಕೊಂಡು ಉತ್ತಮ ಪುಸ್ತಕದ ಬಗ್ಗೆ ವಿಮರ್ಶೆಯನ್ನು ಪ್ರಕಟಿಸುತ್ತದೆ. ವಿಶ್ವವಿದ್ಯಾಲಯದ ವಿದ್ವಾಂಸರೊಬ್ಬರು ಪುಸ್ತಕದ ಬಗ್ಗೆ ಸವಿವರ ವಿಮರ್ಶೆಯನ್ನು ವ್ಯಕ್ತಪಡಿಸುತ್ತಾರೆ.

ii) **ನಮ್ಮ ಪ್ರಕಟಣೆ :** ಕನ್ನಡ ವಿಶ್ವವಿದ್ಯಾಲಯದ ವಿದ್ವಾಂಸರು ಪ್ರಕಟಿಸಿದ ಪುಸ್ತಕಗಳ ಬಗ್ಗೆಯಾಗಲಿ ಅಥವಾ ಹೊರಗಿನವರಾಗಿದ್ದು ವಿಶ್ವವಿದ್ಯಾಲಯ ಪ್ರಕಟಿಸಿದ ಪುಸ್ತಕಗಳು ಆಗಿರಬಹುದು. ಅಂತಹ ಪುಸ್ತಕಗಳ ಬಗ್ಗೆಯು ಕರ್ನಾಟಕದ ವಿವಿಧ ಪತ್ರಿಕೆಗಳಲ್ಲಿ ಬಂದ ವಿಮರ್ಶೆಗಳನ್ನು ಪುಸ್ತಕ ಮಾಹಿತಿಯಲ್ಲಿ ಮತ್ತೊಮ್ಮೆ ಅದೇ ವಿಮರ್ಶೆಯನ್ನು ಮರುಮುದ್ರಣ ಮಾಡುತ್ತಾರೆ.

iii) **ಪರಿಶೀಲನೆ :** ಈ ವಿಭಾಗದಲ್ಲಿ ಕರ್ನಾಟಕದ ವಿವಿಧ ಲೇಖಕರು ಪ್ರಕಟಿಸಿದ ಪುಸ್ತಕಗಳ ವಿಮರ್ಶೆ, ಸಮೀಕ್ಷೆ ಇರುತ್ತದೆ. ಇದು ಆಯಾ ವಿದ್ವಾಂಸರ ಪುಸ್ತಕಗಳನ್ನು ಅವಲಂಬಿಸಿರುತ್ತದೆ. ಹೆಸರಾಂತ ಲೇಖಕರಾಗಿದ್ದರೆ, ಒಂದು ಪುಟ ಕೆಲವೊಬ್ಬರ ಪುಸ್ತಕಗಳಿಗೆ ಅರ್ಧಪುಟಗಳು, ಅದಕ್ಕಿಂತಲೂ ಹೆಚ್ಚಿಗೂ ಬರೆಯಬಹುದು. ಹೀಗೆ ಈ ಅಂಕಣ ಒಟ್ಟಿನಲ್ಲಿ ಪುಸ್ತಕಗಳ ವಿಶೇಷ ಮಾಹಿತಿಯ ರೀತಿಯಲ್ಲಿ ಇರಬಹುದೆನಿಸುತ್ತದೆ

iv) **ಪ್ರಕಾಶಕ - ಪ್ರಕಾಶನ :** ಪ್ರಕಾಶಕ - ಪ್ರಕಾಶನ ವಿಭಾಗದಲ್ಲಿ ಪ್ರಕಾಶಕರಾಗಿ ಪ್ರಕಾಶನವನ್ನು ಒಂದು ಉದ್ಯಮವನ್ನಾಗಿ ಸ್ವೀಕರಿಸಿ ಬೆಳೆಸಿದ ಬಗ್ಗೆ ವಿವರಣಾತ್ಮಕ ಲೇಖನವನ್ನು ವಿಶ್ವವಿದ್ಯಾಲಯದ ವಿದ್ವಾಂಸರೊಬ್ಬರು ಬರೆದು ಪರಿಚಯಿಸುತ್ತಾರೆ. ಇದು ಒಳ್ಳೆಯ ಪ್ರಯತ್ನವೆಂದೇ ಹೇಳಬಹುದು. ಪ್ರಕಾಶಕರ ಬಗೆಗಿನ ಮಾಹಿತಿಯಾಗಲಿ ಪ್ರಕಾಶಕನ ಬಗೆಗಿನ ಮಾಹಿತಿಯಾಗಲಿ ಎಲ್ಲೂ ಸಿಗುವುದಿಲ್ಲ. ಅಂಥ ಪ್ರಯತ್ನ ಈ ಅಂಕಣದಲ್ಲಿ ಸಿಗುತ್ತದೆ.



# ಕನ್ನಡ ವಿಶ್ವವಿದ್ಯಾಲಯದ ಹೊಸ ನಿಯತಕಾಲಿಕೆಗಳು

ಕರ್ನಾಟಕದ ಸರ್ವತೋಮುಖ ಸಂಶೋಧನೆಗೆ ತೊಡಗಿಸಿಕೊಂಡಿರುವ ಕನ್ನಡ ವಿಶ್ವವಿದ್ಯಾಲಯ ಪುಸ್ತಕ ಪ್ರಕಟಣೆಯ ಮೂಲಕ ಅಧ್ಯಯನದ ದಾಖಲೀಕರಣಕ್ಕೆ ಮುಂದಾದರೆ, ಪತ್ರಿಕೆಗಳ ಪ್ರಕಟಣೆಯ ಮೂಲಕ ಆ ಅಧ್ಯಯನದ ಫಲಿತಗಳ ಸಂವಾದ, ಚರ್ಚೆ ಹಾಗೂ ಉಪಯುಕ್ತತೆ, ಪ್ರಸ್ತುತತೆಯನ್ನು ಸಂವಹನಗೊಳಿಸುವ ಉದ್ದೇಶವನ್ನಿರಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಈಗಾಗಲೇ ಕನ್ನಡ ಅಧ್ಯಯನ, ಮಹಿಳಾ ಅಧ್ಯಯನ, ವಿಜ್ಞಾನ ಸಂಗಾತಿ, ಪುಸ್ತಕ ಮಾಹಿತಿ, ನಮ್ಮ ಕನ್ನಡ ಹಾಗೂ ಚೆಲುವ ಕನ್ನಡ ಪತ್ರಿಕೆಗಳನ್ನು ಪ್ರಕಟಿಸುತ್ತ ಬಂದಿದೆ. ಇತ್ತೀಚೆಗೆ ಹೊಸದಾಗಿ ದ್ರಾವಿಡ ಅಧ್ಯಯನ, ಅಭಿವೃದ್ಧಿ ಅಧ್ಯಯನ ಹಾಗೂ ಜಾನಪದ ಕರ್ನಾಟಕಗಳೆಂಬ ಪತ್ರಿಕೆಗಳು ಹೊರಡುತ್ತಲಿವೆ.

ದ್ರಾವಿಡ ಅಧ್ಯಯನ ವಿಭಾಗದಿಂದ ಹೊರಬರುತ್ತಲಿರುವ 'ದ್ರಾವಿಡ ಅಧ್ಯಯನ' ಪತ್ರಿಕೆ ದ್ರಾವಿಡ ಭಾಷೆ, ಜನಾಂಗ, ಸಂಸ್ಕೃತಿ, ಕಲೆ, ಧರ್ಮ, ಚರಿತ್ರೆ ಮುಂತಾದವುಗಳನ್ನು ಕುರಿತು ಸಂವಾದ - ಚರ್ಚೆಯ ಮೂಲಕ ಪರಿಚಯಿಸುತ್ತದೆ. ಇಂತಹ ಸಂವಾದಗಳ ನೆಲೆ ಯಾವ ರೀತಿಯದಾಗಿರಬೇಕೆಂಬುದನ್ನು ಸಂಪಾದಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು ಹೀಗೆ ತಿಳಿಸುತ್ತಾರೆ : "ಕನ್ನಡ, ತಮಿಳು, ಮಲಯಾಳಂ, ತೆಲುಗು, ತುಳು ಮತ್ತು ದ್ರಾವಿಡದ ಇತರ ಉಪಭಾಷೆಗಳು ಕೇವಲ ಚಾರಿತ್ರಿಕ ಗತಿಯನ್ನು ಮಾತ್ರ ಅನುಸರಿಸದೆ ಅವು ಒಂದರೊಳಗೊಂದು ಅನಾದಿ ಕಾಲದಿಂದ ಮಾಡಿಕೊಂಡ ಕೊಡುಕೊಳ್ಳುವಿಕೆಗಳ ಚೈತನ್ಯದಲ್ಲಿ ಮುಳುಗಿದ್ದವು. ಅವು ನಿಜಾರ್ಥದಲ್ಲಿ ಪೋಷ್ಯ, ಪೋಷಕ ಭಾವವನ್ನು ಹೊತ್ತಿದ್ದವು. ನಾವೀಗ ಕಟ್ಟಿಕೊಳ್ಳಲು ಬಯಸುತ್ತಿರುವ ಸಾಂಸ್ಕೃತಿಕ ಜಗತ್ತು ಈ ಮಾದರಿಯ ಮುಂದುವರಿಕೆಯೇ ಆಗಬೇಕಾಗಿದೆ. ಹೊಸ ದಾರಿಗಳ ನಿರ್ಮಾಣಕ್ಕೆ ಹೊಸ ಪರಿಕ್ರಮಗಳು, ಜೊತೆಗೆ ಹಳೆಯ ಉಪಕರಣಗಳಿಗೆ ಹೊಸ ಆಶಯವನ್ನು ತಂದುಕೊಳ್ಳುವ ಅಗತ್ಯವಿದೆ" ಎಂದಿದ್ದಾರೆ. ಇಂತಹ ಅಗತ್ಯಗಳಿಗೆ ಪೂರಕವಾದ ಚಿಂತನೆಗಳನ್ನು ಈ ಪತ್ರಿಕೆ ಹೊಂದಿರುತ್ತದೆ.

ಅಭಿವೃದ್ಧಿ ಅಧ್ಯಯನ ವಿಭಾಗದಿಂದ ಹೊರಬರುತ್ತಲಿರುವ 'ಅಭಿವೃದ್ಧಿ ಅಧ್ಯಯನ' ಪತ್ರಿಕೆ ಸಮಾಜ ವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳನ್ನು ಕನ್ನಡದಲ್ಲಿ ಪರಿಚಯಿಸುವ ಅಪರೂಪದ ಮತ್ತು ವಿರಳವಾದ ಪತ್ರಿಕೆ. ಕರ್ನಾಟಕವನ್ನು ಗಮನದಲ್ಲಿರಿಸಿಕೊಂಡು ನಡೆಯುವ ಅಭಿವೃದ್ಧಿಯ ಎಲ್ಲ ಬಗೆಯನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗುತ್ತಿದೆ. ಈ ಆಶಯವನ್ನು ಸಂಪಾದಕರಾದ ಶ್ರೀ ಟಿ.ಆರ್.ಚಂದ್ರಶೇಖರ್ ಮತ್ತು ಡಾ. ಎಂ.ಚಂದ್ರಪೂಜಾರಿ ಅವರುಗಳು ಹೀಗೆ ವ್ಯಕ್ತಪಡಿಸುತ್ತಾರೆ : "ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಾರ್ವಜನಿಕ ಸಂಸ್ಥೆಗಳು, ನಾಗರಿಕ ಸಮಾಜಗಳು ಹಾಗೂ ಸಾಮಾಜಿಕ ಚಳುವಳಿಗಳ ನಡುವಿನ ಅಭಿವೃದ್ಧಿ ಸಂಬಂಧ ಹಾಗೂ ವಿಕೇಂದ್ರೀಕರಣ ಮತ್ತು ಸಶಕ್ತೀಕರಣಗಳ ಪ್ರಕ್ರಿಯೆ, ಪರಿಣಾಮ, ಸಂಪ್ರದಾಯ ಮತ್ತು ಆಧುನಿಕತೆಗಳ ನಡುವಿನ ತಿಕ್ಕಾಟಗಳನ್ನು ಕುರಿತು ಸಾಂಸ್ಕೃತಿಕ ಅಗತ್ಯವೇನೆಂಬುದರ ಹಿನ್ನೆಲೆಯಲ್ಲಿ ಸಂವಹನಗೊಳಿಸಬೇಕು" ಎಂಬುದಾಗಿ ತಿಳಿಸುತ್ತಾರೆ.

ಜಾನಪದ ಅಧ್ಯಯನ ವಿಭಾಗದಿಂದ ಹೊರಬರುತ್ತಲಿರುವ 'ಜಾನಪದ ಕರ್ನಾಟಕ' ಪತ್ರಿಕೆ ಜಾನಪದಕ್ಕೆ ಸಂಬಂಧಿಸಿದ ಅಧ್ಯಯನ, ಸಂಗ್ರಹ ಹಾಗೂ ಮಾಹಿತಿಗಳನ್ನು ತಾತ್ವಿಕ ನೆಲೆಯಲ್ಲಿ ಹುಟ್ಟು ಹಾಕುವ ಆಶಯವನ್ನು ಹೊಂದಿದೆ. ಈ ಪತ್ರಿಕೆಯ ಸಂಪಾದಕರಾದ ಡಾ. ಮಂಜುನಾಥ ಬೇವಿನಕಟ್ಟಿಯವರು ಪತ್ರಿಕೆಯ ಅಸ್ತಿತ್ವದ ಹಿಂದಿರುವ ತುಡಿತವನ್ನು ಹೀಗೆ ನಿವೇದಿಸಿಕೊಳ್ಳುತ್ತಾರೆ: "ಕರ್ನಾಟಕದಲ್ಲಿ ೧೯೬೦ರಿಂದ ಜಾನಪದ ಅಧ್ಯಯನಕ್ಕೆ ಸಂಬಂಧಿಸಿದ ಪತ್ರಿಕೆಗಳು ಕಾಣಿಸಿಕೊಂಡವು. ಈ ನಿಟ್ಟಿನಲ್ಲಿ ಹಲವಾರು ಪತ್ರಿಕೆಗಳು ತಮ್ಮ ಮಿತಿಯಲ್ಲಿ ಕೆಲಸವನ್ನು ಮಾಡಿವೆ. ಹೀಗಿದ್ದರೂ ಇಂದು ವಿಸ್ತೃತವಾಗಿ ಬೆಳೆದು ನಿಂತಿರುವ ಜಾನಪದ ಅಧ್ಯಯಕ್ಕೆ ಸಂಬಂಧಿಸಿದ ಪತ್ರಿಕೆಗಳ ಪ್ರಮಾಣ ಕಡಿಮೆಯೆನಿಸುತ್ತದೆ. ಆ ಕೊರತೆಯನ್ನು ನೀಗಿಸಲು ಈ ಪತ್ರಿಕೆಯನ್ನು ಹೊರತರಲಾಗಿದೆ. ಜಾನಪದ ಸಂಶೋಧನೆ, ಚಿಂತನೆ, ಚರ್ಚೆ ಇವು ಕೇವಲ ಗತವನ್ನು ಕಟ್ಟಿಕೊಡುವ ಅಕಡೆಮಿಕ್ ಪ್ರಯತ್ನಗಳಾಗದೆ, ವರ್ತಮಾನದ ಬಾಳನ್ನು ಅರ್ಥಪೂರ್ಣಗೊಳಿಸಲು ಮಾಡುವ ಸಾಂಸ್ಕೃತಿಕ ಪ್ರಯತ್ನಗಳಾಗಿ ಮಾರ್ಪಡುತ್ತವೆ" ಎಂದಿದ್ದಾರೆ.

ಈ ಹೊಸ ನಿಯತಕಾಲಿಕೆಗಳ ಸಂಪಾದಕರ ಆಶಯ ಮಹತ್ವಾಕಾಂಕ್ಷೆಯಿಂದ ಮತ್ತು ಪರಿಣಾಮಕಾರಿ ಮನೋಧರ್ಮದಿಂದ ಕೂಡಿದ್ದು. ಕನ್ನಡ - ಕನ್ನಡಿಗ - ಕರ್ನಾಟಕದ ನೆಲೆಯಲ್ಲಿ ದ್ರಾವಿಡ ಮೂಲವಾದ ಕನ್ನಡ ಭಾಷೆ, ಕನ್ನಡಿಗರ ಸಾಮಾಜಿಕ ಬದುಕು ಮತ್ತು ಕರ್ನಾಟಕದ ಒಟ್ಟು ಜನಪರ ಧೋರಣೆಗಳನ್ನು ಕಟ್ಟಿಕೊಡುವಲ್ಲಿ, ಪರಿಚಲನೆಗೊಳಿಸುವಲ್ಲಿ ವಿಶ್ವವಿದ್ಯಾಲಯದ ಈ ಕಾರ್ಯ ಅಭಿನಂದನೀಯವಾದದ್ದು.

ಸಂಪಾದಕರು

ಪ್ರಕಾಶನ

ಸಂಪುಟ ೧೦ ಸಂಚಿಕೆ ೧ ಏಪ್ರಿಲ್ ೨೦೦೨
ಬಿಡಿಪ್ರತಿ ರೂ. ೫.೦೦
ವಾರ್ಷಿಕ ಚಂದಾ ರೂ. ೫೦.೦೦

## ಪುಸ್ತಕ ಬಿಡುಗಡೆ


೩.೬.೨೦೦೨ರಂದು ಬೆಂಗಳೂರಿನಲ್ಲಿ ಶ್ರೀ ಎಂ.ವೀರಪ್ಪ ಮೊಯಿಲಿ ಇವರ ಶ್ರೀ ರಾಮಾಯಣ ಮಹಾನ್ವೇಷಣಂ ಕೃತಿಯ ದ್ವಿತೀಯ ಸೋಪಾನವನ್ನು ಭಾರತದ ಸರ್ವೋಚ್ಚ ನ್ಯಾಯಾಲಯದ ವಿಶ್ರಾಂತ ಮುಖ್ಯ ನ್ಯಾಯಾಧೀಶ ಶ್ರೀ ಎಂ.ಎನ್.ವೆಂಕಟಾಚಲಯ್ಯ ಅವರು ಬಿಡುಗಡೆ ಮಾಡಿದರು.


೩.೬.೨೦೦೨ರಂದು ಸಿಂದಗಿಯಲ್ಲಿ ನೆಲೆಪ್ರಕಾಶನವು ಪ್ರಕಟಿಸಿದ ಶ್ರೀಮತಿ ಗೀತಾ ಚಂದ್ರಶೇಖರ ಅವರ ಹೂವಾಗಿ ನಕ್ಕವರೆ ಎಂಬ ಕವನ ಸಂಕಲನವನ್ನು ಪ್ರಭುಸಾರಂಗದೇವ ಶಿವಾಚಾರ್ಯರು ಬಿಡುಗಡೆ ಮಾಡಿದರು.


೬.೬.೨೦೦೨ರಂದು ಜಮಖಂಡಿಯಲ್ಲಿ ಶಾರದಾ ಮುಳ್ಳೂರ ಅವರ ಆರದ ದೀಪದ ಆಸರೆ ಹಿಡಿದು ಎಂಬ ಕವನ ಸಂಕಲನವನ್ನು ಡಾ. ಸ.ಜ.ನಾಗಲೋಟಿಮಠ ಅವರು ಬಿಡುಗಡೆ ಮಾಡಿದರು.


೭.೬.೨೦೦೨ರಂದು ಬೆಂಗಳೂರಿನಲ್ಲಿ ಕರ್ನಾಟ ಭಾರತ ಕಥಾಮಂಜರಿ ಮತ್ತು ಶ್ರೀ ತುಳಸಿ ರಾಮಾಯಣ ಕೃತಿಗಳನ್ನು ಮಂಗಳೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ. ಎಸ್.ಗೋಪಾಲ್ ಅವರು ಬಿಡುಗಡೆ ಮಾಡಿದರು.


೭.೬.೨೦೦೨ರಂದು ಬೆಂಗಳೂರಿನಲ್ಲಿ ಡಾ. ಎಂ.ಎಸ್.ಲಕ್ಷ್ಮೀನಾರಾಯಣ ಭಟ್ಟರ ಷೇಕ್ಸ್‌ಪಿಯರ್ ಸಾನೆಟ್ ಚಿತ್ರ ಮತ್ತು ಮಕ್ಕಳ ಗೀತೆಗಳ ಸಮಗ್ರ ಸಂಪುಟ ಚಿಣ್ಣರ ಮೇಳ ಕೃತಿಗಳನ್ನು ಬಿಡುಗಡೆ ಮಾಡಿದರು.


೮.೬.೨೦೦೨ರಂದು ಮೈಸೂರಿನಲ್ಲಿ ಡಾ. ಎಂ.ಡಿ.ಆರ್.ಅರಸ್ ಅವರು ಸಂಪಾದಿಸಿರುವ ಅಕ್ಬರ ಅಲಿ ಅವರ ಆಯ್ದ ಬರಹಗಳು ಕೃತಿಯನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು ಬಿಡುಗಡೆ ಮಾಡಿದರು.


೧೦.೬.೨೦೦೨ರಂದು ಪುತ್ತೂರಿನಲ್ಲಿ ಮುಳಿಯ ಕೃಷ್ಣಭಟ್ಟ ಕೃತಿ ಸಂಚಯ (ಸಂ: ಶ್ರೀಮತಿ ಗಂಗಾ ಪಾದೇಕಲ್) ಕೃತಿಯನ್ನು ಡಾ. ಎಂ.ಬಿ.ಮರಕಿಣಿ ಅವರು, ಮುಳಿಯರ ನೆನಪು (ಸಂ : ಶ್ರೀಮತಿ ಮನೋರಮಾ ಎಂ.ಭಟ್) ಹಾಗೂ ಮೂರು ಕಿರು ಕಾದಂಬರಿಗಳು (ಲೇ : ಗಂಗಾ ಪಾದೇಕಲ್) ಕೃತಿಗಳನ್ನು ಡಾ. ಎಲ್.ಸಿ.ಸುಮಿತ್ರ ಅವರು ಬಿಡುಗಡೆ ಮಾಡಿದರು.


೧೦.೬.೨೦೦೨ರಂದು ಬೆಂಗಳೂರಿನಲ್ಲಿ ವಿಚಾರವಾದಿ ಜಿ.ಕೆ.ಗೋವಿಂದರಾವ್ ಅವರ ನಾಗರಿಕತೆ ಮತ್ತು ಅರಾಜಕತೆ ಕೃತಿಯನ್ನು ಕವಿ ಡಾ. ಬಿ.ಸಿ.ರಾಮಚಂದ್ರ ಶರ್ಮ ಅವರು ಬಿಡುಗಡೆ ಮಾಡಿದರು.


೧೩.೬.೨೦೦೨ರಂದು ಮೈಸೂರಿನಲ್ಲಿ ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ (ಲೇ : ಡಾ. ಎಂ.ಎಸ್.ಶೇಖರ್) ಕೃತಿಯನ್ನು ಹಾಗೂ ಮಹಾಚೇತನ (ಡಾ. ಬಿ.ಆರ್. ಅಂಬೇಡ್ಕರರ ಜೀವನ ಚರಿತ್ರೆ) ಕೃತಿಯನ್ನು ಕೇಂದ್ರ ಸಚಿವ ವಿ.ಶ್ರೀನಿವಾಸ ಪ್ರಸಾದ್ ಅವರು ಬಿಡುಗಡೆ ಮಾಡಿದರು.


೧೩.೬.೨೦೦೨ರಂದು ಧಾರವಾಡದಲ್ಲಿ ಸಿ.ಎನ್.ಶಂಕರರಾವ್ ಅವರ ಸಮಾಜಶಾಸ್ತ್ರದ ಕಿರು ವಿಶ್ವಕೋಶ ಕೃತಿಯನ್ನು ಜನತಾ ಶಿಕ್ಷಣ ಸಮಿತಿಯ ಕಾರ್ಯದರ್ಶಿ ಪ್ರೊ. ನ.ವಜ್ರಕುಮಾರ ಅವರು ಬಿಡುಗಡೆ ಮಾಡಿದರು.


೧೭.೬.೨೦೦೨ರಂದು ರಾಯಚೂರಿನಲ್ಲಿ ರಾಮಣ್ಣ ಆರ್ತ್ಯಕ್ಷೆ ಅವರು ಅನುವಾದಿಸಿರುವ ಬಾಂಗ್ಲಾದೇಶದ ಲೇಖಕಿ ತಸ್ಲಿಮಾ ಅವರ ಲಜ್ಜಾ ಕಾದಂಬರಿಯ ಕನ್ನಡ ಕೃತಿಯನ್ನು ಡಾ. ಮಲ್ಲಿಕಾ ಘಂಟಿ ಅವರು ಬಿಡುಗಡೆ ಮಾಡಿದರು.


೧೭.೬.೨೦೦೨ರಂದು ಹರಪನಹಳ್ಳಿಯಲ್ಲಿ ಶ್ರೀ ಲಕ್ಷ್ಮಣ ಗಂಟೆ ಅವರ ಕಣಲಾಬೆಯ ತುದಿಗೆ ಕವನ ಸಂಕಲನವನ್ನು ಕವಿ ಶ್ರೀ ಮೂಡ್ನಾಕೂಡು ಚಿನ್ನಸ್ವಾಮಿ ಅವರು ಬಿಡುಗಡೆ ಮಾಡಿದರು.


೧೯.೬.೨೦೦೨ರಂದು ಬೆಂಗಳೂರಿನಲ್ಲಿ ಡಾ. ಎಂ.ಚಿದಾನಂದಮೂರ್ತಿ ಅವರ ಚಿದಾನಂದ ಸಮಗ್ರ ಸಂಪುಟ ಮಾಲೆಯ ಮೊದಲ ಮೂರು ಸಂಪುಟಗಳಾದ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಭಾಷಾ ವಿಜ್ಞಾನ ಮತ್ತು ಛಂದಸ್ಸು ಹಾಗೂ ಜನ - ಜನಪದ - ಜಾನಪದ ಕೃತಿಗಳನ್ನು ಕನ್ನಡ ವಿ.ವಿ. ವಿಶ್ರಾಂತ ಕುಲಪತಿಗಳಾದ ಡಾ. ಎಂ.ಎಂ.ಕಲಬುರ್ಗಿ ಅವರು ಬಿಡುಗಡೆ ಮಾಡಿದರು.


೨೪.೬.೨೦೦೨ರಂದು ಬಳ್ಳಾರಿಯಲ್ಲಿ ಲೋಹಿಯಾ ಪ್ರಕಾಶನವು ಹೊರ ತಂದಿರುವ ಡಾ. ಜಿ.ಎಂ.ನಾಗಯ್ಯ ಅವರ ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ (ಸಂಶೋಧನೆ), ಬಾಳಾಸಾಹೇಬ ಲೋಕಾಪುರ ಅವರ ಹುತ್ತ (ಕಾದಂಬರಿ), ಡಿ.ಬಿ.ರಜಿಯಾ ಅವರ ವಾಸ್ತವದ ಕನವರಿಕೆ (ಕಥಾ ಸಂಕಲನ), ಜಿ.ಪಿ.ಬಸವರಾಜು ಅವರ ಹುತಾತ್ಮ ಭಗತ್‌ಸಿಂಗ್ (ಜೀವನ ಚರಿತ್ರೆ), ಪ್ರೊ. ಜಿ.ಎಚ್.ನಾಯಕ ಅವರ ಗುಣ ಗೌರವ (ಲೇಖನಗಳ ಸಂಗ್ರಹ) ಮತ್ತು ಡಾ. ಕೃಷ್ಣಮೂರ್ತಿ ಕಿತ್ತೂರ ಅವರ ಜೀವನ ಸಂಧ್ಯಾ (ಲಲಿತ ಪ್ರಬಂಧಗಳು) ಕೃತಿಗಳನ್ನು ಲೇಖಕಿ ಸಾರಾ ಅಬೂಬಕರ್ ಅವರು ಬಿಡುಗಡೆ ಮಾಡಿದರು.


೨೪.೬.೨೦೦೨ರಂದು ಬೆಂಗಳೂರಿನಲ್ಲಿ ಅ.ನ.ಯಲ್ಲಪ್ಪರೆಡ್ಡಿ ಅವರ ಅಭಿನಂದನಾ ಗ್ರಂಥ ನೆಲದ ಮಾತು (ಸಂ : ಶೂದ್ರ ಶ್ರೀನಿವಾಸ್) ಕೃತಿಯನ್ನು ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಕುಲಪತಿ ಡಾ. ಎ.ಎಂ.ಕೃಷ್ಣಪ್ಪ ಅವರು ಬಿಡುಗಡೆ ಮಾಡಿದರು.


೨೫.೬.೨೦೦೨ರಂದು ಬೆಂಗಳೂರಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಕಟಿಸಿರುವ ಶಿವರಾಮ ಕಾರಂತ ಸಾಹಿತ್ಯ ಶ್ರೇಣಿಯ ೯ ಸಂಪುಟಗಳನ್ನು ಮಾಜಿ ಮುಖ್ಯಮಂತ್ರಿ ಎಂ.ವೀರಪ್ಪ ಮೊಯಿಲಿ ಅವರು ಬಿಡುಗಡೆ ಮಾಡಿದರು.


೨೫.೬.೨೦೦೨ರಂದು ಮುಂಬೈನಲ್ಲಿ ಶ್ರೀ ಬಿ.ಎ.ಸನದಿ ಅವರ ತಪನದಿಂದ ತಾವರೆಗೆ (ಸಂ : ಡಾ. ಬಸವರಾಜ ಸಾದರ) ಕವನ ಸಂಕಲನವನ್ನು ಮುಂಬೈ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಪ್ರೊ. ವಸಂತಕುಮಾರ್ ತಾಳ್ತಜೆ ಅವರು ಬಿಡುಗಡೆ ಮಾಡಿದರು.


೨೬.೬.೨೦೦೨ರಂದು ಬೆಂಗಳೂರಿನಲ್ಲಿ ಪ್ರೊ. ಚಂದ್ರಶೇಖರ ಪಾಟೀಲ ಅವರ ಕನ್ನಡ ಕನ್ನಡ ಬರ್ರಿ ನಮ್ಮ ಸಂಗಡ ಕೃತಿಯನ್ನು ಡಾ. ಹಂಪನಾ ಬಿಡುಗಡೆ ಮಾಡಿದರು.


೨೬.೬.೨೦೦೨ರಂದು ಮುಂಬೈಯಲ್ಲಿ ಶ್ರೀ ವಾಸುದೇವ ಕಾಣೆಮಾರು ಅವರ ಕಲಾ ವಿಶೇಷಗಳು ಕೃತಿಯನ್ನು ಸಂಸ್ಕೃತಿ ಚಿಂತಕರಾದ ಡಾ. ಬಿ.ಮುರಾರಿ ಬಲ್ಲಾಳ ಬಿಡುಗಡೆ ಮಾಡಿದರು.


೨೬.೬.೨೦೦೨ರಂದು ಮುಂಬೈಯಲ್ಲಿ ಡಾ. ಜಿ.ಎನ್.ಉಪಾಧ್ಯ ಅವರ ಗೋದಾವರಿವರಂ ಇದ ಕನ್ನಡನಾಡು ಕೃತಿಯನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು ಬಿಡುಗಡೆ ಮಾಡಿದರು.

## ಪ್ರಶಸ್ತಿ


**ಸಾಹಿತ್ಯ ಪ್ರಶಸ್ತಿ**
ಬೆಂಗಳೂರಿನ ಸರ್ ಎಂ. ವಿಶ್ವೇಶ್ವರಯ್ಯ ಟ್ರಸ್ಟ್ ಚಿ.ಸು.ಕೃಷ್ಣಶೆಟ್ಟಿ ಅವರ ವಿಮರ್ಶಾ ಸಂಕಲನ ವರ್ಣಾವರಣ ಕೃತಿಗೆ ದಶಕದ ಶ್ರೇಷ್ಠ ಸಾಹಿತ್ಯ ಪ್ರಶಸ್ತಿ ನೀಡಿ ಗೌರವಿಸಿದೆ.


**ಪುಸ್ತಕ ಸೊಗಸು ಪ್ರಶಸ್ತಿ**
ಡಾ. ಎಲ್.ಬಸವರಾಜು ಅವರ ಸೌಂದರನಂದ ಕೃತಿಯನ್ನು ಪ್ರಕಟಿಸಿದ ಬಳ್ಳಾರಿಯ ಲೋಹಿಯಾ ಪ್ರಕಾಶನಕ್ಕೆ ಕನ್ನಡ ಪುಸ್ತಕ ಪ್ರಾಧಿಕಾರವು ಪುಸ್ತಕ ಸೊಗಸು ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.


**ಜನಪದ ತಜ್ಞ ಪ್ರಶಸ್ತಿ**
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ೨೦೦೧ನೇ ಸಾಲಿನ ಜಾನಪದ ತಜ್ಞ ಪ್ರಶಸ್ತಿಗಳನ್ನು ಕವಿ ಡಾ. ಸಿದ್ಧಲಿಂಗಯ್ಯ, ಡಾ. ವಿಲಿಯಂ ಮಾಡ್ತಾ ಹಾಗೂ ಡಾ. ಶ್ರೀರಾಮ ಇಟ್ಟಣ್ಣವರ ಅವರಿಗೆ ನೀಡಿ ಗೌರವಿಸಿದೆ.


**ಮುಳಿಯ ತಿಮ್ಮಪ್ಪಯ್ಯ ಪ್ರಶಸ್ತಿ**
೨೦೦೨ನೇ ಸಾಲಿನ ಮುಳಿಯ ತಿಮ್ಮಪ್ಪಯ್ಯ ಪ್ರಶಸ್ತಿಯನ್ನು ಬೆಂಗಳೂರಿನ ಪ್ರಸಿದ್ಧ ಗಮಕಿ ಶಕುಂತಲಾಬಾಯಿ ಪಾಂಡುರಂಗರಾವ್ ಅವರಿಗೆ ನೀಡಿ ಗೌರವಿಸಿದೆ.


**ರನ್ನ ಸಾಹಿತ್ಯ ಪ್ರಶಸ್ತಿ**
ಗೊರೂರು ಪ್ರತಿಷ್ಠಾನದ ಅತ್ತಿಮಬ್ಬೆ ಪ್ರತಿಷ್ಠಾನ ಟ್ರಸ್ಟ್‌ನ ೨೦೦೧ನೇ ಸಾಲಿನ ರನ್ನ ಸಾಹಿತ್ಯ ಪ್ರಶಸ್ತಿಯನ್ನು ಪ್ರೊ. ಶ್ರೀನಿವಾಸ ವಿ.ಸುತ್ರಾವೆ ಅವರ ಮಾಸ್ಟರ್ ಬಿಲ್ಡರ್ ಕೃತಿಗೆ ನೀಡಿ ಗೌರವಿಸಿದೆ.


**ಸಾಹಿತ್ಯ ಶ್ರೀ ಪ್ರಶಸ್ತಿ**
ಬಿಜಾಪುರ ಜಿಲ್ಲೆಯ ನಾಲತವಾಡದ ವಿಜಯ ಪ್ರಕಾಶನದವರು ಕುಂದಾಪುರದ ಭಂಡಾರ್‌ಕಾರ್ಸ್ ಕಾಲೇಜಿನ ಪ್ರಾಧ್ಯಾಪಕ ಡಾ. ಎಚ್.ವಿ.ನರಸಿಂಹಮೂರ್ತಿ ಅವರ 'ಚಿಂತನ' ಕೃತಿಗೆ ಸಾಹಿತ್ಯ ಶ್ರೀ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ.


**ಪಂಪಶ್ರೀ ಪ್ರಶಸ್ತಿ**
ಅಣ್ಣಿಗೇರಿಯ ಜಾಗೃತ ತರುಣ ಸಂಘವು ವಿಮರ್ಶಕ ಕವಿ ಡಾ.ಶಾಮಸುಂದರ ಬಿದರಕುಂದಿ ಅವರಿಗೆ ಪಂಪಶ್ರೀ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.


**ಎಲ್.ಬಸವರಾಜು ಪ್ರಶಸ್ತಿ**
ಕೋಲಾರದ ಎಲ್.ಬಸವರಾಜು ಪ್ರತಿಷ್ಠಾನವು ಜಾನಪದ ತಜ್ಞ ಶ್ರೀ ಮುದೇನೂರು ಸಂಗಣ್ಣ ಅವರಿಗೆ ಪ್ರಥಮ ವರ್ಷದ ಪ್ರತಿಷ್ಠಿತ ಎಲ್. ಬಸವರಾಜು ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

**ಮಾಸ್ತಿ ಪ್ರಶಸ್ತಿ**
ಕನ್ನಡದ ಹಿರಿಯ ವಿದ್ವಾಂಸ, ವಿಮರ್ಶಕ ಪ್ರೊ. ಎಲ್.ಎಸ್.ಶೇಷಗಿರಿರಾವ್ ಅವರಿಗೆ ಪ್ರತಿಷ್ಠಿತ ಮಾಸ್ತಿ ಪ್ರಶಸ್ತಿ ನೀಡಿ ಗೌರವಿಸಿದೆ.



## ನಿರಂತರ

ಲೇ: ಬಿ. ರಾಜಶೇಖರಪ್ಪ

ಪ್ರ: ಶ್ರೀ ಲೋಕಪಾವನಿ ಪ್ರಕಾಶನ, ಪಾಂಡವಪುರ - ೫೭೧ ೪೩೪

೨೦೦೧, ಪುಟ. x+೧೦೦ ಬೆಲೆ ರೂ. ೧೦೦.೦೦

### ಪ್ರಾದೇಶಿಕ ಸಂಸ್ಕೃತಿಯ ವಿವಿಧ ಮುಖಗಳ ಅಧ್ಯಯನ - ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಕರ್ನಾಟಕದ ಸಾಂಸ್ಕೃತಿಕ, ಸಂಶೋಧನಾ ಕ್ಷೇತ್ರಗಳಲ್ಲಿ ರಾಜಶೇಖರಪ್ಪನವರ ಹೆಸರು ಸುಪರಿಚಿತ. ಸ್ಥಳೀಯ, ಪ್ರಾದೇಶಿಕ ಮತ್ತು ಮೌಖಿಕ ಚರಿತ್ರೆಯ ವಿವಿಧ ಮಗ್ಗುಲಗಳನ್ನು ಅಧ್ಯಯನ ಮಾಡಿದವರಲ್ಲಿ ಇವರು ಅಗ್ರಗಣ್ಯರು. ಇವರು ಶಾಸನ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಕೃಷಿ ನಡೆಸಿರುವುದೇ ಹೆಚ್ಚು. ಸಾಹಿತ್ಯ ನೆಲೆಯಿಂದ ವಿವಿಧ ಕ್ಷೇತ್ರಗಳ, ಶಿಸ್ತುಗಳ ಮೂಲಕ ಕನ್ನಡನಾಡಿನ ಚರಿತ್ರೆ ಮತ್ತು ಸಂಸ್ಕೃತಿಯನ್ನು ಅರ್ಥೈಸಿದವರಲ್ಲಿ ಪ್ರಮುಖರಾಗಿದ್ದಾರೆ. ತಮ್ಮದೇ ಆದ ಶೈಲಿ, ಹೊಸಬಗೆಯ ಚಿಂತನೆ, ವಿಶ್ಲೇಷಣೆ ಮತ್ತು ವ್ಯಾಖ್ಯಾನಗಳ ಸೂಕ್ಷ್ಮ ಸಂವೇದನೆ, ಕ್ರಿಯಾಶೀಲ ಅಭಿವ್ಯಕ್ತಿಯನ್ನು ಹೊಂದಿರುವ ರಾಜಶೇಖರಪ್ಪನವರು ಮೂರು ದಶಕಗಳ ಸಂಶೋಧನ, ವಿಮರ್ಶನ ಲೇಖನಗಳನ್ನು ಸಹೃದಯರೊಂದಿಗೆ ಹಂಚಿಕೊಂಡಿದ್ದಾರೆ.

ಅಂತರವು 'ನಿರಂತರ'ಕ್ಕೆ ನಾಂದಿ. ಹೀಗಾಗಿ ನಿರಂತರದಲ್ಲಿ ಹತ್ತು ಸಂಮಿಶ್ರ ಲೇಖನಗಳಿದ್ದು, ಹತ್ತು ಹಲವು ಒಳನೋಟಗಳನ್ನು ಕೊಡುವುದರಲ್ಲಿ ಅನುಮಾನವಿಲ್ಲ. ಕ್ರಿಯಾಶೀಲ ಸಂಶೋಧಕನಲ್ಲಿ ಉತ್ಸಾಹ, ಪ್ರೇರಣೆ ಸದಾ ಹಂಬಲಿಸುವ ಹೊಸಪರಿಯನ್ನು ಕಾಣಬಹುದು. ಇದು ಸಂಶೋಧಕನ ಚಪಲ! ಇಲ್ಲಿನ ಸಂಶೋಧನ ಕ್ಷೇತ್ರದ ವಿಸ್ತಾರ, ಹರವು ದೊಡ್ಡದು? 'ನಿರಂತರ'ದಲ್ಲಿ ಲೇಖಕರು ಕತ್ತಲಿನಿಂದ ಬೆಳಕಿಗೆ, ಅಮೂರ್ತದಿಂದ ಮೂರ್ತದೆಡೆಗೆ, ಅಜ್ಞಾನದಿಂದ ಜ್ಞಾನದ ಪರಿಧಿಗೆ ಧಾವಿಸುವ ಪರಿ ಮೆಚ್ಚುವಂತದ್ದು. ಸಾಹಿತ್ಯ - ಸಂಶೋಧನೆ, ಸಂಸ್ಕೃತಿ ಮತ್ತು ಚರಿತ್ರೆಯನ್ನು ವಿಶ್ಲೇಷಿಸುವುದರೊಂದಿಗೆ, ಲೇಖನ ಸಂದರ್ಭ ಸೂಚಿ, ಛಾಯಾಚಿತ್ರಗಳನ್ನು ಇಲ್ಲಿ ಕೊಡಲಾಗಿದೆ. ಸಂಶೋಧಕನ ಮನಸ್ಸು ಸದಾ ಸಹೃದಯರಿಗಾಗಿ ತುಡಿಯುತ್ತದೆಂಬುದಕ್ಕೆ ಈ ಕೃತಿಯೇ ಸಾಕ್ಷಿ. ಕವಿ, ಸಾಹಿತಿ ತನ್ನ ಪೂರ್ವಜರನ್ನು, ಗುರುಗಳನ್ನು, ಹಿತೈಷಿಗಳನ್ನು ಸ್ಮರಿಸುವಂತೆ ಸಂಶೋಧಕನೊಬ್ಬ, ಆ ರೀತಿ ಸ್ಮರಿಸುವುದು ಅಪರೂಪ. ಆದರೆ ಈ ಲೇಖಕರು ಬಹುದೊಡ್ಡ ಶಾಸನ ಪಂಡಿತ, ವಿದ್ವಾಂಸರಾದ ಬಿ.ಎಲ್.ರೈಸ್, ಪುರಾತತ್ವಜ್ಞ ಡಾ. ಎಂ.ಎಚ್.ಕೃಷ್ಣ ಮತ್ತು ಚಿತ್ರದುರ್ಗ ಇತಿಹಾಸ ಸಂಶೋಧಕ ಹುಲ್ಲೂರು ಶ್ರೀನಿವಾಸ ಜೋಯಿಸರನ್ನು ಸ್ಮರಿಸಿ ಕೃತಿಯನ್ನು ಅರ್ಪಿಸಿದ್ದು ಸ್ತುತ್ಯರ್ಹ.

ಸಂಶೋಧನ ಕ್ಷೇತ್ರದ ದಿಗ್ಗಜರಾದ ಡಾ. ಎಂ.ಚಿದಾನಂದಮೂರ್ತಿ ಯವರು ಅರ್ಥಪೂರ್ಣವಾದ ಮುನ್ನುಡಿ ಬರೆದಿರುವರು. ಈ ಕೃತಿ ಪ್ರಕಟಣೆಪೂರ್ವದಲ್ಲಿ ಲೇಖನವೊಂದಕ್ಕೆ ಪ್ರತಿಕ್ರಿಯೆ ಬರೆದವರು ರಾಷ್ಟ್ರಕವಿ ಕುವೆಂಪು ಅವರು. ಅವರ ಪತ್ರದ ಸಾರಾಂಶವನ್ನು ಬೆನ್ನುಡಿಯಲ್ಲಿ ಕೊಟ್ಟಿರುವುದು ಪುಸ್ತಕಕ್ಕೆ ಮತ್ತೊಂದು ಬಗೆಯ ಮೆರುಗು ದೊರೆತಂತಿದೆ. ಇವೆರಡು ಅಂಶಗಳನ್ನು ಗಮನಿಸಿ ಪುಸ್ತಕದ ಅಂತರಂಗಕ್ಕೆ ಪಾದಾರ್ಪಣೆ ಮಾಡಿದರೆ ವಿಸ್ಮಯಕರ ಸಂಗತಿಗಳು ಗೋಚರಿಸುವುದು ಸುಳ್ಳಲ್ಲ. ಪ್ರತಿಯೊಂದು ಲೇಖನವು ಹೊಸ ಸಂಗತಿಯನ್ನು, ಸಂದೇಶವನ್ನು ಸಾರುತ್ತವೆ ಈ ಕೃತಿಯಲ್ಲಿ.

ಮೊದಲ ಲೇಖನ 'ಬೇಲಿಯಲ್ಲಿ ವೀರಗಲ್ಲು' ಎಂಬುದರಲ್ಲಿ ಹೊಳಲ್ಕೆರೆ ತಾಲೂಕು ಹಿರೇಎಮ್ಮಿಗನೂರಿನ ಶಾಸನವನ್ನು ಪತ್ತೆ ಹಚ್ಚಿ ಅದರ ಪಾಠ - ಸಾರಾಂಶವನ್ನು ಕೊಟ್ಟಿರುವರು. ಊರಿನ ವೀರನೊಬ್ಬನ ಶೌರ್ಯ ಮತ್ತು ಮರಣವನ್ನು ವಿಶ್ಲೇಷಿಸುತ್ತದೆ ಈ ಶಾಸನ. ಇಲ್ಲಿ ಬರುವ ರಣಜಾಮ ಪೊಟಳಲಿನ, ಕೊಣೇಂಗೀಲ್ ಸ್ಥಳನಾಮಗಳು ಈಗಿನ ಸ್ಥಳಗಳನ್ನು ಸಂಕೇತಿಸುತ್ತವೆ. ರಾಷ್ಟ್ರಕೂಟರ ಕಾಲದ ಚಾರಿತ್ರಿಕ ಘಟನೆಯನ್ನು ಈ ವೀರಗಲ್ಲು ಶಾಸನದಲ್ಲಿ ಬರೆಸಿದ್ದು, ಆ ಬಗೆಯ ಅಧ್ಯಯನಕ್ಕೆ ಆಕರವಾಗಿದೆ.

'ಇಮ್ಮಡಿ ಮದಕೇರಿನಾಯಕನ ಕಾಲದ ಒಂದು ತಾಮ್ರಪಟ' ಎಂಬ ಲೇಖನದಲ್ಲಿ ಎರಡು ಸಮುದಾಯಗಳ, ರಾಜಪ್ರಭುತ್ವ ಮತ್ತು ಜನಸಾಮಾನ್ಯರೊಡನೆ ಹೆಣ್ಣಿನ ವಿಷಯಕ್ಕಾಗಿ ಕಾಳಗವೇ ನಡೆದು, ರಾಜನಿಗೆ ಒಲಿಯದ ಹೆಣ್ಣು ಮರಣ ಹೊಂದುವ ದುರಂತ ಘಟನೆ ಇಲ್ಲಿ ದಾಖಲಾಗಿದೆ. ನಿರಂಕುಶ ಪ್ರಭುತ್ವದ ಆಳ್ವಿಕೆಯಿಂದ ಬೇಸತ್ತ ಜನರು ಪಲಾಯನಗೊಂಡು ಅಕ್ಕಪಕ್ಕದ ರಾಜರಲ್ಲಿ ಆಶ್ರಯಪಡೆಯುತ್ತಾರೆ. ಇದಕ್ಕೆ ಕಾರಣ ಸುಂದರರೂಪಿ ಹೆಣ್ಣು! ಇವಳ ಮೋಹಕ್ಕೆ ಬಲಿಯಾದ ರಾಜ ಅವಳು ಸಿಗಲಿಲ್ಲ ಎಂದಾಗ ವಶಪಡಿಸಿಕೊಳ್ಳಲು (ಪ್ರಯತ್ನಿಸಿ) ನೂರಾರು ಜನ ಜವಾನರು ಹೋಗಿ ಹತರಾಗುತ್ತಾರೆ. ಇಂಥ ದುಸ್ಸಾಹಸಕ್ಕೆ ಕೈಹಾಕುವ ರಾಜ ಪ್ರಜಾಪಾಲನೆ ಯನ್ನು ಗಾಳಿಗೆ ತೂರಿದ್ದ ಎನ್ನುವುದನ್ನು ಬೆಳಕಿಗೆ ತರುವ ಪ್ರಯತ್ನವಿದೆ. ಇಲ್ಲಿ 'ಕಿರಾತ'ರು ಎಂಬ ಜಾತಿಸೂಚಕ ಪದವನ್ನು ಈ ಘಟನೆಯ ಹಿನ್ನೆಲೆಯಲ್ಲಿ ಅರಸರಿಗೆ ಬಳಸಲಾಗಿದೆ. ಇಂದು ನೀಚಾರ್ಥ ಗೊಂಡಿರುವ 'ಕಿರಾತ' ಪದ ಹಿಂದಿನ ಒಂದು ಸಮುದಾಯದ ಹೆಸರಾಗಿದೆ. ಕೆಳದಿನೃಪ ವಿಜಯದಲ್ಲಿ 'ಕಿರಾತ'ರೆಂದು ಕರೆದಿರುವ ದುಷ್ಟ ಜನಾಂಗವೆಂದಲ್ಲ; ದುಷ್ಟ ರಾಜನೆಂದಲ್ಲ ಬದಲಾಗಿ ಕಿರಾತರ ಬುಡಕಟ್ಟನ್ನು ಸಂಕೇತವೆನಿಸುತ್ತದೆ.

ಚಿತ್ರದುರ್ಗ ಪಾಳೆಯಗಾರರ ಕಾಲದ ಉಣಿಸು - ತಿನಿಸುಗಳು ಎಂಬ ಲೇಖನದಲ್ಲಿ ಮಾನವನ ನಾಗರಿಕ ಪ್ರಪಂಚವನ್ನು ಶಾಸನ, ಸಾಹಿತ್ಯ, ಚಾರಿತ್ರಿಕ ಆಕರಗಳನ್ನಿಟ್ಟುಕೊಂಡು ಜನರ - ಅರಸರ ಊಟ - ತಿಂಡಿ ಪದಾರ್ಥಗಳನ್ನು ಪಟ್ಟಿಮಾಡಿದ್ದಾರೆ. ಸಸ್ಯಹಾರಿ, ಮಾಂಸಹಾರಿ; ರಾಗಿ, ಜೋಳ, ಅಕ್ಕಿ, ನೆಲ್ಲಕ್ಕಿ, ಸಂಬಾರ ಪದಾರ್ಥಗಳು, ಸೊಪ್ಪು, ಮೊಸರು, ಹಾಲು, ಪಲ್ಯ, ಎಣ್ಣೆ ಹೀಗೆ ಅನೇಕ ದವಸಧಾನ್ಯ, ದ್ರವ್ಯ ವಸ್ತುಗಳ ವಿಶ್ಲೇಷಣೆಯಿದೆ.

'ಮುರುಘರಾಜೇಂದ್ರ ಬೃಹನ್ಮಠ, ಚಿತ್ರದುರ್ಗ' ಎಂಬುದು ಆರನೇ ಲೇಖನ. ಪ್ರಾಚೀನ ಕಾಲದ ಮುರುಘರಾಜೇಂದ್ರ ಬೃಹನ್ಮಠವನ್ನು ಮೇಲುದುರ್ಗದ ಸಂಪಿಗೆ ಸಿದ್ಧೇಶ್ವರ ದೇವಾಲಯದ ಪರಿಸರದಲ್ಲಿ ಗುರುತಿಸುತ್ತಾರೆ ಲೇಖಕರು. ಆ ಮೂಲಕ ಇಲ್ಲಿನ ಸ್ಮಾರಕ, ಮಠ, ಇತಿಹಾಸ ಪರಂಪರೆಯನ್ನು; ಅಲ್ಲಮ, ಚೆನ್ನಬಸವಣ್ಣನವರ ಸಾರಥ್ಯದಲ್ಲಿದ್ದ ಶೂನ್ಯಪೀಠದ ಬಗ್ಗೆ ವಿಶ್ಲೇಷಿಸಿದ್ದಾರೆ. ವಿವಿಧ ಶಿಷ್ಯ ಪರಂಪರೆಯಲ್ಲಿ ಮುರಿಗೆ ಶಾಂತವೀರ ದೇಶಿಕರು - ಸಿದ್ಧರಾಮೇಶ್ವರ, ಇತರರನ್ನು ಉಲ್ಲೇಖಿಸಲಾಗಿದೆ. ಬಿಳಿಚೋಡು ಬರಮಣ್ಣನಾಯಕನ ಐತಿಹ್ಯ ಮಠದ ಬಗ್ಗೆ ವಿವರಣೆ ಇಲ್ಲಿ ಮುಖ್ಯವೆನಿಸಿದೆ. ವಿವಿಧ ಚಾರಿತ್ರಿಕ ಕಾಲಘಟ್ಟಗಳಲ್ಲಿ ಮಠದ ಅಭ್ಯುದಯ, ವಿವಿಧ ಕ್ಷೇತ್ರಗಳ ಸಾಧನೆಯನ್ನು ಇಲ್ಲಿ ಸ್ಮರಿಸಲಾಗಿದೆ. ಸ್ವಾಮಿಗಳು ರಾಷ್ಟ್ರರಕ್ಷಣೆ, ಬರಗಾಲ, ತುರ್ತು ಪರಿಸ್ಥಿತಿಗಳ ಸಂದರ್ಭದಲ್ಲಿ ಉದಾರವಾಗಿ ದಾನ ಮಾಡಿದ್ದರು. ಗ್ರಾಮಗಳಲ್ಲಿ ಸಾಕ್ಷರತೆ, ಸ್ತ್ರೀ ಶಿಕ್ಷಣ, ಪರಿಸರ ರಕ್ಷಣೆ, ಪ್ರಾಚ್ಯವಸ್ತು ಸಂರಕ್ಷಣೆ, ಬಸವ ಕೇಂದ್ರ ಸ್ಥಾಪನೆ, ಕೋಮು ಗಲಭೆ, ಜನಾಂಗೀಯ ಸಾಮರಸ್ಯ ಸಾಧಿಸಲು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ದಲಿತ ಸಮುದಾಯಗಳಿಗೆ ಸ್ವಾಮಿಗಳನ್ನಾಗಿ (ದೀಕ್ಷೆ) ಮಾಡಿದ ಕೀರ್ತಿ ಇವರಿಗೆ ಸಲ್ಲುವುದು. ದಸರಾ ಉತ್ಸವ, ಶರಣ ಸ್ಮರಣೋತ್ಸವ, ಮಹಾಮನೆ, ಹೀಗೆ ಇಪ್ಪತ್ತು ಜನ ಆಗಿಹೋದ ಸ್ವಾಮಿಗಳ ಪರಂಪರೆಯನ್ನು ಇಲ್ಲಿ ಗುರುತಿಸಲಾಗಿದೆ. ಸಮಾಜ, ಶಿಕ್ಷಣ, ಪ್ರಕಾಶನ ಹೀಗೆ ವಿವಿಧ ಕ್ಷೇತ್ರಗಳ ಪರಿಚಯ ಇಲ್ಲಿದೆ.

'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ರಾಕ್ಷಸ - ಶ್ರೀಸಾಮಾನ್ಯ ಎಂಬ ವಿಚಾರವನ್ನು ಚರ್ಚಿಸಿರುವರು. ವಾಲ್ಮೀಕಿ ರಾಮಾಯಣ ಮತ್ತು ಕುವೆಂಪು ಶ್ರೀರಾಮಾಯಣ ದರ್ಶನಂದಲ್ಲಿ ಕೆಲವು ಸಾಮ್ಯತೆ, ಭಿನ್ನತೆಗಳನ್ನು ಗುರುತಿಸಿದ್ದಾರೆ. ಜನಸಾಮಾನ್ಯ ಪ್ರಭುಗಳಲ್ಲದೆ; ರಾವಣ, ಸೀತೆ, ರಾಮ, ಮಂಡೋದರಿ, ಲಕ್ಷ್ಮಣ, ಲಂಕಾನಗರ ಮೊದಲಾದ ವ್ಯಕ್ತಿ ವಿಷಯಗಳ ವಿಮರ್ಶೆ ಅನನ್ಯವಾದುದು. ಸಂಶೋಧಕರಾಗಿ ಬೇಂದ್ರೆ ಜನರಿಗೆ ತಿಳಿದಿಲ್ಲ ಎಂಬುದನ್ನು ಇಲ್ಲಿ ವಿದ್ವಾಂಸರಿಗೆ ಮನದಟ್ಟು ಮಾಡಿಕೊಡುತ್ತಾರೆ. ಕವಿರಾಜಮಾರ್ಗಕಾರ (ಕರ್ತೃ) ಶ್ರೀವಿಜಯನೆಂದು ಬೇಂದ್ರೆ ಪ್ರತಿಪಾದಿಸಿದ್ದಾರೆ. ಪೊನ್ನನ ಭುವನೈಕರಾಮಾಭ್ಯುದಯ, ರಾಷ್ಟ್ರಕೂಟರ ಕಾಲದ ಸಾಹಿತ್ಯ, ಮಲ್ಲಿನಾಥ ಪುರಾಣ, ಜಗನ್ನಾಥ ವಿಜಯ, ಮೊದಲಾದ ಕೃತಿ - ಕರ್ತೃಗಳ ಬಗ್ಗೆ ವಿವೇಚಿಸಿದ್ದಾರೆ. ಶಂ.ಬಾ.ಜೋಶಿಯವರೊಂದಿಗೆ ಬೇಂದ್ರೆ ಚರ್ಚಿಸಿದ ಸಂಗತಿಗಳು ಗಮನಾರ್ಹವಾದವು. ಬೇಂದ್ರೆ 'ಮೃಗಯಾವಿಹಾರಿದುಷ್ಯಂತ' ಎಂಬ ಲೇಖನದಲ್ಲಿ ಮೃಗಯಾ ಎಂದರೆ ಹುಡುಕಾಟ ಎಂದು ತಿಳಿದಿರುವರು. ಮಾರ್ಗ ಅದರಿಂದಲೇ ಬಂದಿದೆ ಎನ್ನುತ್ತಾರೆ. ಬೇಂದ್ರೆ ಪ್ರಾಚೀನ ಕಾವ್ಯ, ನಾಯಕರ ಬಗ್ಗೆ ಸಂಶೋಧಿಸಿದ್ದನ್ನು ಲೇಖಕರು ಇಲ್ಲಿ ವಿಶ್ಲೇಷಿಸಿರುವರು. ಹೀಗೆ ಬರಗಾಲದ ಅನ್ನದಾತ ಚಿತ್ರದುರ್ಗದ ಕಾಶಿ ಅಪ್ಪಣ್ಣ ಶೆಟ್ಟರದು ಎರಡು ಶತಮಾನಗಳ ಇತಿಹಾಸವಿರುವ ಕುಟುಂಬ. ಕ್ಷಾಮ, ಬರಗಾಲ, ತುರ್ತು ಪರಿಸ್ಥಿತಿ ಬಂದಾಗ ಇವರು ಉದಾರವಾಗಿ ಅನ್ನ ದಾಸೋಹ, ದಾನವನ್ನು ನೀಡಿದ್ದು ಸ್ಮರಣೀಯ. ಚಿತ್ರದುರ್ಗದ ಖ್ಯಾತ ಇತಿಹಾಸಕಾರ ಹುಲ್ಲೂರು ಶ್ರೀನಿವಾಸ ಜೋಯಿಸರ ಚರಿತ್ರೆ ಭಂಡಾರವನ್ನು ಪರಿಚಯಿಸುತ್ತಾ ಅವರ ಜೀವನ, ಸಾಧನೆಗಳನ್ನು ಮೆಲುಕು ಹಾಕಿದ್ದಾರೆ. ಇನ್ನೊಬ್ಬ ಸಾರಥಿ ಸಾಹಿತ್ಯ ದಿಗ್ಗಜ ತ.ರಾ.ಸು. ಕನ್ನಡಿಗರಿಗೆಲ್ಲ ತಿಳಿದ ಈತನ ಬಗ್ಗೆ ಇಲ್ಲಿ ತಿಳಿಸಿದ್ದು ಸ್ವಾಗತಾರ್ಹ. ಕೊನೆಯಲ್ಲಿ ದಾವಣಗೆರೆ ಸ್ಥಳ ನಾಮದ ಬಗ್ಗೆ ವೈಜ್ಞಾನಿಕವಾಗಿ ವಿಶ್ಲೇಷಿಸಿರುವುದು ಮನನೀಯ ವಾಗಿದೆ. ಒಟ್ಟಾರೆ ಪ್ರಾದೇಶಿಕ ಚರಿತ್ರೆ ದೃಷ್ಟಿಯಿಂದ ಈ ಕೃತಿ ಆಕರ ಗ್ರಂಥವಾಗುವಲ್ಲಿ ಎರಡು ಮಾತಿಲ್ಲ.

**ಕುಮಾರಿಲ ಭಟ್ಟ**

ಲೇ : ಎಂ. ಪ್ರಭಾಕರ ಜೋಷಿ, ಎಂ.ಎ. ಹೆಗಡೆ ಸಿದ್ದಾಪುರ
ಪ್ರ : ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ
೨೦೦೧, ಪುಟ ೧೫೫ ಬೆಲೆ ರೂ. ೫೦.೦೦

ಭಾರತೀಯ ಆರು ದರ್ಶನಗಳಲ್ಲಿ ಮೀಮಾಂಸಾ ದರ್ಶನವೂ ಒಂದು. ಇದು ಪ್ರಾಚೀನ ದರ್ಶನ. ಈ ದರ್ಶನವನ್ನು ಧರ್ಮಮೀಮಾಂಸಾ ಎಂದೂ ಕರ್ಮಮೀಮಾಂಸಾ ಎಂದೂ ಕರೆಯುತ್ತಾರೆ. ಈ ದರ್ಶನದ ದ್ರಷ್ಟಾರ ಜೈಮಿನಿ ಮುನಿ. ಆತನ 'ಜೈಮಿನಿ ಸೂತ್ರ' ಈ ದರ್ಶನದ ಮೂಲಗ್ರಂಥ. ಈ ಸೂತ್ರ ಗ್ರಂಥದ ಮೇಲೆ ಶಬರರು ಬರೆದ ಶಬರ ಭಾಷ್ಯ ಪ್ರಸಿದ್ಧವಾದುದು. ಈ ಭಾಷ್ಯಕ್ಕೆ ವಾರ್ತಿಕಗಳು, ಟೀಕುಗಳು, ವ್ಯಾಖ್ಯಾನಗಳು ಬಂದಿವೆ. ಈ ಮೀಮಾಂಸಾ ಶಾಸ್ತ್ರವನ್ನು ಮೂವರು ಮುಂದೆ ಪ್ರಸಿದ್ಧಿಗೆ ತಂದರು. ಅವರಲ್ಲಿ ಕುಮಾರಿಲ ಭಟ್ಟರು ಮುಖ್ಯರು ಹಾಗೂ ಪ್ರಮುಖರು. ಕುಮಾರಿಲ ಭಟ್ಟರು ಶ್ರೀ ಶಂಕರಾಚಾರ್ಯರ ಸಮಕಾಲೀನರೆಂದು ಐತಿಹ್ಯವುಂಟು. ಕುಮಾರಿಲ ಭಟ್ಟರು ಬೌದ್ಧಮತವನ್ನು ತಿಳಿದವರಲ್ಲಿ ಅಗ್ರಗಣ್ಯರು. ಆ ಮತದ ಖಂಡನ ಮಾಡುವಾಗ ಕುಮಾರಿಲರು ತಾಳುವ ನಿಲುವು, ಖಂಡಿಸುವ ಕ್ರಮ ವಿಶೇಷದ್ದು. ಕುಮಾರಿಲರು ಶಬರಸ್ವಾಮಿಗಳು ಬರೆದ ಭಾಷ್ಯದ ಮೇಲೆ ವಾರ್ತಿಕಗಳು ಮತ್ತು ಟುಪ್‌ಟೀಕುಗಳು ಪ್ರಸಿದ್ಧಿ ಪಡೆದಿವೆ. ಅವರ ಶ್ಲೋಕವಾರ್ತಿಕ ಮತ್ತು ತಂತ್ರವಾರ್ತಿಕಗಳು ಆ ಶಾಸ್ತ್ರವನ್ನು ತಿಳಿಯಲು ಇರುವ ಕೈಗಂಬಗಳು.

ಡಿ.ಆರ್.ನಾಗರಾಜ್ ನೆನಪಿನ ಅಕ್ಷರ ಚಿಂತನ ಮಾಲೆಯಲ್ಲಿ ಈ ಗ್ರಂಥ ಪ್ರಕಟವಾಗಿದೆ. ಲೇಖಕದ್ವಯರು ಬಹುಕಷ್ಟಪಟ್ಟು ಮೀಮಾಂಸಾಶಾಸ್ತ್ರ ಹಾಗೂ ಕುಮಾರಿಲರ ತತ್ತ್ವಮಾರ್ಗದ ವ್ಯಾಖ್ಯಾನವನ್ನು ಕನ್ನಡಕ್ಕೆ ತಂದು ಕೊಟ್ಟಿದ್ದಾರೆ. ಆಧುನಿಕ ತತ್ತ್ವಮಾರ್ಗಗಳನ್ನು ತಿಳಿಯಲು ಪರ್ಯಾಯವಾಗಿ ಇದು ನೆರವಿಗೆ ಬರುತ್ತದೆ. ಪ್ರಾಚೀನ ವೇದಸಾಹಿತ್ಯ ತಿಳಿಯಲು ಇದು ಉಪಕಾರಕ. ಮೀಮಾಂಸಾ ದರ್ಶನಕ್ಕೆ ವೇದವೇ ಆಧಾರ. ಅದರಲ್ಲೂ ಮಂತ್ರಬ್ರಾಹ್ಮಣಗಳೇ ಪ್ರಧಾನ. ಆರಣ್ಯಕ - ಉಪನಿಷತ್ತುಗಳು ಗೌಣ. ಈಗ 'ಬ್ರಹ್ಮಮೀಮಾಂಸಾ' ಎಲ್ಲೆಲ್ಲೂ ಉಪಾಸನಾ ಕಾಂಡವಾಗಿ ಬೆಳೆಯುತ್ತಿದೆ; ಉಪನಿಷತ್ತುಗಳ ಅಧ್ಯಯನ ಹೆಚ್ಚಿದೆ. 'ಬ್ರಹ್ಮ'ವನ್ನು ವಿರೋಧಿಸುವ ಮೀಮಾಂಸಾ ಶಾಸ್ತ್ರವನ್ನು ಪೂರ್ವಪಕ್ಷವಾಗಿ ತಿಳಿಯುವ ಅಗತ್ಯವಿದೆ. ಈ ಶಾಸ್ತ್ರವು ಶಬ್ದಪ್ರಮಾಣವನ್ನು ಆಧಾರವಾಗಿ ನೆಮ್ಮಿದೆ. ಪ್ರತ್ಯಕ್ಷ, ಉಪಮಾನ, ಅನುಮಾನ, ಅರ್ಥಾಪತ್ತಿ ಮತ್ತು ಅನುಪಲಬ್ಧಿವೂ ಈ ಶಾಸ್ತ್ರಕ್ಕೆ ಪ್ರಮಾಣಗಳೇ. ಈ ಪ್ರಮಾಣಗಳನ್ನು ಹಿಡಿದು ಜೀವ, ಜಗತ್ತು ಮತ್ತು ಈಶ್ವರ ತತ್ತ್ವಗಳ ಬಗೆಗೆ ಚಿಂತನೆ ಮಾಡುತ್ತದೆ. ವೇದವು ಅಪೌರುಷೇಯವೆಂದೂ ಈಶ್ವರ ಇಲ್ಲವೆಂದೂ ಹೇಳುತ್ತದೆ. ಇದು ಒಂದು ರೀತಿಯ ಅರೆಚಾರ್ವಾಕವಾದವೇ ಹೌದು! ಕುಮಾರಿಲರು ಶ್ಲೋಕವಾರ್ತಿಕ ಉಪೋದ್ಘಾತದಲ್ಲಿ "ಪ್ರಾಯೇಣೈವ ಹಿ ಮೀಮಾಂಸಾ ಲೋಕೇ ಲೋಕಾಯವೇ ಕೃಪಾ । ತಾಮಾಸ್ತಿಕಪಥೇ ನೇತುಮಯಂ ಯತ್ನಃ ಕೃತೇ ಮಯಾ ॥ ಎಂದು ಹೇಳಿರುವುದು ಗಮನಾರ್ಹ. ಮೀಮಾಂಸೆಯು ಹೆಚ್ಚು ಕಡಿಮೆ ಲೋಕಾಯತೀಕೃತವಾಗಿದೆ. ಅದನ್ನು ಆಸ್ತಿಕ ಮಾರ್ಗಕ್ಕೆ ತರಲು ಈ ಯತ್ನ" ಎಂದು ಪ್ರತಿಜ್ಞೆ ಮಾಡಿದ್ದಾರೆ. ಇಂಥ ಹಲವಾರು ವಿಚಾರಗಳು ಕುಮಾರಿಲರ 'ಭಾಟ್ಟಮತ'ದಲ್ಲಿ ಹುದುಗಿದೆ. ಈ ಪುಸ್ತಕದ ಪರಿಚಯದ ಭಾಗವು ಕುಮಾರಿಲರ 'ಭಾಟ್ಟಮತ'ವನ್ನು ಸಂಗ್ರಾಹ್ಯವಾಗಿ ಹಾಗೂ ಸರಳವಾಗಿ ನಿರೂಪಿಸುತ್ತದೆ. ಕುಮಾರಿಲರ ಶ್ಲೋಕವಾರ್ತಿಕದ 'ಸಂಬಂಧಾಕ್ಷೇಪ ಪರಿಹಾರ' ಎಂಬ ಪ್ರಕರಣವನ್ನು ಮೂಲ ಸಹಿತ ಅನುವಾದಿಸಿ, ವಿವರಣೆ ನೀಡಿರುವುದು ಉಚಿತವಾಗಿದೆ. ಶಬ್ದ ಮತ್ತು ಅರ್ಥದ ಸ್ವರೂಪ ಕುರಿತ ಇಲ್ಲಿಯ ವ್ಯಾಖ್ಯಾನವು ಭಾಷಾಶಾಸ್ತ್ರಕ್ಕೂ ತತ್ತ್ವವಿಚಾರಕ್ಕೂ ಹಲವು ಬಗೆಯ ನೆಲೆಗಳನ್ನು ತಂದುಕೊಡುತ್ತದೆ. ಹಿನ್ನುಡಿಯಾಗಿ ಪ್ರೊ. ಕೀರ್ತಿನಾಥ ಕುರ್ತಕೋಟಿ ಅವರ ಚರ್ಚೆಗಳು ಚಿಂತನೀಯವಾಗಿವೆ. ಇಷ್ಟು ಹೇಳಿದ ಮೇಲೂ ಒಂದೆರಡು ಸಣ್ಣ ಕೊರತೆಗಳು ಹಾಗೇ ಉಳಿದಿವೆ. ಕುಮಾರಿಲ ಭಟ್ಟರ ಗ್ರಂಥ ಪ್ರಕಟಣೆಯ ವಿವರಗಳನ್ನು ಕೊನೆಗೆ ಕೊಡಬೇಕಾಗಿತ್ತು. ದೇವುಡು ನರಸಿಂಹಶಾಸ್ತ್ರಿ ಅವರು ೧೯೩೪ ರಲ್ಲಿ ಹೊರತಂದ ಮೀಮಾಂಸಾ ದರ್ಪಣ ಪುಸ್ತಕದ ನೆರವನ್ನು ಲೇಖಕರಿಬ್ಬರೂ ಬಳಸಿಕೊಳ್ಳಬೇಕಾಗಿತ್ತು.

ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್

---

**ಒಳದನಿ**

ಲೇ : ಕೆ.ನ.ಶಿವತೀರ್ಥನ್
ಪ್ರ : ನೈರುತ್ಯ ಪ್ರಕಾಶನ, ಮೈಸೂರು
೨೦೦೦, ಪುಟ ೭೨ ಬೆಲೆ ರೂ. ೫೫.೦೦

ಬದುಕಿನ ವಿವಿಧ ಆಯಾಮಗಳ ಕುರಿತು ಅದರ ಅಂತಃಸತ್ವದ ಸಮೇತ ಅಂತಃಕರಣಯುಕ್ತವಾಗಿ ಒಡನಾಡುತ್ತದೆ ಈ ಒಳದನಿ ಪುಸ್ತಕ. ಪುಸ್ತಕದ ಹೆಸರೇ ಹಲವು ರೀತಿಯ ಅರ್ಥಪೂರ್ಣ ಗ್ರಹಿಕೆಗಳಿಗೆ ದಾರಿಮಾಡಿಕೊಡುತ್ತದೆ. ಶ್ರೀ ಶಿವತೀರ್ಥನ್‌ರವರ ಇಲ್ಲಿನ ವಿಚಾರಗಳು ಎರಡು ಮೂರು ರೀತಿಯ ಮಾದರಿಯನ್ನು ಒಳಗುಮಾಡಿಕೊಂಡಿವೆ. ಗಾಂಧೀಜಿ ಕುರಿತ ಮೊದಲಿನ ಲೇಖನಗಳು ಅವರ ಸೂಕ್ಷ್ಮ ಸಂವೇದನಾಪರ ನೆಲೆಗಳನ್ನು ಹೋರಾಟ ಮತ್ತು ಸಾಧಕ ಬದುಕಿನ ಆಯಾಮಗಳನ್ನು ತಿಳಿಸಿಕೊಡುತ್ತವೆ. ಇವು ಬರೀ ಲೇಖನಗಳಾಗಿ ಉಳಿಯದೆ ಗಾಂಧೀಜಿಯವರ ವಿಚಾರ ಮತ್ತು ವರ್ತಮಾನದ ವಿದ್ಯಮಾನಗಳ ಮುಖಾಮುಖಿಯಾಗಿ ಅನುಸಂಧಾನದ ಅನನ್ಯತೆಗಳಾಗಿ ಆತ್ಮಾವಲೋಕನದ ಬಗೆಗಳಾಗಿ ಕಾಣಸಿಕೊಳ್ಳುತ್ತವೆ. ಗಾಂಧೀಜಿಯನ್ನು ರಾಷ್ಟ್ರದ ಪ್ರಧಾನ ಧಾರೆಯಲ್ಲಿಟ್ಟು ಅವರ ರಾಜಕೀಯ ಸಾಮಾಜಿಕ ವಿಚಾರ ಧಾರೆಗಳನ್ನು ಗ್ರಹಿಸುವ ಬಗೆ ಒಂದಾದರೆ, ಕರ್ನಾಟಕದ ಅದೂ ಕನ್ನಡ ಸಂವೇದನೆಯ ಹಿನ್ನೆಲೆಯಲ್ಲಿ ಚರ್ಚಿಸುವುದು ಇನ್ನೊಂದು ಬಗೆ. ಈ ಎರಡು ನೆಲೆಗಳು ಲೇಖಕರ ಮುಖ್ಯ ಗುಣಾತ್ಮಕ ಸಂಗತಿಗಳು.

ಎರಡನೆಯ ರೀತಿಯ ಬರವಣಿಗೆಯೆಂದರೆ ಅನಂತಮೂರ್ತಿಯವರಂತಹ ಕನ್ನಡದ ಲೇಖಕರ ಬರಹಗಳೊಂದಿಗೆ ಅವರ ವಿಚಾರಧಾರೆಗಳೊಂದಿಗೆ ಮುಖಾಮುಖಿಯಾಗುವುದು ಇದು ಸಂಪೂರ್ಣವಾಗಿ ಸಾಹಿತ್ಯ

## ಶ್ರೀ ರಾಘವೇಂದ್ರ ಪ್ರಕಾಶನ, ಅಂಬಾರಕೊಡ್ಲ

ಇದು ಉತ್ತರ ಕನ್ನಡ ಜಿಲ್ಲೆಯ ಗ್ರಾಮಾಂತರ ಪ್ರದೇಶದಲ್ಲಿ ರೂಪತಾಳಿದ ಪ್ರಕಾಶನ ಸಂಸ್ಥೆ. ಅಂಕೋಲಾ ತಾಲೂಕಿನ 'ಅಂಬಾರಕೊಡ್ಲ' ಒಂದು ಚಿಕ್ಕ ಹಳ್ಳಿಯಾದರೂ ಶ್ರೀ ರಾಘವೇಂದ್ರ ಪ್ರಕಾಶನ ಸಂಸ್ಥೆಯಿಂದ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟಸ್ಥಾನವನ್ನು ಪಡೆದುಕೊಂಡಿದೆ. ಈ ಸಂಸ್ಥೆಗೆ ಎರಡು ಆಯಾಮಗಳಿರುವುದುಂಟು. ಒಂದು ಪ್ರಕಾಶನ ಸಂಸ್ಥೆಯಾಗಿ ಅದರ ಸಾಧನೆ ಏನು? ಕನ್ನಡಿಗರಲ್ಲಿ ಸಾಮಾಜಿಕ ಜಾಗೃತಿಯನ್ನುಂಟು ಮಾಡುವಲ್ಲಿ ಅದರ ಪಾತ್ರ ಎಂತಹದು? ಎಂಬುವೇ ಆ ಆಯಾಮಗಳು.

ರಾಘವೇಂದ್ರ ಪ್ರಕಾಶನವು ೧೯೭೩ರ ಆದಿಯಲ್ಲಿ ಆರಂಭವಾಗಿ ಹಲವು ಏಳು - ಬೀಳುಗಳ ಮಧ್ಯ ನಿರಂತರತೆಯನ್ನು, ವೈವಿಧ್ಯತೆಯನ್ನು ಕಾಪಾಡಿಕೊಳ್ಳುತ್ತ ಪುಸ್ತಕೋದ್ಯಮದಲ್ಲಿ ಹೊಸಮಾರ್ಗವನ್ನು ತೆರೆದು ತೋರಿಸಿತು. ಅವರು ಪ್ರಕಟಿಸಿದ ಪುಸ್ತಕೋದ್ಯಮದ ಲಕ್ಷಣಗಳೇನು? ಅದಕ್ಕಿರುವ ಸಾಂಸ್ಕೃತಿಕ ಮಹತ್ವವೇನು? ಎಂಬ ವಿಷಯಕ್ಕೆ ಈ ಬರೆಹವನ್ನು ಸೀಮಿತಗೊಳಿಸುತ್ತೇನೆ.

ಪ್ರಕಾಶನವು ೨೯ ವರ್ಷಗಳ ಅವಧಿಯಲ್ಲಿ ೧೩೫ ಪುಸ್ತಕಗಳನ್ನು ಪ್ರಕಟಿಸಿದೆ. ಅವುಗಳಲ್ಲಿ ಕಾವ್ಯ, ನಾಟಕ, ಕತೆ, ವಿಮರ್ಶೆ, ಚೌಪದಿ, ಅಂಕಣ ಬರೆಹಗಳು ಹಾಗೂ ಶಿಶು ಸಾಹಿತ್ಯ ಮುಂತಾದ ವಿವಿಧ ಸಾಹಿತ್ಯ ಪ್ರಕಾರಗಳನ್ನು ಪ್ರಕಟಿಸಿದೆ. ಉದಯೋನ್ಮುಖ ಬರೆಹಗಾರರನ್ನು ಗುರುತಿಸಿ ಅವರ ಮೊದಲ ಬರೆಹಗಳನ್ನು ಪ್ರಕಟಿಸಿದೆ. ಇದನ್ನು ಗಮನಿಸಿದಾಗ ಹೊಸ ಬರೆಹಗಾರರನ್ನು ಬೆಳಕಿಗೆ ತರುವ ಹಾಗೂ ಅವರ ಪ್ರತಿಭೆಯನ್ನು ಶೈಕ್ಷಣಿಕವಾಗಿ ನಾಡಿಗೆ ಪರಿಚಯಿಸಿದ ಕೀರ್ತಿ ಈ ಪ್ರಕಾಶನದು. ಸಾಂಸ್ಕೃತಿಕವಾಗಿ ಮಹತ್ವದ ಕೃತಿಗಳನ್ನೂ ಪುನರ್ಮುದ್ರಿಸಿದೆ. ಅಲ್ಲದೆ ಹಳಗನ್ನಡದ ಮಹತ್ವದ ಸಾಂಸ್ಕೃತಿಕ ಪಠ್ಯಗಳಲ್ಲಿಯ ಸಮಕಾಲೀನ ಅಂಶಗಳನ್ನು ಗುರುತಿಸಿ ಅವುಗಳನ್ನು ಇಂದಿನ ವಿಮರ್ಶೆಯ ಬೆಳಕಿನಲ್ಲಿ ಚರ್ಚಿಸುವ ಕೃತಿಗಳನ್ನೂ ಪ್ರಕಟಿಸಿದೆ. ಈ ಸಂದರ್ಭದಲ್ಲಿ ಪ್ರೊ. ಜಿ.ಹೆಚ್.ನಾಯ್ಕರ 'ಹರಿಶ್ಚಂದ್ರ ಕಾವ್ಯ : ಓದು, ವಿಮರ್ಶೆ' ಎಂಬುದು ಜ್ಞಾಪಕಕ್ಕೆ ಬರುತ್ತದೆ. ಇಂತಹ ಅನೇಕ ಸದಭಿರುಚಿಯ ವೈಚಾರಿಕ ಹಾಗೂ ಮೌಲಿಕ ಗ್ರಂಥಗಳು ಪ್ರಕಟವಾಗಿವೆ. ಆಧುನಿಕ ಸಾಹಿತ್ಯವನ್ನು ಪ್ರವೇಶಿಸುವವರು ರಾಘವೇಂದ್ರ ಪ್ರಕಾಶನದ ಪ್ರಕಟಣೆಗಳನ್ನು ನೋಡಿಯೇ ಮುಂದುವರೆಯ ಬೇಕಾಗುತ್ತದೆಂಬುದನ್ನು ವಿದ್ವಾಂಸರು ಮನಗಂಡಿದ್ದಾರೆ.

ಪ್ರಕಾಶನವು ಬೆಳ್ಳಿ ಹಬ್ಬದ ಪ್ರಯುಕ್ತ (೧೯೯೮) ಹಲವಾರು ಕಾರ್ಯಯೋಜನೆಗಳನ್ನು ಹಮ್ಮಿಕೊಂಡಿತ್ತು. ನಾಡಿನ ವಿವಿಧ ಭಾಗಗಳ ಬರೆಹಗಾರರಿಂದ ವಿವಿಧ ಸಾಹಿತ್ಯ ಪ್ರಕಾರಗಳಿಗೆ ಸಂಬಂಧಿಸಿದ ೧೦೦ ಕೃತಿಗಳನ್ನು ಪ್ರಕಟಿಸಿದೆ. ಆ ಸಂದರ್ಭದಲ್ಲಿ ರಾಜ್ಯಮಟ್ಟದಲ್ಲಿ ಸಾಹಿತ್ಯ ಸ್ಪರ್ಧೆಗಳನ್ನು ಏರ್ಪಡಿಸಿದುದು ಉಲ್ಲೇಖಾರ್ಹ. ಹಿರಿಯ ವಿದ್ವಾಂಸರಾದ ಡಾ. ಗೌರೀಶ ಕಾಯ್ಕಿಣಿ ಅವರ ಸಮಗ್ರ ಸಾಹಿತ್ಯವನ್ನು ೧೦ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆಯನ್ನು ಹಮ್ಮಿಕೊಂಡಿದೆ (ಈಗಾಗಲೇ ೯ ಸಂಪುಟಗಳು ಪ್ರಕಟವಾಗಿವೆ). ಈ ಯೋಜನೆ ಪ್ರಕಾಶನದ ಸಾಹಿತ್ಯಿಕ ಸಾಧನೆಗಲಲ್ಲಿ ಒಂದು ಮೈಲುಗಲ್ಲು. ಸು.ರಂ.ಎಕ್ಕುಂಡಿ, ಎಂ.ಅಕಬರಲಿ ಇಂತಹ ಹಿರಿಕರ ಬರೆಹಗಳು ಈ ಪ್ರಕಾಶನದಿಂದ ಬೆಳಕು ಕಂಡಿವೆ. ವಿಮರ್ಶಕರಾದ ಪ್ರೊ. ಜಿ.ಎಚ್.ನಾಯಕರ ಸಂಪಾದಕತ್ವದಲ್ಲಿ ಶತಮಾನದ ಕನ್ನಡ ಸಾಹಿತ್ಯ ಕುರಿತು ಎರಡು ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆಯೂ ಉಲ್ಲೇಖಾರ್ಹ (ಸಂಪುಟ - ೧ ಪ್ರಕಟವಾಗಿದೆ).

ಈ ಪ್ರಕಾಶನ ಸಂಸ್ಥೆಯ ಇನ್ನೊಂದು ಸಾಧನೆ ಎಂದರೆ ಉತ್ತರ ಕನ್ನಡದ ಪರಿಸರದಲ್ಲಿ ಸಾಹಿತ್ಯಿಕ ವಾತಾವರಣ ಸೃಷ್ಟಿಸಿದುದು. ಅದಕ್ಕಾಗಿ ಅವರು ಬಳಸಿದ ಪರಿಕರಗಳೆಂದರೆ ಸಾಹಿತ್ಯಗೋಷ್ಠಿ, ಕವಿಗೋಷ್ಠಿ, ಲೇಖಕರ ಕಮ್ಮಟ, ಸಿದ್ಧ ಭಾಷಣ ಮತ್ತು ಆಶು ಭಾಷಣ ಸ್ಪರ್ಧೆಗಳನ್ನು ಏರ್ಪಡಿಸಿದುದು. ತತ್ಪರಿಣಾಮವಾಗಿ ಉದಯೋನ್ಮುಖ ಬರೆಹಗಾರರಿಗೆ ಆತ್ಮವಿಶ್ವಾಸ ಹಾಗೂ ಕೌಶಲ್ಯಗಳ ಅಭಿವೃದ್ಧಿಯಾಗುವುದರ ಮೂಲಕ ಸಾಂಸ್ಕೃತಿಕ ವಾತಾವರಣವನ್ನು ಜೀವಂತವಾಗಿಟ್ಟಂತಾಗುತ್ತದೆ. ಅದರಂತೆ ಗ್ರಾಮಾಂತರ ಭಾಗಗಳಲ್ಲಿ ರಂಗೋಲಿ, ತೋರಣ ಕಟ್ಟುವ ಇಂತಹ ಜನಪದ ಕಲೆಗಳ ಹಾಗೂ ಕಲಾ ಮೇಳಗಳ ಸ್ಪರ್ಧೆಗಳನ್ನು ಏರ್ಪಡಿಸಿ ದೇಶೀಯ ಸಂಸ್ಕೃತಿಯನ್ನು ಪೋಷಿಸಿ, ಬೆಳೆಸುವ ಕಾರ್ಯವನ್ನು ಮಾಡುತ್ತಲಿದೆ. ಪ್ರತಿಭಾವಂತ ಬಡ ವಿದ್ಯಾರ್ಥಿಗಳನ್ನು ದತ್ತು ತೆಗೆದುಕೊಂಡು ಶಿಶು ಮಕ್ಕಳಂತೆ ಪೋಷಿಸುವ ಕಾರ್ಯ ಅಷ್ಟೇ ಗಮನಾರ್ಹ.

ಸಾಹಿತ್ಯ ಸಮಾಜದ ಪ್ರತಿಬಿಂಬ ತಾನೆ. ಪ್ರಕಾಶನವು ಪ್ರಕಟಣೆಗೆ ಮಾತ್ರ ಸೀಮಿತವಾಗದೆ ಪಠ್ಯೇತರ ಚಟುವಟಿಕೆಗಳ ಮೂಲಕ ಸಾಹಿತ್ಯ ಪ್ರೇಮದ ಜೊತೆಗೆ ಮಾನವ ಪ್ರೇಮವನ್ನು ಬಿತ್ತರಿಸುವ ಜನಜಾಗೃತಿ ಕಾರ್ಯಕ್ರಮಗಳನ್ನು, ಜನೋಪಯೋಗಿ ಯೋಜನೆಗಳನ್ನು ರೂಪಿಸುತ್ತ ಬಂದಿದೆ. ಪ್ರಕಾಶನದ ಕಕ್ಷೆಯಲ್ಲಿ ಬರುವ 'ರಾಘವೇಂದ್ರ ರಂಗಸಂಘ'ದ ಮೂಲಕ ಕುಡಿತ, ವರದಕ್ಷಿಣೆ, ಮೂಢನಂಬಿಕೆ, ಬಾಲ್ಯವಿವಾಹ ಇಂತಹ ಸಾಮಾಜಿಕ ಅನಿಷ್ಟಗಳ ವಿರುದ್ಧ ಹಾಗೂ ಕೋಮು ಸೌಹಾರ್ದ, ರೈತ ಪರ ಹೋರಾಟ, ಕನ್ನಡ ಪರ ಚಟುವಟಿಕೆ, ಸಾಕ್ಷರತೆ ಇಂತಹ ಪ್ರಗತಿಪರ ವಿಚಾರಗಳಿಗೆ ತಕ್ಕಂತೆ ಬೀದಿ ನಾಟಕಗಳನ್ನು ರಂಗಗೀತೆಗಳನ್ನು ರಚಿಸಿ ಉತ್ತರ ಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಪ್ರಯೋಗಿಸಿದರು. ತನ್ಮೂಲಕ ಜನರಲ್ಲಿ ವೈಚಾರಿಕ ಪ್ರಜ್ಞೆಯನ್ನುಂಟು ಮಾಡಿದರು. ಆರೋಗ್ಯಪೂರ್ಣ ಸಮಾಜವನ್ನು ಕಟ್ಟುವ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಬೆಂಬಲಿಸಿ ಅಂತಹವರನ್ನು ಸಾರ್ವಜನಿಕವಾಗಿ ಗೌರವಿಸುವ ಕೆಲಸವನ್ನು ಮಾಡಿದೆ. ಇವೆಲ್ಲವುಗಳನ್ನು ಗಮನಿಸಿದರೆ ಶ್ರೀ ರಾಘವೇಂದ್ರ ಪ್ರಕಾಶನವು ಸಾಂಸ್ಕೃತಿಕ ಜವಾಬ್ದಾರಿಯುಳ್ಳ, ಸಾಮಾಜಿಕ ಕಳಕಳಿಯುಳ್ಳ ಸಾರ್ವಜನಿಕ ವೇದಿಕೆಯಾಗಿದೆ. ನಾಡಿನ ಪ್ರಕಾಶನ ಸಂಸ್ಥೆಗಳು ಇಂತಹ ಕಾರ್ಯಗಳನ್ನು ಮುಂದುವರೆಸಿದರೆ ನಾಡಿನ ಸರ್ವತೋಮುಖ ಪ್ರಗತಿ ಸಾಧ್ಯ. ಆದರೆ ಇಂದು ಕೆಲವು ಪ್ರಕಾಶನ ಸಂಸ್ಥೆಗಳ ಕಾರ್ಯಗಳನ್ನು ಗಮನಿಸಿದರೆ? (ಯಾತನೆಯಾಗುತ್ತದೆ: ಕೋಪಬರುತ್ತದೆ).

ಶ್ರೀ ರಾಘವೇಂದ್ರ ಪ್ರಕಾಶನದ ಕೇಂದ್ರ ವ್ಯಕ್ತಿಯಾಗಿರುವ ಶ್ರೀ ವಿಷ್ಣು ನಾಯ್ಕರು ಶ್ರೇಷ್ಠ ಸೃಜನಶೀಲ ಬರೆಹಗಾರರಾದಂತೆ (ವ್ಯಷ್ಠಿ ನೆಲೆ), ಅದ್ಭುತ ಸಂಘಟಕರೂ ಆಗಿದ್ದಾರೆ. (ಸಮಷ್ಠಿನೆಲೆ) ಸು. ೩೦ ವರ್ಷಗಳ ಕಾಲ ಏಕಾಂಗಿಯಾಗಿ ಅನೇಕ ತಾಪತ್ರಯಗಳನ್ನು ಅನುಭವಿಸುತ್ತ ಸಂಸ್ಥೆಯನ್ನು ಬೆಳೆಸಿದ್ದಾರೆ. ಬರೆಹಗಾರರ ಜಾತಿ, ಮತ, ಲಿಂಗ, ವಯಸ್ಸು ಹಾಗೂ ಪ್ರಾಂತಭೇದವೆನ್ನದೆ ಬರೆಹಗಳ ಗುಣಮಟ್ಟವನ್ನು ಗಮನಿಸಿರುವುದನ್ನು ನೋಡಿದರೆ ನಾಯ್ಕರ ಸಮತೋಲನ ವ್ಯಕ್ತಿತ್ವವನ್ನು ಯಾರಾದರೂ ಮೆಚ್ಚುತ್ತಾರೆ. ನಾಯ್ಕರು ಒಂದು ಗ್ರಂಥವನ್ನು ಪ್ರಕಟಣೆಗೆ ತೆಗೆದುಕೊಂಡರೆ ಅದು ಮುದ್ರಣವಾಗುವ ತನಕ ತಮ್ಮನ್ನೇ ತಾವು ತೊಡಗಿಸಿಕೊಳ್ಳುತ್ತಾರೆ. ಲೇಖಕರೊಂದಿಗೆ ಪತ್ರವ್ಯವಹಾರ, ಹಸ್ತಪ್ರತಿಗಳ ಅವಲೋಕನ, ಕರಡು ತಿದ್ದುವುದು, ಮುಖಪುಟ ವಿನ್ಯಾಸ, ಮುದ್ರಣ ಹಾಗೂ ಗ್ರಂಥ ಬಿಡುಗಡೆ ಆಗುವವರೆಗೆ ಅಚ್ಚುಕಟ್ಟಾಗಿ ಉಸ್ತುವಾರಿ ಮಾಡುವುದು ಅವರ ಜಾಯಮಾನವೇ ಆಗಿದೆ. ಇಂತಹವರಿಗೆ ಸರಕಾರದ ಆರ್ಥಿಕ ನೆರವು ಹಾಗೂ ಸಾಹಿತಿ ಕಲಾವಿದರ ಪ್ರೋತ್ಸಾಹವಿದ್ದರೆ ಏನಾದರೂ ಸಾಧಿಸಬಹುದು. ಪ್ರಕಾಶನದ ಮೂಲಕ ದುಡಿಯುತ್ತಿರುವ ವಿಷ್ಣುನಾಯ್ಕರ ಕನ್ನಡ ಸೇವೆ ನಿರಂತರವಾಗಿರಲಿ ಅದರಲ್ಲಿ ಅವರಿಗೆ ಯಶಸ್ಸು ದೊರೆಯಲೆಂದು ಹಾರೈಸೋಣ.

ಡಾ. ಎಸ್.ಎಸ್.ಅಂಗಡಿ

v) **ಮೊದಲ ನೋಟ :** ಈ ಅಂಕಣದಲ್ಲಿ ಆಯಾ ತಿಂಗಳು ಪ್ರಕಟವಾಗುವ ಎಲ್ಲ ಪುಸ್ತಕಗಳ ಅವಲೋಕನವನ್ನು ಮಾಡಲಾಗುತ್ತದೆ. ಇದು ಒಂದು ರೀತಿಯ ಮೊದಲ ನೋಟವು ಆಗಿರಬಹುದು. ಎಲ್ಲ ಲೇಖಕರು; ಹೊಸಬರು - ಹಳಬರೆಂಬ ಬೇಧಭಾವವಿಲ್ಲದೆ ಇಲ್ಲಿ ಪುಸ್ತಕಗಳ ವಿಮರ್ಶೆಯೆಂಬುದಕ್ಕಿಂತ ಅವಲೋಕನ ಸಮೀಕ್ಷೆ ಸಿಗುತ್ತದೆ.

vi) **ಹಳೆಯ ಪುಸ್ತಕ :** ಈ ಅಂಕಣದಲ್ಲಿ ಹಳೆಯ ಪುಸ್ತಕದ ಬಗ್ಗೆ ಬರೆಯಿಸಲಾಗುತ್ತದೆ ಮತ್ತು ಬರೆಯಬಹುದು. ಪುಸ್ತಕ ಮಾಹಿತಿಯು ಹಳೆಯ ಪುಸ್ತಕ ಎಂಬ ಮಾಲಿಕೆಯಲ್ಲಿ ಹಳೆಯ ಪುಸ್ತಕಗಳನ್ನು ಪರಿಚಯಿಸಲಾಗುವದು. ತಮ್ಮಲ್ಲಿ ೧೯೪೦ ರ ಪೂರ್ವದಲ್ಲಿ ಪ್ರಕಟವಾದ ಪುಸ್ತಕಗಳಿದ್ದರೆ **ಸಂಪಾದಕರು, ಪುಸ್ತಕ ಮಾಹಿತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬, ಬಳ್ಳಾರಿ ಜಿಲ್ಲೆ, ಈ ವಿಳಾಸಕ್ಕೂ ಕಳಿಸಬಹುದು.** ಅಥವಾ ಅವುಗಳ ಕುರಿತು ಫುಲ್‌ಸ್ಕೇಪ್ ಹಾಳೆಯಲ್ಲಿ ಪರಿಚಯಾತ್ಮಕವಾಗಿ ಒಂದು ಪುಟ ಬರೆಯಬಹುದು. ಇದು ಹಳೆಯ ಪುಸ್ತಕಗಳ ಬಗ್ಗೆ ಬರೆಯಬಹುದಾಗಿದ್ದವರಿಗೆ ಒಂದು ಅನುಕೂಲವೇ ಸರಿ. ಇಲ್ಲವೇ ಪುಸ್ತಕಗಳನ್ನು ಕಳಿಸಿದರೆ ವಿದ್ವಾಂಸರು ಬರೆದು ಪ್ರಕಟಿಸುತ್ತಾರೆ.

vii) **ನಾವು ನೋಡಿದ ಪುಸ್ತಕ :** ಇಲ್ಲಿ ಹಲವು ಪುಸ್ತಕಗಳ ಬಗ್ಗೆ ಬರೆಯಲಾಗುತ್ತದೆ. ಅವುಗಳನ್ನು ವಿದ್ವಾಂಸರು ಎಲ್ಲೋ ನೋಡಿದ ಉತ್ತಮ ಪುಸ್ತಕಗಳಾಗಿರಬಹುದು. ಇಲ್ಲಿ ವಿಷಯ ವೈವಿಧ್ಯತೆ ಇರುತ್ತದೆ. ಜಾನಪದ, ದಲಿತ ಸಾಹಿತ್ಯ, ಮಹಮ್ಮದೀಯ ಸಾಹಿತ್ಯ, ವಿಜ್ಞಾನ ಮಾನವಿಕ ವಿಷಯಗಳು ಮುಂತಾದ ಪುಸ್ತಕಗಳನ್ನು ವಿದ್ವಾಂಸರು ಪರಿಶೀಲಿಸಿದ್ದರೆ ಹಾಗೆ ನೋಡಿದ್ದರೂ ಕೂಡ ಅದನ್ನು ಬರವಣಿಗೆಯಾಗಿ ದಾಖಲಿಸುವ ಪ್ರಯತ್ನ ಮೆಚ್ಚತಕ್ಕದ್ದೇ.

viii) **ಹೊಸ ಬೆಳೆ :** ಈ ಅಂಕಣದಲ್ಲಿ ಪ್ರಕಟವಾದ ಹೊಸ ಪುಸ್ತಕಗಳ ಪಟ್ಟಿ ಇರುತ್ತದೆ. ಕತೆ, ಕವನ, ಮರುಮುದ್ರಣ ಅನುವಾದ, ನಾಟಕ, ಪ್ರವಾಸ, ಸಂಕೀರ್ಣ, ಮಕ್ಕಳ ಸಾಹಿತ್ಯ, ಸಂಪಾದನೆ, ಮುಂತಾದ ಶೀರ್ಷಿಕೆಗಳಡಿಹೊಸ ಪುಸ್ತಕಗಳ ಪಟ್ಟಿ ಪ್ರಕಟವಾಗಿರುತ್ತದೆ. ಪ್ರಶಸ್ತಿಗಳಿಗೆ ಕೃತಿಗಳ ಆಹ್ವಾನ ಮುಂತಾದ ಸುದ್ದಿಗಳಿರುತ್ತವೆ. ಇದೂ ಅಲ್ಲದೆ ವಾರ್ಷಿಕ ಸಮೀಕ್ಷೆ ಸಂಚಿಕೆ ೯೫. ವಿಶ್ವವಿದ್ಯಾಲಯ ಪುಸ್ತಕ ಮಾಹಿತಿಗೆ ಮೂರು ವರ್ಷ ತುಂಬಿದಾಗ ವಿಶೇಷ ಸಂಚಿಕೆಯಾಗಿದ್ದು ಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ, ವಿಮರ್ಶೆ ಭಾಷಾಂತರ, ಜಾನಪದ ೧, ೨, ಸಂಶೋಧನೆ ೧, ೨, ೩, ಧರ್ಮ, ತತ್ವಶಾಸ್ತ್ರ, ಜೀವನಚರಿತ್ರೆ, ಆತ್ಮಕಥೆ, ಮಾನವಿಕಗಳು ಸಂಕೀರ್ಣ, ವಿಜ್ಞಾನ ಸಾಹಿತ್ಯ ೧, ೨, ಅಭಿನಂದನ - ಸ್ಮರಣ ಗ್ರಂಥಗಳು, ವೈಚಾರಿಕ, ಮಕ್ಕಳ ಸಾಹಿತ್ಯ, ಭಾಷಾ ವಿಜ್ಞಾನ ನಿಘಂಟು ಮುಂತಾದ ವಿಷಯಗಳ ಅಡಿಯಲ್ಲಿ ಸಮೀಕ್ಷೆಯನ್ನು ನಡೆಸಿದ್ದಾರೆ. ಇದು ವಿಶ್ವವಿದ್ಯಾಲಯದ ಪ್ರಯತ್ನಗಳಲ್ಲಿ ಉತ್ತಮ ಪ್ರಯತ್ನ.

**ಮಹಾಭಾರತ ಸಂಗ್ರಹ (ಅರಣ್ಯಪರ್ವ)**

ಲೇ : ಆಸ್ಥಾನ ವಿದ್ವಾನ್ ಕುಮಾಂಡೂರು ರಾಮಸ್ವಾಮ್ಯಯಂಗಾರ್ಯ
ಪ್ರ : ಕೃಷ್ಣರಾಜ ವಾಣೀವಿಲಾಸ ಪ್ರೆಸ್, ಮೈಸೂರು
ಶಾ.ಶ. ೧೮೬೫ನೆಯ ಮಾರ್ಗಶಿರ ಶು.೫.
೧೯೩೩, ಪುಟ ೧೮೩ ಬೆಲೆ ರೂ. ೧.೦೦

ಕನ್ನಡ ನಾಡಿನ ಮೂಲೆ ಮೂಲೆಯಲ್ಲಿ ಅಂದು ಪಠಣವಾಗುತ್ತಿದ್ದ ಮಹಾಭಾರತ ಕಥೆಯು ಪ್ರಸಿದ್ಧವಾಗಿದೆ. ವ್ಯಾಸರಿಂದ ಬರೆಯಲ್ಪಟ್ಟ ಈ ಬೃಹತ್ ಕಾವ್ಯವನ್ನು ನಮ್ಮ ದೇಸೀ ಭಾಷೆಯಲ್ಲಿ ಹಲವಾರು ಕವಿಗಳು - ಪಂಡಿತರು ಕಟ್ಟಿಕೊಟ್ಟದ್ದು ಕನ್ನಡಿಗರ ಸುಕೃತ ಫಲವೆಂದು ಭಾವಿಸಬಹುದು. ಆ ಮೂಲಕ ಅನಕ್ಷರಸ್ಥರೂ ಕೂಡ ಕಾವ್ಯದ ರಸದೂಟವನ್ನು ಸವಿದರು. ಅಂತೆಯೇ ಮಹಾಭಾರತ ಕಾವ್ಯವು ನಾಡಿನ ಮನೆ - ಮನಗಳಲ್ಲಿ ತುಂಬಿ ನಿಂತಿದೆ. ಬೃಹತ್ ಕಾವ್ಯವಾದ ಇದನ್ನು ನಮ್ಮ ನಾಡಿನ ಹಲವಾರು ವಿದ್ವಾನ್ ಮಣಿಗಳು, ಮೂಲದಲ್ಲಿರುವ ಹದಿನೆಂಟು ಪರ್ವಗಳನ್ನು ಓದಿ ಗ್ರಹಿಸಿ, ಕನ್ನಡಿಗರಿಗೆ ಒಂದೊಂದು ಪರ್ವವನ್ನು ಪ್ರತ್ಯೇಕವಾಗಿ ಸಂಗ್ರಹಿಸಿಕೊಟ್ಟಿದ್ದಾರೆ. ಅಂತಹ ಒಂದು 'ಅರಣ್ಯಪರ್ವ'ವನ್ನು ಒಳಗೊಂಡುದೇ ಈ 'ಮಹಾಭಾರತ ಸಂಗ್ರಹ' ಎಂಬ ಕೃತಿ.

ಹುಲಿಯೂರುದುರ್ಗದ ಶ್ರೀ ಕುಮಾಂಡೂರು ರಾಮಸ್ವಾಮಿ ಅಯ್ಯಂಗಾರು ಮಹಾಭಾರತವನ್ನು ಸಮರ್ಥವಾಗಿ ಅರ್ಥೈಸುವ ಘನ ವಿದ್ವಾಂಸರಾಗಿದ್ದರು. ಈ ಮುಂಚೆ ಕನ್ನಡಿಗರಿಗಾಗಿ 'ವಿರಾಟಪರ್ವ' - ಉದ್ಯೋಗಪರ್ವ - ಆದಿಪರ್ವ ಮತ್ತು ಸಭಾಪರ್ವವನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಅದರಂತೆ ಈ ಅರಣ್ಯಪರ್ವವನ್ನು ೧೯೩೩ನೇ ಇಸವಿಯಲ್ಲಿ ಸಂಗ್ರಹಿಸಿದರು.

ಈ ಕೃತಿಯು ಮೈಸೂರಿನ ಕೃಷ್ಣರಾಜವಾಣೀವಿಲಾಸ ಪ್ರೆಸ್ಸಿನಲ್ಲಿ ಮುದ್ರಿತವಾಗಿದೆ. ಆರಂಭದಲ್ಲಿ ಪ್ರಸ್ತಾವನೆಯು ಸಂಗ್ರಹಕಾರರಿಂದ ಬರೆಯಲ್ಪಟ್ಟಿದೆ. ನಂತರ ಒಂದು ಸುಂದರವಾದ ಚಿತ್ರವಿದೆ. ಈ ಚಿತ್ರದಲ್ಲಿ ಗರುಡನ ಮೇಲೆ ಆಸೀನವಾಗಿರುವ ಪ್ರಸನ್ನವದನನಾದ ಶ್ರೀಕೃಷ್ಣ ಮತ್ತು ಅವನ ಇಕ್ಕೆಲಗಳಲ್ಲಿ ಲಕ್ಷ್ಮಿ ಮತ್ತು ಸರಸ್ವತಿಯರ ಚಿತ್ರವಿದೆ. ಈ ಚಿತ್ರದ ಕೆಳಗೆ "ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ | ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ|| ಎಂಬ ಭಗವದ್ಗೀತೆಯ ಶ್ಲೋಕವಿದೆ. ನಂತರದಲ್ಲಿ ವಿಷಯಾನುಕ್ರಮಣಿಕೆ ಇದ್ದು ಇಲ್ಲಿ ೧೩ ಸಂಧಿಗಳಲ್ಲಿರುವ ಪರಿವಿಡಿಯನ್ನು ನೀಡಲಾಗಿದೆ. ಜೊತೆಗೆ ಪುಟಸಂಖ್ಯೆಯನ್ನೂ ಕೊಡಲಾಗಿದೆ. ವಿಷಯಾನುಕ್ರಮಣಿಕೆಯ ನಂತರದಲ್ಲಿ ಅರಣ್ಯಪರ್ವದ ಶುದ್ಧಾಶುದ್ಧ ಪತ್ರಿಕೆ ಎಂಬ ಶೀರ್ಷಿಕೆಯಡಿಯಲ್ಲಿ ಒಪ್ಪೋಲೆಯನ್ನು ನೀಡಲಾಗಿದೆ. ಪುಟ ಪಂಕ್ತಿ ಅಶುದ್ಧ ಶುದ್ಧ ಎಂಬ ಕ್ರಮದಲ್ಲಿ ಹೇಳಲಾಗಿದೆ. ಮಹಾಭಾರತ ಕಥಾಸಂಗ್ರಹ ಅರಣ್ಯಪರ್ವದ ಮೊದಲ ಸಂಧಿಯಿಂದ ಆರಂಭವಾಗಿ ಹದಿಮೂರನೇ ಸಂಧಿಯವರೆಗೆ ಕಥೆಯನ್ನು ಬರೆಯಲಾಗಿದೆ. ಮುಕ್ತಾಯ ಮಾಡುವಾಗ ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ ಎಂದು ಬರೆದು ಸಮಾಪ್ತಿಗೊಳಿಸಲಾಗಿದೆ. ಸಾಮಾನ್ಯ ಆಕೃತಿಯ ಈ ಪುಸ್ತಕದ ಹಾಳೆಗಳು ಕಡಿಮೆ ದರ್ಜೆಯವಾಗಿದ್ದು, ಇದರಲ್ಲಿ ಮುದ್ರಿಸಿರುವ ಅಕ್ಷರಗಳು ಗಾತ್ರದಲ್ಲಿ ದೊಡ್ಡವು. ಅನೇಕ ತಪ್ಪುಗಳನ್ನು ಮುದ್ರಣದಲ್ಲಿ ಕಾಣಬಹುದು. ಲೇಖಕರೇ ಹೇಳುವಂತೆ ಪ್ರೂಫ್ ಷೀಟುಗಳನ್ನು ಸ್ವತಃ ನೋಡಲು ಅವಕಾಶವಿಲ್ಲದ ಕಾರಣ ಈ ಮುದ್ರಣದಲ್ಲಿ ಕೆಲವು ಸ್ಖಾಲಿತ್ಯಗಳು ಬಿದ್ದಿರುವುವು. ಶುದ್ಧಾಶುದ್ಧ ಪತ್ರದಂತೆ ತಿದ್ದಿಕೊಳ್ಳುವುದಲ್ಲದೇ, ಇದರಲ್ಲಿ ಕಾಣಬರುವ ದೋಷಗಳನ್ನು ವಾಚಕ ಮಹಾಶಯರು ತಿಳಿಸಬೇಕು ಎಂದು ನಿವೇದಿಸಿಕೊಂಡಿದ್ದಾರೆ. ಇದು ಒಟ್ಟಾರೆ ಕೃತಿಯ ಸ್ವರೂಪ.

ಮೊದಲನೆಯ ಸಂಧಿಯಲ್ಲಿ ಪಾಂಡವರು ಕಾಮ್ಯಕ ವನದಲ್ಲಿ ವಾಸ ಮಾಡುತ್ತಿದ್ದಾಗ ಕಮ್ಮೀರನೆಂಬ ದೈತ್ಯನನ್ನು ಭೀಮನುಕೊಂದನು ಮೈತ್ರೇಯನು ಹಸ್ತಿನಾಪುರಕ್ಕೆ ಬಂದು, ಪಾಂಡವರ ಮೇಲೆ ದ್ವೇಷವನ್ನು ಬಿಡೆಂದು ಹೇಳಿದ ಮಾತನ್ನು ಕೌರವನು ಕೇಳದ ಕಾರಣ ಅವನಿಗೆ ಶಾಪಕೊಟ್ಟು ಹೋದ ಕಥೆಯಿದೆ. ಶ್ರೀಕೃಷ್ಣನು ತನ್ನ ಸೋದರತ್ತೆಯ ಮಕ್ಕಳಾದ ಪಾಂಡವರು ವನವಾಸ ಮಾಡುತ್ತಿರುವರೆಂದು ಕೇಳಿ, ಅವರನ್ನು ಸಂತೈಸುವುದಕ್ಕೋಸ್ಕರ ದ್ವಾರಕೆಯಿಂದ ಕಾಮ್ಯಕ ವನಕ್ಕೆ ಬಂದು ಸಮಾಧಾನದ ಮಾತನ್ನು ಹೇಳಿದ ಕಥೆ ಎರಡನೆ ಸಂಧಿಯಲ್ಲಿದೆ. ಮೂರನೇ ಸಂಧಿಯಲ್ಲಿ ಬಳಿಯಿದ್ದ ನೇರಳೆಗಿಡದಿಂದ ಅನರ್ಥವಿದೆಯೆಂದು ತಿಳಿದ ಕೃಷ್ಣನು ಅದರಿಂದ ಪಾರುಮಾಡಿದ ಕಥೆಯಿದೆ. ಪಾಂಡವರು ಕಾಮ್ಯಕ ವನದಿಂದ ದ್ವೈತಾರಣ್ಯಕ್ಕೆ ಹೋದಾಗ ವೇದವ್ಯಾಸರು ಬಂದು ಕ್ಷಮೆ ಕೇಳಿದರು. ದ್ರೌಪದಿಯು ಶಾಂತಿಯನ್ನು ಬಿಟ್ಟು ಜಯಕ್ಕೆ ಯತ್ನಿಸಬೇಕೆಂದು ಧರ್ಮರಾಯನಿಗೆ ಬೋಧಿಸಿದ ಕಥೆ ನಾಲ್ಕನೇ ಸಂಧಿ. ಯುಧಿಷ್ಠಿರನ ಮಾತಿನಂತೆ ಅರ್ಜುನನು ಇಂದ್ರಕೀಲ ಪರ್ವತವನ್ನು ಸೇರಿ ಪರಶಿವನಿಂದ ಪಾಶುಪತಾಸ್ತ್ರ ಪಡೆದದ್ದು ಐದನೆಯ ಸಂಧಿ. ಪಾಶುಪತಾಸ್ತ್ರದಿಂದ ಅಮರಾವತಿಗೆ ಬಂದ ಅರ್ಜುನನಿಗೆ ಮೋಹಿತಳಾಗಿ, ತಿರಸ್ಕೃತಳಾದ ಊರ್ವಶಿಯು ಶಿಖಂಡಿಯಾಗೆಂದು ಶಪಿಸಿದ ಕಥೆ ಆರನೇ ಸಂಧಿ. ಪಾಂಡವರ ತೀರ್ಥಯಾತ್ರೆ ದ್ರೌಪತಿಗೆ ಸೌಗಂಧಿಕ ಪುಷ್ಪತಂದ ಭೀಮ, ಅಕ್ಷಯಪಾತ್ರೆ ಬರಿದಾದದ್ದು ಘಟೋತ್ಕಜನ ಮಾಯಾ ಬಲದಿಂದ ಬಲರಾಮನ ಮಗಳು ಶಶಿರೇಖೆಯನ್ನು ಅಭಿಮನ್ಯುವರಿಸಿದ್ದು, ಗಂಧರ್ವನೊಂದಿಗೆ ಕೌರವ ಸೋತದ್ದು, ಯುಧಿಷ್ಠಿರನ ಸಲಹೆಯಂತೆ ಅವನನ್ನು ಅರ್ಜುನ ಬಿಡಿಸಿದ್ದು, ಸೈಂಧವನು ದ್ರೌಪದಿಯನ್ನು ಅಪಹರಿಸಲು ಭೀಮಾರ್ಜುನರು ಸೋಲಿಸಿ ಬಿಡಿಸಿದ್ದು ಕೊನೆಗೆ ವಿಷಜಲಪಾನ ಮಾಡಿ ಸಹೋದರರೆಲ್ಲಾ ಮಡಿಯಲು ಯಕ್ಷನ ಪ್ರಶ್ನೆಗೆ ಯುಧಿಷ್ಠಿರ ಉತ್ತರ ಕೊಟ್ಟು ಅವರನ್ನು ಬದುಕಿಸಿದ. ಎಂಬಲ್ಲಿಗೆ ಹದಿಮೂರು ಸಂಧಿಗಳ ಅರಣ್ಯಪರ್ವವು ಮುಕ್ತಾಯವಾಗುತ್ತದೆ.

ಮುಖ್ಯವಾಗಿ ಈ ಕೃತಿಯು ಕಥಾಸಂಗ್ರಹ ರೂಪದಲ್ಲಿದ್ದು, ಸರಳವಾದ ಗದ್ಯದಿಂದ, ಅಲ್ಲಲ್ಲಿ ಪಾತ್ರಗಳ ಮುಖೇನ ನಾಟಕದ ರೂಪದಲ್ಲಿ ಸಂಭಾಷಣೆಯನ್ನು ನೀಡುವ ಮೂಲಕ ಸುಲಭವಾದ ಹೊಸಗನ್ನಡ ಭಾಷೆಯಲ್ಲಿ ಓದುಗರಿಗೆ ತಲುಪಿಸಿದ್ದು ಕೃತಿಯ ವಿಶೇಷತೆಯೆನ್ನಬಹುದು. ಈ ಮೂಲಕ ಇದೊಂದು ಸಂಗ್ರಹರೂಪದ ವಿಶ್ಲೇಷಣೆಯೂ ಆಗಿದೆ.

ಈ ಪುಸ್ತಕವನ್ನು ಸಂಗ್ರಹಿಸಿಟ್ಟುಕೊಂಡ ಯಳ್ಯಾರ್ತಿಯ ಗುಂಡೂರು ಶೇಷಗಿರಿಯಪ್ಪನವರಿಗೆ ಅಭಿನಂದನೆಗಳು ಸಲ್ಲುತ್ತವೆ.

ಜಾಜಿ ದೇವೇಂದ್ರಪ್ಪ

**ಕನ್ನಡ ದಾಖಲು ಸಾಹಿತ್ಯ**

ಲೇ: ಡಾ. ಕೆ.ರವೀಂದ್ರನಾಥ

ಪ್ರ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ - ೫೮೩೨೭೬

೨೦೦೦, ಪುಟ ೧೯೨ ಬೆಲೆ ರೂ. ೮೦.೦೦

'ಕನ್ನಡ ದಾಖಲು ಸಾಹಿತ್ಯ' ಎನ್ನುವ ಕೃತಿಯು ಹೊಸ ಬಗೆಯ ಸ್ವರೂಪದ್ದಾಗಿದೆ. ಆದ್ದರಿಂದ ಈ ಲೇಖಕರ ಹವ್ಯಾಸಗಳನ್ನು ಕುತೂಹಲ ಗಳನ್ನು ಅಲ್ಲಿ ಕಂಡು ಅಲ್ಲಿರುವ ವೈಶಿಷ್ಟ್ಯಗಳಿಗಾಗಿ ಮನವನ್ನು ವಿಸ್ಮಯ ಕ್ಕೊಳಪಡಿಸುತ್ತದೆ. ಏಕೆಂದರೆ ದಾಖಲು ಸಾಹಿತ್ಯದಲ್ಲಿ ಚಾರಿತ್ರಿಕ ಮಹತ್ವವನ್ನು ಪಡೆದ ಶಾಸನ, ಕಡತ, ನಿರೂಪ, ಬಿನ್ನವತ್ತಳೆ, ದಿನಚರಿ, ಕೈಫಿಯತ್ತು, ಬಖೈರು, ನಾಮೆ, ಸ್ಥಳಪುರಾಣಮಹಾತ್ಮೆಗಳು ಸಮಾವೇಶ ಗೊಳ್ಳುತ್ತವೆ. ಇವುಗಳನ್ನೆಲ್ಲ ಅತ್ಯಂತ ವೈಜ್ಞಾನಿಕವಾಗಿ ದಾಖಲಿಸಿರುವುದು ಡಾ. ಕೆ. ರವೀಂದ್ರನಾಥ ಅವರ ಅಧ್ಯಯನದ ಶಿಸ್ತನ್ನು ಈ ಕೃತಿಯು ದಾಖಲಿಸುತ್ತದೆ.

ಈ ಪುಸ್ತಕದಲ್ಲಿ ಒಟ್ಟು ನಾಲ್ಕು ಅಧ್ಯಾಯಗಳಿದ್ದು, ಉದ್ದೇಶ ಮತ್ತು ವ್ಯಾಪ್ತಿ ಎನ್ನುವ ಮೊದಲ ಅಧ್ಯಾಯದಲ್ಲಿ ದಾಖಲು ಸಾಹಿತ್ಯದ ಪರಿವೀಕ್ಷಣೆ ಹಾಗೂ ಆ ಸಾಹಿತ್ಯದ ವಿಶ್ಲೇಷಣೆ ಎಂದು ಎರಡು ರೀತಿಯಲ್ಲಿ ಅಧ್ಯಯನ ಮಾಡಬೇಕಿಯವುದನ್ನು ತಿಳಿಸುತ್ತ (ಪುಟ - ೧) ಶಾಸನಗಳ ಅಧ್ಯಯನಕ್ಕೆ ಹೇರಳವಾದ ಅವಕಾಶವನ್ನು ಕಲ್ಪಿಸಿಕೊಟ್ಟಂತಿದೆ. ಕಡತ, ಬಖೈರು, ನಾಮೆ, ನಿರೂಪ, ದಿನಚರಿ, ಮುಂತಾದವುಗಳ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನ ಆಗಬೇಕಾಗಿರುವುದರ ಅಂಶವನ್ನು ತೋರಿಸುವಲ್ಲಿ ಹಿಮ್ಮೆಟ್ಟಿಲ್ಲ.

ಎರಡನೇ ಅಧ್ಯಾಯದಲ್ಲಿ ದಾಖಲು ಸಾಹಿತ್ಯದ ಅರ್ಥ, ಉಗಮ, ಸ್ವರೂಪ ಕುರಿತಂತೆ ಚರ್ಚಿಸಲಾಗಿದ್ದು, "ಇತಿಹಾಸವೆಂದರೆ ಕೇವಲ ಕವಿಗಳು ಬರೆದಿಟ್ಟ ಕಾಳಗದ ಕಥೆಯಲ್ಲ. ಕರಣಿಕರು ಬರೆದಿಟ್ಟ ಕೃತಕ ದಾಖಲೆಗಳಲ್ಲ. ಈ ರಾಷ್ಟ್ರದ ಪ್ರಜೆಗಳು ಯಾವ ಆದರ್ಶಗಳಿಗಾಗಿ ಯಾವ ಮೌಲ್ಯಗಳಿಗಾಗಿ ಬಾಳಿದರೆಂಬುದು ದಾಖಲೆಗಳಿಂದ ತಿಳಿದುಬರುತ್ತದೆ". ಇಂಥ ದಾಖಲೆಗಳ ಅಧ್ಯಯನ ಇತಿಹಾಸದ ಮೇಲೆ ಹೊಸ ಬೆಳಕನ್ನು ಹಾಕುವುದರಿಂದ ಅವುಗಳ ಮೌಲ್ಯವನ್ನು ಕುರಿತು ಇನ್ನೂ ಸಂಶೋಧನೆ ಆಗಬೇಕಿರುವುದರ ಬಗ್ಗೆ ಲೇಖಕರು ಗಮನವನ್ನು ಸೆಳೆದಿರುವುದು ಅತ್ಯಂತ ಮಹತ್ವದ್ದಾಗಿದೆ.

'ದಾಖಲು ಸಾಹಿತ್ಯದ ಪ್ರಕಾರಗಳು' ಎನ್ನುವ ಮೂರನೆಯ ಅಧ್ಯಾಯ ದಲ್ಲಿ ಶಾಸನ, ಕಡತ, ನಿರೂಪ, ಬಿನ್ನವತ್ತಳೆ, ಬಖೈರು, ಕೈಫಿಯತ್ತು, ನಾಮೆ, ಸ್ಥಳಪುರಾಣಗಳ ಮಹತ್ವವನ್ನು ಅವುಗಳಿಗಿರುವ ಅರ್ಥ, ಉಗಮ, ಪ್ರಕಾರಗಳ ವ್ಯಾಪ್ತಿಯನ್ನು ಆಧಾರಗಳೊಂದಿಗೆ ವಿಶ್ಲೇಷಿಸಿದ ರೀತಿ ಶಾಸ್ತ್ರಬದ್ಧ. ಇದು ಸಾಮಾನ್ಯ ಓದುಗರ ಮನ ಸೆಳೆಯುತ್ತದೆ. ಅಷ್ಟೇ ಅಲ್ಲ ಶಾಸ್ತ್ರೀಯವಾಗಿ ಅಧ್ಯಯನ ಮಾಡುವವರಿಗೆಲ್ಲ ಕುತೂಹಲವನ್ನು ಕೆರಳಿಸುವ ಪರಿಯೂ ಹೌದು.

ಸುಮಾರು ಎರಡು ನೂರು ವರ್ಷಗಳಿಗೂ ಹೆಚ್ಚು ಇತಿಹಾಸವಿರುವ ದಾಖಲು ಸಾಹಿತ್ಯಕ್ಕೆ ಭಾರತೀಯರಲ್ಲದೆ ವಿದೇಶೀಯರ ಕೊಡುಗೆಯೂ ಅಪಾರವಾದದ್ದು. ಡಾ. ಪಿ.ಬಿ.ದೇಸಾಯಿ, ಡಾ. ಎಂ.ಎಚ್.ಕೃಷ್ಣ, ಕರ್ನಲ್ ಮೆಕೆಂಝಿ, ಬಿ.ಎಲ್. ರೈಸ್ ಮುಂತಾದವರು ದಾಖಲೆಗಳ ಸಂಗ್ರಹಕ್ಕೆ ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದರೆಂಬುದನ್ನು ಅತ್ಯಂತ ಗೌರವದಿಂದ ನಾಲ್ಕನೆಯ ಅಧ್ಯಾಯದಲ್ಲಿ ಸ್ಮರಿಸಲಾಗಿದೆ. ಆದರೆ ಪ್ರೊ. ಡಿ.ಕೆ.ಭೀಮಸೇನ ರಾವ್, ಪ್ರೊ. ಬಿ.ರಾಮಸ್ವಾಮಿ, ಕಪಟರಾಳ ಕೃಷ್ಣರಾಯರು, ಜಯತೀರ್ಥ ರಾಜಪುರೋಹಿತ, ಸೀತಾರಾಮ ಜಾಗೀರದಾರ, ವಿಠಲರಾವ ಕುಲಕರ್ಣಿ, ಡಾ. ಹನುಮಾಕ್ಷಿ ಗೋಗಿ ಅವರಂಥ ವಿದ್ವಾಂಸರು ಹೈದರಾಬಾದ ಕರ್ನಾಟಕದ ಅನೇಕ ಶಾಸನಗಳನ್ನಲ್ಲದೆ ದಾಖಲು ಸಾಹಿತ್ಯದ ವಿವಿಧ ಪ್ರಕಾರಗಳನ್ನು ಸಂಗ್ರಹಿಸಿ ಪ್ರಕಟಿಸಿರುವುದು ಲೇಖಕರ ಗಮನಕ್ಕೆ ಬಂದಂತೆ ಕಾಣುವುದಿಲ್ಲ.

ಅನುಬಂಧದಲ್ಲಿರುವ ಶಿಲಾಶಾಸನ, ತಾಮ್ರಶಾಸನ, ಕೈಫಿಯತ್ತು, ಬಖೈರು, ಮೋಡಿಲಿಪಿ ಚಿತ್ರಗಳು, ಗ್ರಂಥ ಸೂಚಿಗಳು ದಾಖಲು ಸಾಹಿತ್ಯದ ಬಗ್ಗೆ ಹೆಚ್ಚಿನ ಅಧ್ಯಯನ ಮಾಡುವವರಿಗೆ ಮಾರ್ಗದರ್ಶಿಯಂತಿದ್ದು ಅವುಗಳ ಉಪಯುಕ್ತತೆಯ ಲಾಭವನ್ನು ಸಮಯಾವಧಾನದಲ್ಲಿ ಪಡೆಯಲು ಸಾಧ್ಯ. ಏಕೆಂದರೆ ಈ ಕೃತಿಯು ದೇಸಿಯೊಳ್ ಪೊಕ್ಕು, ದಾಖಲು ಸಾಹಿತ್ಯದ ಸ್ವರೂಪ ಸ್ವಭಾವಗಳನ್ನು ತಿಳಿಸಿಕೊಡಲು ಪ್ರಯತ್ನಿಸಿರುವುದರಿಂದ, ಈ ಕೃತಿಯ ಹೆಜ್ಜೆಯು ನಿಜಕ್ಕೂ ಮುಂದಿನ ಹೆಜ್ಜೆಗೆ ಪ್ರೇರಣೆ.

ಶ್ರೀನಿವಾಸ ಕುಷ್ಟಗಿ

ಸೌಜನ್ಯ : ಸಂಯುಕ್ತ ಕರ್ನಾಟಕ

---

**ಹಾಗಲವಾಡಿ ನಾಯಕರು**

ಲೇ: ಡಾ. ಡಿ.ಎನ್.ಯೋಗೀಶ್ವರಪ್ಪ

ಪ್ರ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ - ೫೮೩೨೭೬

೨೦೦೦, ಪುಟ ೨೨೮ ಬೆಲೆ ರೂ. ೧೦೦.೦೦

ಹಾಗಲವಾಡಿ ಸಂಸ್ಥಾನ ತುಮಕೂರು ಜಿಲ್ಲೆಯ ಬಹುಭಾಗವನ್ನಾಳಿದ ಒಂದು ಪ್ರಮುಖ ಅರಸು ಮನೆತನ. ಈ ಸಂಸ್ಥಾನ ಇಂದಿನ ಆಧುನಿಕ ತಾಲ್ಲೂಕುಗಳಾದ ಚಿಕ್ಕನಾಯಕನಹಳ್ಳಿ, ಗುಬ್ಬಿ, ತಿಪಟೂರು, ತುರುವೇಕೆರೆ ಹಾಗೂ ತುಮಕೂರು ತಾಲೂಕಿನ ಕೆಲಭಾಗಗಳಲ್ಲಿ ತನ್ನ ಆಳ್ವಿಕೆಯನ್ನು ಹೊಂದಿತ್ತು. ಇವರ ರಾಜಕೀಯ ಚರಿತ್ರೆ, ರಾಜಕೀಯ ಸ್ವರೂಪ ಆರ್ಥಿಕ ನೆಲಗಟ್ಟು, ಸಾಮಾಜಿಕ ಸ್ಥಿತಿಗತಿ, ಧಾರ್ಮಿಕ ಸ್ವರೂಪ ಹಾಗೂ ಅವರ ಸಾಹಿತ್ಯ, ಕಲೆ ಮತ್ತು ವಾಸ್ತು ಶಿಲ್ಪಗಳನ್ನು ಕುರಿತ ಮಾಹಿತಿಗಳು ಈ ಕೃತಿಯಲ್ಲಿ ದೊರಕುತ್ತವೆ.

ಯಾವುದೇ ಒಂದು ದೇಶದ ಇತಿಹಾಸವನ್ನು ಕುರಿತ ಅಧ್ಯಯನ ಮಾಡುವಾಗ ಎರಡು ಅಂಶಗಳ ಕಡೆಗೆ ಮುಖ್ಯವಾಗಿ ಗಮನ ಹರಿಸಬೇಕಾಗು ತ್ತದೆ. ಮೊದಲನೆಯದಾಗಿ ಆ ದೇಶದ ಸ್ಥೂಲಸ್ತರದ ಇತಿಹಾಸ (ಮ್ಯಾಕ್ರೋ ಹಿಸ್ಟರಿ), ಎರಡನೆಯದಾಗಿ ಸೂಕ್ಷ್ಮಸ್ತರದ ಇತಿಹಾಸ (ಮೈಕ್ರೋ ಹಿಸ್ಟರಿ). ಸ್ಥೂಲಸ್ತರದ ಇತಿಹಾಸದ ಅಧ್ಯಯನ ವೈಭವೀಕರಣದ ನೆಲೆಯಲ್ಲಿ ಹೊರಟರೆ, ಸೂಕ್ಷ್ಮಸ್ತರದ ಆಳವಾದ ಹಾಗೂ ವಿವರವಾದ ಐತಿಹಾಸಿಕ ಸಂಶೋಧನೆಗಳ ಕಡೆ ಗಮನ ಸೆಳೆಯುತ್ತದೆ. ಈ ನಿಟ್ಟಿನಲ್ಲಿ ಹಾಗಲವಾಡಿ

**ಮಿನಿ ನಾಟಕಗಳು**

**ಲೇ: ಪೂಜಾರ ಬಸಣ್ಣ**

**ಪ್ರ : ಚಿನ್ಮಯ ಪ್ರಕಾಶನಾಲಯ, ಹೊಸಪೇಟೆ**

**೨೦೦೨ ಪುಟ ೩೪ ಬೆಲೆ ರೂ. ೧೫.೦೦**

**ಫ್ಯಾಷನ್, ಗುರುವಿಗೆ ತಿರುಮಂತ್ರ, ಕಂಗಾಲಾದ ಕಲ್ಲಮ್ಮ, ಬಾಲ್ಯದ ಕನಸು, ದೀಪಾವಳಿ ಅಳಿಯತನ, ಬಳ್ಳಾರಿಗೆ ಹೋಗೋಣ ಬರ್ರಿ, ಹಳ್ಳಿಯ ರೋಗಿ, ಎನ ಸ್ಟೂಡಂಟ್ಸರ್ರಿ ಇವರ್ರಿ ಹಾಗೂ ಮನುಷ್ಯನ ಜೀವ - ಎಂಬ ಒಂಭತ್ತು ನಾಟಕಗಳು ಈ ಸಂಕಲನದಲ್ಲಿವೆ. ಸಾಕ್ಷರತೆ, ವೈಚಾರಿಕತೆ ಹಾಗೂ ಸದ್ಗುಣ ಸಂಪನ್ನತೆಯನ್ನು ಸಾಮಾಜಿಕವಾಗಿ ಅನುಷ್ಠಾನಗೊಳಿಸಬೇಕೆಂಬ ಹೆಬ್ಬಯಕೆ ಈ ಎಲ್ಲ ನಾಟಕಗಳ ಒಟ್ಟು ಆಶಯವಾಗಿದೆ. ಸಂಗೀತ, ಉತ್ತರ ಕರ್ನಾಟಕದ ಭಾಷಾ ಸೊಡರು ಇವುಗಳಿಂದ ನಾಟಕಗಳಿಗೆ ಕಳೆಕಟ್ಟಿದೆ. ಕೆಲವೇ ಕ್ಷಣಗಳಲ್ಲಿ ಸಾಕಷ್ಟು ಪರಿಣಾಮಕಾರಿಯಾಗಿ ಸಂವಹನಗೊಳ್ಳುವ ನಾಟಕಗಳು ಇಲ್ಲಿವೆ. ಅಕ್ಷರದೋಷ, ಮುದ್ರಣ ದೋಷಗಳಿಂದ ಕೃತಿ ಮುಕ್ತವಾಗಬೇಕಿದೆ. ಒಟ್ಟಿನಲ್ಲಿ ಮಿನಿ ನಾಟಕಗಳು ಹೆಸರಿಗೆ ತಕ್ಕಂತೆ ಅರ್ಥಗರ್ಭಿತವಾಗಿವೆ.**

---

**ಸ್ವರ್ಗ ಸಿಂಹಾಸನ**

ಲೇ: ಕೆ.ಪಿ. ಸ್ವಾಮಿ

ಪ್ರ : ಭಾಗ್ಯಲಕ್ಷ್ಮಿ ಪ್ರಕಾಶನ, ಬನಶಂಕರಿ ೩ನೇ ಹಂತ, ೩ನೇ ಫೇಸ್, ಬೆಂಗಳೂರು - ೫೬೦ ೦೮೫

೨೦೦೨ ಪುಟ ೮೦ ಬೆಲೆ ರೂ. ೩೦.೦೦

೧೬ ದೃಶ್ಯಗಳಲ್ಲಿ ರಚನೆಗೊಂಡಿರುವ ಪೌರಾಣಿಕ ನಾಟಕದಲ್ಲಿ ವೇದ ಮಹಾಭಾರತ, ಭಾಗವತಗಳಲ್ಲಿ ವ್ಯಕ್ತವಾದ ವಸ್ತುವನ್ನು ನಾಟಕೀಕರಣಗೊಳಿಸಲಾಗಿದೆ. ನೂರು ಅಶ್ವಮೇಧಯಾಗವನ್ನು ಯಾರು ಪೂರೈಸುವರೂ ಅವರಿಗೆ ಲಭಿಸುವ ಪದವಿ ಸ್ವರ್ಗ ಸಿಂಹಾಸನ. ಹೀಗೆ ಕಥಾ ವಸ್ತು ಪುರಾಣಮಯವಾಗಿದ್ದರೂ ಪಾತ್ರ ಪೋಷಣೆ, ತಂತ್ರಗಾರಿಕೆ ಹಾಗೂ ದೃಶ್ಯಾವಳಿಗಳಲ್ಲಿ ಲೇಖಕರ ಅನುಭವ ಮುಪ್ಪುರಿಗೊಂಡಿದೆ. ಪಾತ್ರಗಳಿಗೆ ಜೀವ ತುಂಬುವ ಸಂಭಾಷಣೆ ಅವರ ಭಾಷಾ ಪ್ರಭುತ್ವಕ್ಕೆ ನಿದರ್ಶನವಾಗಿದೆ. ಅನುಬಂಧಗಳಲ್ಲಿ ದೃಶ್ಯಗಳನ್ನು ಹೆಚ್ಚಿಸಿರುವುದು ನಾಟಕದ ವಿಸ್ತಾರಕ್ಕೆ ಮುಂದಾದವರಿಗೆ ಅನುಕೂಲವಾಗಲೆಂದು ಹೀಗೆ ಕಾಲೈಕ್ಯ, ಕ್ರಿಯೈಕ್ಯ ಮತ್ತು ಸಮಯೈಕ್ಯ ರೂಪದಿಂದ ಉತ್ತಮ ನಾಟಕ ಗುಣ ಇಲ್ಲಿವೆ.

**ಪಾಶ್ಚಿಮಾತ್ಯ ಬರಹಗಾರರ - ಬವಣೆ ಬದುಕು**

ಲೇ: ಡಾ. ಎಸ್.ಆರ್.ಗುಂಜಾಳ

ಪ್ರ : ದಿವ್ಯಜ್ಞಾನ ಗ್ರಂಥಾಲಯ ಪ್ರಕಾಶನ, ಲೋಣಿ (ಬಿ.ಕೆ), ವಿಜಾಪುರ ಜಿಲ್ಲೆ

೧೯೯೯ ಪುಟ ೬೪ ಬೆಲೆ ರೂ. ೪೦.೦೦

ಬರವಣಿಗೆಗಾಗಿ ಬದುಕಿದ ಹಾಗೂ ತಮ್ಮ ಬರೆಹವನ್ನು ಸಾರ್ಥಕಗೊಳಿಸಿಕೊಂಡ ಪಾಶ್ಚಿಮಾತ್ಯ ಬರಹಗಾರರ ಬವಣೆಗಳನ್ನು ಕಥೆಯ ರೀತಿಯಲ್ಲಿ ಹಿಡಿದಿಡುವ ಈ ಪುಸ್ತಕ ಕುತೂಹಲವನ್ನು ಕೆರಳಿಸುತ್ತದೆ. ಊಟಕ್ಕೆ ಪರದಾಡುವ, ಸಾಮಾಜಿಕ ನ್ಯಾಯದ ವಿರುದ್ಧ ಹೋರಾಟ ಮಾಡುವ ಬದುಕಿನಲ್ಲಿ ಬೆಂದು ಹೋಗಿರುವ ಅದೆಷ್ಟೋ ಜನ ಬರಹಗಾರರ ಓದುವ ಹವ್ಯಾಸ ಎಷ್ಟು ವಿಚಿತ್ರವಾಗಿದೆಯೆಂಬುದನ್ನು ಡಾ. ಗುಂಜಾಳರು ಈ ಕೃತಿಯ ಮೂಲಕ ಪರಿಚಯಿಸುತ್ತಾರೆ. ಶ್ರೀಮತಿ ಲೂಯಿಸ್ ಮೇ ಅಲ್ಕಾಟ, ಜೇನ್ ಗ್ರೇ, ಅಲೆಕ್ಸಾಂಡರ್ ಡೂಮಾಸ್, ಈಸೋಪ್, ಸ್ಟಾಲಿನ್, ಲೆನಿನ್, ಓಹೆನ್ರಿ, ಥಿಯೋಡರ್ ಪಾರ್ಕರ್, ಅಬ್ರಾಹಂ ಲಿಂಕನ್, ಶ್ರೀಮತಿ ಹ್ಯಾರಿ ಯೇಟ್, ಬೀಚರ್ ಸ್ಟೋವ್, ಲಾರ್ಡ್ ಬೇಕನ್ ಮುಂತಾದ ಲೇಖಕರು ತಮ್ಮ ಉಪಜೀವನಕ್ಕಾಗಿ ಅಂಗಡಿ ಗುಮಾಸ್ತರಾಗಿ, ಕಾರ್ಮಿಕರಾಗಿ, ಕಾವಲು ಗಾರರಾಗಿ, ಪತ್ರಿಕೆ ಹಂಚಿಕೆದಾರರಾಗಿ ಸವೆಸಿದ ಕಾಲಮಾನಗಳು ಆ ಸ್ಥಿತಿಯಿಂದಲೇ ಮೇಲಕ್ಕೆ ಬಂದು ಮಾಡಿದ ಸಾಧನೆಗಳು ಇಲ್ಲಿ ಹರಳುಗಟ್ಟಿ ನಿಂತಿವೆ. ಇಂದಿನ ಯುವ ಪೀಳಿಗೆಗೆ ಆದರ್ಶವಾಗಿ ನಿಲ್ಲುವ ಇವರ ಬದುಕನ್ನು ಸರಳ - ಸಂಕ್ಷಿಪ್ತವಾಗಿ ಪರಿಚಯಿಸಿದ ಈ ಕೃತಿ ಉಪಯುಕ್ತವೆನಿಸಿದೆ.

---

**ನಂಬಲಾಗದ ಸತ್ಯ ಸಂಗತಿಗಳು**

ಲೇ: ಕೈವಾರ ಗೋಪಿನಾಥ್

ಪ್ರ : ಭಾಗ್ಯಲಕ್ಷ್ಮಿ ಪ್ರಕಾಶನ, ಬನಶಂಕರಿ ೩ನೇ ಹಂತ, ೩ನೇ ಫೇಸ್, ಬೆಂಗಳೂರು - ೫೬೦ ೦೮೫

೨೦೦೧ ಪುಟ ೯೬ ಬೆಲೆ ರೂ. ೩೫.೦೦

ವೈದ್ಯಕೀಯ ಕ್ಷೇತ್ರದಲ್ಲಿ ಘಟಿಸಬಹುದಾದ, ಘಟಿಸಿರಬಹುದಾದ ಸಂಗತಿಗಳನ್ನು ಪ್ರಸ್ತುತ ಕೃತಿಯಲ್ಲಿ ಪರಿಚಯಿಸಲಾಗಿದೆ. ವೈಜ್ಞಾನಿಕ ದೃಷ್ಟಿಯಿಂದ ಅವುಗಳನ್ನು ನಂಬಲು ಸಾಧ್ಯವಿಲ್ಲ. ಆದರೆ ನಡೆದ ಘಟನೆ ಸತ್ಯ ಸಂಗತಿಯೆಂಬ ಕಾರಣಕ್ಕಾಗಿ ವಿಸ್ಮಯಗೊಳಿಸುತ್ತದೆ. ಇಲ್ಲಿ ಗೋರಿಯಿಂದ ಎದ್ದು ಬಂದವರು, ಶವಗಳು ಸೃಷ್ಟಿಸಿದ ಇತಿಹಾಸ, ಅಗೋಚರ ಸೃಷ್ಟಿಯ ಅವತಾರಗಳು, ಸಾವಿನ ಅಂಚಿನಲ್ಲಿದ್ದವರು ಮತ್ತು ಪ್ರಕೃತಿಯ ಪವಾಡಗಳೆಂಬ ಲೇಖನಗಳು ರೋಮಾಂಚನಕಾರಿಯಾಗಿವೆ. ಒಂದೊಂದು ಲೇಖನಗಳ ಕೊನೆಗೂ ಲೇಖಕರು ಅದನ್ನು ಗ್ರಹಿಸುವ ರೀತಿ ಓದುಗರಿಗೆ ಸಮಾರೋಪಗೊಳಿಸುವ ಪರಿ ಮೆಚ್ಚುಗೆಯೆನಿಸಿವೆ. ವಿಜ್ಞಾನ ಕ್ಷೇತ್ರದಲ್ಲಿ ಒಡಮೂಡುವ ಮಾಹಿತಿಗಳಿಗೆ ಸಾಹಿತ್ಯಿಕ ಲೇಪನ ನೀಡುವ ಇವರ ಶೈಲಿ ಓದಿಸಿಕೊಂಡು ಹೋಗುತ್ತದೆ. ನಂಬಿಕೆ - ವೈಚಾರಿಕತೆ ಇವುಗಳ ವಿಸ್ತೃತ ತಿಳುವಳಿಕೆಗಳಿಗೆ ಈ ಕೃತಿ ನಿದರ್ಶನವಾಗಿದೆ.

---

**ಚಿಟ್ಟೆಯ ಮೊಟ್ಟೆ**

ಲೇ: ಗ.ಸು.ಭಟ್ಟ

ಪ್ರ : ನಿರ್ಮಲ ಪ್ರಕಾಶನ, ಗೋವಿನಪುರ ಬಡಾವಣೆ, ತಿಪಟೂರು - ೫೭೨ ೨೦೨

೨೦೦೧ ಪುಟ ೩೪ ಬೆಲೆ ರೂ. ೨೫.೦೦

ಮಕ್ಕಳ ಮನಸ್ಸನ್ನು ಅರಿತ ಚಿಂತಕರಲ್ಲಿ ಒಬ್ಬರು ಗ.ಸು. ಭಟ್ಟ ಅವರು. ಮೊಟ್ಟೆಯಿಂದ ಕಂಬಳಿ ಹುಳುವಾಗಿ ಹೊರಬಂದು ಚಿಟ್ಟೆಯಾಗುವ ಜೀವಚಕ್ರದ ರೀತಿ ರಿವಾಜುಗಳನ್ನು ತುಂಬಾ ಕುತೂಹಲಕರವಾಗಿ ಈ ರೂಪಕದಲ್ಲಿ ಹಿಡಿದಿಡಲಾಗಿದೆ. ಪ್ರಾಸಯುಕ್ತ ಹಾಡುಗಳು ಮನಸ್ಸನ್ನು ಸೂರೆಗೊಳ್ಳುತ್ತವೆ. ಅಲ್ಲಲ್ಲಿ ಸನ್ನಿವೇಶಕ್ಕೆ ಸರಿಯಾದ ಚಿತ್ರಗಳು ಓದುಗರಿಗೆ ಮುದ ನೀಡುತ್ತವೆ. ಭಾಷೆ ಸರಳ, ಶೈಲಿ ವಿಶೇಷವಾಗಿದ್ದು ಹೇಳುವ ವಿಚಾರ ಸಂಭಾಷಣೆ ರೂಪದಲ್ಲಿ ಮನಸ್ಸನ್ನು ಹಿಡಿದಿಡುತ್ತದೆ. ಇದಕ್ಕಾಗಿ ಲೇಖಕರಿಗೆ ಅಭಿನಂದನೆಗಳು.

---

**ಉಗಿ**

ಲೇ: ಕೆ.ಎನ್. ದೊಡ್ಡಮನಿ

ಪ್ರ : ಕಲಾಗಂಗಾಧರ ಪ್ರಕಾಶನ, ಚಡಚಣ, ಧಾರವಾಡ

೨೦೦೦ ಪುಟ ೪೦+೧೮ ಬೆಲೆ ರೂ. ೪೦.೦೦

ಸ್ವಾಭಿಮಾನ, ಆವೇಶ, ರೊಚ್ಚು ಮುಂತಾದ ಮನೋವಿಕಾರದ ಅಭಿವ್ಯಕ್ತಿ ಉಗಿ ಕವನ ಸಂಕಲನದ ಆಶಯ. ಇಲ್ಲಿ ಕವಿಯ ವೈಯಕ್ತಿಕ ನೆಲೆಯ ಸಿಟ್ಟು ಸೆಡವುಗಳಲ್ಲ ಬದಲಾಗಿ ಸಮಷ್ಠಿ ನೆಲೆಯಲ್ಲಿ ಸ್ಥಾಪಿತವಾಗಬೇಕೆನ್ನುವ ಮೌಲ್ಯಗಳ

## ಮೂಳೆ ಭಕ್ಷಕರು

ಲೇ: ಡಾ. ಎಸ್.ಎಸ್.ಪಾಟೀಲ
ಪ್ರ: ಸ್ವಾಗತ ಸಮಿತಿ, ಅಖಿಲ ಭಾರತ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಾಗಲಕೋಟೆ
೨೦೦೧, ಪುಟ x+೧೧೨ ಬೆಲೆ ರೂ. ೫೦.೦೦

ಬಾಗಲಕೋಟೆಯಲ್ಲಿ ನಡೆದ ಅಖಿಲ ಭಾರತ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮೂಳೆ ಭಕ್ಷಕರು ಎನ್ನುವ ಶೀರ್ಷಿಕೆಯುಳ್ಳ ಈ ಕೃತಿಯನ್ನು ಪ್ರಕಟಿಸಲಾಯಿತು. ಈ ಕೃತಿಯನ್ನು ರಚಿಸಿದವರು ಡಾ. ಎಸ್.ಎಸ್. ಪಾಟೀಲರು. ಇದೊಂದು ವಿಶಿಷ್ಟ ಕೃತಿಯಾಗಿದ್ದು, ಎಲುವಿನ ಗಂತಿಗಳ ಕುರಿತು ಉಪಯುಕ್ತ ಮಾಹಿತಿಗಳನ್ನು ನೀಡುತ್ತದೆ. ಈ ಕೃತಿಯ ವಿಶೇಷತೆಯೆಂದರೆ, ಎಲುವಿನ ಗಂತಿ ರೋಗಕ್ಕೆ ತುತ್ತಾದ ರೋಗಿಗಳನ್ನು ಲೇಖಕರು ಪರಿಚಯಿಸುವ ರೀತಿ.

ಈ ಕೃತಿಯಲ್ಲಿ ಒಟ್ಟು ಎಂಟು ಅಧ್ಯಾಯಗಳಿದ್ದು ಮೇಲ್ನೋಟಕ್ಕೆ ಅವು ಕಥೆಗಳಂತೆ ಕಂಡುಬರುತ್ತವೆ. ಆದರೆ ಅವು ಕಥೆಗಳಾಗಿರದೆ ನಿಜ ಜೀವನಕ್ಕೆ ಸಂಬಂಧಿಸಿದ್ದಾಗಿವೆ. ಇಲ್ಲಿ ಲೇಖಕರು ನಿಜವಾಗಿ ಕಂಡ ರೋಗಿಗಳ ಚಿತ್ರಕಥೆಗಳನ್ನು ನೀಡಿದ್ದಾರೆ. ಅದೇ ರೀತಿ ರೋಗದ ಕುರಿತು ವಿವರಣೆಯನ್ನೂ ನೀಡಿದ್ದಾರೆ. ಶರೀರದ ವಿವಿಧ ಬಾಗಗಳಲ್ಲಿ ಮೂಡುವ ಗಡ್ಡೆಗಳ ಕುರಿತು ಆ ರೋಗಕ್ಕೆ ತುತ್ತಾದ ಎಂಟು ಜನ ರೋಗಿಗಳನ್ನು ಪರಿಚಯಿಸುವುದರೊಂದಿಗೆ ವಿವರಣೆ ನೀಡಿದ್ದಾರೆ. ಎಲುವಿನ ಗಂತಿಗಳು ಕಾಣಿಸಿಕೊಳ್ಳುವ ಬಗೆ, ಅವುಗಳಿಂದಾಗುವ ಪರಿಣಾಮಗಳು, ನೀಡುವ ಚಿಕಿತ್ಸೆ ಮುಂತಾದ ಪ್ರತಿ ಯೊಬ್ಬರೂ ತಿಳಿದುಕೊಳ್ಳಲೇಬೇಕಾದ ಅನೇಕ ಉಪಯುಕ್ತ ಮಾಹಿತಿಗಳನ್ನು ಈ ಕೃತಿಯು ನೀಡುತ್ತದೆ.

**ಮೋಹನ್‌ಕೃಷ್ಣ ರೈ ಕೆ.**

## ಬದ್ಧತೆಯ ಬದುಕು

ಲೇ: ಕುರಾಡಿ ಸೀತಾರಾಮ ಅಡಿಗ
ಪ್ರ: ಶಿವರಾಮಕಾರಂತ ಅಧ್ಯಯನ ಕೇಂದ್ರ
೨೦೦೧, ಪುಟ iv+೬೨ ಬೆಲೆ ರೂ. ೩೦.೦೦

ಬದ್ಧತೆಯ ಬದುಕು ಎಂಬ ಕೃತಿ ಶಿವರಾಮ ಕಾರಂತರ ಜೀವನ ಚರಿತ್ರೆ. ಶಿವರಾಮ ಕಾರಂತರ ಜೀವನ ಸಾಧನೆಗಳನ್ನು ಒಳಗೊಂಡ ಕೃತಿ. ಬದ್ಧತೆಯ ಬದುಕು ಎಂಬ ಶೀರ್ಷಿಕೆ ಕಾರಂತರಿಗೆ ಸಂಬಂಧಪಟ್ಟಂತೆ ಬದ್ಧತೆಯೇ ಬದುಕಾಗಿದೆ. ಹುಟ್ಟಿನಿಂದಲೇ ಬುದ್ಧಿವಂತರಾದ ಕಾರಂತರು ಆ ಬುದ್ಧಿವಂತಿಕೆಯಿಂದ ವ್ಯವಸಾಯ ಮಾಡಿದ ಧೀಮಂತ ವ್ಯಕ್ತಿ. ಅಂತಹ ವ್ಯಕ್ತಿ ಪರಿಚಯವನ್ನು ಚಿಕ್ಕ ಮಕ್ಕಳಿಗೆ ನಿಲುಕುವಂತೆ ಲೇಖಕರು ಬರೆದಿದ್ದಾರೆ. ಕಾರಂತರ ಕುರಿತಾದ ಬಾಲ್ಯ ಯೌವ್ವನ ಸಾಧನೆಯ ಕುರಿತು ಹಂತ ಹಂತವಾಗಿ ವಿವರಿಸಿದ್ದಾರೆ. ಚಲಿಸುವ ವಿಶ್ವಕೋಶ ಎಂದು ಬಣ್ಣಿಸುವ ಲೇಖಕರು ಕಾರಂತರ ಸರಳ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ಒಟ್ಟು ಗ್ರಹಿಕೆಯಲ್ಲಿ ಹೇಳುವುದಾದರೆ, ಲೇಖಕರು ಸಾಹಿತ್ಯ ದಿಗ್ಗಜರೊಬ್ಬರನ್ನು ಸರಳ, ಸುಂದರ ಶೈಲಿಯಲ್ಲಿ ಕನ್ನಡಿಗರಿಗೆ ಪರಿಚಯಿಸಿದ್ದಾರೆ.

**ಸುಚೇತಾ ನವರತ್ನ**

## ಬೆಳಗಿನ ಬೆಳಕು

ಲೇ: ಡಾ. ಸುಮನ ಯಜುರ್ವೇದಿ
ಪ್ರ: ಶ್ರೀನಿಧಿ ಪ್ರಕಾಶನ, ಜಯನಗರ, ವಿಶ್ವವಿದ್ಯಾಲಯ ರಸ್ತೆ, ಗುಲಬರ್ಗಾ - ೫೮೫ ೧೦೫
೨೦೦೧, ಪುಟ xiv+೯೦ ಬೆಲೆ ರೂ. ೬೦.೦೦

ಕಲಬುರ್ಗಿ ಆಕಾಶವಾಣಿಯಿಂದ ಪ್ರಸಾರವಾದ ಚಿಂತನಗಳ ಸಂಗ್ರಹವೇ ಈ ಬೆಳಗಿನ ಬೆಳಕು. ಇತ್ತೀಚಿನ ದಿನಗಳಲ್ಲಿ ಚಿಂತನವೆಂಬ ಸಾಹಿತ್ಯ ಪ್ರಕಾರವು ಬೆಳೆಯುತ್ತಿರುವುದು ಗಮನಾರ್ಹ ಸಂಗತಿ.

ಮಾನವನ ಬದುಕಿಗೆ ಉಪಯೋಗವಾಗುವ ನಲ್ನುಡಿಗಳು, ವಿಚಾರಗಳು, ಚಿಂತನೆಗಳು ಇಲ್ಲಿ ಒಂದಕ್ಕಿಂತ ಒಂದು ಚೆನ್ನಾಗಿ ಮೂಡಿಬಂದಿವೆ. ಸಂಕಲನದ ಚಿಂತನೆಗಳಲ್ಲಿ ಉದ್ದಕ್ಕೂ ಲೇಖಕಿಯವರು ಭಾರತೀಯ ಸಂಸ್ಕೃತಿಯ ಖಚಿತ ವಿಶ್ಲೇಷಣೆಗಳಿಂದ ಕೂಡಿದ ಹಲವಾರು ಮೆಚ್ಚುಗೆ ಮಾತುಗಳನ್ನಾಡಿದ್ದಾರೆ. ಈ ಸಂಕಲನದಲ್ಲಿ ಹಲವಾರು ಚಿಂತನೆಗಳು ಮಾನವೀಯ ಮತ್ತು ನೈತಿಕ ಮೌಲ್ಯಗಳನ್ನು ಎತ್ತಿ ಹಿಡಿದಿವೆ. ಆತ್ಮಶಕ್ತಿಯನ್ನು ನಂಬಿ, ಅದರ ವಿಶ್ವಾಸದಿಂದ ವಿವೇಕಾತ್ಮಕವಾಗಿ ಬಾಳಲು ತಿಳಿಸುವ 'ಸ್ವಾವಲಂಬನೆ', ಮೋಸ ಮಾಡುವುದರಿಂದ ಆಗುವ ದುಷ್ಪರಿಣಾಮಗಳನ್ನು ಮನೋಜ್ಞವಾಗಿ ಹೇಳುವ 'ಮೋಸದ ಪರಿಣಾಮ', ಬೀಳುವುದು ತಪ್ಪಲ್ಲ, ಆದರೆ ಎದ್ದು ಮುನ್ನಡೆಯುವುದು ಮುಖ್ಯ ಎನ್ನುವ 'ನಡೆವರೆಡಹದೆ ಕುಳಿತರೆಡಹುವರೆ', ಚಿಂತನಗಳು ವಿಚಾರ ಯೋಗ್ಯವಾಗಿವೆ.

ಉಳಿದಂತೆ 'ಕರ್ತವ್ಯ ನಿರ್ವಹಣೆ - ಬದುಕಿನ ಮೌಲ್ಯ', 'ಸಮರಸವೇ ಬದುಕು', 'ಅರಿ ಷಡ್ವರ್ಗಗಳ ಅರಿವಿರಲಿ' ಎಂಬ ಚಿಂತನೆಗಳು ಸೊಗಸಾಗಿವೆ. ನಮ್ಮ ಮುಂದಿನ ಜನಾಂಗವು ಮೌಲಿಕವಾದ ಬದುಕನ್ನು ಕಟ್ಟಿಕೊಳ್ಳುವಲ್ಲಿ ಭದ್ರಬುನಾದಿಯನ್ನೊದಗಿಸುವುದು ಇಂದಿನ ಹಿರಿಯರ ಹೊಣೆಗಾರಿಕೆ ಎನ್ನುವ ಆಶಯದಿಂದ ರಚಿತವಾದ ಈ ಎಲ್ಲ ಚಿಂತನೆಗಳು ಲೇಖಕಿಯರ ಸಾಮಾಜಿಕ ಕಳಕಳಿಗೆ ನೈಜ ನಿದರ್ಶನಗಳಾಗಿವೆ.

**ಬಿ.ಎ. ರಾಜಕುಮಾರ**

## ತಥಾಸ್ತು

ಲೇ: ಬಿ.ರಮೇಶ್
ಪ್ರ: ಬಿ.ಆರ್. ನಾಗಲತ, ನಂ.೪೩, 'ಸ್ಕಂದ', ೧೧ನೇ ಮುಖ್ಯ ರಸ್ತೆ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫
೨೦೦೧, ಪುಟ xii+೧೧೬ ಬೆಲೆ ರೂ. ೬೦.೦೦

ಕನ್ನಡದ ಕಥಾಲೋಕಕ್ಕೆ ಈಗಾಗಲೇ ಆರು ಕಥಾ ಸಂಕಲನಗಳನ್ನು ನೀಡಿರುವ ಬಿ.ರಮೇಶ್ ಅವರ ಏಳನೇ ಕೃತಿ ಈ 'ತಥಾಸ್ತು' ಸಂಕಲನ.

ದೈನಂದಿನ ಬದುಕಿನ ನೈಜ ಘಟನೆಗಳನ್ನು ಆಯ್ದುಕೊಂಡು ಲೇಖಕರು ಇಲ್ಲಿ ಏಳು ಕಥೆಗಳನ್ನು ರಚಿಸಿದ್ದಾರೆ. ಸಂಕಲನದ ಶೀರ್ಷಿಕೆಯಾಗಿರುವ 'ತಥಾಸ್ತು' ಕಥೆಯಲ್ಲಿ ಲಲಿತಾ ಆದರ್ಶ ಗೃಹಿಣಿ. ಪ್ರಭಾಕರ ಮನ ಮೆಚ್ಚಿ ಕೈಹಿಡಿದವಳು; ದೈವಭಕ್ತೆ. ಆಕೆಯ ನಿಧನ ಆ ಕುಟುಂಬಕ್ಕೆ ಬರಸಿಡಿಲು. ಮಗ ಭರತ್ ಮದುವೆಯಾಗಿರುವ ಹೆಣ್ಣು ಪೂಜಾ ಕೂಡ ಅತ್ತೆಯಂತೆಯೇ ದೈವಭಕ್ತೆ. ತಾಯಿಯ ನುಡಿ, ಹೆಂಡತಿಯ ಸಾಂಗತ್ಯದಿಂದ ನಿರೀಶ್ವರಿಯಂತಾಗಿದ್ದ ಭರತ್ ಕೂಡ ದೈವ

## ಕಾವ್ಯ

**ಹೆಜ್ಜೆ ಗುರುತು**
ಸಂ: ಡಾ. ನಲ್ಲೂರು ಪ್ರಸಾದ್
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು - ೧೮
೨೦೦೧ ಪುಟ xvi+೨೦೨ ಬೆಲೆ ರೂ. ೬೦.೦೦

**ಕೆ.ಎಸ್. ನಿಸಾರ್ ಅಹಮದ್ ಅವರ ಪ್ರಾತಿನಿಧಿಕ ಕವನಗಳು**
ಆಯ್ಕೆ : ಲೇಖಕರಿಂದ
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು - ೧೮
೨೦೦೧ ಪುಟ xii+೩೪೪ ಬೆಲೆ ರೂ. ೧೦೦.೦೦

**ಹೂವಾಗಿ ನಕ್ಕವರೆ**
ಲೇ: ಗೀತಾ ಚಂದ್ರಶೇಖರ
ಪ್ರ : ನೆಲೆ ಪ್ರಕಾಶನ, ಸಿಂದಗಿ
೨೦೦೧ ಪುಟ xiv+೪೨ ಬೆಲೆ ರೂ. ೩೫.೦೦

**ಆರದ ದೀಪದ ಆಸರೆ ಹಿಡಿದು**
ಲೇ: ಶಾರದಾ ಮುಳ್ಳೂರ
ಪ್ರ : ನೆಲೆ ಪ್ರಕಾಶನ, ಸಿಂದಗಿ
೨೦೦೧ ಪುಟ x+೪೨ ಬೆಲೆ ರೂ. ೪೦.೦೦

## ಕಥೆ

**ಸುಧಾಕರ ಅವರ ಆಯ್ದ ಕಥೆಗಳು**
ಸಂ: ಡಾ. ಎಲ್.ಹನುಮಂತಯ್ಯ
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು - ೧೮
೨೦೦೧ ಪುಟ ೨೧೨ ಬೆಲೆ ರೂ. ೬೦.೦೦

**ಚಿತ್ರ ಚಿತ್ತಾರಗಳು**
ಸಂ: ಡಾ. ಶ್ರೀನಿವಾಸ ಕುಲಕರ್ಣಿ
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು - ೧೮
೨೦೦೧ ಪುಟ ೧೬೬ ಬೆಲೆ ರೂ. ೪೫.೦೦

**ಹತ್ತು ಕಥೆಗಳು**
ಲೇ: ಕೋ. ಶಿವಾನಂದ ಕಾರಂತ
ಪ್ರ : ಶ್ರೀ ಮೈಲಾರೇಶ್ವರ ಯುವಕ ಮಂಡಳ, ಕುಂದಾಪುರ
೨೦೦೧ ಪುಟ ೬೫ ಬೆಲೆ ರೂ. ೭೫.೦೦

**ವಾಸ್ತವದ ಕನವರಿಕೆ**
ಲೇ: ಡಿ.ಬಿ. ರಜಿಯಾ
ಪ್ರ : ಲೋಹಿಯಾ ಪ್ರಕಾಶನ, ಬಳ್ಳಾರಿ
೨೦೦೨ ಪುಟ ೫೨ ಬೆಲೆ ರೂ. ೩೦.೦೦

**ಹುಜೂರ್**
ಲೇ: ಜಗದೀಶ ಪೂಜಾರ
ಪ್ರ : ಕಂನಾಡು ಪ್ರಕಾಶನ, ಬೆಟಗೇರಿ - ಗದಗ
೨೦೦೨ ಪುಟ vi+೪೮ ಬೆಲೆ ರೂ. ೪೦.೦೦

## ಸಂಕೀರ್ಣ

**ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**
ಲೇ: ಜಿ.ಎಂ. ನಾಗಯ್ಯ
ಪ್ರ : ಲೋಹಿಯಾ ಪ್ರಕಾಶನ, ಬಳ್ಳಾರಿ
೨೦೦೨ ಪುಟ ೨೧೦ ಬೆಲೆ ರೂ. ೧೦೦.೦೦

**ಜೀವನ ಸಂಧ್ಯಾ**
ಲೇ: ಕೃಷ್ಣಮೂರ್ತಿ ಕಿತ್ತೂರ
ಪ್ರ : ಲೋಹಿಯಾ ಪ್ರಕಾಶನ, ಬಳ್ಳಾರಿ
೨೦೦೨ ಪುಟ ೧೬೬ ಬೆಲೆ ರೂ. ೧೭೫.೦೦

**ಸಮಾಜಕಾರ್ಯ**
ಲೇ: ಡಾ. ಎಚ್.ಎಂ.ಮರುಳಸಿದ್ಧಯ್ಯ
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು - ೧೮
೨೦೦೧ ಪುಟ x+೧೬೦ ಬೆಲೆ ರೂ. ೪೦.೦೦

**ಹರಪನಹಳ್ಳಿ ಭೀಮವ್ವನವರ ಹಾಡುಗಳು (ಒಂದು ಅಧ್ಯಯನ)**
ಲೇ: ಸರಿತಾ ಕುಸುಮಾಕರ ದೇಸಾಯಿ
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು - ೧೮
೨೦೦೧ ಪುಟ xx+೧೮೨ ಬೆಲೆ ರೂ. ೭೦.೦೦

**ಇತಿಹಾಸದ ರಾಜಕೀಯ**
ಲೇ: ಡಾ. ಕೆ.ಎಲ್.ಗೋಪಾಲಕೃಷ್ಣಯ್ಯ
ಪ್ರ : ನವಕರ್ನಾಟಕ ಪ್ರಕಾಶನ, ಬೆಂಗಳೂರು
೨೦೦೨ ಪುಟ ೯೬ ಬೆಲೆ ರೂ. ೩೫.೦೦

**ರಾಜಸ್ಥಾನದ ಜೈನಮಂದಿರಗಳು**
ಲೇ: ಡಾ. ಎಸ್.ಪಿ.ಪ್ರಸಾದ್
ಪ್ರ : ರತ್ನತ್ರಯ ಪ್ರಕಾಶನ, ಚಿತ್ರಭಾನು ರಸ್ತೆ, ಕುವೆಂಪುನಗರ, ಮೈಸೂರು - ೫೭೦ ೦೨೩
೨೦೦೨ ಪುಟ ೯೦ ಬೆಲೆ ರೂ. ೭೦.೦೦

**ಜಿಹಾದ್ ಮತ್ತು ಭಯೋತ್ಪಾದನೆ**
ಲೇ: ಇಬ್ರಾಹೀಮ್ ಸಈದ್
ಪ್ರ : ಶಾಂತಿ ಪ್ರಕಾಶನ, ಮಂಗಳೂರು
೨೦೦೨ ಪುಟ ೭೦ ಬೆಲೆ ರೂ. ೨೦.೦೦

**ಅಂತಿಮ ಪ್ರವಾದಿಯ (ಸ) ವಿದಾಯ**
ಲೇ: ಇಬ್ರಾಹೀಮ್ ಸಈದ್
ಪ್ರ : ಶಾಂತಿ ಪ್ರಕಾಶನ, ಮಂಗಳೂರು
೨೦೦೨ ಪುಟ ೨೪ ಬೆಲೆ ರೂ. ೩.೦೦

**ತೌಲನಿಕ ದ್ರಾವಿಡ ಭಾಷಾ ವಿಜ್ಞಾನ**
ಲೇ: ಡಾ. ಸಂಗಮೇಶ ಸವದತ್ತಿಮಠ
ಪ್ರ : ರೂಪರಶ್ಮಿ ಪ್ರಕಾಶನ, ಕಲಬುರ್ಗಿ - ೫೮೫ ೧೦೬
೨೦೦೧ ಪುಟ x+೨೬೭ ಬೆಲೆ ರೂ. ೧೨೦.೦೦

**ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ (ಆರಾಧನಾ ಪರಂಪರೆ)**
ಲೇ: ಗಂಗಾಧರ ದೈವಜ್ಞ
ಪ್ರ : ಶ್ವೇತಾ - ಭಾಗೀರಥಿ ಪ್ರಕಾಶನ, ಹೊಸಪೇಟೆ
೨೦೦೨ ಪುಟ xx+೧೦೬ ಬೆಲೆ ರೂ. ೬೦.೦೦

**ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ (ಚಾರಿತ್ರಿಕ ಪರಂಪರೆ)**
ಲೇ: ವಾಸುದೇವ ಬಡಿಗೇರ
ಪ್ರ : ಶ್ವೇತಾ - ಭಾಗೀರಥಿ ಪ್ರಕಾಶನ, ಹೊಸಪೇಟೆ
೨೦೦೨ ಪುಟ xii+೧೦೦ ಬೆಲೆ ರೂ. ೬೦.೦೦

**ಉಡುಪಿ ಅಷ್ಟಮಠಗಳ ಗುರು ಪರಂಪರೆ**
ಲೇ: ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ
ಪ್ರ : ಐತರೇಯ ಪ್ರಕಾಶನ, ವ್ಯಾಸನಕೆರೆ, ಶ್ರೀವ್ಯಾಸ ಮಧ್ವ ಸೇವಾ ಪ್ರತಿಷ್ಠಾನದ ಪ್ರಕಾಶನ ವಿಭಾಗ, ಪಾಜಕ, ೬೭, ಹನುಮಂತನಗರ, ಬೆಂಗಳೂರು - ೫೬೦ ೦೧೯
೨೦೦೨ ಪುಟ ೧೭೬ ಬೆಲೆ ರೂ. ೬೦.೦೦

**ಧರ್ಮ - ಮಹಿಳೆ - ಸಮಾಜ**
ಲೇ: ಡಾ. ಶಾಂತಾ ಇಮ್ರಾಪುರ
ಪ್ರ : ಚೇತನಾ ಪ್ರಕಾಶನ, ಧಾರವಾಡ
೨೦೦೧ ಪುಟ ೧೬೭ ಬೆಲೆ ರೂ. ೧೦೦.೦೦

**ಮಹಿಳೆ - ಸಾಹಿತ್ಯ - ಸಂಸ್ಕೃತಿ**
ಲೇ: ಡಾ. ಶಾಂತಾ ಇಮ್ರಾಪುರ
ಪ್ರ : ಚೇತನಾ ಪ್ರಕಾಶನ, ಧಾರವಾಡ
೨೦೦೧ ಪುಟ ೧೬೬ ಬೆಲೆ ರೂ. ೧೦೦.೦೦

## ೪.೨.೧೧.೧೩ : ಗ್ರಂಥಲೋಕ : ಪುಸ್ತಕೋದ್ಯಮಕ್ಕೆ ಮೀಸಲಾದ ಮಾಸಪತ್ರಿಕೆ

'ಗ್ರಂಥಲೋಕ' ವೆಂಬ ಮಾಸಪತ್ರಿಕೆಯನ್ನು ಸಂಪಾದಿಸುತ್ತಿದ್ದ ಆರ್. ಎಲ್. ಅನಂತರಾಮಯ್ಯನವರು, ಸಾಹಿತ್ಯ ಮತ್ತು ಗ್ರಂಥಸೂಚಿ ಕ್ಷೇತ್ರದಲ್ಲಿ ತುಂಬಾ ಮಹತ್ವದ ಹೆಸರು. ಕನ್ನಡ ಗ್ರಂಥಸೂಚಿ ಸಂಪುಟಗಳು (ಮೈಸೂರು ವಿಶ್ವವಿದ್ಯಾಲಯ ಪ್ರಕಟಣೆ) ಇವರ ಕಲ್ಪನೆಯಿಂದಲೇ ಬೆಳೆದು ದೊಡ್ಡ ಯೋಜನೆಯಾಯಿತು. ಅದರ ಹಿಂದಿನ ತೆರೆಮರೆಯಲ್ಲಿ ಅನಂತರಾಮಯ್ಯನವರೇ ರಾರಾಜಿಸಿದ್ದರು. ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದಲ್ಲಿ ಉಪನಿರ್ದೇಶಕರಾಗಿದ್ದರು. ಪ್ರಸಾರಾಂಗದಲ್ಲಿ ಕೆಲಸ ನಿರ್ವಹಿಸಿದ ಕಾರಣದಿಂದಾಗಿ ಅನಂತರಾಮಯ್ಯನವರು ಪುಸ್ತಕ ಪ್ರಕಟಣೆ ಪ್ರಪಂಚದ ಒಳ ಹೊರಗುಗಳನ್ನು ಚೆನ್ನಾಗಿ ತಿಳಿದವರಾಗಿದ್ದರು. 'ಕನ್ನಡ ಗ್ರಂಥಸೂಚಿ' ಯೋಜನೆಯ ಸಂಪಾದಕರಲ್ಲೊಬ್ಬರಾಗಿ ಕೂಡ ಸೇವೆ ಸಲ್ಲಿಸಿದ್ದಾರೆ.

೧೯೭೭ ರಿಂದ ೧೯೯೧ ರ ವರೆಗೆ ತಮ್ಮ ಸ್ವಂತ ಖರ್ಚಿನಿಂದ 'ಗ್ರಂಥಲೋಕ' ಮಾಸಿಕವನ್ನು ನಿಯತಕಾಲಿಕೆಯಂತೆ ಆರಂಭಿಸಿ ಸುಮಾರು ಹದಿನೈದು ವರ್ಷಗಳವರೆಗೂ ನಡೆಸಿಕೊಂಡು ಬಂದಿದ್ದರು. ಇದು ಪುಸ್ತಕೋದ್ಯಮಕ್ಕೆ ಮೀಸಲಾದ ಕನ್ನಡದ ಪ್ರಪ್ರಥಮ ಪತ್ರಿಕೆಯೆಂದು ಹೇಳಿದರೂ ತಪ್ಪಾಗಲಾರದು. ಪ್ರತಿ ತಿಂಗಳು ಪ್ರಕಟಗೊಳ್ಳುವ ಹೊಸ ಪುಸ್ತಕಗಳನ್ನು ಪರಿಚಯಿಸುವದು. ಈ ಪತ್ರಿಕೆಯ ಮುಖ್ಯ ಉದ್ದೇಶವಾಗಿತ್ತು. ಹೊಸ ಪುಸ್ತಕಗಳನ್ನು ವಿಮರ್ಶೆ, ಪರಿಚಯದೊಂದಿಗೆ ಗ್ರಂಥಗಳ ಪಟ್ಟಿಯೊಂದನ್ನು ಕೊಡಲಾಗುತ್ತಿತ್ತು. ಇದರಲ್ಲಿ ಕ್ರಮವಾಗಿ ಕೃತಿನಾಮ, ಕರ್ತೃನಾಮ, ಪ್ರಕಾಶಕರ ವಿಳಾಸ, ಪುಸ್ತಕದ ಆಕಾರ, ಪುಟಸಂಖ್ಯೆ ಹಾಗೂ ಬೆಲೆ ಮುಂತಾದ ವಿವರಗಳಿರುತ್ತಿದ್ದವು. ಜೊತೆಗೆ ವಿಷಯಾನುಸಾರವಾಗಿ ಆ ಪುಸ್ತಕಗಳನ್ನು ವರ್ಗೀಕರಿಸಲಾಗುತ್ತಿತ್ತು. ಪ್ರಖ್ಯಾತ ವಿದ್ವಾಂಸ, ವಿಮರ್ಶಕರಿಂದ ಹಿಡಿದು ಯುವ ಲೇಖಕರ ಗ್ರಂಥಗಳ ವಿಮರ್ಶೆಯನ್ನು ಪ್ರಕಟಿಸುವದರ ಮೂಲಕ ಅವರನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಿದ ಕೀರ್ತಿ ಅನಂತರಾಮಯ್ಯನವರಿಗೆ ಸಲ್ಲುತ್ತದೆ. ಹೀಗಾಗಿ ಗ್ರಂಥಲೋಕವು ಆ ಕಾಲಕ್ಕೆ ಓದುಗ, ಲೇಖಕ, ಪ್ರಕಾಶಕ, ಮುದ್ರಕ ಹಾಗೂ ಮಾರಾಟಗಾರರಿಗೆ ತುಂಬ ಪ್ರಯೋಜನವಾಗುತ್ತಿತ್ತೆಂದು ಬೇರೆ ಹೇಳಬೇಕಿಲ್ಲ. ಏಕವ್ಯಕ್ತಿ ನೆಲೆಯಲ್ಲಿ ನಿಂತು ಇದನ್ನು ಸತತ ಹದಿನೈದು ವರ್ಷಗಳ ವರೆಗೂ ಮುನ್ನಡೆಸಿಕೊಂಡು ಬಂದಿರುವುದು ಒಂದು ಚಾರಿತ್ರ್ಯಾರ್ಹ ಸಂಗತಿ.

ಗ್ರಂಥಲೋಕದ ಮಾದರಿಯಲ್ಲೇ ಈಗ ಹಂಪಿ ಕನ್ನಡ ವಿಶ್ವವಿದ್ಯಾಲಯದ 'ಪುಸ್ತಕ ಮಾಹಿತಿ' ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಲೋಕ' ? ಎಂಬ ಪತ್ರಿಕೆಗಳು ಹೊರಡುತ್ತಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಗ್ರಂಥಲೋಕದ ಜೊತೆಗೆ ಅನಂತರಾಮಯ್ಯನವರು ಪುಸ್ತಕಗಳಿಗೆ ಸಂಬಂಧಿಸಿದಂತೆ ವಾರ್ಷಿಕ 'ಗ್ರಂಥಾವಳಿ', 'ರಂಗಸೌರಭ' ಮುಂತಾದ ಗ್ರಂಥಸೂಚಿಗಳನ್ನು ಕನ್ನಡ ಸಾಹಿತ್ಯಲೋಕಕ್ಕೆ ನೀಡಿದ್ದಾರೆ. ಹಾಗೇನೇ 'ವಡ್ಡಾರಾಧನೆಯ ಕಥೆಗಳು' ಇವರ ಸಾಹಿತ್ಯ ಕೃತಿ 'ಗ್ರಂಥಾವಳಿ' ಯಲ್ಲಿ ೧೦ಲಕ್ಷ ವೈವಿಧ್ಯಮಯ ಪುಸ್ತಕಗಳ ಮಾಹಿತಿಯಿದೆ. ಇದರ

# ವಾರ್ಷಿಕ ಗ್ರಂಥಾವಳಿ

[1980 ರ ಕನ್ನಡ ಪುಸ್ತಕಗಳ ಸೂಚಿ]

ಸಂಪಾದಕ

ಆರ್ ಎಲ್ ಅನಂತರಾಮಯ್ಯ

ಗ್ರಂಥಲೋಕ

49 ಅಕ್ಷಯ ತೋಟಿಕೊಪ್ಪಲು ಬಡಾವಣೆ

ಸರಸ್ವತೀಪುರಂ : : ಮೈಸೂರು

1981

ಪ್ರಕಟಣೆ ೧೯೮೦ ರಲ್ಲಿ ಆಯಿತು. ರಂಗಸೌರಭದಲ್ಲಿ ೩೩೪೪ ಕನ್ನಡ ನಾಟಕ ಕೃತಿಗಳ ಪುಸ್ತಕ ಸೂಚಿಯನ್ನು ಒದಗಿಸಿದ್ದಾರೆ. ಇದಲ್ಲದೆ ಆಯಿಲ್ಮರ್ ಮಾಡ್ (Aylmer Maude) ಬರೆದ A Short Story of Tolstoy ಗ್ರಂಥವನ್ನು 'ಟಾಲ್‌ಸ್ಟಾಯ್ ಸಂಕ್ಷಿಪ್ತ ಜೀವನಚರಿತ್ರೆ' ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಇದಕ್ಕೆ ೧೯೭೮ ರ ರಾಜ್ಯ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ ನೀಡಿ ಗೌರವಿಸಲಾಗಿದೆ. ಬದುಕಿನುದ್ದಕ್ಕೂ ಪುಸ್ತಕ ಪ್ರೀತಿಯನ್ನಿಟ್ಟುಕೊಂಡಿದ್ದರು.

೧೯೮೫ ರಲ್ಲಿ ಕನ್ನಡ ಪುಸ್ತಕಗಳ ಸಮೀಕ್ಷಾ ವಿಶೇಷಾಂಕವನ್ನು ತಂದಿದ್ದಾರೆ. ಓದುಗರಿಂದ 'ಅತ್ಯುತ್ತಮ ಪುಸ್ತಕ'ಕ್ಕಾಗಿ ಆಯ್ಕೆ ಮಾಡಿ ಅಭಿಪ್ರಾಯ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಕಾವ್ಯ, ಕಥೆ, ವೈಚಾರಿಕ, ಕಾದಂಬರಿ, ವಿಜ್ಞಾನ, ಸಂಶೋಧನೆ ಮುಂತಾದ ವಿಭಾಗಗಳಡಿಯಲ್ಲಿ ಸಮೀಕ್ಷಾ ಲೇಖನಗಳನ್ನು ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸಿದ್ದಾರೆ. ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರಾಗಿ ಆಯ್ಕೆ ಹೊಂದಿರುವ ಸಾಹಿತಿಗಳ ಭಾವಚಿತ್ರವಿರುವ ಪರಿಚಯ ಲೇಖನಗಳನ್ನು ಅವರ ಕೃತಿಗಳ ಸಮೀಕ್ಷೆ ಮತ್ತು ಕೃತಿಗಳ ಪಟ್ಟಿಯನ್ನು ಗ್ರಂಥಲೋಕದಲ್ಲಿ ನೀಡುವ ಮೂಲಕ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದರು. ಹಾಗೆಯೇ ನಿಧನ ಹೊಂದಿದ ಸಾಹಿತಿಗಳ ಕುರಿತು ಲೇಖನ ಕೃತಿಗಳ ಸೂಚಿಯನ್ನು ಪ್ರಕಟಿಸುತ್ತಿದ್ದರು. ಪುಸ್ತಕಗಳ ಬಗ್ಗೆ ಜಾಹೀರಾತು, ಸುದ್ದಿ ಚಿತ್ರಣಗಳು, ಬಹುಮಾನಗಳು, ಪ್ರಶಸ್ತಿಗಳು, ಪುಸ್ತಕ ಯೋಜನೆಗಳನ್ನು ಇದು ಒಳಗೊಳ್ಳುತ್ತಿತ್ತು. ಇಲ್ಲಿಯವರೆಗೆ ಪ್ರಕಟವಾದ ಪತ್ರಿಕೆಗಳಲ್ಲಿ ಈ ಕಾರ್ಯ ಆದಂತೆ ಕಾಣುವುದಿಲ್ಲ. ಇವು ಒಂದೊಂದು ವಿಷಯದ ಮೇಲೆ ಇರುವ ಮೂಲ ಆಕರಗಳಾಗಿರುತ್ತವೆ.

ಕನ್ನಡ ಅಧ್ಯಯನದಲ್ಲಿ ಪ್ರಕಟಿಸಿರುವ ಆಕರಸೂಚಿ ವಿವರಗಳು ಹೀಗಿವೆ :

ಪತ್ರಿಕೆ : ಕನ್ನಡ ಅಧ್ಯಯನ : ರಹಮತ್ ತರೀಕೆರೆ (ಸಂ.) ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ತಾ. : ಹೊಸಪೇಟೆ, ಜಿಲ್ಲಾ : ಬಳ್ಳಾರಿ

| ಕ್ರ.ಸಂ. | ವಿಷಯಗಳು | ಲೇಖಕನ ಹೆಸರು | ಅವಧಿ | ಸಂಪುಟ | ಸಂಚಿಕೆ |
|---|---|---|---|---|---|
| ೧. | ಮಹಿಳಾ ಅಧ್ಯಯನ | ಎಂ. ಉಷಾ | ಜುಲೈ - ಸಪ್ಟಂಬರ್ ೧೯೯೮ (ಮಳೆ ಸಂಚಿಕೆ) | ೫ | ೧ |
| ೨. | ನಾಮ ವಿಜ್ಞಾನಗಳು | ಅಂಗಡಿ ಎಸ್. ಎಸ್ (ಗಾಳಿ ಸಂಚಿಕೆ) | ಜನೇವರಿ - ಮಾರ್ಚ್ ೧೯೯೯ (ಚಳಿ ಸಂಚಿಕೆ) | ೫ | ೨ |
| ೩. | ಇಂಗ್ಲೀಷಿನಲ್ಲಿ ಭಾಷಾ ಅಧ್ಯಯನ | ಅಂಗಡಿ ಎಸ್. ಎಸ್ | ಏಪ್ರಿಲ್ - ಜೂನ್ ೧೯೯೯ (ಬಿಸಿಲು ಸಂಚಿಕೆ) | ೫ | ೪ |
| ೪. | ಕನ್ನಡದಲ್ಲಿ ಭಾಷಾ ಅಧ್ಯಯನ | ಅಂಗಡಿ ಎಸ್. ಎಸ್ | ಜುಲೈ - ಸಪ್ಟಂಬರ್ ೧೯೯೯ (ಮಳೆ ಸಂಚಿಕೆ) | ೬ | ೧ |

| | | | | | |
|---|---|---|---|---|---|
| ೫. | ಹೊರನಾಡುಗಳಲ್ಲಿ ಕೆಳದಿ ಇತಿಹಾಸದ ಆಕರಗಳು | ಕೆಳದಿ ಗುಂಡಾ ಜೋಯಿಸ್ | ಅಕ್ಟೋಬರ್ - ಡಿಸೆಂಬರ್ ೧೯೯೯ (ಚಳಿ ಸಂಚಿಕೆ) | ೬ | ೨ |
| ೬. | ಕನ್ನಡ ಹಸ್ತಪ್ರತಿ ಶಾಸ್ತ್ರ | ಹಳ್ಳಿಕೇರಿ ಎಫ್. ಟಿ. (ಗಾಳಿ ಸಂಚಿಕೆ) | ಜನೇವರಿ - ಮಾರ್ಚ್ ೨೦೦೦ (ಮಳೆ ಸಂಚಿಕೆ) | ೬ | ೩ |
| ೭. | ಕನ್ನಡದಲ್ಲಿ ಕೋಶ ಅಧ್ಯಯನ | ಅಂಗಡಿ ಎಸ್. ಎಸ್. | ಜುಲೈ - ಸಪ್ಟಂಬರ್ ೨೦೦೦ (ಮಳೆ ಸಂಚಿಕೆ) | ೭ | ೧ |
| ೮. | ಬುಡಕಟ್ಟು ಅಧ್ಯಯನ | ಪ್ರಭಾಕರ ಎಸ್. (ಬಿಸಿಲು ಸಂಚಿಕೆ) | ಏಪ್ರಿಲ್ - ಜೂನ್ ೨೦೦೦ (ಬಿಸಿಲು ಸಂಚಿಕೆ) | ೬ | ೪ |
| ೯. | ಶಾಸನ ಸಂಪಾದನೆ ಮತ್ತು ಅಧ್ಯಯನ | ಅಂಗಡಿ ಎಸ್. ಎಸ್. | ಜನೇವರಿ - ಮಾರ್ಚ್ ೨೦೦೧ (ಗಾಳಿ ಸಂಚಿಕೆ) | ೭ | ೪ |
| ೧೦. | ವಿಜಯನಗರದ ಅಧ್ಯಯನಗಳು | ಸೋಮಶೇಖರ ಎಸ್. ವೈ | ಏಪ್ರಿಲ್ - ಜೂನ್ ೨೦೦೧ (ಬಿಸಿಲು ಸಂಚಿಕೆ) | ೭ | ೪ |
| ೧೧. | ಕನ್ನಡದಲ್ಲಿ ವ್ಯಾಕರಣ ಅಧ್ಯಯನ | ಅಂಗಡಿ ಎಸ್. ಎಸ್. | ಜುಲೈ - ಸಪ್ಟಂಬರ್ ೨೦೦೧ (ಮಳೆ ಸಂಚಿಕೆ) | ೮ | ೧ |
| ೧೨. | ವಡ್ಡಾರಾಧನೆ ಅಧ್ಯಯನಗಳು | ಅಮರೇಶ ನುಗಡೋಣಿ | ಅಕ್ಟೋಬರ್ - ಡಿಸೆಂಬರ್ ೨೦೦೧ (ಚಳಿ ಸಂಚಿಕೆ) | ೭ | ೨ |
| ೧೩. | ವಿಶೇಷ ಸಂಚಿಕೆ | ರಹಮತ್ ತರೀಕೆರೆ ಸಂ. | ಅಕ್ಟೋಬರ್ - ಮಾರ್ಚ್ ೨೦೦೧ - ೨೦೦೨ ಎರಡು ಸಂಚಿಕೆಗಳು | ೮ | ೨ ಮತ್ತು ೩ |

ಕೆಲವು ಸಂಚಿಕೆಗಳಲ್ಲಿನ ಆಕರಸೂಚಿಗಳನ್ನು ನೋಡಲಾಗಿ ಅವು ಒಂದೊಂದು ವಿಷಯದ ಬಗ್ಗೆ ಮೂಲ ಆಕರ ಮಾಹಿತಿಗಳನ್ನೂ ಸೂಚಿಸುತ್ತವೆ. ಜೊತೆಗೆ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಲೇಖನಸೂಚಿಗಳನ್ನು ಒದಗಿಸಿಕೊಡಲಾಗಿದೆ. ಒಂದು ಅವಧಿಯನ್ನು ನಿಗದಿ ಮಾಡಿಕೊಂಡು ವಿವರಗಳನ್ನು ನೀಡುತ್ತಾ ಹೋಗುತ್ತವೆ. ಒಮ್ಮೊಮ್ಮೆ ಇದು ಎರಡು ಮೂರು ಸಂಚಿಕೆಗಳಲ್ಲಿ ಮುಂದುವರಿಯಬಹುದಾಗಿದೆ. ಇಂಥ ಆಯಾಮ ಬೇರಾವ ಪ್ರಕಟಿತ ಸಾಹಿತ್ಯ ಪತ್ರಿಕೆಗಳಲ್ಲಿ ಕಾಣಸಿಗದು. ಕನ್ನಡ ಸಾಹಿತ್ಯಕ್ಕೆ ಇದೊಂದು ಮಹತ್ವದ ದಾಖಲೆಯಾಗಿರುತ್ತವೆ. ಇದು ಮುಂದಿನ ಪೀಳಿಗೆಗೂ ಉಪಯುಕ್ತವಾಗುವುದರಲ್ಲಿ ಸಂಶಯವಿಲ್ಲ. ಇದು ದಾಖಲೆ ನಿರ್ಮಾಣದ ಕೆಲಸ. ಸಂಶೋಧಕರಿಗೆ ಇದಕ್ಕಿಂತ ಸಂತೋಷದ ವಿಷಯ ಬೇರಾವುದೂ ಇರಲಿಕ್ಕಿಲ್ಲ.

## ೪.೨.೧೧.೧೩ : ಸಾಹಿತ್ಯ ವಾರ್ಷಿಕ - ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಎಪ್ಪತ್ತರ ದಶಕದಿಂದಲೂ ಪ್ರಕಟಿಸುತ್ತ ಬಂದಿರುವ, ಬೆಂಗಳೂರು ವಿಶ್ವವಿದ್ಯಾಲಯವು ಸಂದರ್ಭ ಸಾಹಿತ್ಯಕ್ಕೆ ಮತ್ತು ಗ್ರಂಥಸೂಚಿಯ ಕಾರ್ಯಗಳಿಗೆ ಪೂರಕ ಕೆಲಸವನ್ನು ಮಾಡಿದೆಯೆಂದರೆ ತಪ್ಪಾಗಲಾರದು. ಡಾ. ಜಿ. ಎಸ್.

ಶಿವರುದ್ರಪ್ಪನವರು ಕನ್ನಡ ಅಧ್ಯಯನ ಸಂಸ್ಥೆಗೆ ಬಂದ ಮೇಲೆ ಪ್ರತಿಯೊಂದು ವಿಷಯದ ಮೇಲೆ ಚರ್ಚೆ, ವಿಚಾರಸಂಕಿರಣ, ಕಮ್ಮಟಗಳನ್ನು ಏರ್ಪಡಿಸಿದುದಲ್ಲದೆ ಅಲ್ಲಿಯ ವಿಚಾರಗಳು ಓದುಗರಿಗೂ, ಸಂಶೋಧಕರಿಗೂ, ಅಧ್ಯಾಪಕರಿಗೂ, ವಿದ್ಯಾರ್ಥಿಗಳಿಗೂ ಅನುಕೂಲವಾಗುವ ದೃಷ್ಟಿಯಿಂದ ಅವುಗಳನ್ನು ಪ್ರಕಟಣೆಗೆ ಅಣಿಗೊಳಿಸುತ್ತಿದ್ದರು. ಬಹುಶಃ ಅವರಿಗೆ ಗೊತ್ತಿರಬಹುದು. ಸಂದರ್ಭ ಸಾಹಿತ್ಯಕ್ಕೆ ಇವು ಮೈಲುಗಲ್ಲಾಗಳಾಗಬಹುದು. ಈ ಮುನ್ಸೂಚನೆಯನ್ನು ಇಟ್ಟುಕೊಂಡು ಅವರು ಅನೇಕಾನೇಕ ಪ್ರಯೋಗಗಳನ್ನು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಮಾಡಿದರು.

ಕನ್ನಡ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ವಿಚಾರಸಂಕಿರಣ, ಕಮ್ಮಟಗಳಲ್ಲಿ ಅಭಿವ್ಯಕ್ತಿಸಿದ ಅಭಿಪ್ರಾಯಗಳನ್ನು, ವಿಚಾರಗಳನ್ನು ಕೃತಿಗಳ ಮೂಲಕ ಹೊರತರಲಾಗುತ್ತಿತ್ತು. ಅವುಗಳಿಗೆ ಒಂದು ಸಮಗ್ರ ಪರಿಶೀಲನಾತ್ಮಕ ಅಧ್ಯಯನಕ್ಕೆ ಉಪಯೋಗವಾಗುವ ಸಾಮಗ್ರಿಯನ್ನಾಗಿ ರೂಪಿಸುತ್ತಿದ್ದರು. ಈ ದೃಷ್ಟಿ ಬಹುಶಃ ಕನ್ನಡದ ಯಾವ ಸಾಹಿತಿಗಳಿಗೂ ಸಾಧ್ಯವಿಲ್ಲ. ಇದು ಜಿ. ಎಸ್. ಶಿವರುದ್ರಪ್ಪನವರ ದಿವ್ಯದೃಷ್ಟಿ, ಮುಂದಾಲೋಚನೆಗೆ ಭದ್ರ ಬುನಾದಿಯೂ ಹೌದು. ಸಾಹಿತ್ಯ ವಾರ್ಷಿಕವು ೧೯೭೦ ರಿಂದ ಈಚೆಗೆ ೧೯೮೩ ರ ವರೆಗೆ ಸುಮಾರು ೧೩ ವರ್ಷಗಳ ಸತತವಾಗಿ ಪ್ರಕಟಗೊಂಡ ಪುಸ್ತಕಗಳ ಸಮೀಕ್ಷೆಯನ್ನು ಒಳಗೊಂಡಿದ್ದಾಗಿರುತ್ತದೆ. ಈ ಯೋಜನೆಯನ್ನು ರೂಪಿಸಿ ಯೋಜಿಸಿದವರು ಡಾ. ಜಿ. ಎಸ್. ಶಿವರುದ್ರಪ್ಪನವರು. ಬೆಂಗಳೂರು ಕನ್ನಡ ಅಧ್ಯಯನ ಸಂಸ್ಥೆಯ ಮುಖ್ಯಸ್ಥರಾಗಿದ್ದ ಕಾಲದಲ್ಲಿ ಈ ಯೋಜನೆ ಕೈಗೆತ್ತಿಕೊಂಡರು. ನನಗೆ ಸಾಮಗ್ರಿ ಸಿಕ್ಕ ಪ್ರಕಾರ ೧೯೮೨ ರ ವರೆಗೆ ಸಾಹಿತ್ಯ ವಾರ್ಷಿಕ ಪ್ರಕಟವಾಗಿದೆ. ಮುಂದುವರಿದಿರಬಹುದಾದರೂ ನನಗೆ ೧೯೮೨ ರ ನಂತರ ಸಾಹಿತ್ಯ ಲಭ್ಯವಾಗಿಲ್ಲ. ಇದರ ಪ್ರಧಾನ ಸಂಪಾದಕರಾದ ಶಿವರುದ್ರಪ್ಪ ಹೇಳುವಂತೆ :

"ಇದು ಆಯಾ ಸಾಲಿನಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ಒಂದು ವಿಮರ್ಶಾತ್ಮಕ ಸಮೀಕ್ಷೆ. ಇದು ಆಯಾ ವರ್ಷ ಪ್ರಕಟವಾಗುವ ಪುಸ್ತಕಗಳನ್ನು ಪಟ್ಟಿ ಮಾಡುವ ಅಥವಾ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸುವ ಪ್ರಾಥಮಿಕ ನೆಲೆಯಲ್ಲಿ ಪರ್ಯವಸನವಾಗುವ ರೂಪದ್ದಲ್ಲ; ಆಯಾ ವರ್ಷದ ಸಾಹಿತ್ಯ ಕೃತಿಗಳನ್ನು ಸಮೀಕ್ಷಿಸುವ ಸ್ವರೂಪದ್ದು."

ಇದು ಸುಲಭವಾದ ಕಾರ್ಯವೇನಲ್ಲ. ಬಹುಸಂಖ್ಯೆಯಲ್ಲಿ ವರ್ಷ ವರ್ಷವೂ ಪ್ರಕಟವಾಗುವ ಸಾಹಿತ್ಯಕೃತಿಗಳ ಜಾಡು ಹಿಡಿದು ಗುರುತಿಸುವುದು. ಅನಂತರ ಪ್ರಕಟವಾಗುವ ಸಾಹಿತ್ಯಕೃತಿಗಳ ಜಾಡು ಹಿಡಿದು ಗುರುತಿಸುವುದು. ಅನಂತರ ಅವುಗಳನ್ನೆಲ್ಲ ಒಂದೆಡೆ ಕೂಡಿಸಿಕೊಳ್ಳುವದು ಮೊದಲನೆಯ ಕಷ್ಟ. ಅವುಗಳನ್ನು ತೀರಾ ಮುಖಾಮುಖಿಯಾಗಿ ನಿಂತು ವಿಮರ್ಶಿಸುವುದು ಎರಡನೆಯ ಕಷ್ಟ. ಆದರೂ ಅಗತ್ಯವಾಗಿ ಮಾಡಬೇಕಾಗಿರುವ; ತಪ್ಪೋ ಒಪ್ಪೋ,

ಯಾರಾದರೂ ಮಾಡಲೇಬೇಕಾದ ಕಾರ್ಯ. ಅದನ್ನು ನಾವು ಮಾಡಲು ಹೊರಟಿದ್ದೇವೆ. ನಾವು ಹೊರಟಿರುವ ಉದ್ದೇಶ ಒಳ್ಳೆಯದು. ಪ್ರಯತ್ನ ಪ್ರಾಮಾಣಿಕವಾದದ್ದು.

ನಾಳೆ ಕನ್ನಡದಲ್ಲಿ ಯಾವುದೇ ಒಂದು ಸಾಹಿತ್ಯ ಪ್ರಕಾರವನ್ನು ಕುರಿತು ಕೆಲಸ ಮಾಡಲು ತೊಡಗುವವರಿಗೆ ಈ ಸಾಹಿತ್ಯ ವಾರ್ಷಿಕಗಳಿಂದಾಗುವ ಪ್ರಯೋಜನ ಅಷ್ಟಿಷ್ಟಲ್ಲ. ಯಾವ ಯಾವ ವರ್ಷದಲ್ಲಿ ಏನೇನು ಕೃತಿಗಳು ಪ್ರಕಟವಾಗಿವೆ. ಸಾಹಿತ್ಯದ ಯಾವ ಯಾವ ಪ್ರಕಾರಗಳಲ್ಲಿ ಏನೇನು ಕೆಲಸ ನಡೆದಿದೆ. ಯಾವ ದೃಷ್ಟಿ. ಧೋರಣೆಗಳು ಅವುಗಳ ಹಿನ್ನೆಲೆಗಿವೆ ಎಂಬುದು ನಾಳಿನ ವಿಮರ್ಶಕರಿಗೆ ಹಾಗೂ ಸಂಶೋಧಕರಿಗೆ ಮೂಲಭೂತ ಸಾಮಗ್ರಿಯಾಗಿ ಇದರಿಂದ ಒದಗುತ್ತದೆ. ಹಾಗೆಯೇ ಪ್ರತಿಯೊಂದು ವರ್ಷದ ಸಾಹಿತ್ಯಿಕ ಸಾಧನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವವರ ಪಾಲಿಗೆ ಮತ್ತು ಸಾಹಿತ್ಯ ಚರಿತ್ರೆಯ ಲೇಖಕರಿಗೆ ಇದೊಂದು ಋಣದ ಗಣಿಯಾಗುವುದರಲ್ಲಿ ಸಂದೇಹವಿಲ್ಲ. ಲೇಖಕರ. ಪ್ರಕಾಶಕರ. ವಿಮರ್ಶಕರ. ಪತ್ರಿಕೆಗಳ ಮತ್ತು ಗ್ರಂಥಭಂಡಾರದ ನಿರಂತರ ಸಹಕಾರದಿಂದ ಮಾತ್ರ ಇಂಥ ಯೋಜನೆ ಯಶಸ್ವಿಯಾಗುವ ಸಾಧ್ಯತೆಗಳಿವೆ.

ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಕನ್ನಡ ಅಧ್ಯಯನ ಕೇಂದ್ರವು ಸಕ್ರಿಯವಾಗಿ ಪಾಲ್ಗೊಳ್ಳುವ ಒಂದು ಅವಕಾಶವನ್ನು ಈ ಯೋಜನೆ ಒದಗಿಸಿದೆ. ನನಗೆ ತಿಳಿದ ಮಟ್ಟಿಗೆ 'ಸಾಹಿತ್ಯ ವಾರ್ಷಿಕ' ದಂತಹ ಯೋಜನೆಯನ್ನು ಬಹುಶಃ ಯಾವ ಒಂದು ಭಾರತೀಯ ವಿಶ್ವವಿದ್ಯಾಲಯವೂ ಕೈಕೊಂಡಂತೆ ತೋರುವುದಿಲ್ಲ. ಕನ್ನಡ ವಿಮರ್ಶೆ ಬೆಳವಣಿಗೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವು ಸಕ್ರಿಯವಾಗಿ ಪಾಲುಗೊಳ್ಳುವ ಒಂದು ಅವಕಾಶವನ್ನು ಈ ಯೋಜನೆ ಒದಗಿಸಿದೆ.

ಕನ್ನಡ ಪುಸ್ತಕ ಮಾಹಿತಿಗೆ ನೆರವಾಗುವ ಆಯಾ ವರ್ಷದಲ್ಲಿ ಪ್ರಕಟವಾಗುವ ಪುಸ್ತಕಗಳ ಪಟ್ಟಿಯನ್ನು ವಿಭಜನೆ ಮಾಡಿ ಕಾವ್ಯ. ನಾಟಕ. ಸಣ್ಣ ಕತೆ. ಕಾದಂಬರಿ. ಸಾಹಿತ್ಯ ವಿಮರ್ಶೆ. ಜೀವನಚರಿತ್ರೆ. ವ್ಯಕ್ತಿಚಿತ್ರಣ ಮತ್ತು ಆತ್ಮಕತೆ. ಪ್ರಬಂಧ. ಪ್ರವಾಸಸಾಹಿತ್ಯ. ನಗೆಬರಹಗಳು. ಸಂಪಾದಿತ ಕೃತಿಗಳು. ಭಾಷಾನುವಾದ ಮತ್ತು ಗದ್ಯಾನುವಾದ. ಲಕ್ಷಣ ಗ್ರಂಥಗಳು. ಸ್ಮರಣ ಗ್ರಂಥ. ಜನಪದ ಸಾಹಿತ್ಯ. ಮಕ್ಕಳ ಸಾಹಿತ್ಯ. ಅನ್ಯ ಸಾಹಿತ್ಯದಿಂದ. ಸಂಕೀರ್ಣ. ಕೋಶ. ಇತ್ಯಾದಿ. ತಡವಾಗಿ ದೊರೆತ ಪುಸ್ತಕಗಳು ಹೀಗೆ ಪುಸ್ತಕಗಳ ವಿಂಗಡನೆ ಮತ್ತು ವಿವರಣೆಗಳನ್ನು ಪಟ್ಟಿ ಮಾಡಿದ್ದು ವಿಶೇಷವಾಗಿದ್ದುದು ಅತೀ ಮಹತ್ವದ ಮತ್ತು ಜರೂರಿನ ಕಾರ್ಯಗಳನ್ನು ಎತ್ತಿ ತೋರಿಸುತ್ತದೆ. ಪಿ. ಸದಾಶಿವಮೂರ್ತಿಯವರು ಇಲ್ಲಿ ಪುಸ್ತಕ ಸಂಗ್ರಹಣೆ ಮತ್ತು ಗ್ರಂಥಸೂಚಿಯನ್ನು ಸಿದ್ಧಪಡಿಸುತ್ತಿದ್ದರು. ಎಸ್. ವಿ. ವಿಮಲ ಅವರು. ಮುಂದೆ ಪಟ್ಟಣಶೆಟ್ಟಿ ಸಿ. ಕೆ. ಯವರು ಪುಸ್ತಕ ಸಂಗ್ರಹಗಳಿಗೆ ನೆರವು ಒದಗಿಸಿದರು. ಆದರೆ ಉದ್ದಕ್ಕೂ ಗ್ರಂಥಸೂಚಿ ರಚಿಸಿದವರು ಶ್ರೀಮತಿ ಎಸ್. ವಿ. ವಿಮಲ ಅವರೇ ಒಬ್ಬರು. ಜೊತೆಗೆ ಈ ಎಲ್ಲಾ

ಸಾಹಿತ್ಯ ವಾರ್ಷಿಕಗಳಿಗೆ ಕನ್ನಡ ಭಾಷಾ ಸಾಹಿತ್ಯ ಲೇಖನ ಸೂಚಿಯನ್ನು ಒದಗಿಸುತ್ತಿದ್ದವರು ಟಿ. ವಿ. ವೆಂಕಟರಮಣಯ್ಯನವರು. ಅದು ಬೆಂಗಳೂರು ವಿಶ್ವವಿದ್ಯಾಲಯದಿಂದಲೂ ಪ್ರಕಟಗೊಂಡಿದೆ. 'ಕನ್ನಡ ಭಾಷಾ ಸಾಹಿತ್ಯ ಲೇಖನ ಸೂಚಿ' ಎಂಬ ಶೀರ್ಷಿಕೆಯೊಂದಿಗೆ ೧೯೭೩ ರಲ್ಲಿ ಪ್ರಕಟಿಸಲ್ಪಟ್ಟಿದೆ.

ಹೀಗೆ ಸಾಹಿತ್ಯ ವಾರ್ಷಿಕವು ಕನ್ನಡ ಸಾಹಿತ್ಯಕ್ಕೆ, ಪುಸ್ತಕ ಪ್ರಿಯರಿಗೆ, ಗ್ರಂಥ ಭಂಡಾರಗಳಿಗೆ ಆಧಾರ ಕೃತಿಯಾಗಿ ವರ್ಷ ವರ್ಷವೂ ಪ್ರಕಟವಾಗುತ್ತಿದ್ದುದು ಕನ್ನಡ ಸಾಹಿತ್ಯದ ಅಚ್ಚರಿಗಳಲ್ಲಿ ಒಂದು.

| ಕ್ರ.ಸಂ. | ಸಂಚಿಕೆಯ ಹೆಸರು | ಪ್ರಕಟಣೆಯ ವರ್ಷ |
|---|---|---|
| ೧. | ಸಾಹಿತ್ಯ ವಾರ್ಷಿಕ ೧೯೭೧ | ೧೯೭೩ |
| ೨. | ಸಾಹಿತ್ಯ ವಾರ್ಷಿಕ ೧೯೭೨ | ೧೯೭೪ |
| ೩. | ಸಾಹಿತ್ಯ ವಾರ್ಷಿಕ ೧೯೭೩ | ೧೯೭೪ |
| ೪. | ಸಾಹಿತ್ಯ ವಾರ್ಷಿಕ ೧೯೭೪ | ೧೯೭೫ |
| ೫. | ಸಾಹಿತ್ಯ ವಾರ್ಷಿಕ ೧೯೭೫ | ೧೯೭೭ |
| ೬. | ಸಾಹಿತ್ಯ ವಾರ್ಷಿಕ ೧೯೭೬ | ೧೯೭೮ |
| ೭. | ಸಾಹಿತ್ಯ ವಾರ್ಷಿಕ ೧೯೭೭ | ೧೯೭೯ |
| ೮. | ಸಾಹಿತ್ಯ ವಾರ್ಷಿಕ ೧೯೭೮ | ೧೯೮೦ |
| ೯. | ಸಾಹಿತ್ಯ ವಾರ್ಷಿಕ ೧೯೭೯ | ೧೯೮೧ |
| ೧೦. | ಸಾಹಿತ್ಯ ವಾರ್ಷಿಕ ೧೯೮೦ | ೧೯೮೨ |
| ೧೧. | ಸಾಹಿತ್ಯ ವಾರ್ಷಿಕ ೧೯೮೧ | ೧೯೮೪ |
| ೧೨. | ಸಾಹಿತ್ಯ ವಾರ್ಷಿಕ ೧೯೮೨ | – |
| ೧೩. | ಸಾಹಿತ್ಯ ವಾರ್ಷಿಕ ೧೯೮೩ | – |

ಡಾ. ಸಿ. ಆರ್. ಕರಿಸಿದ್ದಪ್ಪ ಅವರು ೧೩ ಸಾಹಿತ್ಯ ವಾರ್ಷಿಕಗಳನ್ನು ಉದಾಹರಿಸಿ ಮುಂದಿನವುಗಳು ಬಂದಿಲ್ಲವೆಂದು ಖಚಿತಪಡಿಸಿದ್ದಾರೆ.[೪೯]

ನಾನು ಸಾಹಿತ್ಯ ವಾರ್ಷಿಕ ೧೯೮೧ ರಲ್ಲಿಯೇ ೧೯೮೨ ರ ಬಗ್ಗೆ ತಯಾರಿ ನಡೆಸಿದ್ದರ ಬಗ್ಗೆ ೧೯೮೧ ರ ಸಂಚಿಕೆಯಲ್ಲಿ ಪ್ರಧಾನ ಸಂಪಾದಕರು ಮಾಹಿತಿ ನೀಡಿದ್ದಾರೆ. ಈ ಮಾಹಿತಿಯನ್ನು ಮುಂದಿನ ಸಂಚಿಕೆಗಳು ಸಿಕ್ಕಾಗ ಪೂರ್ಣವಾಗಬಹುದು.

## ೪.೨.೧೧.೧೪ : ಸಾಲು ದೀಪಗಳು

'ಸಾಲು ದೀಪಗಳು' ಸುಮಾರು ಒಂದು ಶತಮಾನ ಕಾಲದ ಸಮೃದ್ಧವೂ ವೈವಿಧ್ಯಮಯವೂ ಆದ ಸಾಹಿತ್ಯಿಕ ಇತಿಹಾಸವನ್ನುಳ್ಳ ಹೊಸಗನ್ನಡ ಸಾಹಿತ್ಯದ ಪ್ರತಿಭಾನ್ವಿತರಲ್ಲಿ ಅರವತ್ತೇಳು ವ್ಯಕ್ತಿತ್ವಗಳನ್ನು ಕುರಿತ ಲೇಖನಗಳ ಮಾಲೆ.

ಹೊಸಗನ್ನಡ ಸಾಹಿತ್ಯ ಭಾರತೀಯ ಸಾಹಿತ್ಯದಲ್ಲೆ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿದೆ. ಒಂಬತ್ತು ದಶಕಗಳ ಸಾರ್ಥಕ ಇತಿಹಾಸವನ್ನು ಪಡೆದಿರುವ ಈ ಸಾಹಿತ್ಯದ ವೈಶಿಷ್ಟ್ಯ ಭಾರತಕ್ಕೆಲ್ಲ ವಿದಿತವಾದದ್ದು. ಭಾರತೀಯ ಸಂದರ್ಭದಲ್ಲಿ ಅತ್ಯುನ್ನತ ಸಾಹಿತ್ಯಿಕ ಗೌರವವಾದ ಜ್ಞಾನಪೀಠ ಪ್ರಶಸ್ತಿಯನ್ನು ಏಳು ಬಾರಿ ಪಡೆದ ಹೆಮ್ಮೆ ಕನ್ನಡದ್ದು. ಅಷ್ಟೇ ಅಲ್ಲ. ಭಾರತೀಯ ಶ್ರೇಷ್ಠ ಕಾವ್ಯವನ್ನು ಕುರಿತು ನೀಡುವ ಪ್ರಶಸ್ತಿ, ಕಬೀರ ಸಮ್ಮಾನ ಮೊದಲು ಪ್ರಾಪ್ತವಾದದ್ದು ಕನ್ನಡಕ್ಕೆ. ಅದೇ ರೀತಿ ಬಿಲ್ವಾರ ಪ್ರಶಸ್ತಿಯೂ ಪ್ರಥಮ ಬಾರಿಗೆ ಕನ್ನಡಕ್ಕೆ ಸಂದಿದೆ. ಕೇರಳದ ಕುಮಾರ ಆಶಾನ ಪ್ರಶಸ್ತಿಯು ಕಾವ್ಯಕ್ಕಾಗಿ ಕನ್ನಡ ಕವಿಗೆ ಸಂದಿದೆ. ಕಾಳಿದಾಸ ಸಮ್ಮಾನ ಕೂಡ ಕನ್ನಡದವರಿಗೆ ಮೂರು ಬಾರಿ ಬಂದಿದೆ. ಇಷ್ಟೇ ಅಲ್ಲದೆ ಮೂವತ್ತಕ್ಕೂ ಹೆಚ್ಚು ಬಾರಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನು ಕನ್ನಡದ ಪ್ರತಿಭಾವಂತರು ಪಡೆದಿದ್ದಾರೆ. ಇಷ್ಟೆಲ್ಲಾ ಹೇಳುವುದರ ಹಿನ್ನೆಲೆ ಈ ಎಲ್ಲ ಪ್ರಶಸ್ತಿಗಳ ವೈಶಿಷ್ಟ್ಯದಿಂದಾಗಿಯೇ ಕನ್ನಡವನ್ನು ಅಳೆಯಬೇಕು ಎಂದಾಗ ಕನ್ನಡದ ಸಾಹಿತ್ಯ ಭಾರತದಲ್ಲಿ ಇಷ್ಟು ವಿಶಿಷ್ಟವಾದ ಮನ್ನಣೆಯನ್ನು ಪಡೆದಿದೆ ಎಂದು ಸೂಚಿಸುವುದು ಅಷ್ಟೆ.

ಈ ಹಿನ್ನೆಲೆಯಲ್ಲಿ ಇಂತಹ ಸಮೃದ್ಧವೂ, ವೈವಿಧ್ಯಮಯವೂ ಆದ ಈ ಸಾಹಿತ್ಯದ ಮುಖ್ಯ ಘಟ್ಟಗಳನ್ನು ಗುರುತಿಸುವದು ಈ ಗ್ರಂಥದ ಉದ್ದೇಶವಾಗಿದೆ. ವಾಸ್ತವವಾಗಿ ಈ ಗ್ರಂಥದ ಆರಂಭದ ಕಲ್ಪನೆಯನ್ನು ನೋಡಿದಾಗ, ಹೊಸಗನ್ನಡ ಸಾಹಿತ್ಯ ಪರಂಪರೆಯ ನಿರ್ಮಾಪಕರೆಂದು ಯೋಚಿಸಿದ ಅರವತ್ತೇಳು ಪ್ರತಿಭಾವಂತ ವ್ಯಕ್ತಿಗಳ ಪರಿಚಯ ಮಾಡಿಕೊಡುವ ದೃಷ್ಟಿಯೇ ಈ ಗ್ರಂಥ ಸಾಲುದೀಪಗಳು.

ಕನ್ನಡದ ಅತ್ಯಂತ ಪ್ರಮುಖ ಸಾಹಿತಿ - ವಿದ್ವಾಂಸರನ್ನು ಈ ಪಟ್ಟಿ ಒಳಗೊಂಡಿಲ್ಲ. ಅದಕ್ಕೆ ಕಾರಣ ೧೯೫೦ ರಿಂದ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದವರನ್ನೂ ಒಳಗೊಂಡಂತೆ, ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿದವರ ಒಂದು ಪಟ್ಟಿಯನ್ನು ತಯಾರಿಸಲಾಯಿತು. ಅದರಂತೆ ಕನ್ನಡ ಪ್ರಮುಖ ಕವಿಗಳು - ಕಾದಂಬರಿಕಾರರು - ವಿಮರ್ಶಕರು - ನಾಟಕಕಾರರು ಹಾಗೂ ವಿದ್ವಾಂಸರನ್ನೂ ಒಳಗೊಂಡಂತೆ ಈ ಗ್ರಂಥದ ರೂಪರೇಖೆಗಳನ್ನು ನಿರ್ಣಯಿಸಲಾಗಿದೆ.

ವಾಸ್ತವವಾಗಿ ಈ ಅರವತ್ತೇಳು ಪ್ರತಿಭೆಗಳು ಪರಿಪೂರ್ಣವಾದುದು ಎಂದು ಹೇಳುವುದು ಸಾಧ್ಯವಿಲ್ಲ. ಯಾವುದೋ ಮಾನದಂಡದಿಂದ ನೋಡಿದರೂ ಕನ್ನಡ ಸಾಹಿತ್ಯವನ್ನು ಸಮೃದ್ಧಿಗೊಳಿಸಿದ ನೂರಾರು ಪ್ರತಿಭೆಗಳು ಇವೆ. ಮುಂದೆ ಈ ಕೆಲಸವನ್ನು ಮುಂದುವರಿಸಬಹುದು. ಈ ಗ್ರಂಥ ಹೊಸಗನ್ನಡ ಸಾಹಿತ್ಯದ ಚರಿತ್ರೆಯ ಆಕರಗ್ರಂಥವಾಗಬಹುದು ಅಥವಾ ಹೊಸಕನ್ನಡ ಸಾಹಿತ್ಯದ ಪ್ರಮುಖ ಅಂಶಗಳನ್ನು ಸೂಚಿಸುವ ದಾರಿದೀಪವಾಗಬಹುದು.

ಹೊಸಗನ್ನಡ ಸಾಹಿತ್ಯದ ಪರಿಚಯ ಮಾಡಿಕೊಡುವ ಗ್ರಂಥಕ್ಕೆ 'ಸಾಲುದೀಪಗಳು' ಎಂಬ ಹೆಸರು ಬಹುಮಟ್ಟಿಗೆ ಸಾರ್ಥಕವಾಗಿದೆ. ಈ ಗ್ರಂಥದ ಕೊನೆಗೆ ಎರಡು ಅನುಬಂಧಗಳನ್ನು ನೀಡಲಾಗಿದೆ. ಮೊದಲನೆಯ ಅನುಬಂಧದಲ್ಲಿ ಸಾಲುದೀಪದ ಬೆಳಕು ನೀಡಿದ ವ್ಯಕ್ತಿಗಳ ಭಾವಚಿತ್ರಗಳನ್ನೂ. ಅವರ ಬದುಕಿನ ಮಹತ್ವದ ಕೊಡುಗೆಗಳ ವಿವರಗಳನ್ನೂ ಕೊಡಲಾಗಿದೆ. ಎರಡನೆಯ ಅನುಬಂಧದಲ್ಲಿ ಲೇಖಕರ ವಿಳಾಸ ನೀಡಲಾಗಿದೆ.

ಹೊಸಗನ್ನಡ ಸಾಹಿತ್ಯವನ್ನು ಪರಿಚಯ ಮಾಡಿಕೊಡುವ ಇದು ಸಮೃದ್ಧವಾದ ಒಂದು ಸಾಹಿತ್ಯದ ಪ್ರಮುಖ ವ್ಯಕ್ತಿಗಳನ್ನು ಪರಿಚಯ ಮಾಡಿಕೊಡಲು ಇದು 'ಸಾಲುದೀಪ'ದಂತೆ 'ತೋರುದೀಪ'ವು ಎಂಬ ಆಶಯವನ್ನು ಮೂಡಿಸುತ್ತದೆ. ಕನ್ನಡ ಸಾಹಿತ್ಯಕ್ಕೆ ಸಮೃದ್ಧ ಸಂದರ್ಭ ಗ್ರಂಥವಾಗಿದೆ.

## ಪರಿವಿಡಿ

## ೪.೨.೧೧.೧೫ : ಎಸ್. ಶಿವಣ್ಣನವರ ಸೂಚಿಗಳು

ಎಸ್. ಶಿವಣ್ಣನವರು ಹಸ್ತಪ್ರತಿ ಸೂಚಿ ಸಂಗ್ರಹ ಮತ್ತು ಪ್ರಕಟಣೆಗೆ ತಮ್ಮನ್ನು ತೊಡಗಿಸಿಕೊಂಡ ಪ್ರಕಾಂಡ ಪಂಡಿತರು. ಹಸ್ತಪ್ರತಿಸೂಚಿಗಳ ತಯಾರಿಕೆ ಮತ್ತು ಅವುಗಳ ರಕ್ಷಣೆಯ ಬಗ್ಗೆಯೇ ಹೆಚ್ಚು ಜ್ಞಾನವನ್ನು ಅವರು ಪಡೆದಿದ್ದಾರೆ. ವೀರಶೈವ ಧರ್ಮ ಮತ್ತು ಸಾಹಿತ್ಯ ಬರವಣಿಗೆಗಳಲ್ಲಿ ಅವರು ತಮ್ಮನ್ನೇ ತಾವು ಅರ್ಪಿಸಿಕೊಂಡಿದ್ದಾರೆ. ಎಲೆಮರೆಯ ಕಾಯಿಯಂತೆ ಪ್ರಸಿದ್ಧಿಗಳನ್ನು ಬಯಸದೆ ಸದಾ ತೆರೆಯ ಹಿಂದೆ ಇದ್ದುಕೊಂಡು ಸಂಪಾದನಾ ಕ್ಷೇತ್ರದಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡಿದ್ದಾರೆ. ಅವರ ಅಧ್ಯಯನ, ತಾಳ್ಮೆ, ಪರಿಶ್ರಮ ಇಲ್ಲಿ ಹರಳುಗಟ್ಟಿದೆ. ಈಗ ಅವರ ಕೃತಿಗಳನ್ನು ನೋಡುವ ಯೋಗ ಒದಗಿಬಂದದ್ದು ನನಗೆ ಯೋಗಾಯೋಗವೇ ಸರಿ.

೧. ಜಗದ್ಗುರು ತೋಂಟತಾರ್ಯ ಸಂಸ್ಥಾನಮಠದ 'ಹಸ್ತಪ್ರತಿಸೂಚಿ', ಸಂಪುಟ ೧, ೧೯೮೫

೨. ವೀರಶೈವ ಅಪ್ರಕಟಿತ ಗ್ರಂಥಸೂಚಿ, ೧೯೮೭

೩. ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು, ಸಂಪುಟ ೧, ೧೯೯೪

ಈ ಎಲ್ಲ ಕೃತಿಗಳನ್ನು ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ಪ್ರಕಟಿಸಿದ್ದಾರೆ. ಈ ಎಲ್ಲ ಸೂಚಿಗಳನ್ನು ಕಷ್ಟಪಟ್ಟು ರಚಿಸಿದವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ವಿಭಾಗದ ನಿರ್ದೇಶಕರಾದ ಎಸ್. ಶಿವಣ್ಣನವರು "ಹಸ್ತಪ್ರತಿ ವಿದ್ವತ್ತು" ಎಂಬುದು ಶ್ರೀ ಶಿವಣ್ಣ ಅವರಿಗೆ ಇನ್ನೊಂದು ಹೆಸರು. "ಶ್ರೀಯುತರು ಈ ಬಗ್ಗೆ ತೋರುವ ನಿಷ್ಠೆ, ವಹಿಸುವ ಶ್ರಮಗಳನ್ನು ಕುರಿತು ಬರೆಯಲು ಶಬ್ದಗಳು ಸೋಲುತ್ತವೆ." ಇದು ತೋಂಟದಾರ್ಯ ಮಠದ ಬಿರುದು.

ಶಿವಣ್ಣನವರು ಈ ಗೆರೆಯನ್ನು ದಾಟಿದವರಲ್ಲ. ಹಾಗೆ ತೊಡಗಿಸಿಕೊಂಡಿದ್ದಾರೆ. ಹೀಗಾಗಿ ವೀರಶೈವ ಸಾಹಿತ್ಯ ಮತ್ತು ಧರ್ಮದ ಪ್ರಾಚೀನ ಕೃತಿಗಳು ಹೊರಬರಲು ಕಾರಣವಾಯಿತು.

ಇನ್ನೊಂದು ಮಾತನ್ನು ಶ್ರೀ ತೋಂಟದಾರ್ಯ ಮಠ, ಗದಗ ಬಗ್ಗೆ ಹೇಳುವುದೆಂದರೆ– ಕೋಮು ಸೌಹಾರ್ದತೆಯನ್ನು ಕಾಯ್ದುಕೊಂಡು ಬಂದ ವೀರಶೈವ ಮಠಗಳಲ್ಲಿ ಅಗ್ರಪಂಕ್ತಿಯಲ್ಲಿ ಇದೆ. ಶ್ರೀ ಸ್ವಾಮಿಗಳ ಮತ್ತು ಮಠದ ಬಗ್ಗೆ ದೇಶಾದ್ಯಂತ ಹೆಸರಿದೆ. ೨೦೦೨ ದ ಕೋಮುಸೌಹಾರ್ದತಾ ಪ್ರಶಸ್ತಿಯು ಶ್ರೀ ಸ್ವಾಮಿಗಳಿಗೆ ಬಂದಿದೆ. ಇದು ಅಖಿಲ ಭಾರತ ಮಟ್ಟದ ಪ್ರಶಸ್ತಿಯಾಗಿದ್ದು ಇನ್ನೊಂದು ವಿಶೇಷ. ಈ ಮಠಕ್ಕೆ ಇನ್ನೊಂದು ಅನ್ವರ್ಥಕ ಹೆಸರು ಪುಸ್ತಕಗಳನ್ನು ಪ್ರಕಟಿಸುವ ಮಠ ಅಥವಾ ಪುಸ್ತಕ ಸ್ವಾಮೀಜಿ ಎಂದೇ ಶ್ರೀಗಳನ್ನು ಸಂಬೋಧಿಸುವರು. ಅವರ ಹಾಗೆ ಪುಸ್ತಕಗಳನ್ನು ಓದಿದವರು ಮತ್ತು ತಿಳಿವಳಿಕೆಯುಳ್ಳವರು ಮತ್ತೊಬ್ಬರಿಲ್ಲ ಎಂದೇ ಹೇಳಬೇಕು. ಅವರ ಭಾಷಣವೂ ಕೂಡ ಅಷ್ಟೇ ಪ್ರಸಿದ್ಧ.

### ೪.೨.೧೧.೧೫.೧ : ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಹಸ್ತಪ್ರತಿಸೂಚಿ, ಸಂಪುಟ ೧

ಪ್ರಸ್ತುತ ಸೂಚಿಯಲ್ಲಿ ಗದಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದಲ್ಲಿನ ಸಂಗ್ರಹದ ೪೩೩ ಓಲೆ ಹಾಗೂ ಕಾಗದ ಕಟ್ಟುಗಳಿಗೆ ಸಂಬಂಧಿಸಿದ ವಿವರಗಳನ್ನು ದಾಖಲಿಸಲಾಗಿದೆ. ಇಲ್ಲಿನ ಕನ್ನಡ ಕೃತಿ ಸಂಖ್ಯೆ ೧೧೪೧. ಕನ್ನಡ ಲಿಪಿಯಲ್ಲಿರುವ ಸಂಸ್ಕೃತ. ತೆಲುಗು. ಮರಾಠಿ. ಹಿಂದಿಯ ಕೃತಿ ಸಂಖ್ಯೆ ೨೫೬. ಇಲ್ಲಿರುವ ಒಟ್ಟು ಕೃತಿ ಸಂಖ್ಯೆ ೧೩೯೭.

ಇಲ್ಲಿನ ಸಂಗ್ರಹದಲ್ಲಿ 'ಕರ್ನಾಟಕ ಕವಿ ಚರಿತೆ' ಯಲ್ಲಿ ಉಕ್ತರಾಗದ ಹಲವಾರು ಲೇಖಕರು ಹಾಗೂ ಕೃತಿಗಳಿವೆ. ಈ ಮುಂದಿನ ಕ್ರಮಾಂಕದ ಲೇಖಕರು ಕವಿ ಚರಿತ್ರೆಯ ಸಂಪುಟಗಳಲ್ಲಿಲ್ಲ. ೨೪, ೨೫, ೨೭, ೩೫, ೪೬, ೫೨, ೮೦, ೮೫, ೯೩, ೧೨೪, ೧೨೬, ೧೭೯, ೧೯೬, ೨೦೨, ೨೦೩, ೨೨೭, ೨೩೧, ೨೩೯, ೨೪೦, ೨೪೩, ೨೬೩, ೨೬೮, ೨೯೦, ೩೦೬, ೩೦೮, ೩೦೯, ೩೩೭, ೩೩೯, ೪೬೩, ೫೦೦, ೫೨೬, ೫೩೧, ೫೫೦, ೫೫೧, ೫೯೯, ೬೫೨, ೬೬೨, ೬೬೭, ೭೧೦, ೭೩೮, ೭೫೧, ೭೭೦, ೭೭೩, ೮೧೬, ೮೭೧, ೮೮೯, ೯೧೫, ೯೨೧, ೯೫೧, ೯೬೨, ೯೮೩, ೯೮೬, ೯೯೩, ೧೦೦೭, ೨೨೩೪ ಇತ್ಯಾದಿ.

ಕವಿಚರಿತೆಯಲ್ಲಿ ಉಕ್ತರಾಗಿರುವ ಕೆಲವು ಲೇಖಕರ ಹೆಚ್ಚಿನ ಕೃತಿಗಳನ್ನು ಈ ಮುಂದೆ ಸೂಚಿಸಿದೆ. ೯೬, ೧೨೫, ೧೮೧, ೩೫೮, ೬೦೨, ೮೬೨, ೧೦೧೩.

ಕವಿಚರಿತೆಯಲ್ಲಿ ಉಕ್ತವಾಗದ ಕೃತಿಗಳು.

೫೨, ೯೩, ೧೭೯, ೧೮೧, ೧೯೬, ೧೯೭, ೨೩೧, ೨೪೦, ೨೬೨, ೨೬೮, ೩೦೭, ೩೦೮, ೫೦೦, ೫೨೬, ೫೩೩, ೫೩೬, ೫೫೦, ೬೧೮, ೭೭೦, ೭೭೩, ೮೬೩, ೮೭೧, ೯೧೫, ೯೫೧, ೯೬೨, ೯೬೩, ೯೮೩, ೯೮೬, ೧೦೧೩, ೧೧೩೪ ಇತ್ಯಾದಿ.

ಕೊನೆಯ ಅನುಬಂಧದಲ್ಲಿ ಕನ್ನಡ ಲಿಪಿಯಲ್ಲಿರುವ ಸಂಸ್ಕೃತ, ತೆಲುಗು, ಮರಾಠಿ, ಹಿಂದಿಯ ಕವಿಗಳ ಕೃತಿಗಳ ಅಕಾರಾದಿ ಪಟ್ಟಿಯನ್ನು ಕೊಟ್ಟಿದೆ.

ಈ ಸೂಚಿಯು ಪ್ರಾಚೀನ ಕನ್ನಡ ಸಾಹಿತ್ಯದ ಗುರಿಯಾದ ಧರ್ಮವೇ ಈ ಕೃತಿಗಳ ಪರಿಶೀಲನೆಯಲ್ಲಡಗಿದೆ. ಹೀಗಾಗಿ ನಮ್ಮ ವಾಙ್ಮಯ ಜೈನ, ವೀರಶೈವ, ಬ್ರಾಹ್ಮಣ ಧರ್ಮಗಳಿಗೆ ಬರೆದ ಸಾಹಿತ್ಯಿಕ ವ್ಯಾಖ್ಯಾನವಾಗಿದೆ.

## ೪.೨.೧೧.೧೫.೨ : ವೀರಶೈವ ಅಪ್ರಕಟಿತ ಗ್ರಂಥಸೂಚಿ

ಕನ್ನಡ ಸಾಹಿತ್ಯಕ್ಕೆ ಮೂಲ ಪ್ರೇರಣೆಗಳಲ್ಲೊಂದಾದ ಧರ್ಮದ ಪಾತ್ರ ಹಿರಿದಾಗಿದೆ. ಧಾರ್ಮಿಕ ಹಿನ್ನೆಲೆಯಲ್ಲಿ ರಚಿತವಾಗಿರುವ ಕೃತಿಗಳ ಕೂಡಲಸಂಗಮವೇ ಪ್ರಾಚೀನ ಕನ್ನಡ ಸಾಹಿತ್ಯ ಜೈನ ಕೃತಿಗಳು ಸದ್ಯದಲ್ಲಿ ಉಪಲಬ್ಧ ಪ್ರಾಚೀನ ಕೃತಿ ಶ್ರೇಣಿಗೆ ಸಂಬಂಧಿಸಿವೆ. ಅನಂತರ ವೀರಶೈವ ಹಾಗೂ ವೈದಿಕ ಕೃತಿಗಳು ರಚಿತವಾಗಲಾರಂಭಿಸಿದವು. ಹತ್ತೊಂಬತ್ತನೆಯ ಶತಮಾನದಲ್ಲಿ ಕ್ರೈಸ್ತಮತಕ್ಕೆ ಸಂಬಂಧಿಸಿದ ಕೃತಿಗಳು ವಿಪುಲವಾಗಿ ತಲೆದೋರಿವೆ.

ವೀರಶೈವ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕೃತಿರಚನೆ ಕ್ರಿ. ಶ. ೧೧ - ೧೨ ನೆಯ ಶತಮಾನದಿಂದ ಕನ್ನಡದಲ್ಲಿ ಕಂಡುಬರುತ್ತದೆ. ಪ್ರಾರಂಭ ಕಾಲದ ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ, ಜೇಡರ ದಾಸಿಮಯ್ಯ ಮೊದಲಾದವರು ವಚನ ಪ್ರಕಾರದ ಆದ್ಯರಾಗಿದ್ದಾರೆ. ಉಪಲಬ್ದ ಕೃತಿರೂಪದ ರಚನೆಗಳಲ್ಲಿ ಕೊಂಡಗುಳಿ ಕೇಶಿರಾಜನ (ಕ್ರಿ. ಶ. ೧೧೦೭ - ೧೧೩೨) ' ಮಂತ್ರ ಮಹತ್ವದ ಕಂದ ', ' ಲಿಂಗಸ್ತೋತ್ರದ ಕಂದ ' ನವರತ್ನಮಾಲೆಗಳು ಲಭಿಸಿದ್ದು, ಅವು ಕಂದವೃತ್ತಗಳಲ್ಲಿವೆ. ಇಲ್ಲಿಂದ ಮುಂದೆ ಶತ ಶತಮಾನಗಳು ಗತಿಸಿದಂತೆಲ್ಲ ವೀರಶೈವ ಕೃತಿಗಳು ವಿಪುಲ ಸಂಖ್ಯೆಯಲ್ಲಿ ರಚಿತಗೊಂಡಿವೆ. ಉಪಲಬ್ಧವಿರುವ ಕೃತಿಗಳ ಸಂಗ್ರಹಗಳನ್ನು ಹಲವಾರು, ಗುರುಮಠಗಳಲ್ಲಿ, ವಿಶ್ವವಿದ್ಯಾಲಯಗಳ ಹಸ್ತಪ್ರತಿ ಭಂಡಾರಗಳಲ್ಲಿ, ವೈಯಕ್ತಿಕ ಸಂಗ್ರಹಗಳಲ್ಲಿ ಇಂದಿಗೂ ಕಾಣಬಹುದಾಗಿದೆ. ಇವುಗಳಲ್ಲಿ ಹಲವಾರು ಕೃತಿಗಳು ಅಚ್ಚಾಗಿವೆ. ಪ್ರಕಟವಾಗಿರುವ ಕೃತಿಗಳಿಗಿಂತಲೂ ಅಪ್ರಕಟಿತವಾದ ಕೃತಿರಾಶಿಯೇ ಬೃಹತ್ ಪ್ರಮಾಣದಲ್ಲಿದೆ. ಹೀಗೆ ಅಪ್ರಕಟಿತವಾಗಿರುವ ಹಾಗೂ ಉಲ್ಲೇಖಗಳಲ್ಲಿ ಉಳಿದು ಬಂದಿರುವ ಕೃತಿಗಳನ್ನು ವಿದ್ವಾಂಸರ ಸಂಶೋಧನೆಯ ಅನುಕೂಲಕ್ಕಾಗಿ ಒಂದೆಡೆ ಕೂಡಿಸಿಕೊಡಲು ಮಾಡಿದ ಪ್ರಯತ್ನದ ಫಲವೇ ಪ್ರಸ್ತುತ ವೀರಶೈವ ಅಪ್ರಕಟಿತ ಗ್ರಂಥಸೂಚಿ.

ಪ್ರಸ್ತುತ ಸೂಚಿಯನ್ನು ಕ್ರಿ. ಶ. ೧೯೦೦ ರ ವರೆಗಿನ ಕಾಲಮಾನದ ವರೆಗೆ ರಚಿತವಾಗಿರುವ ಕೃತಿಗಳನ್ನು ಗಮನಿಸಿ ಸಿದ್ಧಪಡಿಸಲಾಗಿದೆ. ಸೂಚಿ ಅಕಾರಾದಿ ಕ್ರಮದಲ್ಲಿದ್ದು, ಇದರಲ್ಲಿ ೭ ಉಪ ವಿಭಾಗಗಳಿವೆ.

೧. ಕ್ರಮ ೨. ಕೃತಿಯ ಹೆಸರು ೩. ಕೃತಿಕಾರ ೪. ಕಲೆ ೫. ಪ್ರಕಾರ ೬. ಕೃತಿಗಾತ್ರ ೭. ಕೃತಿ ಆಕರ

ಈ ಸೂಚಿಯ ರಚನೆಗೆ ಕರ್ನಾಟಕ ಕವಿಚರಿತೆಯ ಸಂಪುಟಗಳು, ಮದ್ರಾಸ್, ಮೈಸೂರು, ಧಾರವಾಡ, ಮೂಡಬಿದ್ರಿ, ಉಸ್ಮಾನಿಯಾ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿಗಳು, 'ವಚನ ವಾಙ್ಮಯ ಭಂಡಾರ' (ಕ. ವಿ. ವಿ., ಧಾರವಾಡ) ದಲ್ಲಿನ ಸಂಗ್ರಹಗಳು, ಹಲವಾರು ಪತ್ರಿಕೆಗಳು, ಉಲ್ಲೇಖಗಳು, ವೈಯಕ್ತಿಕ ಸಂಗ್ರಹಗಳ ವಿವರಗಳನ್ನು ಬಳಸಿಕೊಳ್ಳಲಾಗಿದೆ.

### ೪.೨.೧೧.೧೫.೩ : ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು, ಸಂಪುಟ - ಒಂದು

- ಹಸ್ತಪ್ರತಿಯಲ್ಲಿ ೨೩೧೬ ಕೃತಿಗಳ ಉಲ್ಲೇಖಗಳಿವೆ. ಕೃತಿಗಳನ್ನು ಅಕಾರಾದಿ ಕ್ರಮದಲ್ಲಿ ಸೂಚಿಯಲ್ಲಿ ಅಳವಡಿಸಲಾಗಿದೆ.
- ಎಲ್ಲ ಕೃತಿಗಳನ್ನು ದಪ್ಪ ಅಕ್ಷರಗಳಲ್ಲಿ ಕೊಟ್ಟಿದೆ.
- ಕೃತಿಯ ಹೆಸರು, ಕರ್ತೃ, ಕಾಲಗಳನ್ನು ಮೊದಲು ಒಂದು ಪಂಕ್ತಿಯಲ್ಲಿ ಕೊಟ್ಟಿದೆ.
- ಅನಂತರ ಕೃತಿಯ ಕ್ರಮಾಂಕ ಹಾಗೂ ಉಪಲಬ್ಧ ಪ್ರತಿಗಳಲ್ಲಿರುವ (ಕೃತಿ ಪ್ರತಿಯಾದ) ಕಾಲೋಲ್ಲೇಖವನ್ನು ಪ್ರತಿವರ್ಷದ ಸಂಖ್ಯೆಗಳಲ್ಲಿ ಕೊಟ್ಟಿದೆ.
- ಮುಂದಿನ ಪಂಕ್ತಿಗಳಲ್ಲಿ ಕೃತಿಯ ಆದಿ ಹಾಗೂ ಅಂತ್ಯಗಳನ್ನು ಪ್ರತ್ಯೇಕ ಸಾಲುಗಳಲ್ಲಿ ಕೊಟ್ಟಿದೆ.
- ಇಲ್ಲಿ (ಅಂ) ಸಂಕೇತ ಅಂತ್ಯವನ್ನು ಸೂಚಿಸುತ್ತದೆ. ಒಂದು ಕೃತಿಗೆ ಸಂಬಂಧಿಸಿದ ಕಾಲೋಲ್ಲೇಖವಿರುವ ಪ್ರತಿಗಳನ್ನು ಒಂದೆಡೆ ತಂದು ಅತಿ ಪ್ರಾಚೀನ ಕಾಲೋಲ್ಲೋಖದ ಪ್ರತಿಯನ್ನು ಮೊದಲು ಸೂಚಿಸಿ ಅನಂತರದಲ್ಲಿ ಅದರ ಮುಂದಿನ ಕಾಲೋಲ್ಲೇಖದ ಪ್ರತಿಗಳನ್ನು ಕ್ರಮವಾಗಿ ಜೋಡಿಸಿದೆ.
- ಶಕವರ್ಷದ ಕಾಲೋಲ್ಲೇಖದ ಪ್ರತಿಗಳ ನಂತರ ಚಿಕ್ಕ ಚಿಕ್ಕ ಅಡ್ಡಗೆರೆಗಳ ಒಂದು ಪಂಕ್ತಿ ಇದೆ. ಅನಂತರ ಶಕವರ್ಷದ ಉಲ್ಲೇಖವಿದೆ ಆದರೆ ಇತರ ಕಾಲ ವಿವರಗಳಿರುವ ಪ್ರತಿಗಳನ್ನು ಸೂಚಿಸಿದೆ.
- ಪ್ರತಿಗಳ ಸಂಗ್ರಹಣ ಸ್ಥಳಗಳ ಅಕಾರಾದಿ ಇದೆ.
- ಕೃತಿಗಳಿಗೆ ಟೀಕೆ ಇದ್ದರೆ ಮೊದಲ ಪಂಕ್ತಿಯಲ್ಲಿ ಕೃತಿ, ಕರ್ತೃ, ಕಾಲಗಳನ್ನು ಎರಡನೆ ಪಂಕ್ತಿಯಲ್ಲಿ ಕೃತಿಯ ಕ್ರಮಾಂಕ, ಟೀಕಾಕಾರ ಹಾಗೂ ಕಾಲಗಳನ್ನು ಕೊಟ್ಟಿದೆ.

- ಆದಿ ಮತ್ತು ಅಂತ್ಯದಲ್ಲಿ ನಕ್ಷತ್ರ ಚಿಹ್ನೆ ಇದ್ದರೆ ಅದು ' ಶ್ರೀ ಗುರು ಬಸವಲಿಂಗಾಯ ನಮಃ ' ಎಂಬುದನ್ನು ಸಂಕೇತಿಸುತ್ತದೆ.
- ಶಕವರ್ಷಗಳನ್ನು ಉಲ್ಲೇಖಿಸುವಲ್ಲಿ [ ] ಚೌಕ ಕಂಸವಿದ್ದರೆ ಈ ಕಾಲ ಆ ಚೌಕಟ್ಟಿನಲ್ಲಿ ಮುಂದಿನ ಕೃತಿಯಲ್ಲಿ ಉಲ್ಲೇಖಿತವಾಗಿರುವ ಕಾಲವೆಂದು ಸೂಚಿತವಾಗಿರುತ್ತದೆ.
- ಪ್ರತಿ ಕೃತಿಯ ಆಕರವನ್ನು ಆ – ಆ ಆ ಪುಟದ ಅಡಿ ಭಾಗದಲ್ಲಿ ಕ್ರಮಾಂಕದೊಡನೆ ಸೂಚಿಸಿದೆ. ಇಲ್ಲಿನ ಸಂಕೇತಗಳ ವಿವರಣೆ (ಅನುಬಂಧ ೧೦ ರಲ್ಲಿ ಇದೆ).
- ಕೃತಿಗಳ ಹೆಸರನ್ನು ಕೊಡುವಲ್ಲಿ ಆ – ಆ ಕೃತಿಗಳನ್ನು ಹೆಸರಿಸಿರುವ ವಿವಿಧ ರೂಪಗಳನ್ನು ಅಕಾರಾದಿಯಾಗಿ ಸಂಯೋಜಿಸಿದೆ.
- ಕೃತಿಗಳಲ್ಲಿ ಕರ್ತೃವಿಲ್ಲದೆ ಕೇವಲ ಅಂಕಿತವಿರುವೆಡೆ ಅಂಕಿತಗಳನ್ನು ಚೌಕ ಕಂಸಗಳಲ್ಲಿ ಸೂಚಿಸಿದೆ.
- ಕೃತಿಯ ಛಂದೋರೂಪಗಳನ್ನು ಸೂಚಿಸುವಲ್ಲಿ ಸಂಕೇತಾಕ್ಷರಗಳಿದ್ದು ಅವುಗಳ ವಿವರ ಇಂತಿದೆ.

  ಗ–ಗದ್ಯ; ಟೀ–ಟೀಕು; ಭಾ. ಷ.–ಭಾಮಿನಿ ಷಟ್ಪದಿ; ಯ–ಯಕ್ಷಗಾನ; ವಾ.ಷ–ವಾರ್ಧಕ ಷಟ್ಪದಿ; ವೃ.–ವೃತ್ತ; ಸಾಂ–ಸಾಂಗತ್ಯ; ಹಾ–ಹಾಡು.
- × × × = ತ್ರುಟಿತ ಭಾಗ.
- ಉಲ್ಲೇಖಿಸುವದನ್ನು ಬಿಟ್ಟಿದೆ ಎಂಬುದನ್ನು ಸೂಚಿಸುತ್ತದೆ.
- ಒಟ್ಟು ೧೧ ಅನುಬಂಧಗಳಿವೆ.
- ವಿಭಾಗಗಳನ್ನು ಮಾಡಲಾಗಿದೆ– ಆಡಳಿತ, ಕೃತಿದರ್ಶನಗಳು,. ಗ್ರಂಥ ಸಂಪಾದನೆ, ನಾಣ್ಯಗಳು ಪಂಚಾಂಗಾದಿ, ವಿವಿಧ ವೃತ್ತಿಗಳು, ಸಂಕೀರ್ಣ ವಿಭಾಗಗಳಲ್ಲಿ ಪುಸ್ತಕಗಳ ಸೂಚಿಯನ್ನು ನೀಡಿದೆ. ಇದು ಸಂಶೋಧಕರಿಗೆ ಹೆಚ್ಚಿನ ವಿವರಗಳನ್ನು ನೀಡುವಲ್ಲಿ ಸಹಾಯಕ ಎಂದು ಭಾವಿಸಬಹುದು. ಒಟ್ಟಾರೆ ಇಂತಹ ಕೃತಿಗಳನ್ನು ಅಭ್ಯಾಸಕ್ಕೆ ಆಯ್ದುಕೊಳ್ಳುವವರಿಗೆ ಹಳಗನ್ನಡ ಸಾಹಿತ್ಯದ ಪರಿಚಯ ಮತ್ತು ಸಂಜ್ಞೆ, ಸಂಕೇತಗಳನ್ನು ಅವರು ಮೊದಲು ಅಧ್ಯಯನ ಮಾಡಿ ಕೃತಿಯನ್ನು ನಂತರ ಪರಿಶೀಲಿಸಬೇಕು.

ಇನ್ನೂ ಅನೇಕ ಸೂಚಿಗಳನ್ನು ಶಿವಣ್ಣನವರು ರಚಿಸಿದ್ದಾರೆ. ನಮಗೆ ಉಪಲಬ್ಧ ಈ ಮೂರು ಕೃತಿಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಈ ಮೂರು ಪುಸ್ತಕಗಳ ಪ್ರಕಾಶಕರು ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ.

### ೪.೨.೧೧.೧೫.೪ : ತಾಡವಾಲೆ ಗ್ರಂಥಸೂಚಿ

೧೯೯೧ ರಲ್ಲಿ ಪ್ರಕಟಿಸಲ್ಪಟ್ಟ ಗ್ರಂಥಸೂಚಿಯಲ್ಲಿ ನಾಲ್ಕು ಭಾಷೆಗಳ ಗ್ರಂಥಗಳಿವೆ. ಅವುಗಳು ಈ ಕೆಳಗಿನಂತಿವೆ :

| | | |
|---|---|---|
| ಭಾಗ - ೧ : | ಕನ್ನಡ ಲಿಪಿಯ ಗ್ರಂಥಗಳು | ೩೪ |
| ಭಾಗ - ೨ : | ತಿಗಳಾರಿ (ತುಳು) ಲಿಪಿಯ ಗ್ರಂಥಗಳು | ೧೧೨ |
| ಭಾಗ - ೩ : | ಮಲೆಯಾಳ ಲಿಪಿಯ ಗ್ರಂಥಗಳು | ೨ |
| ಭಾಗ - ೪ : | ನಂದಿ ನಾಗರಿ ಲಿಪಿಯ ಗ್ರಂಥಗಳು | ೪೫ |
| | ಒಟ್ಟು | ೧೯೩ |

ಹೀಗೆ ಒಟ್ಟು ನೂರಾ ತೊಂಬತ್ತೂರು ಲಾಡವಾಲೆ ಗ್ರಂಥಗಳ ಬಗ್ಗೆ ಮಾಹಿತಿ ನೀಡಲಾಗಿದ್ದು ವಿಶೇಷವಾಗಿ ನಾಲ್ಕು ಭಾಗಗಳನ್ನು ವಿಂಗಡಿಸಿ ಆ ಭಾಷೆಯಲ್ಲಿ ಬಂದ ಗ್ರಂಥಗಳನ್ನು ವಿಂಗಡಿಸಿ ಅವುಗಳಿಗೆ ಸ್ಥಳೀಯ ಅಂಕಿಗಳನ್ನು (ತಮ್ಮ ಅನುಕೂಲಕ್ಕಾಗಿ) ನೀಡಿ ವಿವರಿಸಿದ್ದಾರೆ. ವಿದ್ವಾಂಸ ಪ್ರೊ. ಎಂ. ರಾಜಗೋಪಾಲಾಚಾರ್ಯರ ಉಪಯುಕ್ತ ಮುನ್ನುಡಿ ಇದೆ. ಇದನ್ನು ಪ್ರಕಟಿಸಿದವರು ಎ. ಜಿ. ಎಂ. ಕಾಲೇಜು. ಉಡುಪಿ. ಎಂ. ರಾಜಗೋಪಾಲಚಾರ್ಯರು ಇದನ್ನು ಸಂಪಾದಿಸಿ ಹಸ್ತಪ್ರತಿಗಳಲ್ಲಿಯ ದೋಷಗಳು ಮತ್ತು ಅವುಗಳನ್ನು ಸುಧಾರಿಸಿಕೊಳ್ಳುವದನ್ನು ವಿವರಿಸಿ ಹೇಳಿದ್ದಾರೆ. ಇದೊಂದು ಅಭ್ಯಾಸಪೂರ್ಣ ಮುನ್ನುಡಿ ಮತ್ತು ಪ್ರಸ್ತಾವನೆಗಳನ್ನೊಳಗೊಂಡಿದೆ.

### ೪.೨.೧೧.೧೫.೫ : ಡಾ. ಎಂ. ಎಂ. ಕಲಬುರ್ಗಿ : ಶಾಸನಸೂಚಿ ಸಂಪುಟಗಳು

೧. ಧಾರವಾಡ ಜಿಲ್ಲೆಯ ಶಾಸನಸೂಚಿ – ೧೯೭೫

೨. ವಿಜಾಪೂರ ಜಿಲ್ಲೆಯ ಶಾಸನಸೂಚಿ – ೧೯೭೬

೩. ಧಾರವಾಡ ತಾಲೂಕಿನ ಶಾಸನಗಳು – ೧೯೭೫

ಇವುಗಳ ಪ್ರಕಟಣೆಯನ್ನು ಕನ್ನಡ ಅಧ್ಯಯನ ಪೀಠ. ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ ಪ್ರಕಟಿಸಿದ್ದಾರೆ.

ಕನ್ನಡ ಶಾಸನಗಳನ್ನು ಅಧ್ಯಯನ ಮಾಡಿ ಪರಿಷ್ಕರಿಸಿ. ಸಂಯೋಜನೆ ಮಾಡಿ. ಹೊಸ ಆವಿಷ್ಕಾರಗಳೊಂದಿಗೆ ಅವುಗಳಿಗೆ ಪ್ರಕಟಣೆಯ ರೂಪ ನೀಡಿದ್ದಾರೆ. ದಕ್ಷಿಣ ಕರ್ನಾಟಕದಲ್ಲಿ ಡಾ. ಎಂ. ಚಿದಾನಂದಮೂರ್ತಿ. ಕೆ. ವಿ. ರಮೇಶ. ಶೇಷಶಾಸ್ತ್ರಿ ಹೆಸರಾಗಿದ್ದಾರೆ. ಉತ್ತರ ಕರ್ನಾಟಕದಲ್ಲಿ ಡಾ. ಎಂ. ಎಂ. ಕಲಬುರ್ಗಿಯವರದು ದೊಡ್ಡ ಹೆಸರು. ಧಾರವಾಡ ಕನ್ನಡ ಅಧ್ಯಯನ ಪೀಠದಲ್ಲಿ ಕೂಡಾ ಕನ್ನಡ ಶಾಸನಗಳ (೧೦)ಹಸ್ತಪ್ರತಿ ಸೂಚಿಗಳನ್ನು ಹೊರತಂದಿದ್ದಾರೆ. ಈ ಮೂರು ಕೃತಿಗಳಲ್ಲಿ ಒಟ್ಟು ಶಾಸನಗಳು ಹೀಗಿವೆ :

# ವಿಜಾಪುರ ಜಿಲ್ಲೆಯ ಶಾಸನಸೂಚಿ


ಸಂಪಾದಕರು

ಡಾ. ಎಂ. ಎಂ. ಕಲಬುರ್ಗಿ

ಸಹಾಯಕ ಸಂಶೋಧಕರು

ಶ್ರೀ ಬಿ. ಆರ್. ಹಿರೇಮಠ

ಶ್ರೀ ಸಿ. ಆಯ್. ಪಾವಟೆ

ಶ್ರೀಮತಿ ಮಧು ಕಿತ್ತೂರ





ಕನ್ನಡ ಅಧ್ಯಯನಪೀಠ

ಪಠ್ಯಪುಸ್ತಕ ನಿರ್ದೇಶನಾಲಯ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

೧೯೭೬


## ಪರಿವಿಡಿ

ಧಾರವಾಡ ಜಿಲ್ಲೆಯ ಶಾಸನಗಳು – ೨೫೦೦

ವಿಜಾಪೂರ ಜಿಲ್ಲೆಯ ಶಾಸನಗಳು – ೧೦೬೧

ಧಾರವಾಡ ತಾಲೂಕಿನ ಶಾಸನಗಳು – ೭೪

ಹೀಗೆ ಅವರಷ್ಟು ಶಾಸನಗಳ ಬಗ್ಗೆ ಅಭ್ಯಾಸ, ಅಧ್ಯಯನ ಮಾಡಿದವರು ಬೇರೆ ಇದ್ದಾರೆಯೇ ಎಂದು ಸಂಶಯ ಬರುತ್ತದೆ. ಈ ದಿಶೆಯಲ್ಲಿ ಅವರ ಶಾಸನ ಸಂಪದ ಕೃತಿಯು ಸೇರಿದೆ. ಅದು ಶಾಸನಗಳ ಕುರಿತು ಇದೆ. ಅನೇಕರು ಶಾಸನಗಳ ಕುರಿತು ಬೇರೆ ಬೇರೆ ಅವಧಿಯಲ್ಲಿ ಅಭ್ಯಾಸ ಮಾಡಿದ್ದಾರೆ. ಅವರಲ್ಲಿ ಡಾ. ಬಿ. ಆರ್. ಹಿರೇಮಠ, ಚನ್ನಕ್ಕ ಎಲಿಗಾರ, ಜೆ. ಎಂ. ನಾಗಯ್ಯ, ಡಾ. ದೋವರಕೊಂಡಾರೆಡ್ಡಿಯವರು ಈಗಾಗಲೆ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಶಾಸನಗಳನ್ನು ಕುರಿತು ಕನ್ನಡ ವಿಶ್ವವಿದ್ಯಾಲಯ, ಹಂಪಿಯಿಂದ ಪುಸ್ತಕಗಳನ್ನು ಪ್ರಕಟಿಸಿದ್ದಾರೆ, ಅವುಗಳನ್ನು ಇಲ್ಲಿ ಗಮನಿಸಲಾಗಿದೆ. ಶಾಸನಸೂಚಿಗಳು ಎಂದು ಶೀರ್ಷಿಕೆಗಳಿದ್ದುದರಿಂದ ಸೂಚಿ ಸಾಹಿತ್ಯದ ಅಭ್ಯಾಸಕ್ಕೆ ಅನುಕೂಲವಾಗಲಿ ಎಂಬ ದೃಷ್ಟಿಯಿಂದ ಕೃತಿಗಳನ್ನು ಪರಿಶೀಲಿಸಲಾಗಿದೆ. ಇನ್ನೊಂದು ಅವುಗಳ ಪರಿಶೀಲನೆಗೆ ನನ್ನ ಅಭ್ಯಾಸ ಅಷ್ಟು ಸಮಂಜಸವಾಗುವುದಿಲ್ಲ ಎಂಬ ಒಂದು ಕಲ್ಪನೆಯನ್ನು ಇಲ್ಲಿ ಇರಿಸಿಕೊಳ್ಳಲಾಗಿದೆ.

## ೪.೨.೧೨ : ಏಕ ವ್ಯಕ್ತಿಯ (ವೈಯಕ್ತಿಕ) ಪ್ರಕಟಣೆಗಳು

## ೪.೨.೧೨.೧ : ಹಾ ಮಾ ನಾ ಹೊತ್ತಗೆಗಳು

'ಹಾಮಾನಾ ಹೊತ್ತಗೆಗಳು' ಎಂಬ ಕೃತಿ ಹಾ. ಮಾ. ನಾಯಕ ಅವರು ಬರೆದ, ಸಂಪಾದಿಸಿದ ಲೇಖನಗಳು, ಪ್ರಶಸ್ತಿಗಳು, ಗೌರವಗಳು, ಅವರಿಗೆ ಅರ್ಪಿಸಿದ ಗ್ರಂಥಗಳು ಹೀಗೆ ನಾನಾ ನಮೂನೆಗಳಲ್ಲಿ ಬರೆದ ಒಟ್ಟು ಗ್ರಂಥಗಳ 'ಗ್ರಂಥಸೂಚಿ' ಹಾಮಾನಾ ಹೊತ್ತಗೆಗಳು. ಹಾ. ಮಾ. ನಾಯಕ ಕನ್ನಡ ಸಾಹಿತಿ, ಅಂಕಣಕಾರ, ಸಂಪಾದಕ, ಅವರ ಕುರಿತು ಈ ಗ್ರಂಥ ಸಮಗ್ರ ಕೃತಿಗಳ ಗ್ರಂಥಸೂಚಿ. ಇಲ್ಲಿ ನೂರ ಇಪ್ಪತ್ನಾಲ್ಕು ನಮೂನೆಗಳು ಏಳು ಆಕಾರಗಳಲ್ಲಿವೆ.

ಇದನ್ನು ಸಂಪಾದಿಸಿದವರು ಕನ್ನಡದ ಮತ್ತೊಬ್ಬ ಸಾಹಿತಿ, ಲೇಖಕಿ, ಕವಯಿತ್ರಿ ಡಾ. ಎಚ್. ಎಸ್. ಸುಜಾತಾ ಅವರು. ಅವರು ಮೈಸೂರಿನ ಡಿ. ಬನುಮಯ್ಯ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕಿ.

ಇದನ್ನು ಪ್ರಕಟಿಸಿದ ಪ್ರಕಾಶನ ಸಂಸ್ಥೆ ಸುಹಾಸ ಪ್ರಕಟಣೆಗಳು –ಮೈಸೂರು - ೫೭೦ ೦೨೪.

ಹಾ ಮಾ ನಾ ಹೊತ್ತಗೆಗಳು ಏಕವ್ಯಕ್ತಿ ವಿಷಯಕ ವರ್ಗೀಕೃತ ವರ್ಣನಾತ್ಮಕ ಗ್ರಂಥಸೂಚಿ. ಈ ಸೂಚಿಯಲ್ಲಿ ಹಾಮಾನಾ ಅವರ ಈ ವರೆಗೆ ಪ್ರಕಟಗೊಂಡ ಕನ್ನಡ ಹಾಗೂ ಇಂಗ್ಲೀಷ ಗ್ರಂಥಗಳ ಬೇರೆ ಭಾಷೆಗಳಿಗೆ ಹೋದ

ಅವರ ಕೃತಿಗಳ ಮತ್ತು ಅವರನ್ನು ಕುರಿತ ಕನ್ನಡ ಗ್ರಂಥವೊಂದರ ವಿವರಗಳನ್ನು ಒಟ್ಟುಗೂಡಿಸಿದೆ. ಈ ಸೂಚಿ ಗ್ರಂಥಗಳಿಗೆ ಮಾತ್ರ ಸೀಮಿತ. ಹಾಮಾನಾ ಅವರ ಬಿಡಿ ಲೇಖನಗಳು ಇಲ್ಲಿನ ವಿವರಗಳಲ್ಲಿ ಸೇರಿಲ್ಲ.

ಹಾಮಾನಾ ಅವರ ನೂರ ಹದಿನೈದು ಕನ್ನಡ ಕೃತಿಗಳಲ್ಲಿ ಮೂರು ಕಥೆ, ಚಿತ್ರ, ಪ್ರಬಂಧಗಳು; ಒಂದು ಜೀವನ ಚರಿತ್ರೆ; ಮೂರು ಮಕ್ಕಳ ಸಾಹಿತ್ಯ; ಹದಿನಾಲ್ಕು ವಿಚಾರ ವಿಮರ್ಶೆ; ಹದಿಮೂರು ಅಂಕಣ, ಆಕಾಶವಾಣಿ ಚಿಂತನ; ಮೂರು ಅನುವಾದ; ನಲವತ್ತೊಂಬತ್ತು ಸಂಪಾದಿತ; ಹದಿಮೂರು ಪಠ್ಯಪುಸ್ತಕಗಳು; ಹದಿನಾರು ಸೂಚಿ, ಕೋಶ, ಪರಾಮರ್ಶನ ಕೃತಿಗಳು ಐದು ಇಂಗ್ಲೀಷ ಕೃತಿಗಳಲ್ಲಿ ನಾಲ್ಕು ಸಂಪಾದಿತ ಹಾಗೂ ಒಂದು ಸಂಶೋಧನೆ. ಅವರ ಮೂರು ಪುಸ್ತಕಗಳು ಮೂರು ಬೇರೆ ಬೇರೆ ಭಾಷೆಗಳಿಗೆ ಹೋಗಿವೆ. ಅವರನ್ನು ಕುರಿತ ಒಂದು ಕನ್ನಡ ಕೃತಿ ಹೊರಬಂದಿದೆ. ಈ ಹನ್ನೆರಡು ವಿಭಾಗಗಳ ಒಟ್ಟು ನೂರ ಇಪ್ಪತ್ನಾಲ್ಕು ನಮೂದುಗಳು ಇಲ್ಲಿ ಸೇರಿವೆ. ಈ ವಿಭಾಗಗಳ ಶೇಕಡಾವಾರು ವಿವರಗಳು ಕ್ರಮವಾಗಿ ಇಂತಿವೆ : ೨.೪೨; ೦.೮೦; ೨.೪೨; ೧೧.೨೯; ೧೦.೪೮; ೨.೪೨; ೩೯.೫೨; ೧೦.೪೮; ೧೨.೯೦; ೪.೦೩; ೨.೪೨; ೦.೮೦.

ಹನ್ನೆರಡು ವಿಭಾಗಗಳಲ್ಲೂ ನಮೂದುಗಳ ವಿವರಗಳಿಗಿಂತ ಮೊದಲು ಆಯಾ ವಿಭಾಗಕ್ಕೆ ಸಂಬಂಧಿಸಿದಂತೆ ಟಿಪ್ಪಣಿ ರೂಪದ ಒಂದು ವಿಶಿಷ್ಟ ಘಟಕವಿದೆ. ಇಡೀ ಭಾಗಕ್ಕೆ ಅನ್ವಯವಾಗುವ ಕೆಲವು ಮುಖ್ಯ ಲಕ್ಷಣಗಳನ್ನೂ ಸೂತ್ರಗಳನ್ನೂ ಇಲ್ಲಿ ಅಂಕಿಅಂಶಗಳಿಂದ ಗುರುತಿಸಿದೆ. ಅಂಕಿ ಅಂಶಗಳಿಗೆ ಸಂಬಂಧಿಸಿದಂತೆ ಹಲವು ದಾಖಲೆಗಳನ್ನು ಇಲ್ಲಿ ಕೊಟ್ಟಿದೆ ಮತ್ತು ಕ್ರಮಾಂಕಗಳು ಮಧ್ಯೆ ಒಡೆಯದೆ ಮುಂದುವರಿಯುತ್ತವೆ. ಇಂಗ್ಲಿಷಿನ ಐದು ನಮೂದುಗಳು ಸೇರಿದಂತೆ ಎಲ್ಲ ನಮೂದುಗಳ ಕ್ರಮಾಂಕಗಳು ಕನ್ನಡದಲ್ಲಿಯೇ ಇರುತ್ತವೆ. ಇಂಗ್ಲೀಷಿನ ನಮೂದುಗಳ ಮಿಕ್ಕ ವಿವರಗಳು ಮಾತ್ರ ಸಂಖ್ಯೆಗಳೂ ಸೇರಿದಂತೆ ಇಂಗ್ಲೀಷಿನಲ್ಲಿ ಇರುತ್ತವೆ. ಪ್ರತಿ ನಮೂದಿನ ವಿವರಗಳಲ್ಲಿ ಎರಡು ಭಾಗಗಳಿವೆ. ಮೊದಲ ಸಾಲಿನಲ್ಲಿ ನಮೂದಿನ ಕ್ರಮಾಂಕವಿರುತ್ತದೆ. ನಮೂದಿನ ಈ ಸಂಖ್ಯೆ ಆಯಾ ಕೃತಿಯನ್ನು ಪ್ರತಿನಿಧಿಸುತ್ತದೆ. ಎರಡನೆಯ ಸಾಲಿನಲ್ಲಿ ಪುಸ್ತಕದ ಹೆಸರು ದಪ್ಪ ಅಕ್ಷರಗಳಲ್ಲಿ ಇರುತ್ತದೆ. ಮುಂದಿನ ಸಾಲುಗಳಲ್ಲಿ ಪ್ರಕಾಶನದ ಹೆಸರು, ವಿಳಾಸಗಳು, ಪ್ರಕಟಣೆಯ ವರ್ಷ, ಪುಸ್ತಕದ ಆಕಾರ, ಪುಟ ಸಂಖ್ಯೆಗಳು : ಬೆಲೆ - ಈ ಕ್ರಮದಲ್ಲಿ ವಿವರಗಳಿರುತ್ತವೆ. ಸಾಧಾರಣ ಹಾಗೂ ಕ್ಯಾಲಿಕೋ ಬೆಲೆಗಳೆರಡೂ ಸೂಚಿತವಾಗಿದ್ದಲ್ಲಿ ಎರಡನ್ನೂ ಕೊಟ್ಟಿದ. ಡಾಲರ್, ಪೌಂಡ್ ಇತ್ಯಾದಿ ವಿದೇಶೀ ನಾಣ್ಯ ಪದ್ಧತಿಯನ್ನು ಕೊಟ್ಟಿದ್ದರೆ ಅದನ್ನೂ ದಾಖಲಿಸಿದೆ. ಬೆಲೆ ಸೂಚಿತವಾಗಿಲ್ಲದಿದ್ದಲ್ಲಿ ಹಾಗೆಂದು ತಿಳಿಸಿದೆ. ಈ ನಾಲ್ಕು ಅಂಶಗಳನ್ನೂ ಅರ್ಧವಿರಾಮ ಚಿಹ್ನೆಯಿಂದ ಪ್ರತ್ಯೇಕಿಸಿದೆ. ಇದು ಮೊದಲ ಭಾಗ. ಎರಡನೆಯ ಭಾಗದಲ್ಲಿ ಪುಸ್ತಕದಲ್ಲಿರುವ ಲೇಖನ : ಪ್ರಬಂಧ ಮುಂತಾದವುಗಳ ಹೆಸರು, ಪುಸ್ತಕ, ಯಾರಿಗೆ ಅರ್ಪಿತ ಎಂಬ ವಿವರ, ಹೊದಿಕೆಯ ಚಿತ್ರ, ಮುಖಚಿತ್ರ, ಒಳಚಿತ್ರ ಹಾಗೂ ವರ್ಣವಿನ್ಯಾಸಗಳಿಗೆ

ಕಾರಣರಾದ ಕಲಾವಿದರ ಹೆಸರು. ಪುಸ್ತಕ ಅನುವಾದಗೊಂಡಿದ್ದರೆ ಪಠ್ಯವಾಗಿದ್ದರೆ ಆ ವಿವರಗಳು ಇರುತ್ತವೆ. ಅನುವಾದಿತ ಗ್ರಂಥಗಳಲ್ಲಿ ಮೂಲ ಲೇಖಕರ ಹಾಗೂ ಮೂಲ ಗ್ರಂಥದ ಹೆಸರುಗಳನ್ನು ತಿಳಿಸಿದೆ. ಪಠ್ಯ ಕೃತಿಗಳಲ್ಲಿ ಪಠ್ಯವಾಗಿದ್ದ ತರಗತಿ, ವರ್ಷಗಳನ್ನು ಕೊಟ್ಟಿದೆ. ಸಂಪಾದಿತ ಗ್ರಂಥಗಳಲ್ಲಿ ಲೇಖನಗಳ ಲೇಖನದಾರರ ಹೆಸರುಗಳನ್ನೂ ಸಹ ಸಂಪಾದಕರಿದ್ದಲ್ಲಿ ಅವರ ಹೆಸರನ್ನೂ ಸೂಚಿಸಿದೆ. ಬೇರೆಯವರ ಮುನ್ನುಡಿಗಳಿದ್ದರೆ ಅವನ್ನೂ ಸೂಚಿಸಿದೆ. ಅನುಬಂಧ ಕೋಶಗಳಿದ್ದಲ್ಲಿ ಅವನ್ನು ಕೊಟ್ಟಿದೆ. ಒಂದಕ್ಕಿಂತ ಹೆಚ್ಚು ಮುದ್ರಣಗಳನ್ನು ಕಂಡ ಪುಸ್ತಕಗಳ ವಿವರಗಳನ್ನು ನೀಡುವಾಗ ಸಾಮಾನ್ಯವಾಗಿ ಇತ್ತೀಚಿನ ಮುದ್ರಣವನ್ನು ಗಮನಿಸಿದರೆ ಹಾಗೂ ಮುದ್ರಣ ಸಂಖ್ಯೆಯನ್ನು ಎ. ಮು. (ಎರಡನೆಯ ಮುದ್ರಣ). ಮೂ. ಮು. (ಮೂರನೆಯ ಮುದ್ರಣ). ನಾ. ಮು. (ನಾಲ್ಕನೆಯ ಮುದ್ರಣ). ಐ. ಮು. (ಐದನೆಯ ಮುದ್ರಣ). ಆ. ಮು. (ಆರನೆಯ ಮುದ್ರಣ) ಎಂದು ಸೂಚಿಸಿದೆ. ಇಲ್ಲಿನ ಮೊದಲ ಆರು ವಿಭಾಗಗಳ ಒಟ್ಟು ಮೂವತ್ತೇಳು ನಮೂದುಗಳಲ್ಲಿ 'ರವೀಂದ್ರನಾಥ ಠಾಕೂರ್' (೪) ಕೃತಿಯ ನಾಲ್ಕನೆಯ ಮುದ್ರಣವನ್ನು ನೋಡಿಲ್ಲ. ಮೊದಲ ಎರಡನೆಯ ಮೂರನೆಯ ಹಾಗೂ ಐದನೆಯ ಮುದ್ರಣಗಳನ್ನು ನೋಡಿದ್ದೇನೆ. ಜೊತೆಗೆ 'ಗುರುದೇವ ರವೀಂದ್ರರು' (೬) ಕೃತಿಯ ಮೊದಲ ಮುದ್ರಣ ಸಹ ನನಗೆ ನೋಡಲು ಸಿಗಲಿಲ್ಲ. ಆ ಪುಸ್ತಕದ ಎಲ್ಲ ಪುನರ್ಮುದ್ರಣಗಳನ್ನೂ ನೋಡಿದ್ದೇನೆ. ಮಿಕ್ಕ ಮೂವತ್ತೈದು ನಮೂದುಗಳು ಎಲ್ಲ ಮುದ್ರಣ: ಪುನರ್ಮುದ್ರಣಗಳನ್ನು ನೋಡಿದ್ದೇನೆ. ಆದ್ದರಿಂದ ಮೊದಲ ಮೂವತ್ತೇಳು ನಮೂದುಗಳ ಇತ್ತೀಚಿನ ಮುದ್ರಣವನ್ನು ಪರಿಗಣಿಸಿದ್ದರೂ ಮುಂಚಿನ ಮುದ್ರಣಗಳ ವರ್ಷ. ಪ್ರಕಾಶನ ಸಂಸ್ಥೆಗಳನ್ನು ತಿಳಿಸಿದೆ. ಪ್ರಸ್ತುತ ಮುದ್ರಣದಲ್ಲಿ ಬದಲಾವಣೆಯಿದ್ದಲ್ಲಿ ಸೂಚಿಸಿದೆ. ಆನಂತರದ ಆರು ವಿಭಾಗಗಳ ಒಟ್ಟು ಎಂಬತ್ತೇಳು ನಮೂದುಗಳಲ್ಲಿ ಪುನರ್ಮುದ್ರಣ ಕಂಡ ಕೃತಿಗಳಿದ್ದಲ್ಲಿ ಅಂಥವುಗಳ ಉಪಲಬ್ಧ ಮುದ್ರಣವನ್ನು ಮಾತ್ರ ಗಮನಿಸಿದೆ. ಅದು ಎಷ್ಟನೆಯ ಮುದ್ರಣ ಎಂಬುದನ್ನು ತಿಳಿಸಿದೆ. ಮಿಕ್ಕ ಮುದ್ರಣಗಳು ನೋಡಲೂ ಸಿಗದುದರಿಂದ ಅವುಗಳ ವಿವರಗಳನ್ನು ಕೊಡಲಾಗಿಲ್ಲ.

ಬೇರೆ ಭಾಷೆಗೆ ವಿಭಾಗದ ಮೂರು ಅನುವಾದಿತ ಕೃತಿಗಳಲ್ಲಿ ಪರಿವಿಡಿಯ ವಿವರಗಳು ಮೂಲದಲ್ಲಿದ್ದಂತೆಯೇ ಇವೆ. ಆ ಕಾರಣದಿಂದ ಮತ್ತೆ ವಿವರಗಳನ್ನು ನೀಡಿಲ್ಲ. ಮೂರು ನಮೂದುಗಳ ಮೂಲಗಳನ್ನು ಅವುಗಳ ಕ್ರಮಾಂಕಗಳೊಂದಿಗೆ ಸೂಚಿಸಿದೆ. ಸಂಪಾದಿತ (ಇತರರೊಡನೆ) : ಪಠ್ಯ ಹಾಗೂ ಸೂಚಿ, ಕೋಶ ಪರಾಮರ್ಶನ ವಿಭಾಗಗಳಲ್ಲಿ ಹಾಮಾನಾ ಅವರಿಗೆ ಸಹಸಂಪಾದಕರಿದ್ದಾರೆ. ಇವುಗಳಲ್ಲಿ ಮೊದಲನೆಯ ವಿಭಾಗದಲ್ಲಿ ಹಾಮಾನಾ ಅವರಿಗೆ ಸಹಸಂಪಾದಕರಿದ್ದಾರೆ. ಇವುಗಳಲ್ಲಿ ಮೊದಲನೆಯ ವಿಭಾಗದಲ್ಲಿನ ಯಾವ ನಮೂದಿನಲ್ಲೂ ಅಧ್ಯಕ್ಷರ ಪ್ರಸಕ್ತಿ ಇಲ್ಲ. ಆದ್ದರಿಂದ ಇಲ್ಲಿ ಸಹ ಸಂಪಾದಕರ ಹೆಸರನ್ನು ಮಾತ್ರ ಹೇಳಿದೆ. ಪ್ರತಿ ನಮೂದಿಗೂ ಹಾಮಾನಾ ಹೆಸರನ್ನು ಹೇಳಹೋಗಿಲ್ಲ. ಪಠ್ಯ ವಿಭಾಗದ ಎಲ್ಲ ನಮೂದುಗಳಿಗೂ ಸೂಚಿ, ಕೋಶ, ಪರಾಮರ್ಶನ ವಿಭಾಗದ

ಅನೇಕ ನಮೂದುಗಳಿಗೂ ಸಂಪಾದಕ ಸಮಿತಿ : ಮಂಡಲಿಯ ಯಾರಾದರೊಬ್ಬರು ಅಧ್ಯಕ್ಷರಾಗಿದ್ದಾರೆ. ಕೆಲವು ಬಾರಿ ಈ ಅಧ್ಯಕ್ಷರು ಹಾಮಾನಾ ಅವರೇ ಆಗಿದ್ದಾರೆ. ಈ ಅಂಶವನ್ನು ತಿಳಿಯಪಡಿಸುವ ಕಾರಣದಿಂದ ಈ ಎರಡು ವಿಭಾಗಗಳ ನಮೂದುಗಳ ವಿವರ ನೀಡುವಾಗ ಹಾಮಾನಾ ಅವರು ಅಧ್ಯಕ್ಷರಾಗಿರಲಿ, ಬೇಲಿಯವರು ಅಧ್ಯಕ್ಷರಾಗಿರಲಿ, ಸಮಿತಿಯ ಎಲ್ಲ ಸದಸ್ಯರ ಹೆಸರನ್ನು ಹೇಳಿದೆ. ಅಂದರೆ ಈ ಎರಡು ವಿಭಾಗಗಳ ಪ್ರತಿ ನಮೂದಿನಲ್ಲಿ ಹಾಮಾನಾ ಅವರ ಹೆಸರು ಸೂಚಿತವಾಗಿದೆ. ಪುನರಾವರ್ತನೆ ಎಂಬಂತೆ ಮೇಲುನೋಟಕ್ಕೆ ತೋರಿದರೂ ಇದು ಅನಿವಾರ್ಯವಾಗಿದೆ. ಇಂಗ್ಲೀಷಿನಲ್ಲಿ ಹಾಮಾನಾ ರಚಿಸಿರುವ ಕೃತಿಗಳ ಸಂಖ್ಯೆ ಐದು ಮಾತ್ರ. ಆದ್ದರಿಂದ ಇವುಗಳನ್ನು ಮತ್ತೆ ಒಳವಿಭಾಗಗಳಾಗಿ ಗುರುತಿಸಿಲ್ಲ. ಆಯಾ ನಮೂದಿತ ಪ್ರಕಾರವನ್ನು ಅಲ್ಲಲ್ಲೇ ಸೂಚಿಸಿದೆ. ವಿಭಾಗಕ್ಕೆ ಟಿಪ್ಪಣಿಯಲ್ಲಿಯೂ ಗುರುತಿಸಿದೆ.

ಎಲ್ಲ ನಮೂದುಗಳ ವಿವರಗಳ ನಂತರ ಹಾಮಾನಾ ಅವರ ಕನ್ನಡ ಮತ್ತು ಇಂಗ್ಲೀಷ ಹಸ್ತಾಕ್ಷರಗಳ ಮಾದರಿಗಳನ್ನು ಕೊಟ್ಟಿದೆ. ಅನಂತರದ ಅನುಬಂಧಗಳಲ್ಲಿ ಹಾಮಾನಾ ಅವರ ಜೀವನದ ಕೆಲವು ಮುಖ್ಯ ವರ್ಷಗಳು : ಹಾಮಾನಾ ಹೊತ್ತಗೆಗಳು (ಅಕಾರಾದಿ) : ಹಾಮಾನಾ ಹೊತ್ತಗೆಗಳು (ವಿಷಯ ವಿಭಾಗೀಯ) : ಹಾಮಾನಾ ಹೊತ್ತಗೆಗಳು (ವರ್ಷಾವಾರು) : ಸಹ ಸಂಪಾದಕರು : ಅರ್ಪಣೆ ಪಡೆದವರು ಕಲಾವಿದರು : ಪ್ರಕಾಶಕರು ಮರುಮುದ್ರಣಗಳು : ಬಹುಮಾನಗಳು, ಪದಕಗಳು, ಪ್ರಶಸ್ತಿಗಳು – ಈ ಹತ್ತು ಸೂಚಿಗಳನ್ನು ಕೊಟ್ಟಿದೆ. ಈ ಸೂಚಿಗಳ ಸಿದ್ಧತೆಯಲ್ಲಿ ಎಲ್ಲ ನೂರ ಇಪ್ಪತ್ನಾಲ್ಕು ನಮೂದುಗಳು ಪರಿಗಣಿತವಾಗಿವೆ.

ಹಾಮಾನಾ ಅವರನ್ನು ಕುರಿತು ಬರೆದಿರುವ ಒಂದು ಅಪ್ರಕಟಿತ ಕವನವನ್ನು ಕೃತಿಯ ಪ್ರಾರಂಭದಲ್ಲಿ ಕೊಟ್ಟಿದೆ. ಹಾಮಾನಾ ಅವರ ವ್ಯಕ್ತಿತ್ವವನ್ನು ಬಲ್ಲಂತೆ ಅದು ಚಿತ್ರಿಸುವುದರಿಂದ ಅದರ ಸೇರ್ಪಡೆ ಇಲ್ಲಿ ಸೂಕ್ತ ಎಂಬ ನಂಬಿಕೆ ನನ್ನದು.

ಹಾಮಾನಾ ಅವರ ಪುಸ್ತಕಪಟ್ಟಿಯಲ್ಲಿ ಮೊದಲಿನಿಂದ ಸೇರಿರುವ ಶಾಂತಿಸ್ವರೂಪ ಭಟ್ನಾಗರ (೩೬) ಕೃತಿಯಲ್ಲಿ ಹಾಮಾನಾ ಅವರ ಹೆಸರಿಲ್ಲ. ಹಾಮಾನಾ ಅವರನ್ನೇ ವಿಚಾರಿಸಿ ಅವರೇ ಅನುವಾದಕರೆಂಬುದನ್ನು ಸಂಪಾದಕರು ಖಚಿತಪಡಿಸಿಕೊಂಡಿದ್ದಾರೆ. ' ಸಾಹಿತ್ಯ ಸಂಪುಟ ' (೯೮) ದಲ್ಲಿ ಸಂಪಾದಕ ಸಮಿತಿಯ ಯಾವ ಸದಸ್ಯರ ಹೆಸರೂ ಇಲ್ಲ. ಪುನಃ ನಾನು ಹಾಮಾನಾ ಅವರ ಮೊರೆ ಹೊಕ್ಕೆ, ಸಹಾಯ ಪಡೆದೆ. ಕನ್ನಡ ಡಿಂಡಿಂಮ (೪೦) ದಲ್ಲಿಯೂ ಹಾಮಾನಾ ಅವರ ಹೆಸರಿಲ್ಲವಾದರೂ ಪ್ರಕಾಶಕರ ಮಾತಿನಲ್ಲಿ ಹಾಮಾನಾ ಸಂಪಾದಕತ್ವದ ಸ್ಪಷ್ಟ ಸೂಚನೆಯಿದೆ. ಹಾಮಾನಾ ಪ್ರಧಾನ ಸಂಪಾದಕರಾಗಿರುವ ಕೆಲವು ಕೃತಿಗಳಲ್ಲಿ ಉದಾ : ವಿಜ್ಞಾನ ಸಾಹಿತ್ಯ ನಿರ್ಮಾಣ (೬೪), ಶಾಸ್ತ್ರ ಸಾಹಿತ್ಯ ನಿರ್ಮಾಣ (೬೬) ಹಾಮಾನಾ ಸಂಪಾದಕತ್ವವನ್ನು ಬೇರೆಯಾಗಿ ಪುನಃ ಸೂಚಿಸಿಲ್ಲವಾದರೂ ಮುನ್ನುಡಿಗಳಲ್ಲಿ ಸೂಚನೆ ದೊರೆಯುತ್ತದೆ.

ಹಾಮಾನಾ ಅವರ ಕೃತಿಗಳ ಸ್ವರೂಪಕ್ಕೆ ಸಂಬಂಧಿಸಿದಂತೆ ಸೂಚಿಶಾಸ್ತ್ರದ ದೃಷ್ಟಿಯಿಂದ ಪೂರಕ ಮಾಹಿತಿಯನ್ನು ಈ ಮಾತುಗಳಲ್ಲಿ ಹೇಳಬಹುದು : ನಿರ್ದಿಷ್ಟತೆ ನಿಖರತೆಗಳು ಹಾಮಾನಾ ಅವರಲ್ಲಿ ಎದ್ದು ಕಾಣುವ ಗುಣ, ಅವರ ಪುಸ್ತಕಗಳಲ್ಲಿ ಗ್ರಾಂಥಿಕ ವಿವರಗಳು ಮಸುಕಾಗಿರುವುದಿಲ್ಲ.[೫೫]

೪.೨.೧೨.೨ : **ಐಬಿಎಚ್ ಗ್ರಂಥಾವಳಿ** : ವೆಂಕಟರಮಣಯ್ಯ (ಟಿ. ವಿ.) : (೧೯೯೮ ರ ವರೆಗಿನ ಪುಸ್ತಕಗಳ ವಿವರಣಾತ್ಮಕ ಪಟ್ಟಿ), ಬೆಂಗಳೂರು, ಐಬಿಎಚ್, ೧೯೯೯.[೫೬]

• • • • •

ಇದು ಐಬಿಎಚ್ ಪ್ರಕಟಿಸಿದ ಈ ವರೆಗೆ ಪ್ರಕಟಿಸಿರುವ ಗ್ರಂಥಗಳ ವರ್ಣನಾತ್ಮಕ ಸೂಚಿ. ಕನ್ನಡದಲ್ಲಿ ಇದುವರೆಗೂ ಪ್ರಕಟವಾಗಿರುವ ಸೂಚಿಗಳಲ್ಲೆಲ್ಲ ವಿಶಿಷ್ಟವಾದದ್ದು. ಇದು ಐಬಿಎಚ್ ಸಂಸ್ಥೆಯ ಬಹುತೇಕ ಎಲ್ಲಾ ಪ್ರಕಟಣೆಗಳನ್ನು ಸ್ಥೂಲವಾಗಿ ಪರಿಚಯಿಸಿಕೊಳ್ಳುವದು ಮತ್ತು ಪರಿಚಯಿಸಿಕೊಡುವದು. ಇದರಲ್ಲಿ ೧೮೦೦ ಶೀರ್ಷಿಕೆಗಳು ನಮೂದಾಗಿವೆ. ಇಪ್ಪತ್ತು ವರ್ಷಗಳಲ್ಲಿ ಐಬಿಎಚ್ ಪ್ರಕಟಿಸಿದ ಹೆಚ್ಚೂ ಕಡಿಮೆ ಎಲ್ಲ ಪುಸ್ತಕಗಳೂ ಇಲ್ಲಿ ಪಟ್ಟಿಗೊಂಡಿವೆ. ಇದರಲ್ಲಿ ೧೯೭೬ ಕನ್ನಡ ಪುಸ್ತಕಗಳೂ ಉಳಿದವು ಇಂಗ್ಲೀಷ್ ಮತ್ತು ತೆಲುಗಿನಲ್ಲಿವೆ. ಇಲ್ಲಿ ಸೇರಿಸಲಾದ ಎಲ್ಲ ಶೀರ್ಷಿಕೆಗಳನ್ನು ಡ್ಯುಯಿ ದಶಾಂಕ ಪದ್ಧತಿಯಂತೆ ವರ್ಗೀಕರಣ (ವಿಷಯಾನುಸಾರ) ಮಾಡಿ ವಿಂಗಡಿಸಿಕೊಡಲಾಗಿದೆ.

ಉದಾ :

೦೦೦ – ಸಾಮಾನ್ಯ ಗ್ರಂಥಗಳು

೧೦೦ – ತತ್ವಜ್ಞಾನ

೨೦೦ – ಧರ್ಮ

ಅನೇಕ ಅನುಬಂಧಗಳನ್ನು ಮತ್ತು ಸೂಚಿಗಳನ್ನು ಕೊಡಲಾಗಿದೆ. ಉದಾ : ವಿಷಯಸೂಚಿ, ಲೇಖನಸೂಚಿ, ಶಿರೋನಾಮೆ ಸೂಚಿ, ಬಹುಮಾನಿತ ಕೃತಿಗಳ ಸೂಚಿ, ಪುನರ್ಮುದ್ರಿತ ಕೃತಿ ಸೂಚಿ, ಪ್ರಕಟಣೆಗಳ ವಿಷಯಾನುಸಾರ ಸೂಚಿ, ಇತ್ಯಾದಿ.

## ಮಾಸ್ತಿಯವರ ಪುಸ್ತಕಗಳು : ನಾಯಕ ಹಾ. ಮಾ.

**ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಣೆ, ೧೯೮೪ :**

೧೯೮೩ ರ ವರೆಗೆ ಪ್ರಕಟವಾದ ಮಾಸ್ತಿಯವರ ಮತ್ತು ಅವರ ಸಾಹಿತ್ಯ ಕುರಿತ ವಿವಿಧ ಕನ್ನಡ ಮತ್ತು ಇಂಗ್ಲೀಷ ಗ್ರಂಥಗಳ ವಿವರ. ಬೇರೆ ಬೇರೆ ಭಾಷೆಗಳಲ್ಲಿ ಅವರು ಸಂದರ್ಭಕ್ಕನುಸಾರವಾಗಿ ಪ್ರಕಟಿಸಿದ ಗ್ರಂಥಗಳ ವಿವರ ಇಲ್ಲಿದೆ. ಮಾಸ್ತಿಯವರ ಬಗ್ಗೆ ಅನೇಕ ವಿವರಗಳನ್ನು ಮತ್ತು ಅವರ ಸಾಹಿತ್ಯ ಸಂಶೋಧನೆಗೆ ಅತ್ಯಂತ ಪ್ರಯೋಜನಕಾರಿ ಗ್ರಂಥಸೂಚಿ.

## ಸಮಾಜ ವಿಜ್ಞಾನ ಲೇಖಕ ದರ್ಶಕ :

೧೯೮೬ ರಿಂದ ಡಾ. ಎಸ್. ಆರ್. ಗುಂಜಾಳರು ಇಲ್ಲಿಯವರೆಗೆ ಕನ್ನಡದ ಹತ್ತು ಜನಪ್ರಿಯ ಮಾಸಿಕ, ವಾರ ಮತ್ತು ದಿನಪತ್ರಿಕೆಗಳನ್ನು ಅವಲೋಕಿಸಿದ ಲೇಖನಸೂಚಿಯಾಗಿ ಇದು ಬಹಳ ಉಪಯುಕ್ತವೆನಿಸಿದೆ. ಕನ್ನಡ ಪತ್ರಿಕೆಗಳಲ್ಲಿ ಸಮಾಜ ವಿಜ್ಞಾನವನ್ನು ಕುರಿತು ಪ್ರಕಟವಾದ ಲೇಖನಗಳ ಸೂಚಿ ಇದಾಗಿದೆ. ಸಂಶೋಧಕರಿಗೆ, ಲೇಖಕರಿಗೆ ಮಾರ್ಗದರ್ಶಿಯಾಗಿರುವ ಈ ಲೇಖನಸೂಚಿ ಈ ದಿಶೆಯಲ್ಲಿ ಕನ್ನಡದಲ್ಲಿ ಮಾತ್ರ ಸ್ತುತ್ಯಾರ್ಹ ಪ್ರಯತ್ನ. ಇದರ ಹಿಂದಿನ ರೂವಾರಿ ಡಾ. ಎಸ್. ಆರ್. ಗುಂಜಾಳ ಅವರು ಅಭಿನಂದನಾರ್ಹರು.

### ೪.೨.೧೨.೩ : ಕೃತಿ ಪರಿಚಯ - ೨೦೦೨

ಕೃತಿ ಪರಿಚಯ ಪ್ರಸಿದ್ಧ ಮನೋವೈದ್ಯ ಡಾ. ಸಿ. ಆರ್. ಚಂದ್ರಶೇಖರ ಅವರು ಮನೋವೈಜ್ಞಾನಿಕವಾಗಿ ಬರೆದಿರುವ ಸುಮಾರು ೧೩೮ ಕೃತಿಗಳ ಗ್ರಂಥಸೂಚಿಯಿದು.
ಹಂಪಾ ನಾಗರಾಜಯ್ಯ ಅಭಿಪ್ರಾಯ ಪಡುವಂತೆ –

"ಸಮಾಜದಲ್ಲಿ ಎಲ್ಲೆಲ್ಲೂ ಕಂಡುಬರುವ ಮನೋದೌರ್ಬಲ್ಯದ ಹಿನ್ನೆಲೆಯಲ್ಲಿ ಅದನ್ನು ನಿವಾರಿಸಿಕೊಳ್ಳಬಹುದಾದ ಮಾರ್ಗವನ್ನು ಲೇಖಕರು ತಿಳಿಯಾದ ಕನ್ನಡದಲ್ಲಿ ನಿರೂಪಿಸಿದ್ದಾರೆ. ಇದಕ್ಕಾಗಿ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ." ಎಂದು ವಿಶ್ವಾಸಾರ್ಹ ಮಾತುಗಳನ್ನು ಹೇಳಿದ್ದಾರೆ.

ಚಂದ್ರಶೇಖರ ಅವರು ಮನೋವೈದ್ಯರಾಗಿದ್ದು, ಅವರ ಗಮನಕ್ಕೆ ಬಂದ ಮಾನಸಿಕ ಅಸ್ವಸ್ಥತೆಗೆ ಒಳಗಾದವರ ಜೀವನದ ವೃತ್ತಾಂತಗಳನ್ನು ಸರಳ ಭಾಷೆ ಮತ್ತು ಸುಂದರ ನಿರೂಪಣೆಯಲ್ಲಿ, ಸಣ್ಣ ಕಥೆಗಳಂತೆ, ಕಥಾ ರೂಪದಲ್ಲಿ ಓದುಗರ ಮುಂದೆ ಇಟ್ಟಿದ್ದಾರೆ. ಮನೋವಿಜ್ಞಾನದ ಕೆಲವು ಅಂಶಗಳನ್ನು ಸರಳವಾಗಿ ಅಲ್ಲಲ್ಲಿ ವಿವರಿಸಿ, ಚಿಕಿತ್ಸೋಪಾಯಗಳನ್ನು ಉಲ್ಲೇಖಿಸಿರುವದು ಗಮನಾರ್ಹ. ಲೇಖಕರು ಮೂಲತಃ ವೈದ್ಯರಾಗಿದ್ದರೂ ಸಾಹಿತ್ಯದಲ್ಲಿರುವ ಅವರ ಅಭಿರುಚಿಯನ್ನು ಈ ಕೃತಿಗಳು ಎತ್ತಿ ತೋರಿಸುತ್ತವೆ. **ಸುಂದರ ಮುಖಪುಟ ಮತ್ತು ಮುದ್ರಣಗಳು ಹೊತ್ತಿಗೆಯ ಮೌಲ್ಯವನ್ನು ಎತ್ತಿ ತೋರಿಸಿವೆ.**

ಈ ಕೃತಿಯ ಇನ್ನೊಂದು ದೋಷವೆಂದರೆ ಲೇಖಕರ ಮಾತುಗಳಿಲ್ಲ, ಪರಿವಿಡಿ ಇಲ್ಲ, ಲೇಖಕ ಸೂಚಿ ಬೇಡವಾದರೂ ವಿಷಯಸೂಚಿಯನ್ನು ಇಡಬೇಕಾಗಿತ್ತು. ಹೀಗಾಗಿ ಓದುಗರಿಗೆ ಗಲಿಬಿಲಿಯಾಗುವದು ಸಹಜವಾದರೂ ಇಲ್ಲಿಯ ಪ್ರಕಟಿತ ಕೃತಿಗಳನ್ನು ತಮಗೆ ಸಿಗುತ್ತವೆಯಲ್ಲ ಎಂದು ಸಂತಸಪಡಬಹುದು. ಏನೇ ಆದರೂ ಒಬ್ಬ

ನವಕರ್ನಾಟಕ ಪ್ರಕಾಶನದ ೧೪೯ನೇ ಪ್ರಕಟಣೆ

# ಡಾ॥ ಸಿ. ಆರ್. ಚಂದ್ರಶೇಖರ್

# ಕೃತಿ ಪರಿಚಯ




**ಡಾ॥ ಸಿ. ಆರ್. ಚಂದ್ರಶೇಖರ್ ಅವರ ಬರಲಿರುವ ಕೃತಿಗಳು**

೧. ಅಪರಾಧ ಪ್ರವೃತ್ತಿ ಮನೋದೌರ್ಬಲ್ಯವೆ ? ಮನೋರೋಗ ಲಕ್ಷಣವೆ ?

೨. ನಮ್ಮ ಶರೀರ ೨೦೦ ಪ್ರಶ್ನೆಗಳು

೩. ಮನೋಲೋಕದ ಸುತ್ತ ಒಂದು ಸುತ್ತು

೪. ಕಲಿಕೆ, ನೆನಪು, ಪರೀಕ್ಷಾ ನಿರ್ವಹಣೆ ಉತ್ತಮಗೊಳಿಸುವುದು ಹೇಗೆ ?

೫. ವ್ಯಕ್ತಿಯ ನಡವಳಿಕೆಗಳನ್ನು ಬದಲಿಸುವುದು ಹೇಗೆ ?

## ಮಿದುಳು

**ಪ್ರಕಟಣಾ ವರ್ಷ** : ೧೯೭೯
**ಪ್ರಕಾಶಕರು** : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮
**ಪುಟಗಳು** : ೩೨ ಬೆಲೆ : ೭೫ ಪೈಸೆ (ಪ್ರತಿಗಳು ಲಭ್ಯವಿಲ್ಲ)

ಮಕ್ಕಳ ಅರಳುತ್ತಿರುವ ಪ್ರತಿಭೆಯ ವಿಕಾಸಕ್ಕೆ ನೆರವಾಗುವ ಉದ್ದೇಶದಿಂದ, ಕನ್ನಡ ಸಾಹಿತ್ಯ ಪರಿಷತ್ತು ಅಂತರರಾಷ್ಟ್ರೀಯ ಮಕ್ಕಳ ವರ್ಷದಲ್ಲಿ 'ನಲಿಯುವ ಮಕ್ಕಳ, ಕಲಿಯುವ ಪುಸ್ತಕಮಾಲೆ'ಯಲ್ಲಿ ಈ ಪುಸ್ತಕವನ್ನು ಪ್ರಕಟಿಸಿತ್ತು. ಬೆಲೆ ಕೇವಲ ೭೫ ಪೈಸೆಗಳು !

ಈ ಪುಸ್ತಕದಲ್ಲಿ, ಮಾಧ್ಯಮಿಕ ಶಾಲೆ - ಪ್ರೌಢಶಾಲಾ ಮಕ್ಕಳಿಗೆ ಅರ್ಥವಾಗುವ ಶೈಲಿ ಮತ್ತು ಭಾಷೆಯಲ್ಲಿ ಮಿದುಳಿನ ರಚನೆ, ಅದರ ಬೆಳವಣಿಗೆ, ವಿವಿಧ ಭಾಗಗಳು, ಈ ಭಾಗಗಳು ನಿರ್ವಹಿಸುವ ಕೆಲಸ-ಕೌಶಲಗಳು, ಮಿದುಳಿಗೆ ಬರುವ ಕಾಯಿಲೆಗಳು ಹಾಗೂ ಮಿದುಳನ್ನು ನಾವು ಹೇಗೆ ರಕ್ಷಿಸಿಕೊಳ್ಳಬೇಕೆಂದು ವಿವರಿಸಲಾಗಿದೆ. □

## ಮಗು ಮನಸ್ಸು ಮತ್ತು ಆರೋಗ್ಯ




**ಪ್ರಕಟಣಾ ವರ್ಷ** : ೧೯೮೦
**ಮರುಮುದ್ರಣ** : ೧೯೮೪
**ಪ್ರಕಾಶಕರು** : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು
**ಪುಟಗಳು** : ೧೦೦ ಬೆಲೆ : ರೂ. ೬ (ಪ್ರತಿಗಳು ಲಭ್ಯವಿಲ್ಲ)
**ಮನ್ನಣೆ** : ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ೧೯೮೦ರ ಶ್ರೇಷ್ಠ ಸಮಾಜ ವಿಜ್ಞಾನ ಕೃತಿ ಎಂದು.

ಡಾ॥ ಚಂದ್ರಶೇಖರ್‌ರವರ ಈ ಗ್ರಂಥದ ಹೆಸರು ಅನ್ವರ್ಥವಾಗಿರುವುದಲ್ಲದೆ ಇದನ್ನು ಪ್ರಕಟಿಸಿರುವ ಬೆಂಗಳೂರು ವಿಶ್ವವಿದ್ಯಾನಿಲಯದ ಕಾರ್ಯ ಸ್ತುತ್ಯಾರ್ಹವಾಗಿದೆ. ಇಷ್ಟೇ ಅಲ್ಲದೆ ಈ ಗ್ರಂಥವನ್ನು ಪುರಸ್ಕರಿಸಿ ಪ್ರಶಸ್ತಿ ನೀಡಿರುವ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಕಾರ್ಯ ಔಚಿತ್ಯಪೂರ್ಣವಾಗಿದೆ. ಒಂದು ಮಾತಿನಲ್ಲಿ ಹೇಳುವುದಾದರೆ ಕನ್ನಡದ ಸಾಹಿತ್ಯಕ್ಕೆ ಇದೊಂದು ಉಪಯುಕ್ತ ಕೊಡುಗೆ ಎನ್ನಬಹುದು.

ಮಕ್ಕಳ ಶ್ರೇಯೋಭಿವೃದ್ಧಿ, ಆರೋಗ್ಯಕರ ಮಾನಸಿಕ ಬೆಳವಣಿಗೆ, ಸಮತೋಲನ ವ್ಯಕ್ತಿತ್ವದ ವಿಕಾಸ ಹಾಗೂ ಅವರನ್ನು ಸತ್ಪ್ರಜೆಗಳನ್ನಾಗಿಸುವ ಕಾರ್ಯಕ್ರಮದಲ್ಲಿ ಅಭಿರುಚಿಯುಳ್ಳ ಪ್ರತಿಯೊಬ್ಬ ವ್ಯಕ್ತಿಯೂ ಒಮ್ಮೆಯಾದರೂ ಓದಲೇಬೇಕಾದ ಗ್ರಂಥ.

ಈ ಗ್ರಂಥ ಕಿರಿದಾದರೂ ವಸ್ತು ಮಹತ್ವಪೂರ್ಣವಾಗಿದೆ. ಲೇಖಕರ ಭಾಷೆ, ಹೇಳುವ ಶೈಲಿ ಬಹಳ ಸರಳವಾಗಿದೆ. ಅಲ್ಲಲ್ಲಿ ಹೇಳಿರುವ ವ್ಯಕ್ತಿ ವೃತ್ತಾಂತಗಳು ಸಂದರ್ಭೋಚಿತವಾಗಿವೆ.

ಮಕ್ಕಳಲ್ಲಿ ಕಂಡುಬರುವ ಮನೋಬೇನೆಗಳಾದ ಉನ್ಮಾದ, ನಿದ್ರಾಸಂಚಾರ, ನಿದ್ರೆಯ ತೊಂದರೆಗಳು, ಹಸಿವಾಗದಿರುವಿಕೆ, ಉಗ್ಗು ಮತ್ತಿತರ ವಾಕ್‌ದೋಷಗಳು, ಅನಿಯಂತ್ರಿತ ಮೂತ್ರತೆ, ಖಿನ್ನತೆ, ಅತಿಭಯ, ಉದ್ವೇಗ ಹಾಗೂ ಮನೋವಿಕೃತಿಗಳಾದ ಸ್ಕಿಜೋಫ್ರೇನಿಯಾ

ಲೇಖಕನಿಗೆ ೧೩೦ ಕೃತಿಗಳಿಗಿಂತಲೂ ಹೆಚ್ಚು ಬರೆದು ಅದು ವೈದ್ಯ ವಿಜ್ಞಾನದಲ್ಲಿ ಸಾಧಿಸಿದ ಹೆಗ್ಗಳಿಕೆಯೇ ಸರಿ. ಇದನ್ನು ಪ್ರಕಾಶಿಸಿದವರು ನವಕರ್ನಾಟಕ ಪ್ರಕಾಶನದವರು.[೫೭]

## ೪.೨.೧೨.೪ : ಆಯ್ದ ಕನ್ನಡ ಪುಸ್ತಕಗಳು

ಕನ್ನಡದಲ್ಲಿ ಪ್ರಪ್ರಥಮವಾಗಿ ಕಾಣಿಸಿಕೊಂಡ ಮೊದಲ ಪುಸ್ತಕ ೧೮೧೭ ರಲ್ಲಿ ಅದು ವಿಲಿಯಂ ಕೇರಿ ಅವರ A Grammer of the Curnatika Language ಎಂಬುದು ಕಲ್ಕತ್ತದ ಬಳಿಯ ಸೆರಾಂಪುರ (ಶ್ರೀರಾಮಪುರ) ನಲ್ಲಿ ಅಚ್ಚಾಯಿತು.

ಇದಾದ ನಂತರ ಕನ್ನಡದಲ್ಲಿ ಗ್ರಂಥಸೂಚಿಗಳ ವ್ಯವಸ್ಥಿತ ಪ್ರಯತ್ನ ನಡೆದಿಲ್ಲವೆಂದು ಹೇಳಬಹುದು.[೫೮] ೧೯೫೬ ರಲ್ಲಿ ಕೆ. ಎಸ್. ದೇಶಪಾಂಡೆಯವರ "ಆಯ್ದ ಕನ್ನಡ ಪುಸ್ತಕಗಳು" ೧೮೨೪ ರಿಂದ ೧೯೫೬ ರ ವರೆಗೆ ಕನ್ನಡದಲ್ಲಿ ಪ್ರಕಟಗೊಂಡ ಆಯ್ದ ಕೆಲವೇ ಪುಸ್ತಕಗಳ ಗ್ರಂಥಸೂಚಿ ೧೯೫೭ ರಲ್ಲಿ ಧಾರವಾಡದಲ್ಲಿ ಆಯೋಜಿಸಿದ್ದ ಮೂವತ್ತೊಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರದರ್ಶಿಸಲ್ಪಟ್ಟ ಕನ್ನಡ ಪುಸ್ತಕಗಳ ಪಟ್ಟಿ ಇದಾಗಿದೆ. ಇದೊಂದು ಸರ್ವಸಮಗ್ರ ಸೂಚಿಯಾಗದೆ ಹೋದರೂ ಆ ವೇಳೆಯಲ್ಲಿ ಪ್ರದರ್ಶಿಸಲ್ಪಟ್ಟ ಕನ್ನಡ ಪ್ರಚಲಿತ ಪುಸ್ತಕಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.[೫೯]

ಇಂತಹ ಅನೇಕ ಪ್ರಯತ್ನಗಳು ಕನ್ನಡದಲ್ಲಿ ಸಾಹಿತ್ಯದ ಬೆಳವಣಿಗೆಯನ್ನು ಸೂಚಿಸುತ್ತವೆ. ಇದೊಂದು ಮಾದರಿ ಪ್ರಯತ್ನ ಮಾತ್ರ. ನಂತರ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಪ್ರದರ್ಶಿಸಿದ ಪುಸ್ತಕಗಳ ಪಟ್ಟಿ ಅಲಭ್ಯ. ಈ ಒಂದು ಪ್ರಯತ್ನವನ್ನು ಕನ್ನಡ ಸಾಹಿತ್ಯ ಪರಿಷತ್ತು ಮುಂದುವರಿಸಬೇಕಾಗಿತ್ತು. ಒಮ್ಮೊಮ್ಮೆ ಅಪರೂಪವೆನ್ನುವಂತಹ ಕೃತಿಗಳು ಇಂತಹ ಸಮ್ಮೇಳನಗಳಲ್ಲಿ ಲಭ್ಯವಿರುತ್ತವೆ. ಹಸ್ತಪ್ರತಿಗಳು ಲಭ್ಯವಿರುತ್ತವೆ. ಅಂತಹ ಮಾಹಿತಿ ಇನ್ನೊಂದು ತಲೆಮಾರಿಗೆ ಅಥವಾ ಪೀಳಿಗೆಗೆ ಸಿಗುವುದಿಲ್ಲ.

## ೪.೨.೧೨.೫ : ಒಂದು ಸಾವಿರ ಕನ್ನಡ ಪುಸ್ತಕಗಳು

ಶೀರ್ಷಿಕೆಯೇ ತಿಳಿಸುವಂತೆ ಒಂದು ಸಾವಿರ ಗ್ರಂಥಗಳ ಪಟ್ಟಿಯನ್ನಷ್ಟೇ ಇಲ್ಲಿ ಕೊಡಲಾಗಿದೆ. ಈ ಸಾವಿರದ ಸಂಖ್ಯೆಯು ಕೇವಲ ಪ್ರಾಸಂಗಿಕವಾದುದ್ದಾಗಿದೆ. ಒಂದು ಸಾವಿರಕ್ಕಿಂತ ಹೆಚ್ಚಿಗೆ ಉತ್ತಮ ಪುಸ್ತಕಗಳಿಲ್ಲವೆಂದಾಗಲೀ, ಸಾವಿರಕ್ಕಿಂತ ಹೆಚ್ಚಿನ ಪುಸ್ತಕಗಳನ್ನು ಕೊಳ್ಳುವ ಅಗತ್ಯವಿಲ್ಲವೆಂದಾಗಲಿ ಅರ್ಥೈಸಬಾರದು. ಇಲ್ಲಿ ಸೂಚಿಗೆ ಆಯ್ಕೆ ಮಾಡಿಕೊಂಡ ಪುಸ್ತಕಗಳು ೧೯೫೮ ರಿಂದ ೧೯೯೯ ರ ವರೆಗೆ ಪ್ರಕಟಗೊಂಡ ಗ್ರಂಥಗಳನ್ನು ಆಯ್ದು ಬರೆದುಕೊಂಡು ಈ ಸೂಚಿಯನ್ನು ಪ್ರಕಟಿಸಲಾಗಿದೆ. ಈ ಸೂಚಿಯನ್ನು ಮುಂದುವರಿಸಿಕೊಂಡು ಹೋಗಬಹುದಾಗಿದೆ. ಅದಕ್ಕಾಗಿ ಹಲವು ಬಿಳಿ ಕಾಗದಗಳನ್ನು ಕೊನೆಯಲ್ಲಿ ಜೋಡಿಸಲಾಗಿದೆ.

ಇಲ್ಲಿ ಉಕ್ತವಾದ ಸಾವಿರ ಪುಸ್ತಕಗಳನ್ನು ಆಯುವಲ್ಲಿ ಅವುಗಳ ಸಾಹಿತ್ಯಿಕ ಗುಣ, ಲೇಖಕರ ಪ್ರಸಿದ್ಧಿ, ವಿಷಯದ ಮಹತ್ವ ಈ ಮಾತುಗಳನ್ನು ಲಕ್ಷ್ಯಕ್ಕೆ ತಂದುಕೊಂಡು ಆಯ್ಕೆಯು ಸಂಪೂರ್ಣವಾದದ್ದಾಗದೆ ಪ್ರಾತಿನಿಧಿಕವಾಗಿದ್ದರೆ ಸಾಕು ಎಂಬ ಧೋರಣೆಯನ್ನು ಇಟ್ಟುಕೊಳ್ಳಲಾಗಿದೆ. ಸ್ಥಾನಿಕ ಅನುಕೂಲತೆಯನ್ನು ಗಮನಿಸಿ ಗ್ರಂಥಗಳನ್ನು ಸಂದರ್ಭ ಗ್ರಂಥ, ಚರಿತ್ರೆ, ವಿಜ್ಞಾನ, ಲಲಿತಕಲೆಗಳು, ಸಾಹಿತ್ಯ (ಸಾಹಿತ್ಯದಲ್ಲಿಯ ಪ್ರಕಾರಗಳ ಕುರಿತು ಪ್ರಕಟಿಸಿದ ಗ್ರಂಥಗಳು..... ಇತ್ಯಾದಿ) ಧರ್ಮ, ತತ್ವಜ್ಞಾನ, ಚರಿತ್ರೆ, ಭೂಗೋಲ, ಸಮಾಜ ವಿಜ್ಞಾನ ಮತ್ತು ಕನ್ನಡ ಹಾಗೂ ಕರ್ನಾಟಕದ ಬಗೆಗೆ ಇಂಗ್ಲೀಷಿನಲ್ಲಿರುವ ಪುಸ್ತಕಗಳು ಇತ್ಯಾದಿ ವರ್ಗೀಕರಣ ಹೊಂದಿದ ಪುಸ್ತಕವನ್ನು ಪ್ರಕಟಿಸಲಾಗಿದೆ.[೬೦]

ಮುಂದೆ ಈ ಆಶಯವನ್ನು ಮುಂದುವರಿಸುವರೆಂಬ ಆಶೆಯನ್ನು ಶ್ರೀನಿವಾಸ ಹಾವನೂರು ಇರಿಸಿಕೊಂಡಂತೆ ಕಾಣುತ್ತದೆ. ಇದೊಂದು ಗಮನಾರ್ಹ ಪ್ರಕಟಣೆ. ಈ ರೀತಿ ಪ್ರತಿವರ್ಷ ಪ್ರಕಟಗೊಂಡರೆ ಆಸಕ್ತರಿಗೆ, ಸಂಶೋಧಕರಿಗೆ ಆಕರಗ್ರಂಥಗಳಾಗಬಹುದು.

**೪.೨.೧೨.೬ : ಕನ್ನಡ ಸಾಹಿತ್ಯ ದರ್ಶನ** ೧೯೫೬ ರಲ್ಲಿ ಕೆ. ಎಸ್. ದೇಶಪಾಂಡೆಯುವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಮನವಿಯ ಮೇರೆಗೆ ಕನ್ನಡ ಸಾಹಿತ್ಯ ದರ್ಶನ ೧೯೫೬ ರಲ್ಲಿ ಹೊರತಂದರು. ಇದರಲ್ಲಿ ೧೨೦೦ ಪುಸ್ತಕಗಳ ನಮೂದುಗಳಿವೆ. ಅದರ ಕಾಲಾವಧಿ ೧೮೨೪ ರಿಂದ ೧೯೫೬ ರ ವರೆಗೆ ಇರುತ್ತದೆ.

**೪.೧೨.೧೧ : 'ಗ್ರಂಥಸೂಚಿ'** (ಜ್ಞಾನ ವಿಜ್ಞಾನ ಗ್ರಂಥಗಳ ಪ್ರದರ್ಶನ) ೧೯೫೭ ರಲ್ಲಿ ೩೯ ನೇ ಕನ್ನಡ ಸಾಹಿತ್ಯ ಸಮ್ಮೇಳನ ಧಾರವಾಡದಲ್ಲಿ ನಡೆದಾಗ ಅದರ ಸವಿನೆನಪಿಗಾಗಿ ಸವಿನೆನಪಿಗಾಗಿ ಈ ಗ್ರಂಥಸೂಚಿಯನ್ನು ಹೊರತಂದಿದ್ದಾರೆ. ಇದರಲ್ಲಿ ೩೯೫ ಪುಸ್ತಕಗಳ ನಮೂದು ಇದೆ. ಗ್ರಂಥಗಳ ಪ್ರದರ್ಶನ ಸಮಿತಿ ಅಧ್ಯಕ್ಷರು ಹೆಸರಾಂತ ಲೇಖಕ, ವಿದ್ವಾಂಸ, ಪ್ರೊ. ಸ. ಸ. ಮಾಳವಾಡ ಅವರು. ಈ ಸಮ್ಮೇಳನದ ಅಧ್ಯಕ್ಷರಾಗಿದ್ದವರು ರಾಷ್ಟ್ರಕವಿ ಕುವೆಂಪು ಅವರು. ಧಾರವಾಡದಲ್ಲಿ ನಡೆದ ಸಮ್ಮೇಳನದ ಸವಿನೆನಪಿಗಾಗಿ ಹೊರತಂದ ಈ ಗ್ರಂಥಸೂಚಿಯು ಸಮ್ಮೇಳನದಲ್ಲಿ ಪ್ರದರ್ಶಿಸಲ್ಪಟ್ಟ ಪುಸ್ತಕಗಳ ಪಟ್ಟಿಯಾಗಿದ್ದುದು ವಿಶೇಷ. ಈ ಸ್ತುತ್ಯ ಕಾರ್ಯವನ್ನು ಮಾಡಿದ ಕೆ. ಎಸ್. ದೇಶಪಾಂಡೆ ಮುಂದಿನ ಸಮ್ಮೇಳನಗಳ ಗ್ರಂಥಸೂಚಿಗಳನ್ನು ಯಾರೂ ಹೊರತಂದಂತೆ ಕಾಣುವದಿಲ್ಲ. ಹೀಗೆ ಆ ಬೆಳವಣಿಗೆಯನ್ನು ಪೂರೈಸಿದ್ದಾದರೆ ಸಮ್ಮೇಳನಗಳ ಸಾರ್ಥಕತೆ ಕಂಡುಬರುತ್ತದೆ.

**೪.೨.೧೨.೭ : ವಾರ್ಷಿಕ ಗ್ರಂಥಾವಳಿ ಮತ್ತು ರಂಗಸೌರಭ** ಎಂಬ ಎರಡು ಗ್ರಂಥಗಳನ್ನು ಹೊರತಂದಿರುವ ಆರ್. ಎಲ್. ಅನಂತರಾಮಯ್ಯನವರು 'ಗ್ರಂಥಲೋಕ' ಎಂಬ ಪತ್ರಿಕೆಯನ್ನು ಹುಟ್ಟುಹಾಕಿದ್ದರು. ೧೯೮೦ ರಲ್ಲಿ ಅವರು

ಪ್ರಕಟಿಸಿದ 'ವಾರ್ಷಿಕ ಗ್ರಂಥಾವಳಿ' ೧೦೮೩ ಪುಸ್ತಕಗಳ ಪಟ್ಟಿಯನ್ನು ಹೊಂದಿದೆ. ಅವರು ಹುಟ್ಟುಹಾಕಿದ ಗ್ರಂಥಾವಳಿ ಬಹಳ ದಿನಗಳ ನಂತರ ಕನ್ನಡ ಸಾಹಿತ್ಯಕ್ಕೆ ಹೊಸ ಚುರುಕನ್ನು ಮುಟ್ಟಿಸಿತು. 'ರಂಗಸೌರಭ' ೧೯೮೦ ರಲ್ಲಿ ಆರ್. ಎಲ್. ಅನಂತರಾಮಯ್ಯ ಭಾರತೀಯ ನಾಟ್ಯ ರಂಗಮಂದಿರ, ಬೆಂಗಳೂರು ಇವರು ಪ್ರಕಟಿಸಿದ್ದಾರೆ. ಇದರಲ್ಲಿ ೩೩೪೪ ಕನ್ನಡ ನಾಟಕಗಳ ಪಟ್ಟಿಯನ್ನು ನೋಡಬಹುದು.

### ೪.೨.೧೨.೮ : ಡಾ. ಎಸ್. ಆರ್. ಗುಂಜಾಳ

ಡಾ. ಎಸ್. ಆರ್. ಗುಂಜಾಳ ಅವರು ಗ್ರಂಥಸೂಚಿ ಕಾರ್ಯಗಳಿಗಾಗಿ ಕನ್ನಡ ಸಾಹಿತ್ಯದಲ್ಲಿ ತಮ್ಮನ್ನೆ ತಾವು ತೊಡಗಿಸಿಕೊಂಡು ಅತ್ಯಂತ ತಾಳ್ಮೆ, ಪರಿಶ್ರಮಗಳಿಂದ ಈ ಕ್ಷೇತ್ರವನ್ನು ಕಟ್ಟಿದ್ದಾರೆ. ಅವರೊಬ್ಬ ಕನ್ನಡ ವಿದ್ವಾಂಸರಾಗಿದ್ದುಕೊಂಡು ಗ್ರಂಥಾಲಯ, ಮಾಹಿತಿ ವಿಜ್ಞಾನ, ಸಂಶೋಧನೆಗಳಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ.

ಡಾ. ಎಸ್. ಆರ್. ಗುಂಜಾಳರು ಪ್ರಕಟಿಸಿದ ಪುಸ್ತಕಗಳೆಂದರೆ :

೧. ಬಸವ ಸಾಹಿತ್ಯ ದರ್ಪಣ, ಭಾಗ - ೧

೨. ಸಂಶೋಧನ ಲೇಖನಸೂಚಿ - (ವ್ಹಿ. ಡಿ. ರಾಚನಾಯ್ಕರ ಅವರೊಂದಿಗೆ)

೩. ಬಸವ ಪಥ ಲೇಖನಸೂಚಿ - (ಮೇ ೧೯೭೭ ರಿಂದ ರಿಂದ ಏಪ್ರಿಲ್ ೧೯೯೭)

೪. Basava Journal (May 1976 - June 1996)

೫. Lingayat Bibliography (A Comprehensive Source Book)

ಈ ಎಲ್ಲ ಕೃತಿಗಳು ಗ್ರಂಥಸೂಚಿಗಳಾಗಿದ್ದುದು ವಿಶೇಷ. ಇದರಿಂದ ಅವರಿಗಿರುವ ಅಪಾರ ಅನುಭವ, ಜ್ಞಾನದ ಜಿಜ್ಞಾಸೆ, ಅಪರಿಮಿತವಾದುದು. ಅವರ ಕಾಳಜಿ ಸ್ತುತ್ಯಾರ್ಹವಾದುದು.[೬೧]

ಈ ಎಲ್ಲ ಪುಸ್ತಕಗಳಲ್ಲಿ ವಿಶೇಷತೆಯೇನೆಂದರೆ –ಬಸವಣ್ಣನವರ ಮತ್ತು ಬಸವಣ್ಣನವರನ್ನು ಕುರಿತು ಇರುವ ನಾಲ್ಕುನೂರಾ ಹದಿನೈದು ಗ್ರಂಥಗಳ ಎಲ್ಲ ಬಗೆಯ ವಿಹಂಗಮ ನೋಟವನ್ನು ಕನ್ನಡಸಾಹಿತ್ಯಕ್ಕೆ ಉಣಬಡಿಸಿದ್ದಾರೆ. ಬಸವಣ್ಣನವರನ್ನು ಕುರಿತು ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಲೇಖನಗಳನ್ನು ಸೂಚಿರೂಪದಲ್ಲಿ ಈ ಮೇಲಿನ ಪುಸ್ತಕಗಳಲ್ಲಿ ಒದಗಿಸಿದ್ದಾರೆ. ಕೆಲವು ಸೂಚಿಗಳಲ್ಲಿ ಸಂಶೋಧನ ಲೇಖನಗಳ ಸೂಚಿಗಳಿರಬಹುದು, ಸಂಶೋಧನ ಪ್ರಬಂಧಗಳಿರಬಹುದು, ಅವು ಇಂಗ್ಲೀಷ, ಜರ್ಮನ್, ಫ್ರೆಂಚ್, ತೆಲುಗು, ತಮಿಳು, ಸಂಸ್ಕೃತ, ಮರಾಠಿ, ಹಿಂದಿ ಮತ್ತು ಉರ್ದು ಭಾಷೆಗಳಲ್ಲಿ ಪ್ರಕಟವಾದ ಗ್ರಂಥಗಳಿರಬಹುದು, ಲೇಖನಗಳಿರಬಹುದು, ಅವೆಲ್ಲವನ್ನು ಒಗ್ಗೂಡಿಸುವ ಕೆಲಸವನ್ನು ಡಾ. ಎಸ್. ಆರ್. ಗುಂಜಾಳ ಅವರು ಪ್ರಮಾಣಬದ್ಧವಾಗಿ ಅದೊಂದು ದೀಕ್ಷೆ ಕಟ್ಟಾಜ್ಞೆಯಂತೆ ಸ್ವೀಕರಿಸಿ ಮಹಾ ಕೆಲಸವನ್ನು ಪೂರೈಸಿದ್ದಾರೆ.

ಮುಖ್ಯವಾಗಿ ಪಾಶ್ಚಾತ್ಯ ಸಂಶೋಧಕರಿಗೂ ಅನುಕೂಲವಾಗುವ ದೃಷ್ಟಿಯಿಂದ ಇಂಗ್ಲೀಷಿನಲ್ಲಿ ಪ್ರಕಟವಾದ ಗ್ರಂಥಗಳ, ಪತ್ರಿಕೆಗಳಲ್ಲಿನ ಲೇಖನಗಳನ್ನು ಸೂಚೀ ರೂಪದಲ್ಲಿ ಪ್ರಕಟಿಸಿದ್ದಾರೆ. ಲಿಂಗಾಯತ, ವೀರಶೈವ ಧರ್ಮವನ್ನು ಕುರಿತು ಸಂಶೋಧಿಸುವ, ಬರೆಯುವ, ಆಂಗ್ಲ ಮತ್ತು ವಿವಿಧ ಭಾಷೆಗಳ ಲೇಖಕರಿಗೆ ಇದೊಂದು ಮಾರ್ಗದರ್ಶಿಯ ಪಥವಾಗುತ್ತದೆ. ಹೀಗೆ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವ ಅತ್ಯಂತ ಜವಾಬ್ದಾರಿಯ ಕೆಲಸವನ್ನು ಎಸ್. ಆರ್. ಗುಂಜಾಳ ನಿರ್ವಹಿಸಿದ್ದಾರೆ. ಸಾಹಿತ್ಯ ಕೃಷಿ ನಡೆಸುವವರಿಗೆ ತುಂಬ ಅಗತ್ಯವಾದ ಮತ್ತು ಉಪಯುಕ್ತವಾದ ಕೈಪಿಡಿ ಈ ಗ್ರಂಥಸೂಚಿಗಳು ಎಂಬುದರಲ್ಲಿ ಎರಡು ಮಾತಿಲ್ಲ. ಬೇರೆ ಬೇರೆ ವಿದ್ವಾಂಸರು ಬಸವಪಥದ ಲೇಖನಗಳಿಗೆ ಬೇರೆ ಬೇರೆ ಅವಧಿಗಳಿಗೆ ನಾಲ್ಕು ಜನ ವಿದ್ವಾಂಸರು ಮೂರು ಸಲ ಇಂಥ ಲೇಖನ ಸೂಚಿಗಳನ್ನು ಸಿದ್ಧ ಮಾಡಿರುವರು.

೧. ಮೊರಬದ ಮಲ್ಲಿಕಾರ್ಜುನರು ಬಸವ ಜನರಲ್, ಸಂಪುಟ ೧, ೨ ಮತ್ತು ೩ ರಲ್ಲಿ ೬೦ ಜನ ವಿದ್ವಾಂಸರು ಬರೆದ ೮೧ ಲೇಖನಗಳನ್ನು ಕಾವ್ಯ, ನಾಟಕ, ಸಂಪಾದಿತ ಕೃತಿಗಳು, ಲೇಖನಗಳು ಎಂಬ ನಾಲ್ಕು ವಿಷಯ ವಿಭಾಗಗಳಲ್ಲಿ ಕೊಟ್ಟಿರುವರು.

೨. ಸಿ. ಎಂ. ಕುಂದಗೋಳ ಮತ್ತು ಎಸ್. ಶಿವಣ್ಣ ಜೊತೆಗೂಡಿ ಬಸವಪಥದ ೧ ನೇ ಸಂಪುಟದಿಂದ ೮ ನೇ ಸಂಪುಟಗಳಲ್ಲಿ (೧೯೭೯ - ೧೯೮೬) ಪ್ರಕಟವಾದ ೭೭೨ ಲೇಖನಗಳ ಸೂಚಿಯನ್ನು ಸಿದ್ಧಪಡಿಸಿ, ಪ್ರಕಟಿಸಿರುವರು. ಇವುಗಳನ್ನು ೧) ಕವನ, ೨) ಸಂಪಾದಿತ ಕೃತಿಗಳು, ೩) ಕವಿ - ಕೃತಿ ಪರಿಚಯ, ೪) ಶಿವಶರಣರು, ೫) ವಚನ ಸಾಹಿತ್ಯ, ೬) ಜಾನಪದ ಸಂಪಾದನೆ, ೭) ಜಾನಪದ ಲೇಖನ, ೮) ವೀರಶೈವ ಮಠಗಳು, ೯) ಕನ್ನಡೇತರ ಭಾಷೆಗಳು, ೧೦) ಪದಗಳು, ೧೧) ಸ್ವರವಚನಗಳು, ೧೨) ಗ್ರಂಥ ವಿಮರ್ಶೆ, ೧೩) ಚಿಂತನ ಲಹರಿಗಳು, ೧೪) ಶರಣರ ಸೂಳ್ನುಡಿಗಳ ಅಕಾರಾದಿ, ೧೫) ಸೂಚಿ, ೧೬) ಪ್ರಕೋಶ, ೧೭) ಸಂಪಾದಕೀಯ, ೧೮) ಸಂಕೀರ್ಣ. ವಿಷಯಾನುಗುಣವಾಗಿ ೧೮ ತಲೆಬರಹಗಳ ಅಡಿಯಲ್ಲಿ ವಿಭಜಿಸಿರುವರು. ಪ್ರತಿಯೊಂದು ವಿಷಯದೊಳಗಿನ ಲೇಖನಗಳ ಲೇಖಕರ ಹೆಸರುಗಳನ್ನು ವರ್ಣಾನುಕ್ರಮವಾಗಿ ಹೊಂದಿಸಿರುವರು. ತಾರ್ಕಿಕ ಹಿನ್ನೆಲೆಗೆ ಒಳಪಟ್ಟಿಲ್ಲವಾದರೂ ಅಲಕ್ಷಿಸುವಂತಿಲ್ಲ.

೩. ಎಫ್. ಟಿ. ಹಳ್ಳಿಕೇರಿ ಅವರು ಬಸವಪಥದಲ್ಲಿ ಸಂಪುಟ ೯ ರಿಂದ ೧೩ ರ ವರೆಗೆ ಪ್ರಕಟವಾದ ೪೦೩ ಲೇಖನಗಳ ಅಕಾರಾದಿ ಸೂಚಿಯನ್ನು ಸಿದ್ಧಪಡಿಸಿ ಪ್ರಕಟಿಸಿರುವರು. ಇದು ಕೇವಲ ಲೇಖನಗಳ ವರ್ಣಾನುಕ್ರಮ ಸೂಚಿಯಾಗಿದ್ದು, ಯಾವುದೇ ತರ್ಕಬದ್ಧ ವಿಭಜನೆಯ ಗೊಡವೆಗೆ ಅವರು ಹೋಗಿಲ್ಲ.[೬೪]

೪. ಹೀಗೆ ಕನ್ನಡದಲ್ಲಿ ಹಾಗೂ ಉಳಿದ ಭಾಷೆಗಳಲ್ಲಿ ಬಸವಣ್ಣನವರನ್ನು ಕುರಿತು ಬರೆದ ಎಲ್ಲ ಪ್ರಕಾರದ ಗ್ರಂಥಗಳ ಪರಿಚಯಾತ್ಮಕ ಸೂಚಿಯನ್ನು ವ್ಯವಸ್ಥಿತವಾಗಿಯೂ, ವೈಜ್ಞಾನಿಕವಾಗಿಯೂ ಮೊಟ್ಟಮೊದಲಿಗೆ ಪರಿಚಯಿಸಿದ್ದು ಎಸ್. ಶಿವಣ್ಣ, ಎಸ್. ಆರ್. ಗುಂಜಾಳ್ ಅವರುಗಳಿಗೆ ಗೌರವ ಸಲ್ಲಿಸಬೇಕಾಗಿದೆ.

ಇನ್ನೊಂದು ಮಾತನ್ನು ಇಲ್ಲಿ ಸೇರಿಸುವುದು ಉಚಿತವೆನಿಸುತ್ತದೆ. ವೀರಶೈವ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಮೈಸೂರು ವಿಶ್ವವಿದ್ಯಾಲಯ; ಬೆಂಗಳೂರು ವಿಶ್ವವಿದ್ಯಾಲಯಗಳು ವಿಶೇಷವಾಗಿ ಬಸವ ಸಮಿತಿ ಬೆಂಗಳೂರು; ವೀರಶೈವ ಅಧ್ಯಯನ ಸಂಸ್ಥೆಯಾದ ಗದುಗಿನ ತೋಂಟದಾರ್ಯ ಮಠ; ಭಾಲ್ಕಿ ಸಂಸ್ಥಾನ ಹಿರೇಮಠದ ಚನ್ನಬಸವ ಪಟ್ಟದ್ದೇವರು; ಬೆಳಗಾವಿ ರುದ್ರಾಕ್ಷಿಮಠದ ಮ.ನಿ.ಪ್ರ. ಸಿದ್ಧರಾಮ ಮಹಾಸ್ವಾಮಿಗಳು; ಕನ್ನಡ ವಿಶ್ವವಿದ್ಯಾಲಯ ಹಂಪಿಯು ಈ ದಿಶೆಯಲ್ಲಿ ಮಹತ್ವದ ಪಾತ್ರ ವಹಿಸಿವೆ. ಹೀಗೆ ಸಾಹಿತ್ಯದಲ್ಲಿ ಗ್ರಂಥಸೂಚಿಯ ಮಹತ್ವವನ್ನು ಸಾರಿ ಹೇಳಿ ಸಂಶೋಧಕರಿಗೆ ಕೈಗನ್ನಡಿಯಾಗುವ ರೀತಿಯಲ್ಲಿ ಸಹಕರಿಸುತ್ತಿವೆ ಎಂಬ ಮಾತನ್ನು ಯಾರೂ ಅಲ್ಲಗಳೆಯುವಂತಿಲ್ಲ.

### ೪.೨.೧೨.೮.೧ : 'ಬಸವಪಥ' ಲೇಖನ ಸೂಚಿ - ೧೯೯೮ (ಮೇ ೧೯೭೭ - ಏಪ್ರಿಲ್ ೧೯೯೨)

ಇಂದು 'ಬಸವಪಥ'ವು ಶರಣ ಸಾಹಿತ್ಯ, ಸಂಸ್ಕೃತಿ, ಇತಿಹಾಸ ಮುಂತಾದ ಕ್ಷೇತ್ರಗಳಲ್ಲಿ ನಡೆದ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸುತ್ತಿರುವ ಕನ್ನಡದ ಏಕೈಕ ಪತ್ರಿಕೆಯಾಗಿದೆ ಎಂದು ಹೇಳಬಹುದು.

ಇದರ ಕಾಲಾವಧಿಯು (ಮೇ - ೧೯೭೭ ರಿಂದ ಏಪ್ರಿಲ್ ೧೯೯೨) ಅಂದರೆ ಇಪ್ಪತ್ತು ವರ್ಷಗಳಲ್ಲಿ ಪತ್ರಿಕೆಗಳಲ್ಲಿ ಬಂದ ಲೇಖನಗಳನ್ನು ಕೂಡಿಸಿಟ್ಟುಕೊಂಡು ಬರೆಯುವುದು ಸಣ್ಣ ಮಾತಲ್ಲ.

'ಬಸವಪಥ'ವು ಪ್ರೌಢವೂ ವಿದ್ವತ್‌ಪೂರ್ಣವೂ ಆದ ಲೇಖನಗಳನ್ನು ಪ್ರಕಟಿಸುತ್ತಿದೆ. ಸಂಶೋಧಕರ ಆದರ ಅಭಿಮಾನಗಳಿಗೆ ಪಾತ್ರವಾಗಿದೆ. ೧೯೯೭ ಏಪ್ರಿಲ್ ತಿಂಗಳಿಗೆ ತನ್ನ ಸಾರ್ಥಕ ಸೇವೆಯ ಎರಡು ದಶಕಗಳನ್ನು ಪೂರ್ತಿಗೊಳಿಸಿದೆ. ಈ ಸಂದರ್ಭದಲ್ಲಿ ಕಳೆದ ೨೦ ವರ್ಷಗಳ ಅವಧಿಯಲ್ಲಿ 'ಬಸವಪಥ'ದಲ್ಲಿ ಪ್ರಕಟಗೊಂಡ ಲೇಖನಗಳಿಗೆ ವರ್ಗೀಕೃತ (ವಿಷಯಾನುಗುಣ) ಸೂಚಿಯನ್ನು ಸಿದ್ಧಪಡಿಸಿದೆ. ಇದು ಇಂದಿನ ಮತ್ತು ಮುಂದಿನ ಸಂಶೋಧಕರಿಗೆ ಮೂಲಕ ಆಕರವಾಗುವುದೆಂದು ಬಲವಾಗಿ ನಂಬಿದ್ದೇವೆ.[೭೨]

ಇದೀಗ ಸಿದ್ಧಪಡಿಸಿದ ಸೂಚಿಯಲ್ಲಿ 'ಬಸವ ಜರ್ನಲ್'ದ ೨ ಸಂಪುಟ ಹಾಗೂ ಬಸವಪಥದ ೧೮ ಸಂಪುಟ ಹೀಗೆ ೧೯೯೭ ಏಪ್ರಿಲ್‌ದವರೆಗೆ ಒಟ್ಟು ೨೦ ಸಂಪುಟಗಳಲ್ಲಿ ಪ್ರಕಟವಾದ ೧೩೪೮ ಲೇಖನಗಳನ್ನು ತಾರ್ಕಿಕ ಹಿನ್ನೆಲೆಯಲ್ಲಿ ದಶಾಂಶ ವರ್ಗೀಕರಣ ಪದ್ಧತಿಯನ್ನು ಬಳಸಿಕೊಂಡು ವರ್ಗೀಕರಿಸಿ ಸೂಚಿಯನ್ನು ಸಿದ್ಧಪಡಿಸಿದೆ. ಮೇಲ್ಕಾಣಿಸಿದ ಸೂಚಿಗಳಲ್ಲಿ ಕಂಡುಬಂದ ಅನೇಕ ಕೊರತೆಗಳನ್ನೆಲ್ಲ ತುಂಬಿಕೊಂಡು ಸಂಶೋಧಕರ ವೇಳೆ ಶ್ರಮಗಳ ಉಳಿತಾಯ ಮಾಡುವ ಗುರಿಯಿದೆ.[೭೩]

ದಶಾಂಶ ವರ್ಗೀಕರಣ ಪದ್ಧತಿಯ ರೂಪರೇಷೆ ಹೀಗಿದೆ :

೧೦೦ ಸಂದರ್ಭ ಲೇಖನಗಳು

೧೦೦ ತತ್ವಜ್ಞಾನ

೨೦೦ ಧರ್ಮ

೩೦೦ ಸಮಾಜ ವಿಜ್ಞಾನಗಳು

೪೦೦ ಭಾಷೆ

೫೦೦ ಸೃಷ್ಟಿ ವಿಜ್ಞಾನಗಳು

೬೦೦ ತಾಂತ್ರಿಕ ವಿಜ್ಞಾನಗಳು

೭೦೦ ಕಲೆಗಳು

೮೦೦ ಸಾಹಿತ್ಯ

೯೦೦ ಇತಿಹಾಸ

ಹೀಗೆ ಹತ್ತು ವಿಭಾಗಗಳಲ್ಲಿ ಲೇಖನಗಳನ್ನು ಪ್ರಥಮ ಹಂತದಲ್ಲಿ ಗುಂಪು ಮಾಡಿದೆ. ದ್ವಿತೀಯ ಹಂತದಲ್ಲಿ ಪ್ರತಿಯೊಂದು ಗುಂಪಿನ ಲೇಖನಗಳನ್ನು ೧೩೦ ವಿಷಯ ಶೀರ್ಷಿಕೆಗಳ ಅಡಿಯಲ್ಲಿ ಸೂಕ್ಷ್ಮಾತಿಸೂಕ್ಷ್ಮವಾಗಿ ವಿಭಜಿಸಿದೆ. ಒಂದೊಂದು ಸೂಕ್ಷ್ಮ ವಿಷಯದ ಮೇಲಿನ ಲೇಖನಗಳನ್ನು ಪುನಃ ಆಯಾ ಲೇಖಕರ ವರ್ಣಾನುಕ್ರಮದಲ್ಲಿ ಜೋಡಿಸಿರುವುದು. ಸೂಕ್ಷ್ಮ ವಿಭಾಗಗಳಿಗೆ ವರ್ಗೀಕರಣದ ದಶಾಂಶ ಸಂಖ್ಯೆ ವಿಷಯಗಳ ಶಿರೋನಾಮೆಗಳನ್ನು ಬಳಸಿಕೊಂಡಿದೆ.

ಅ. ನಂ. ೧೨ ಪುರಾಣಿಕ ಸಿದ್ಧಯ್ಯ ಮತ್ತು ಸಿದ್ಧಲಿಂಗಯ್ಯ (ಎನ್.) ಇವರ ಶರಣ ಸೂಳ್ನುಡಿಗಳ ಅಕಾರಾದಿ ಲೇಖನವು ಬಸವಪಥದ ೬೪ ನೇ ಸಂಚಿಕೆಯಲ್ಲಿ (ಉ. ಆ. ನಂ. ೧೩) ವಿಜಯಕುಮಾರ (ಹ. ನಂ.) ಇವರ ಬಸವ ವಚನ ಪ್ರಕೋಶ. ಲೇಖನವು ೫ ನೇ ಸಂಚಿಕೆಯಲ್ಲಿ ಪ್ರಕಟವಾಗಿದ್ದರೂ ಅದನ್ನು ಒಂದೇ ಲೇಖನವೆಂದು ಪರಿಗಣಿಸಲಾಗಿದೆ.

ಮೇಲೆ ಕಾಣಿಸಿದ ೧೩೪೮ ಲೇಖನವನ್ನು ೧೩೦ ವಿಷಯಗಳ ಶೀರ್ಷಿಕೆಯಲ್ಲಿ ವಿಂಗಡಿಸಿದಷ್ಟೇ ಪ್ರತಿಯೊಂದು ವಿಷಯ ಶೀರ್ಷಿಕೆಯ ಅಡಿಯಲ್ಲಿ ಬರುವ ಲೇಖಕರ ವಿಷಯಗಳನ್ನು ವರ್ಣಾನುಕ್ರಮವಾಗಿ ಕೊಟ್ಟಿದೆ. ಆದರೆ ಒಂದೇ ಶೀರ್ಷಿಕೆಯ ಕೆಳಗೆ ಒಬ್ಬ ಲೇಖಕನು ಬರೆದ ಬಿಡಿ ಲೇಖನಗಳನ್ನೆಲ್ಲ ಜೋಡಿಸಿ ಕೊಟ್ಟಿದೆ. ಅ. ನಂ. ೨೯ ರಲ್ಲಿ ರಾಜೂರ (ವೀರಣ್ಣ) ಅವರ ವಚನಗಳ ಶೀರ್ಷಿಕೆಯಡಿಯಲ್ಲಿ ಬರುವ ೫ ಲೇಖನಗಳನ್ನು ಬರೆದಿದ್ದಾರೆ.

ಅವುಗಳನ್ನು ಒಂದೇ ಲೇಖನದಲ್ಲಿ ಜೋಡಿಸಿದ್ದೇವೆ. ಅ. ನಂ. ೩೦೩ ರಲ್ಲಿ ಶಿವಣ್ಣ (ಎಸ್.) ಇವರ ೧೧ ಲೇಖನಗಳು ಒಂದೇ ಉಲ್ಲೇಖದ ಅಡಿಯಲ್ಲಿ ಜೋಡಿಸಲ್ಪಟ್ಟಿವೆ. ಹೀಗಾಗಿ ೧೧೯೪ ಉಲ್ಲೇಖಗಳಲ್ಲಿ ಅಳವಡಿಸಿದ ಲೇಖನಗಳ ಒಟ್ಟು ಸಂಖ್ಯೆ ೧೩೪೮ ಆಗಿವೆ.

ಸೂಚಿಯ ಕೊನೆಯಲ್ಲಿ ಬಸವಪಥದ ಲೇಖಕರ ಅಕಾರಾದಿ ಪಟ್ಟಿಯನ್ನು ಕೊಟ್ಟಿದೆ. ಪ್ರತಿಯೊಬ್ಬ ಲೇಖಕನ ಹೆಸರಿನ ಎದುರಿಗೆ ಅವರು ಬರೆದ ಲೇಖನಗಳ ಅನುಕ್ರಮ ನಂಬರುಗಳನ್ನು ನಮೂದಿಸಿದೆ. ಈ ಅನುಕ್ರಮ ನಂಬರುಗಳ ಬಳಿವಿಡಿದು ಇಲ್ಲಿಯವರೆಗೆ ಆಯಾ ಲೇಖಕರ ವಿವಿಧ ವಿಷಯಗಳ ಮೇಲಿನ ಒಟ್ಟಾರೆ ಎಷ್ಟು ಲೇಖನಗಳು ಬಸವಪಥದ ಯಾವ ಯಾವ ಸಂಚಿಕೆಯಲ್ಲಿ ಪ್ರಕಟವಾಗಿದೆಯೆಂಬುದನ್ನು ತಿಳಿದುಕೊಳ್ಳಬಹುದು. ಇದರಿಂದ ಪ್ರತಿಯೊಬ್ಬ ಲೇಖಕನ ಜ್ಞಾನದ ಹಸಿವು ಗೋಚರವಾಗುತ್ತದೆ.[೬೪]

ಪ್ರಸ್ತುತ ಸೂಚಿಯ ಪ್ರಯೋಜನವನ್ನು ಸಂಶೋಧಕರು ಪಡೆಯುವರೆಂದು ಆಶಿಸೋಣ.

ಇದನ್ನು ಬಸವ ಸಮಿತಿ, ಬೆಂಗಳೂರು ಪ್ರಕಟಿಸಿ ದಾಖಲೆಯನ್ನು ನಿರ್ಮಿಸಿದೆ.

## ೪.೨.೧೩ : ಕನ್ನಡ ಸಾಹಿತ್ಯ ಸಂದರ್ಭದಲ್ಲಿ : ಕೈಪಿಡಿಗಳು, ದಿನಚರಿಗಳು, ಸಾರಸಂಗ್ರಹಗಳು

### ೪.೨.೧೩.೧ : ಕಚೇರಿ ಕೈಪಿಡಿ

ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬. ಆ. ಮು. ೧೯೮೮; ಡೆಮಿ ಅಷ್ಟದಳ. xvi + ೪೩೦; ರೂ. ೨೦/- ಸಂಪಾದಕ ಸಮಿತಿಯ ಸದಸ್ಯರು : ಡಿ. ಜವರೇಗೌಡ (ಅಧ್ಯಕ್ಷ); ಎ. ಭರತ್, ಜಯತೀರ್ಥ ರಾಜಪುರೋಹಿತ, ಹಾ. ಮಾ. ನಾಯಕ, ಪ್ರಧಾನ್ ಗುರುದತ್ತ, ಸರಕಾರಿ ಕಚೇರಿಗಳ ದಿನನಿತ್ಯದ ವ್ಯವಹಾರಕ್ಕೆ ಸಂಬಂಧಿಸಿದ ವಿವಿಧ ಮಾದರಿಗಳ ಸಂಕಲನ. ಆಡಳಿತ ಭಾಷೆಯಾಗಿ ಕನ್ನಡ ಎಂಬ ಅಧ್ಯಾಯ, ಅನಂತರ ಪತ್ರವ್ಯವಹಾರ ವಿಧಾನ; ಮಾದರಿ ಪತ್ರಗಳು ಮಾದರಿ ಫೈಲುಗಳು; ಕಚೇರಿ ಟಿಪ್ಪಣಿಗಳು; ಗೆಜೆಟ್ ಅಧಿಸೂಚನೆಗಳು, ಅರ್ಜಿ ನಮೂನೆಗಳು, ವಿಧಿ ನಮೂನೆಗಳು, ಇತರೆ ನಮೂನೆಗಳು; ಪತ್ರವ್ಯವಹಾರದಲ್ಲಿ ಬಳಸುವ ವಾಕ್ಯಗಳು ಮತ್ತು ವಾಕ್ಯಾಂಶಗಳು, ಕನ್ನಡದಲ್ಲಿ ತಂತಿ ಸಂದೇಶ ಮಾದರಿಗಳು; ಪ್ರಕಟಣೆಗಳು, ಜಾಹೀರಾತುಗಳು ಮತ್ತು ಸೂಚನೆಗಳು (ಮೂಲ ಸಹಿತ), ಕನ್ನಡ ಪ್ರಕಟಣೆಗಳು, ಆಹ್ವಾನ ಪತ್ರಿಕೆಗಳು ಎಂಬ ಎಂಟು ಭಾಗಗಳು, ಅನುಬಂಧಗಳಲ್ಲಿ ಕಚೇರಿ ಶಬ್ದಾವಳಿ, ಸರಕಾರಿ ಇಲಾಖೆಗಳ ಕನ್ನಡ ಹೆಸರುಗಳು, ಸರಕಾರಿ ಹುದ್ದೆಗಳ ಕನ್ನಡ ಹೆಸರುಗಳು, ಇಲಾಖೆ ದಾಖಲೆಗಳಲ್ಲಿ ಕಂಡುಬರುವ ಶಬ್ದಗಳು, ಆಧಾರ ಗ್ರಂಥಗಳು, ಕಡೆಯಲ್ಲಿ ಓದುಗರ ಉಪಯೋಗಕ್ಕಾಗಿ ಎರಡು ಖಾಲಿ ಪುಟಗಳು. ಮೈಸೂರು ಡೈರಿ– ಬಿ. ಜಿ. ಎಲ್. ಸ್ವಾಮಿಯವರ ಪುಸ್ತಕ ದಿನಚರಿಯ ರೂಪದ್ದು.

ಇತ್ತೀಚೆಗೆ ಪೊಲೀಸ್ ಆಫೀಸರ್ಸ್ ಕೈಪಿಡಿ. ಲೇಖಕರು : ಬಿ. ಎಸ್. ಗಿರೆಪ್ಪಗೌಡರ, ಸ್ಕೂಲ್ ಡೈರಿ : ಲೇಖಕರು : ಮಂಜುನಾಥ ಬೇದ್ರೆ, ದಿನವಹಿಗಳು, ವ್ಯವಹಾರಿಕ ಕನ್ನಡ. (ಪತ್ರ ಲೇಖನಗಳು, ಕಚೇರಿ ವ್ಯವಹಾರ ಪತ್ರಗಳು... ಇತ್ಯಾದಿ) ಕನ್ನಡ ಕೈಪಿಡಿ ಭಾಗ ೧, ೨ (ಮೈಸೂರು ವಿ. ವಿ. ಪ್ರಕಟಣೆಗಳು) ಇವು ಕನ್ನಡ ವ್ಯಾಕರಣ, ಭಾಷೆ, ಅಲಂಕಾರ, ಛಂದಸ್ಸು, ಕಾವ್ಯ ಪರಿಕರ ಇತ್ಯಾದಿಗಳನ್ನು ಕುರಿತು ತಿಳಿಸುತ್ತವೆ. ಹೀಗೆ ಅನೇಕ ಕೈಪಿಡಿಗಳು, ಡೈರಿಗಳು ಅತ್ಯುಪಯುಕ್ತವಾಗಿವೆ. ಅವುಗಳ ಬಗ್ಗೆ ಹೆಚ್ಚಿನ ಗಮನ ಕೊಡದೆ ಸಾಹಿತ್ಯಿಕವಾಗಿರುವ ಮುಖ್ಯ ಕೃತಿಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಉದಾ : ಆಂಗ್ಲರ ಆಡಳಿತದಲ್ಲಿ ಕನ್ನಡ; ಮಹಾದೇವ ಬಣಕಾರ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು – ಇದರಲ್ಲಿ ಆದೇಶಗಳು, ಗೆರೆಝಟಿಯರ್‌ಗಳು, ಪತ್ರವ್ಯವಹಾರ ನಮೂನೆಗಳು, ೧೯೮೬ ರ ವರೆಗಿನ ಸರಕಾರಿ ಆದೇಶಗಳ ಬೆಳವಣಿಗೆಯನ್ನು ಕಾಣಬಹುದು.

## ೪.೨.೧೩.೨ : ಆತ್ಮನಿವೇದನೆ

ಶಿವಾಚಾರ್ಯ ಸ್ವಾಮಿಗಳು (ಮಠದ ಸ್ವಾಮಿಗಳಿಗೆ ಒಂದು ಕೈಪಿಡಿ) : ತರಳಬಾಳು ಪ್ರಕಾಶನ, ಸಿರಿಗೆರೆ, ಚಿತ್ರದುರ್ಗ ಜಿಲ್ಲೆ, ೧೯೮೬

ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳವರು ಬರೆದ ದಿನಚರಿಯ ಆಯ್ದ ಭಾಗಗಳನ್ನು ಈ ದಿನಚರಿ ಒಳಗೊಂಡಿದೆ. ಇದನ್ನು ಹಾ. ಮಾ. ನಾಯಕ ಅವರು ಮಠದ ಸ್ವಾಮಿಗಳಿಗೆ ಇದೊಂದು ಉತ್ತಮ ಕೈಪಿಡಿ ಎಂದಿದ್ದಾರೆ.

ದಿನಚರಿ ಬರೆಯುವವರು ಉದಾತ್ತ ಚೇತನರಾಗಿದ್ದರೆ, ಚಿಂತನಶೀಲರಾಗಿದ್ದರೆ, ವಿಚಾರಪರರಾಗಿದ್ದರೆ, ಆತ್ಮಶೋಧನೆಯು ನಿರೂಪಣೆಗೊಳ್ಳುವದು ಸಹಜ. ಲೌಕಿಕ ಸಂಗತಿಗಳನ್ನು ಕುರಿತು ಆಲೋಚಿಸಿದಾಗ ತಮ್ಮ ಮನಸ್ಸು ಪ್ರತಿಕ್ರಿಯಿಸುತ್ತದೆ ಎಂಬುದನ್ನೂ ಅವರು ದಾಖಲಿಸುತ್ತಾರೆ. ದಿನಚರಿ ಎಂದಮೇಲೆ ಸಾಮಾನ್ಯವಾಗಿ ದೈನಂದಿನ ಲೌಕಿಕ ಸಂಗತಿಗಳು ವರದಿಗೊಂಡಿರುತ್ತವೆ. ದಿನಚರಿ ಮನಸ್ಸಿನ ಕಿಟಕಿ, ಆ ಕಿಟಕಿಯ ಮೂಲಕ ವ್ಯಕ್ತಿತ್ವವನ್ನು ಅಳೆಯಬಹುದು. ದಿನಚರಿ ಖಾಸಗಿ ಆಸ್ತಿ, ಇನ್ನೊಬ್ಬರು ಅದನ್ನು ಬರೆದವರ ಜೀವಿತ ಕಾಲದಲ್ಲಿ, ನೋಡುವದು ಸಾಧ್ಯವಿಲ್ಲ ಎಂಬುದು ಒಂದು ಸಾಮಾನ್ಯ ತಿಳಿವಳಿಕೆ. ಇದರಿಂದ ಬರವಣಿಗೆಯಲ್ಲಿ ಮನಸ್ಸು ಮುಕ್ತವಾಗಿರುತ್ತದೆ. ಉನ್ನತ ಮನಸ್ಸುಗಳ ದಿನಚರಿಗೆ ರಹಸ್ಯದ ಬೇಲಿ ಬೇಕಿರುವುದಿಲ್ಲ. ಏಕೆಂದರೆ ಆ ಅಭಿವ್ಯಕ್ತಿ ಕೇವಲ ತನಗಾಗಿಯಲ್ಲ. ಆದ್ದರಿಂದ ದಿನಚರಿಯು ಉತ್ತಮ ಸಾಹಿತ್ಯವಾಗಿರುವದು. ಚರಿತ್ರೆಯ ಭಾಗವಾಗಿರುವದು. ಸ್ವಾಮಿಗಳ ಬರವಣಿಗೆ ಇಂಥ ಅಪರೂಪದ ಬರವಣಿಗೆ. ಇದಕ್ಕೆ ಆತ್ಮನಿವೇದನೆ ಎಂಬುದಕ್ಕಿಂತಲೂ ಉತ್ತಮವಾದ

ಹೆಸರಿಡುವದು ಸಾಧ್ಯವಿಲ್ಲ; ಲೌಕಿಕ, ಪಾರಮಾರ್ಥಿಕಗಳ ನಡುವೆ ಒದ್ದಾಡುವ ಚೇತನವೊಂದರ ಚಿತ್ರವಿದೆ. ತನ್ನ ಸುತ್ತಲಿನ ಪರಿಸರಕ್ಕೆ ಸ್ಪಂದಿಸಬಲ್ಲ ಹೃದಯವೊಂದರ ಕಳಕಳಿಯಿದೆ; ತಾವೇ ಒಬ್ಬರು ಸ್ವಾಮಿಗಳಾಗಿದ್ದು ಜೊತೆ ಸ್ವಾಮಿಗಳ ಅವ್ಯವಹಾರಗಳಿಗೆ ಕೆರಳುವ ಧೈರ್ಯವಿದೆ; ಶಿಷ್ಯಕೋಟಿಯ ಮೌಢ್ಯಕ್ಕೆ ಪರಿತಪಿಸುವ ಅಂತಃಕರಣವಿದೆ; ಲೋಕ ಕಲ್ಯಾಣದ, ಸಮಾಜಸುಧಾರಣೆಯ ಕನಸುಗಳ ಅಭಿವ್ಯಕ್ತಿಯಿದೆ. ಒಂದು ಮನಸ್ಸು ಎಷ್ಟು ಕಡೆಯಿಂದ ಎಷ್ಟು ಕಾರಣಗಳಿಗಾಗಿ ಮುದುಡುತ್ತದೆ ಮತ್ತು ಅರಳುತ್ತದೆ ಎಂಬುದು ಈ ಆತ್ಮನಿವೇದನೆಯಲ್ಲಿ ಸ್ಪಷ್ಟಗೊಳ್ಳುತ್ತದೆ.

ಈ ಆತ್ಮನಿವೇದನೆಯನ್ನು ಹಾ. ಮಾ. ನಾಯಕರು ಹೀಗೆ ಬಣ್ಣಿಸಿದ್ದಾರೆ: " ಆತ್ಮಜಿಜ್ಞಾಸುಗಳಿಗೆ ಮತ್ತು ಯಾವುದೇ ಮಠದ ಸ್ವಾಮಿಗಳಾಗುವವರಿಗೆ ಈ ಡೈರಿಯು ಒಂದು ಕೈಪಿಡಿಯಾಗಬಲ್ಲುದು " ಎಂದು ಸಂಪಾದಕರು ಭಾವಿಸಿದ್ದಾರೆ. ಈಗಾಗಲೇ ಸ್ವಾಮಿಗಳಾಗಿರುವವರೂ ಇದನ್ನು ಓದುವದು ಒಳ್ಳೆಯದು. ಕನ್ನಡದ ಆಧ್ಯಾತ್ಮಿಕ ಸೋಪಜ್ಞ ಕೊಡುಗೆ.

## ೪.೨.೧೩.೩ : ಆಧುನಿಕ ಕನ್ನಡ ಬರಹಗಾರರು

ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬; ೧೯೮೩ ಡೆಮಿ, xii + ೪೩೨; ೪೫=೦೦

**ಸಂಪಾದಕ ಮಂಡಳಿಯ ಸದಸ್ಯರು :** ಹಾ. ಮಾ. ನಾಯಕ, ಕೆ. ಎಸ್. ದೇಶಪಾಂಡೆ, ಪ್ರಭುಶಂಕರ, ಪಿ. ಕೆ. ಪಾಟೀಲ, ಆರ್. ಎಲ್. ಅನಂತರಾಮಯ್ಯ, ಕನ್ನಡ ಗ್ರಂಥಸೂಚಿ ಸಿದ್ಧತೆಯಲ್ಲಿ ಉಪ ಉತ್ಪನ್ನವಾಗಿ ರೂಪುಗೊಂಡಿದ್ದು, ವೆಬ್‌ಸ್ಟರ್ಸ್ ಬಯೋಗ್ರಾಫಿಕಲ್ ಡಿಕ್ಷನರಿಯನ್ನು ಆದರ್ಶವಾಗಿರಿಸಿಕೊಂಡಿದೆ. ಆಧುನಿಕ ಕನ್ನಡ ಲೇಖಕ, ಲೇಖಕಿಯರಿಗೆ ಸಂಬಂಧಿಸಿದಂತೆ ಮಾಹಿತಿ ನೀಡುವ ಕೃತಿ. ಅನುಬಂಧಗಳಲ್ಲಿ ಹೆಚ್ಚಿನ ಉಲ್ಲೇಖಗಳು ಮತ್ತು ಕಾವ್ಯನಾಮಗಳ ಸೂಚಿ, ಹೊದಿಕೆ ಚಿತ್ರ ಕೆ. ಎಲ್. ವೆಂಕಟೇಶ ಅವರದು.

ಗುಲಬರ್ಗಾ ವಿಭಾಗದ ಲೇಖಕರು, ಗುಂಜಾಳ (ಎಸ್. ಆರ್.), ಗವೀಶ ಹಿರೇಮಠ, ಗುಲಬರ್ಗಾ ವಿಶ್ವವಿದ್ಯಾಲಯ, ೧೯೮೬, ಗುಲಬರ್ಗಾ ಪ್ರಕಟಣೆ; ಕನ್ನಡ ಲೇಖಕರ ವಿಳಾಸಗಳು : ಚಂದ್ರಶೇಖರ ಪಾಟೀಲ; ಸಂಕ್ರಮಣ ಪ್ರಕಾಶನ, ಧಾರವಾಡ, ೧೯೯೧, ರಾಯಚೂರು ಜಿಲ್ಲೆಯ ಬರಹಗಾರರು, ಅಶೋಕಸ್ವಾಮಿ ಹೇರೂರು, ಗಂಗಾವತಿ ೧೯೮೯; ಗದಗ ಜಿಲ್ಲೆಯ ಬರಹಗಾರರು : ಸಿ. ವಿ. ಕೆರಿಮನಿ, ಕನ್ನಡ ಸಾಹಿತ್ಯ ಪರಿಷತ್ತು, ಗದಗ, ೨೦೦೦; ಕಾಸರಗೋಡಿನ ಜಿಲ್ಲೆಯ ಸಾಹಿತಿಗಳು, ಕಲಾವಿದರ : ಅವರ ಗ್ರಂಥಗಳ ಗ್ರಂಥಸೂಚಿ, (ಅಪ್ರಕಟಿತ); ದಕ್ಷಿಣ ಭಾಷಾ ಅಧ್ಯಯನ ಸಂಸ್ಥೆಯ ಬರಹಗಾರರ ಸೂಚಿ ಇತ್ಯಾದಿಗಳು ಈ ದಿಶೆಯಲ್ಲಿ ಉಲ್ಲೇಖನೀಯವಾಗಿದ್ದರೂ

ಇವುಗಳ ವಿವರಣೆಯಲ್ಲಿ ಕೊರತೆಗಳು, ದೋಷಗಳು ಎದ್ದುಕಾಣುತ್ತವೆ. ಶಿಸ್ತುಬದ್ಧವಾಗಿ, ವರ್ಣಾನುಕ್ರಮವಾಗಿ ಬಂದಿರುವುದಿಲ್ಲ. ಮುಂದಿನ ಬರಹಗಾರರಿಗೆ ತರಬೇತಿ ನೀಡಬೇಕಾಗಿದೆ. ಈಗಾಗಲೇ ಬೆಳಗಾವಿ, ಮಂಡ್ಯ, ಕೊಡಗು, ದಕ್ಷಿಣಕನ್ನಡ ಬರಹಗಾರರು, ಕೋಲಾರ ಜಿಲ್ಲಾ ಬರಹಗಾರರು, ಉತ್ತರ ಕನ್ನಡ ಜಿಲ್ಲಾ ಬರಹಗಾರರು, ಚಿತ್ರದುರ್ಗ ಬರಹಗಾರರು, ಚಿಕ್ಕಮಗಳೂರು ಜಿಲ್ಲಾ ಬರಹಗಾರರು, ತುಮಕೂರು ಜಿಲ್ಲೆಯ ಬರಹಗಾರರು, ಹಾಸನ ಜಿಲ್ಲೆ, ಗುಂಜಾಳರ ವಚನಕಾರರು ಮತ್ತು ವಚನಾಂಕಿತಗಳು, ವೆಂಕಟರಮಣಯ್ಯ ಅವರ ಕನ್ನಡ ಲೇಖಕರ ಕಾವ್ಯನಾಮ - ನಿಜನಾಮಗಳು ಈ ದಿಶೆಯಲ್ಲಿ ಪ್ರಕಟಿತ ಕೃತಿಗಳು ಗಮನಾರ್ಹವಾಗಿವೆ. ಉಳಿದ ಜಿಲ್ಲೆಗಳ ಬರಹಗಾರರ ಸೂಚಿಯನ್ನು ಪ್ರಕಟಿಸಿದ್ದಾದರೆ ಬರಹಗಾರರ ಒಟ್ಟು ಪರಿಚಯ ಮತ್ತು ಕೃತಿಗಳನ್ನು ಅಧ್ಯಯನಕ್ಕೆ ಗಮನಿಸಬಹುದು. ಉಳಿದ ಜಿಲ್ಲೆಯ ಕೃತಿಗಳು ಬೇಗ ಪ್ರಕಟವಾಗಿ ಈ ದಿಶೆಯಲ್ಲಿ ಅಧ್ಯಯನ ನಡೆಸಲು ಅನುಕೂಲವಾದೀತು ಎಂದು ಆಶಿಸೋಣ.

## ೪.೨.೧೩.೪ : ಕನ್ನಡ ಲೇಖಕರ ಕೃತಿಗಳ ಪರಿಚಯ : ಮಾಹಿತಿ ಪುಸ್ತಕ

ಇನ್ನು ಚಂದ್ರಶೇಖರ ಪಾಟೀಲರ ಲೇಖಕರ, ಕೃತಿಗಳ ಪರಿಚಯ ಮಾಹಿತಿ ಪುಸ್ತಕ ಇಷ್ಟರಲ್ಲಿಯೇ ಹೊರಬರಲಿದೆ. ಅದು ಹೊರಬಂದರೆ ಕನ್ನಡದಲ್ಲಿ ಸಾಹಿತಿಗಳ ಪರಿಚಯ ಮತ್ತು ಅವರ ಕೃತಿಗಳ ಪರಿಚಯ ಅಂಕಿ-ಸಂಖ್ಯೆಗಳ ನಿರ್ಣಯವನ್ನು ಮಾಡಬಹುದು. ಈ ಶತಮಾನದಲ್ಲಿ ೨೦ ನೇ ಶತಮಾನದ ಕೊನೆಯಲ್ಲಿ ಮಧ್ಯಯುಗದ ಲೇಖಕರ ಪರಿಚಯ ಮತ್ತು ಕೃತಿಗಳ ವಿವರಗಳನ್ನೊಳಗೊಂಡ ಪುಸ್ತಕ ಇದಾಗಲಿದೆ.

### ಕನ್ನಡ ಲೇಖಕರ ವಿಳಾಸಗಳು ನಾಲ್ಕನೆಯ ಪರಿಷ್ಕೃತ ಆವೃತ್ತಿಯಿಂದ

ಕನ್ನಡ ಲೇಖಕರ ವಿಳಾಸಗಳು, ಅವರ ಪ್ರಕಟಿತ ಕೃತಿಗಳು, ಜೊತೆಗೆ ಅವರ ಜೀವನ ವಿವರ (ಬಯೋಡೇಟಾ) ಈ ಪುಸ್ತಕದಲ್ಲಿ ದಾಖಲಾಗಲಿದೆ. ಹೀಗಾಗಿ ಇದೊಂದು ಸಾಹಿತಿಗಳ ಕೃತಿಗಳನ್ನು ಅಭ್ಯಾಸ ಮಾಡಲು, ಸಂಶೋಧಕರಿಗೆ, ಶಿಕ್ಷಕರಿಗೆ ಒಂದು ಪರಿಚಯ ಪುಸ್ತಕ / ಆಕರಸೂಚಿಯಾಗಬಲ್ಲದು. ಜೊತೆಗೆ ಅವರ ವೃತ್ತಿ, ಸಾಹಿತ್ಯ ಸೃಷ್ಟಿ, ಪುರಸ್ಕಾರ - ಪ್ರಶಸ್ತಿ ಮುಂತಾದ ಮಾಹಿತಿಯನ್ನೊಳಗೊಂಡ ಬೃಹತ್ ಕೈಪಿಡಿಯ ಪೂರ್ವ ತಯಾರಿ ಸಾಗಿದೆ. ಸುಮಾರು ಮೂರು ಸಾವಿರ ಲೇಖಕರಿದ್ದು, ಎಲ್ಲೆಡೆಯಿಂದ ಮಾಹಿತಿ ಸಂಗ್ರಹಿಸಲಾಗುತ್ತಿದೆ. ಕನ್ನಡ ಪುಸ್ತಕ ಪ್ರಕಾಶಕರ, ಮಾರಾಟಗಾರರ ಮತ್ತು ಪತ್ರಿಕೆಗಳ ವಿವರಗಳೂ ಬರಲಿವೆ.

### ಕನ್ನಡ ಲೇಖಕರ ವಿಳಾಸಗಳು : ೪ ನೆಯ ಆವೃತ್ತಿ

### ಲೇಖಕರ ಮಾಹಿತಿ

೧. ಹೆಸರು : ..........................................................................................

೨. ಹುಟ್ಟಿದ ಊರು / ದಿನಾಂಕ : ..........................................................................

೩. ಶಿಕ್ಷಣ ಮತ್ತು ವೃತ್ತಿ : ..........................................................................................

೪. ವಿಳಾಸ : ..........................................................................................

..........................................................................................

.......................................................................... ಫೋನ್ : ..............................

ಪಿನ್ ಕೋಡ್ : ..............................

೫. ಪ್ರಕಟಿತ ಕೃತಿಗಳು : ..........................................................................................

ಶೀರ್ಷಿಕೆ : .......................................................... ಸಾಹಿತ್ಯ ಪ್ರಕಾರ ೧ನೆಯ ಪ್ರಕಟನೆಯ ವರ್ಷ

೬. ಬಹುಮಾನ / ಪ್ರಶಸ್ತಿಗಳು (ಪಡೆದ ವರ್ಷ) ..........................................................................

..........................................................................................

..........................................................................................

..........................................................................................

## ೪.೨.೧೩.೫ : ಶಿವರಾಂ ಕಾರಂತ ವಾಙ್ಮಯ ವೃತ್ತಾಂತ

ಡಾ. ಕೋಟ ಶಿವರಾಂ ಕಾರಂತರ ವ್ಯಕ್ತಿಚಿತ್ರ ಮತ್ತು ಅವರ ಸಮಗ್ರ ಕೃತಿಗಳ ಸಾರಸಂಗ್ರಹ (Abstract) ಗಳನ್ನು ಇಲ್ಲಿ ಕೊಡಲಾಗಿದೆ. ಅವರ ಹವ್ಯಾಸಗಳಾದ ಚಿತ್ರಕಲೆ, ಬಂಧು-ಬಳಗ ಪರಿಚಯ, ಕಾರಂತರ ವಿಳಾಸ, ಕಾರಂತರ ಹಸ್ತಾಕ್ಷರಗಳು (ಕನ್ನಡ ಮತ್ತು ಇಂಗ್ಲೀಷ) ದಾಖಲಾಗಿವೆ. ಕಾರಂತರಿಗೆ ದೊರೆತ ಗೌರವ, ಪ್ರಶಸ್ತಿಗಳು ಸೇರಿವೆ. ಮತ್ತಷ್ಟು ಗೌರವ, ಸಾಮಾನಗಳು, ಕಾರಂತ ವ್ಯಕ್ತಿವಾಙ್ಮಯದ ಕುರಿತು ಪ್ರಕಟವಾದ ಕೃತಿಗಳು, ಅನುಕ್ರಮವಾಗಿ ಇಲ್ಲಿ ಉಲ್ಲೇಖನಗೊಂಡಿವೆ. ವಿಮರ್ಶಕರು ಸಾಹಿತಿಗಳು ಇವರ ಬಗ್ಗೆ ಸಾಕಷ್ಟು ಪುಸ್ತಕಗಳನ್ನು ಸೃಜಿಸಿದ್ದಾರೆ. ಕನ್ನಡದಲ್ಲಿ ಇವರಷ್ಟು ಕೃತಿರಚನೆ ಮಾಡಿದ ಸಾಹಿತಿ ಕನ್ನಡದಲ್ಲಿ ಮತ್ತೊಬ್ಬರಿಲ್ಲ. ಅಷ್ಟೇ ಅಲ್ಲ ಅವರು ವಿಜ್ಞಾನ, ಸಿನಿಮಾ, ಯಕ್ಷಗಾನ, ಪ್ರವಾಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಇವರು ಮೈಗೂಡಿಸಿಕೊಂಡ ಹವ್ಯಾಸಗಳು ಹಲವು. ೩೫ ಸಾವಿರ ಪುಟಗಳಷ್ಟು ಸಾಹಿತ್ಯ ಸೃಷ್ಟಿ ನಮ್ಮನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತದೆ.

೧೯೭೪ ರಿಂದ ಬಿ. ಮಾಲಿನಿ, ಮಲ್ಯರು ಅವರ ಬರವಣಿಗೆಯ ಕೆಲಸಕ್ಕೆ ಸಹಾಯ ನೀಡಿದ ಸಾಹಿತಿ, ವಕ್ತಾರೆ, ಬರಿ ವಕ್ತಾರೆ ಅಷ್ಟೇ ಅಲ್ಲ. ಅವರೊಬ್ಬ ಉತ್ತಮ ಪರಿಚಾರಿಕೆ. ಸಾಹಿತ್ಯಾಭಿಮಾನಿಗಳು, ಕಾರಂತರ ಒಡನಾಡಿ. 'ನಾನು ಕಂಡ ಕಾರಂತರು' ಇವರ ಮಹತ್ವದ ಕೃತಿ. ಕಾರಂತರ ಕುರಿತು ಪ್ರಭುತ್ವ ಹೊಂದಿದವರು. 'ಕೃತಿ ಕರಂಡ' ಕೃತಿಗಳು ಬಂದಿವೆ.[೬೫]

# ಕಾರಂತ – ವ್ಯಕ್ತಿ ಮತ್ತು ವಾಙ್ಮಯದ ಕುರಿತು ಪ್ರಕಟವಾದ ಕೃತಿಗಳು

(ಕಾರಂತರ ವ್ಯಕ್ತಿಚಿತ್ರಣ ಹಾಗೂ ಅವರ ಸಾಹಿತ್ಯ ಕೃತಿಗಳ ಕುರಿತು ನೂರಾರು ಲೇಖನಗಳು ಪ್ರಕಟವಾಗಿವೆ. ಇಲ್ಲಿ ಕೇವಲ ಪುಸ್ತಕಗಳ ಪಟ್ಟಿಯನ್ನು ಕೊಡಲಾಗಿದೆ.)

**ಕಾರಂತರ ಕಾದಂಬರಿಗಳು, 1948**
ಮೈಸೂರು, ಉಷಾ ಸಾಹಿತ್ಯ ಮಾಲೆ.
ಪ್ರಾ। ಎಸ್. ಅನಂತನಾರಾಯಣ ವಿರಚಿತ.
1948ರ ತನಕದ ಕಾದಂಬರಿಗಳ ವಿಮರ್ಶೆ.

**ಶಿವರಾಮ ಕಾರಂತ, 1956**
ಉಡುಪಿ, ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು
ಪ್ರಾ। ವಿ. ಸೀತಾರಾಮಯ್ಯನವರಿಂದ ಕಾರಂತರ
ಹಾಗೂ ಅವರ ಸಾಹಿತ್ಯದ ಕಿರು ಪರಿಚಯ.

**ಕಾರಂತ ಅರುವತ್ತು, 1962**
ಉಡುಪಿ, ಕಾರಂತ ಸನ್ಮಾನ ಸಮಿತಿ
ಕಾರಂತ ಷಷ್ಠ್ಯಬ್ದಿ ಸಮಾರಂಭದ ವೇಳೆಯಲ್ಲಿ ಪ್ರಕಟಿಸಿದ ಸಂಪುಟ.

**ಕಾರಂತ ಪ್ರಪಂಚ, 1969**
ಉಡುಪಿ, ಕಾರಂತ ಅಭಿನಂದನ ಸಮಿತಿ.
ಕಾರಂತ ಸಾಹಿತ್ಯ ಮತ್ತು ಕಲಾ ಪ್ರತಿಭೆಗಳ ಬಗ್ಗೆ ಸುಮಾರು
ಅರುವತ್ತು ಪ್ರಸಿದ್ಧ ಸಾಹಿತಿಗಳ ಲೇಖನಗಳಿವೆ.

**ಅಭಿನಂದನ, 1969**
ಉಡುಪಿ, ಕಾರಂತ ಅಭಿನಂದನಾ ಸಮಿತಿ.
ಕಾರಂತ ಅಭಿನಂದನ ಉತ್ಸವದ ನೆನಪಿನ ಸಂಚಿಕೆ

**ಅಭಿವಂದನ, 1970**
ಉಡುಪಿ, ಮಹತ್ಮಾಗಾಂಧಿ ಮೆಮೋರಿಯಲ್ ಕಾಲೇಜು,
ಅಭಿನಂದನ ಕಾರ್ಯಕ್ರಮದ (1969 ನವೆಂಬರ್ 5, 6) ಭಾಷಣ ಮತ್ತು ವಿವರಗಳಿವೆ.



**SHIVARAMA KARNATH, 1973**
Mysore, Institute of Kannada Studies, University of Mysore.
ಪ್ರಾ। ವಿ. ಎಂ. ಇನಾಂದಾರರು ಬರೆದ ಕೃತಿ.

**ಶಿವರಾಮ ಕಾರಂತ–ಬದುಕು ಬರಹ– 1978**
ಪ್ರಾ। ವಿ. ಎಂ. ಇನಾಂದಾರರು ಬರೆದ ಗ್ರಂಥ
ಪ್ರ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

**ಕಾರಂತ ಕಿರಣ, 1978**
ಬೆಂಗಳೂರು, ಅಭಿನಂದನ ಉತ್ಸವ ಸಮಿತಿ.
(ಜ್ಞಾನಪೀಠ ಪ್ರಶಸ್ತಿಗಾಗಿ ಅಭಿನಂದಿಸಿ ಬರೆದ ಲೇಖನಗಳು–
10 ಕನ್ನಡ, 4 ಇಂಗ್ಲೀಷ್ ಲೇಖನಗಳಿವೆ.
ಸಂಪಾದಕರು : ಪ್ರಾ। ಎಲ್. ಎಸ್. ಶೇಷಗಿರಿರಾವ್.

**ಸಾಕ್ಷಿ, 1978 ಎಪ್ರಿಲ್ ವಸಂತ ಸಂಚಿಕೆ**
ಸಾಗರ, ಸಾಕ್ಷಿ ತ್ರೈಮಾಸಿಕ–
ಶಿವರಾಮ ಕಾರಂತರ ಕಾದಂಬರಿಗಳು–ವಿಶೇಷ ಸಂಚಿಕೆ.
7 ವಿದ್ವಾಂಸರ ಲೇಖನಗಳಿವೆ. ಸಂಪಾದಕರು : ರಾಮಚಂದ್ರ ದೇವ

**ಸಾಧನೆ, 1978, ಜುಲೈ – ಸಪ್ತಂಬರ**
ಬೆಂಗಳೂರು, ಬೆಂಗಳೂರು ವಿ. ವಿ.
ಬೆಂಗಳೂರು ವಿಶ್ವವಿದ್ಯಾಲಯದ ಈ ಪತ್ರಿಕೆಯ ಸಂ. 7,
ಸಂಚಿಕೆ 3ರಲ್ಲಿ ಕಾರಂತರ ಕಾದಂಬರಿಗಳ ಕುರಿತಾದ 7 ವಿಮರ್ಶಾ ಬರಹಗಳಿವೆ.
ಪ್ರಧಾನ ಸಂಪಾದಕರು : ಜಿ. ಎಸ್. ಶಿವರುದ್ರಪ್ಪ.

**ಹತ್ತುಮುಖ–ಅಭಿನಂದನ– 1978**
ಮಂಗಳೂರು, ಕಾರಂತ ಅಭಿನಂದನ ಸಮಿತಿ.

**ಜೀವನ ವಿಕಾಸ, 1979 ಮೇ – ಜೂನ್**
ಕಲಬುರ್ಗಿ, (ಶಿವರಾಮ ಕಾರಂತ ವಿಶೇಷಾಂಕ) ಜೀವನ ವಿಕಾಸ
ಕಾರಂತರ ಬರವಣಿಗೆಯ ಮೇಲೆ ಬರೆದ 18 ಬರಹಗಳಿವೆ.

ಸಂಕಿರಣ, 1979
ಮಲ್ಲಾಡಿಹಳ್ಳಿ, ಸಾಹಿತ್ಯ ಸಂಘ, ಕಿರಿಯ ಕಾಲೇಜು –
1978ರ ದಶಂಬರ 9, 10 ಮತ್ತು 11 ರಂದು
ಜರುಗಿದ ಸೆಮಿನಾರಿನಲ್ಲಿ ಓದಿದ ಪ್ರಬಂಧಗಳು
ಮುಖ್ಯವಾಗಿ ಕಾದಂಬರಿಗಳ ಕುರಿತಾದ ಅಧ್ಯಯನ
ಪೂರ್ಣವಾದ ಬರಹಗಳಿವೆ.

ಕಾರಂತರ ಕಾದಂಬರಿಗಳಲ್ಲಿ ಗಂಡು, ಹೆಣ್ಣು, 1982
ಸಾಗರ, ಅಕ್ಷರ ಪ್ರಕಾಶನ
ಟಿ. ಪಿ. ಅಶೋಕರು ರಚಿಸಿರುವ ವಿಮರ್ಶಾ ಕೃತಿ

ಕಾರಂತ – ಕೆಲವು ಮುಖಗಳು, 1982
ಮೈಸೂರು, ಮಿತ್ರ ಪ್ರಕಾಶನ

ಶಿವರಾಮ ಕಾರಂತ – ಹತ್ತು ಅಧ್ಯಯನಗಳು, 1982
ಮೈಸೂರು, ಭಾರತೀ ಪ್ರಕಾಶನ
ಕಾರಂತರ ಕಾದಂಬರಿ, ನಾಟಕ, ಯಕ್ಷಗಾನ ಮುಂತಾದವುಗಳ ಸಮೀಕ್ಷೆ.
ಸಂಪಾದಕರು : ಶಿವರಾಮು ಕಾಡನಕುಪ್ಪೆ.

ಕಾರಂತ – ಹಕ್ಕಿ ನೋಟ, 1983
ಮೈಸೂರು, ಅರ್ಕಾವತಿ ಪ್ರಕಾಶನ
ಎಸ್. ಚೆನ್ನಪ್ಪನವರು ಎಳೆಯರಿಗಾಗಿ ಕಾರಂತರ ವ್ಯಕ್ತಿತ್ವದ
ಕಿರು ನೋಟವನ್ನು ಒದಗಿಸಿದ್ದಾರೆ.

ಕಾದಂಬರಿಕಾರರಾಗಿ ಕಾರಂತ, 1983
ಬೆಂಗಳೂರು, ಕನ್ನಡ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ
ಕಾರಂತರ ಕಾದಂಬರಿಗಳ ಕುರಿತಾದ ಸೆಮಿನಾರಿನಲ್ಲಿ ವಿದ್ವಾಂಸರು
ಓದಿದ ಪ್ರಬಂಧಗಳು, ಅಧ್ಯಕ್ಷೀಯ ಭಾಷಣ ಇತ್ಯಾದಿ.
ಸಂಪಾದಕರು : ಜಿ. ಎಸ್. ಶಿವರುದ್ರಪ್ಪ.

ಮೂಕಜ್ಜಿಯ ಕನಸುಗಳು ಮತ್ತು ಮಾನವಶಾಸ್ತ್ರ
ಸಾಲಿಗ್ರಾಮ, ಆತ್ರೇಯ ಪ್ರಕಾಶನ
ಜಿ. ಭಾಸ್ಕರ ಮಯ್ಯರು ಬರೆದ ವಿಮರ್ಶೆ



ನಾನು ಕಂಡ ಕಾರಂತರು, 1987
ಸಾಗರ, ಅಕ್ಷರ ಪ್ರಕಾಶನ
ಮಾಲಿನಿ ಮಲ್ಯರಿಂದ ರಚಿತವಾದ ವ್ಯಕ್ತಿ ಪರಿಚಯ

ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆ, 1990
ಪುತ್ತೂರು, ಕರ್ನಾಟಕ ಸಂಘ
ಟಿ. ಪಿ. ಅಶೋಕರ ವಿಮರ್ಶಾಕೃತಿ.

ಕಾರಂತರ ಕಾದಂಬರಿಗಳು – ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ, 1990
ಪುತ್ತೂರು, ಕರ್ನಾಟಕ ಸಂಘ
ಮರಾಠಿ ಸಾಹಿತಿ ಡಾ। ಸುಧಾಕರ ದೇಶಪಾಂಡೆ ಬರೆದ ವಿಮರ್ಶಾ ಗ್ರಂಥ.
ಕನ್ನಡ ಅನುವಾದ : ವಿರೂಪಾಕ್ಷ ಕುಲಕರ್ಣಿ.

ಕಾರಂತರ ಕಾದಂಬರಿಗಳಲ್ಲಿ ನಿಸರ್ಗ 1992
ಪುತ್ತೂರು, ಕರ್ನಾಟಕದ ಸಂಘ.
ಪ್ರೊ। ಎಸ್. ಅನಂತನಾರಾಯಣರು ಬರೆದ ಸಾಹಿತ್ಯ ವಿಮರ್ಶೆ.

# ವಿಷಯಾನುಕ್ರಮಣಿಕೆ

ಬಿ. ಮಾಲಿನಿ ಮಲ್ಯ ಈ ಗ್ರಂಥರಚನೆಯ ಹಿಂದಿನ ಪ್ರೇರಣೆಗಳನ್ನು ಹೀಗೆ ಹೇಳಿದ್ದಾರೆ:

" ಕಾರಂತರ ಸಮಗ್ರ ಸಾಹಿತ್ಯಕೃತಿಗಳ ಸ್ಥೂಲ ಅವಲೋಕನವನ್ನು ಒಂದೆಡೆಯಲ್ಲಿ ಸಾರಸಂಗ್ರಹವಾಗಿ ಕೊಟ್ಟಿದ್ದರ ಉದ್ದೇಶವೇ. ಅವರು ಬಳಸಿಕೊಂಡಿರುವ ವಸ್ತುವಿನ ವೈವಿಧ್ಯತೆಯ ಇಣುಕುನೋಟವನ್ನು ಓದುಗರ ಕಣ್ಮುಂದೆ ಇರಿಸುವ ಹಂಬಲದಿಂದ ಆರೇಳು ದಶಕಗಳಿಂದ ಅವರು ಅವಿರತವಾಗಿ ಬರೆಯುತ್ತಲೇ ಇದ್ದಾರೆ! ಹಾಗಾಗಿ ಎಂದೋ ಬರೆದು ಪ್ರಕಟಿಸಿದ ಅವರ ಕೆಲವಾರು ಕೃತಿಗಳನ್ನು ಬಹಳಷ್ಟು ಮಂದಿ ಓದಿರಲಾರರು. ಈ ದೃಷ್ಟಿಯಿಂದಲೂ ನನ್ನ ಈ ಗ್ರಂಥ ಕಾರಂತ ಸಾಹಿತ್ಯಾಭ್ಯಾಸಿಗಳಿಗೆ ಆಕರ ಗ್ರಂಥವಾಗಿ ನೆರವಾದೀತೆಂಬ ಆಶಯ ನನ್ನದು."

ಇದು ಆಕರಗ್ರಂಥವೆಂಬುದನ್ನು ಯಾರು ಮರೆಯಬಾರದು. ಸೃಜನಶೀಲ ಕೃತಿಗಳ ಸಾರಸಂಗ್ರಹವಿದ್ದರೆ, ಸೃಜನೇತರ ಗ್ರಂಥಗಳ ವಿಷಯಸೂಚಿಯ ವಿವರಗಳನ್ನಷ್ಟೆ ತಿಳಿಸಿದ್ದೇನೆ. ಇಷ್ಟರವರೆಗೆ ಹೊರಬಂದ ಕಾರಂತ ಕೃತಿ ಸೂಚಿಗಳಲ್ಲಿಯೇ ಇದು ಅತ್ಯಂತ ಹೆಚ್ಚು ಕಾರಂತ ಕೃತಿಗಳನ್ನೊಳಗೊಂಡಿದೆ. ಸೂಚಿಯ ನಿಖರತೆಯ ಬಗ್ಗೆಯೂ ವಿಶೇಷ ಶ್ರಮಪಟ್ಟು ಗಮನ ಹರಿಸಲಾಗಿದೆ. ಕಾರಂತರ ಸಮಗ್ರ ಸಾಹಿತ್ಯದ ಮೊತ್ತಮೊದಲ ವಿಸ್ತೃತ ಸಾರ ಸಂಗ್ರಹವೂ ಇದಾಗಿರುವುದರಿಂದ. ಕಾರಂತ ಸಾಹಿತ್ಯಾಭ್ಯಾಸಿಗಳಿಗೆ. ವಿಮರ್ಶಕರಿಗೆ ಆಕರ ಗ್ರಂಥವಾಗಿ ಹೆಚ್ಚು ಪ್ರಯೋಜನಕಾರಿಯಾಗಿದೆ.

ಕಾರಂತರ ಹಲವಾರು ಕೃತಿಗಳು ಭಾರತದ ವಿವಿಧ ಭಾಷೆಗಳಲ್ಲಿ ಅನುವಾದಗೊಂಡಿವೆ. ಅವರ ಹಲವಾರು ಕೃತಿಗಳು ಹಲವು ಬಾರಿ ಮರುಮುದ್ರಣಗೊಂಡಿವೆಯಾದರೂ ಆ ಕುರಿತು ನಿಖರವಾದ ಮಾಹಿತಿಯನ್ನು ಪಡೆಯುವುದು ಅಸಾಧ್ಯವಾದುದರಿಂದ ಆ ಕುರಿತು ವಿವರಗಳನ್ನು ಒದಗಿಸದಿರುವುದು. ಅನಿವಾರ್ಯವಾಗಿದೆ. ವಸ್ತುವಿನ ದೃಷ್ಟಿಯಿಂದ ಮಹತ್ವವಾಗಿವೆ. ವಸ್ತುವಿನ ವೈವಿಧ್ಯತೆ. ವೈವಿಧ್ಯಮಯ ಸಾಹಿತ್ಯ ಪ್ರಕಾರಗಳ ಮೂಲಕ ತಮ್ಮ ಸೃಜನಶೀಲತೆಯನ್ನು ಸಾಧಿಸುವುದರಿಂದ ಅವರೊಬ್ಬ ಅತ್ಯಂತ ಪ್ರಮುಖ ಲೇಖಕರು. ಇದು ವಿಮರ್ಶಾ ಗ್ರಂಥವಲ್ಲ. ಒಬ್ಬ ಸಾಹಿತಿಯ ಜೀವನದ ಪ್ರಮುಖ ಘಟನೆಗಳು. ಅವರ ಕೃತಿಗಳ ಸಾರಸಂಗ್ರಹದ ದಾಖಲೆ ಅಷ್ಟೆ. ಸಿ. ಎನ್. ರಾಮಚಂದ್ರನ್ ಅವರು ಕಾರಂತರನ್ನು ಕುರಿತು ಮಾತನಾಡಿದ ಮಾತುಗಳು: " ಆಂಗ್ಲ ಸಾಹಿತ್ಯದಲ್ಲಿಯೂ ಇಷ್ಟೊಂದು ವೈವಿಧ್ಯಮಯ ವಿಷಯಗಳನ್ನು ಬಳಸಿಕೊಂಡು ಕೃತಿಗಳನ್ನು ರಚಿಸಿದ ಸಾಹಿತಿ ಇಲ್ಲ " ಇದು ಉತ್ಪ್ರೇಕ್ಷೆಯಲ್ಲ. ಇದರಿಂದ ಶಿವರಾಮ ಕಾರಂತರ ವ್ಯಕ್ತಿತ್ವ ಅರ್ಥವಾಗಬಹುದು.

## ವಿಷಯಾನುಕ್ರಮಣಿಕೆ

## ೪.೨.೧೩.೬ : ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ ಸಂಪುಟಗಳು : ಒಟ್ಟು ಒಂಬತ್ತು

ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ ಸಂಪುಟಗಳ ವಿವರಗಳನ್ನು ಒಟ್ಟು ಒಂಬತ್ತು ಪುಟಗಳಲ್ಲಿ ನೀಡಲಾಗಿದೆ. ಈ ವಿಧವಾದ ವರ್ಣನಾತ್ಮಕ ಸೂಚಿಯು ಕನ್ನಡ ವಿದ್ವಾಂಸರಿಗೆ ಅನೇಕ ದೃಷ್ಟಿಯಿಂದ ಉಪಯುಕ್ತವೆಂಬುದನ್ನು ಮನಗಂಡು ಸಂಸ್ಥೆಯು ಕ್ರಿ. ಶ. ೧೯೪೫ ರ ವರೆಗೆ ಸಂಗ್ರಹಿಸಿರುವ ಕೈಬರಹದ ಕನ್ನಡ ಗ್ರಂಥಗಳ ವರ್ಣನಾತ್ಮಕ ಸೂಚಿಯನ್ನು ಅತ್ಯಲ್ಪ ಕಾಲದಲ್ಲಿ ಸಿದ್ಧಪಡಿಸಿದೆ. ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಲಾಗಿದೆ. ೬೬ ಒಟ್ಟು ೫೧೪ ಕೃತಿಗಳ (೧೦೦೦ - ೧೫೧೫) ವಿವರಣೆಯನ್ನು ಕೊಟ್ಟಿದೆ. ೧೯೬೨ - ೬೩ ರಲ್ಲಿ ಪ್ರಾಚ್ಯ ಸಂಶೋಧನ ಾಲಯ ಮಾಲೆಯಲ್ಲಿ ಹೊರಬಂದಿವೆ. ಅಲ್ಲಿಂದೀಚೆಗೆ ಮಾರ್ಚ್ ೧೯೭೮ ರ ವರೆಗೆ ಸಂಗ್ರಹಿತವಾದ ಹಸ್ತಪ್ರತಿಗಳ ಸೂಚಿಗಳು ಐದು ಸಂಪುಟಗಳಲ್ಲಿ ಹೊರಬಂದಿವೆ.

ಇದರಲ್ಲಿ ೧) ಕನ್ನಡ ಹಸ್ತಪ್ರತಿಗಳಲ್ಲಿ ಸೇರಿರುವ ಸಂಸ್ಕೃತ ಗ್ರಂಥಗಳು, ೨) ಕನ್ನಡ ಹಸ್ತಪ್ರತಿಗಳಲ್ಲಿ ಸೇರದಿರುವ ಸಂಸ್ಕೃತ ಗ್ರಂಥಗಳು, ೩) ಕೃತಿಗಳ ಅಕಾರಾದಿ ಪಟ್ಟಿಯು – ಈ ಸಂಪುಟಗಳ ಮೆರಗನ್ನು ಹೆಚ್ಚಿಸಿದೆ.

ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ

# ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ



ತೃತೀಯ ಸಂಪುಟ (ಬ-ಲೋ)




ಪ್ರಾಚ್ಯವಿದ್ಯಾ ಸಂಶೋಧನಾಲಯ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

A DESCRIPTIVE

# CATALOGUE OF KANNADA MANUSCRIPTS

in the

Oriental Research Institute, Mysore.

Vol. II (Chi-pa)

*General Editor :*
H. DEVEERAPPA, M.A.,
Director.

*Editor :*
S. S. SANNAIAH, M.A.,
Asst. Director.

*Assisted by :*
The Research Assistants.




ORIENTAL RESEARCH INSTITUTE.
UNIVERSITY OF MYSORE.
MYSORE.

1962

ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ

# ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚೀ

ದ್ವಿತೀಯ ಸಂಪುಟ (ಚಿ-ಪ)

ಪ್ರಧಾನ ಸಂಪಾದಕರು :
ಹೆಚ್. ದೇವೀರಪ್ಪ, ಎಂ. ಎ.
ಡೈರೆಕ್ಟರ್.




ಪ್ರಾಚ್ಯವಿದ್ಯಾ ಸಂಶೋಧನಾಲಯ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

1962

498

| | | |
|---|---|---|
| ಕೆ ೧೨೩ | ಚಿಕ್ಕದೇವರಾಜ ವಂಶಾವಳಿ | ಗದ್ಯ |
| ೧೬.೧ × ೧.೪ | ತಿರುಮಲಾರ್ಯ | ೧೬೮೦ |
| ೪೪—೧೧೪ ಪತ್ರ | ೬ ಪಂಕ್ತಿ | ೬೦ ಅಕ್ಷರ |

ಆದಿ : ಸಟ್ಟಸಡುವೆ ಸೆಟ್ಟವೊಂಗಳೆಯೊಳ್ ಕಟ್ಟದೆ ಕಾರ್ಗೋಡಗದ ಸರಪಣಿಯ ಕೀಲಂ ಕಳಲ್ಚಿ ಪೆಡತಲೆ ಪಿಡಿರ್ದನೆಳದೊಯ್ದಾರುಮರಿಯದಂತೋಳು ಮೂಲೆವನೆಯೊಳ್ ಮರ....ವೋ ː ಮುಂಡಿಸಿ ವೆಣ್ಣೆನಿಸಿಯೊಡನುಂಡು ಪಸುಗುಳೆಬುಡಂಡಿಸುವಿಸಪಃದರ್ಕದು ಬೆದರಿ ಪಲಗಿರಿವುದುಮದಂ ಬೆಣ್ಣೆ ಗೆತ್ತು ಬೆರಲಿಂ ತೆಗೆವುತ್ತಿರೆ ಮುಮ್ಮನೆವಾಳ್ತಿಗೆಯ್ದು

ಅಂತ್ಯ : ದ್ರೋಹಮನೆಣಿಸಿಯುವನಂ ಕಪಡಿನೊಳ್ಕುಡುಪಿ ಈ ದೊರೆತನಮಂ ಕೊಂಡು ಕಾಸುಂ ಪಾವುಡಮುಂ ಕಾಣಿಕಗಳಿಕಳುವುವಿನಮುವಿನ ತಪ್ಪುಗೆಯ್ಮಗಳ ಸೆಣಿಸಿ ನೀಳ್ದುರಿಸಿ ಬಂದ ಗುರಿವಾಸಿಸನಂ ಬಂದಂತೆ ಕಳುಪಲೊಡಮದರ್ಕಾ ದೊರೆ ಪಿಡಿದುಂ ಬಿಗುರ್ತುರ್ ನೆರವನರಸಿ ಮುಂ ತನ್ನಂದೆ ಬಿದ್ಯಾನಗರಿಯ ಧೊರೆತನಮನಾಳ್ದ ತೆಲುಂಗರಾಯರ ಬಗೆಯೊಳ....ರ್ವಾ ಶ್ರೀರಂಗರಾಯ ನೆನಿಸುವಂ ತನ್ನ ಬೇಲೂರ್ ಚಂದ್ರಗಿರಿ ಮುಂತಾದ ಕೋಂಟೆ ದುರ್ಗಂ ಗಳ್ತುರುಕರ್ಗೆ ಸೂರೆಕೊಟ್ಟು

ವಿಷಯ : ಚಿಕ್ಕದೇವರಾಜನ ವಂಶವಿಚಾರ.

ವಿಶೇಷ : ಅಸಮಗ್ರ ಪ್ರತಿ, ಗ್ರಂಥಲಿಪಿ, ಕೆಲವು ಪತ್ರಗಳ ಅಂಚು ಮುರಿದಿದೆ.

499

| | | |
|---|---|---|
| ಕೆ ೧೨೭ | ಚಿಕ್ಕದೇವರಾಜ ವಂಶಾವಳಿ | ಗದ್ಯ |
| ೧೪.೭"×೧.೩" | ತಿರುಮಲಾರ್ಯ | ೧೬೮೦ |
| ೧—೧೪೦ ಪತ್ರ | ೪ ಪಂಕ್ತಿ | ೪೪ ಅಕ್ಷರ |

ಆದಿ : ಶ್ರೀಮತೇ ರಾಮಾನುಜಾಯ ನಮಃ। ಶ್ರೀ ಶೈಲಾರ್ಯ ಗುರುವೇ ನಮಃ॥ ಸ್ವಸ್ತಿ ಸಮಸ್ತ ಭೂಮಂಡಲ ಪುಂಡರೀಕಕರ್ಣಿಕಾಯಮಾನ ಕನಕಾಚಲ ದಕ್ಷಿಣದಿಶಾಪರೀಯ್ರ್ಯಸ್ತ ಪರಿಕಮ್ರಾಲ ಕಮ್ರಣ ಭಾರತವರ್ಷ ಮಂಡ ನಾಯಿತಖಂಡೋದ್ದಂಡ ವೈಭವೋತ್ತಮನ್ಮಾರಂತ ಕರ್ನ್ನಾಟದೇಶದೊ ಳ್ಕಾವೇರಿ ದಕ್ಷಿಣ ತೀರದೊಳದಿದೂರದೊಳೆಸೆವ ಮಹಿಶೂರ ಪುರದೊಳ್

ಸೂಚಿ ಪಟ್ಟಿಯಲ್ಲಿ ಮೊದಲು ಕ್ರಮಾಂಕವನ್ನು ಆಂಗ್ಲ ಭಾಷೆಯಲ್ಲಿ ಕೊಟ್ಟು ಅನಂತರ ಗ್ರಂಥದ ಸಂಖ್ಯೆಯಲ್ಲಿ ಕನ್ನಡ ಅಂಕಿಗಳನ್ನು ಕೊಡಲಾಗಿದೆ. ಈ ಅಂಕಿಗಳ ಹಿಂದೆ 'ಕೆ' ಎಂದಿದ್ದರೆ ಓಲೆಯ ಪ್ರತಿಯೆಂದೂ, 'ಕೆ. ಎ.' ಎಂದಿದ್ದರೆ ದೊಡ್ಡ ಅಳತೆಯ ಕಾಗದದ ಪ್ರತಿಯೆಂದೂ, 'ಕೆ. ಬಿ.' ಎಂದಿದ್ದರೆ ಚಿಕ್ಕ ಅಳತೆಯ ಕಾಗದದ ಪ್ರತಿಯೆಂದೂ ತಿಳಿಯಬೇಕು. ಒಂದೇ ಕಟ್ಟಿನಲ್ಲಿ ಒಂದಕ್ಕಿಂತ ಹೆಚ್ಚು ಗ್ರಂಥಗಳಿದ್ದಾಗ ಆ ಗ್ರಂಥಗಳು ಈ ಕಟ್ಟಿನಲ್ಲಿ ಎಷ್ಟನೆಯದೆಂಬುದನ್ನು ಸೂಚಿಸಲು ಹಸ್ತಪ್ರತಿ ಸಂಖ್ಯೆಯ ಮುಂದೆ ಓರೆಗೀಟನ್ನು ಹಾಕಿ ಅದರ ಮುಂದೆ ಗ್ರಂಥದ ಸಂಖ್ಯೆಯನ್ನು ಕೊಡಲಾಗಿದೆ.

ಅನಂತರ ಗ್ರಂಥದ ಹೆಸರು, ಪ್ರಭೇದಗಳನ್ನು ಕೊಟ್ಟಿದೆ. ಎರಡನೆಯ ಸಾಲಿನಲ್ಲಿ ಹಸ್ತಪ್ರತಿಯ ಅಳತೆ, ಗ್ರಂಥದ ಕರ್ತೃ, ಆತನ ಕಾಲಗಳನ್ನು ಕೊಡಲಾಗಿದೆ. ಇವು ತಿಳಿಯದಿದ್ದಾಗ ಪ್ರಶ್ನಾರ್ಥಕ ಚಿಹ್ನೆಗಳನ್ನು ಸೂಚಿಸಲಾಗಿದೆ. ಕವಿ ಮತ್ತು ಕಾಲ ವಿಚಾರಗಳಿಗೆ ಬಹುಮಟ್ಟಿಗೆ ಕರ್ನಾಟಕ ಕವಿ ಚರಿತೆಯನ್ನು ಅವಲಂಬಿಸಿದೆ. ಮೂರನೆಯ ಸಾಲಿನಲ್ಲಿ ಪತ್ರ ಸಂಖ್ಯೆಗಳನ್ನು ಪ್ರತಿ ಪತ್ರದ ಒಮ್ಮುತದಲ್ಲಿ ಎಷ್ಟು ಪಂಕ್ತಿಗಳಿವೆ ಎಂಬುದನ್ನೂ, ಪ್ರತಿ ಪಂಕ್ತಿಯಲ್ಲಿ, ಎಷ್ಟು ಅಕ್ಷರಗಳಿವೆ ಎಂಬುದನ್ನೂ ಕೊಟ್ಟಿದೆ. ಪತ್ರ ಎಂದಿದ್ದಾಗ ಎರಡೂ ಕಡೆಯು ಸೇರಿ ಒಂದು ಪತ್ರವೆಂತಲೂ, ಪುಟ ಎಂದಿದ್ದರೆ ಪ್ರತಿ ಪತ್ರಕ್ಕೂ ಪುಟ ಸಂಖ್ಯೆ ಇದೆಯೆಂದೂ ತಿಳಿಯಬೇಕು. ಪತ್ರದ ಒಂದು ಕಡೆ ಬರವಣಿಗೆ ಇದ್ದರೆ ಅದನ್ನು ವಿಶೇಷದಲ್ಲಿ ಸೂಚಿಸಬೇಕು. ಹೀಗೆ ಬಿ. ಎಸ್. ಸಣ್ಣಯ್ಯ, ಎಚ್. ದೇವೀರಪ್ಪನವರು ಕ್ರಮವಾಗಿ ಈ ಸೂಚೀ ಸಂಪುಟಗಳನ್ನು ಸಂಪಾದಿಸಿ, ಕನ್ನಡ ಸೂಚಿ ಸಾಹಿತ್ಯಕ್ಕೆ ವಿಶೇಷ ಸೇವೆಯನ್ನು ನೀಡಿದ್ದಾರೆ. ಹೀಗಾಗಿ ಕನ್ನಡ ಸಾಹಿತ್ಯ ಅವರಿಗೆ ಋಣಿಯಾಗಿರಬೇಕು.[೬೭]

## ೪.೨.೧೩.೭ : ಶ್ರೀ ಜಗದ್ಗುರು ಮೂರುಸಾವಿರಮಠದ ಪುಸ್ತಕ ಸೂಚಿ

೧೯೯೬ ರಲ್ಲಿ ಶ್ರೀ ಜಗದ್ಗುರು ಮೂರುಸಾವಿರಮಠದ ಪುಸ್ತಕ ಸೂಚಿಯನ್ನು ಮಹಾಂತೇಶ ದೋಟಿಹಾಳ ಅವರು ಸಂಪಾದಿಸಿ ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ ಮೂರುಸಾವಿರಮಠ, ಹುಬ್ಬಳ್ಳಿ ಇವರು ಪ್ರಕಟಿಸಿದ್ದಾರೆ.

ಶ್ರೀ ಮೂರುಸಾವಿರಮಠದ ಗ್ರಂಥಗಳ ಯೋಜನೆಯು ೬೦೦ ಗ್ರಂಥಗಳ ವಿಸ್ತೃತ ಗ್ರಂಥಯೋಜನೆಯೊಂದನ್ನು ಪ್ರೊ. ಜಿ. ಎಚ್. ಹನ್ನೆರಡುಮಠ ಅವರು ನಿರ್ಮಿಸಿಕೊಟ್ಟರು. ಜಗದ್ಗುರುಗಳು ಈ ಗ್ರಂಥಯೋಜನೆಯ ವಿಸ್ತೃತ ರೂಪರೇಷೆಯನ್ನು ಡಾ. ಆರ್. ಸಿ. ಹಿರೇಮಠ, ಬಿ. ಡಿ. ಜತ್ತಿ, ಸಿದ್ಧಯ್ಯ ಪುರಾಣಿಕ ಮುಂತಾದ ಪ್ರಾಜ್ಞರಿಗೆ ತೋರಿಸಿ ಒಪ್ಪಿಗೆ ಪಡೆದುಕೊಂಡರು. ಈ ಯೋಜನೆಯಲ್ಲಿ ಈಗಾಗಲೇ ೪೫೦ ಗ್ರಂಥಗಳು ಅಚ್ಚಾಗಿ ಬಂದಿರುವುದು

ಕನ್ನಡ ಸಾಹಿತ್ಯ ವಾಙ್ಮಯ ಇತಿಹಾಸಕ್ಕೆ ಶ್ರೀ ಜಗದ್ಗುರು ಮೂರುಸಾವಿರಮಠವು ನೀಡಿದ ಅಮೋಘ ಕೊಡುಗೆಯಾಗಿದೆ. ಈ ಗ್ರಂಥಮಾಲೆಯಲ್ಲಿ ಮುಖ್ಯವಾಗಿ ಕನ್ನಡ ಗ್ರಂಥಗಳಲ್ಲದೆ ಸಂಸ್ಕೃತ, ಇಂಗ್ಲೀಷ್, ಹಿಂದಿ, ಬಂಗಾಲಿ, ತಮಿಳು, ಪಂಜಾಬಿ ಭಾಷೆಯ ಕೃತಿಗಳು ಪ್ರಕಾಶನ ಪಡೆದವು.

ಇಲ್ಲಿ ಉಳವಿ ಚನ್ನಬಸವೇಶ್ವರ ವೀರಶೈವ ಗ್ರಂಥಗಳ ಸಂಗ್ರಹ ಕಾರ್ಯ ಹಾಗೂ ಸಂಶೋಧನಾ ಕಾರ್ಯಗಳು ದ್ವಿಮುಖವಾಗಿ ಮುನ್ನಡೆದು ಈ ಗ್ರಂಥದ ಮಾಲೆಗೆ ಇನ್ನೊಂದು ಬಲಶಾಲಿಯಾದ ಅಸ್ತಿಭಾರವನ್ನು ಹಾಕಿದೆ.[೬೮]

ಈ ಮಠದಿಂದ ಡಾ. ಕೆ. ಜಿ. ಕುಂದಣಕಾರ, ರಂಗನಾಥ ದಿವಾಕರ, ಉಮಾಪತಿ ಶಾಸ್ತ್ರಿಗಳು, ಸ. ಸ. ಮಾಳವಾಡ, ಡಾ. ಎಂ. ಎಂ. ಕಲಬುರ್ಗಿ, ಬಿ. ಡಿ. ಜತ್ತಿ, ಡಾ. ಎಂ. ಎಸ್. ಸುಂಕಾಪುರ, ಸಿಂಪಿ ಲಿಂಗಣ್ಣ, ಡಾ. ದೇವೇಂದ್ರಕುಮಾರ ಹಕಾರಿ, ದೇ. ಜ. ಗೌ., ಡಾ. ಎಲ್. ಬಸವರಾಜ, ಬಿ. ವಿ. ಮಲ್ಲಾಪೂರ, ಗುಂಡಾ ಜೋಯಿಸ್, ಕೆಳದಿ, ಸಾ. ಶಿ. ಮರುಳಯ್ಯ, ಚನ್ನಪ್ಪ ಎರೆಸೀಮೆ, ಡಾ. ಎಸ್. ಆರ್. ಗುಂಜಾಳ, ಹೆಚ್. ದೇವೀರಪ್ಪ, ಎಸ್. ಶಿವಣ್ಣ ಮುಂತಾದವರು ಜಾನಪದ, ಸಂಸ್ಕೃತಿ, ವೀರಶೈವ ಸಾಹಿತ್ಯ ಮೀಮಾಂಸೆ, ಶರಣರ, ಮಹಾನುಭಾವರ ಚರಿತ್ರೆಗಳು, ಗ್ರಂಥಗಳು ಬಹು ಹೆಸರಾಂತ ವಿದ್ವಾಂಸರು ತಮ್ಮ ಕೃತಿಗಳನ್ನು ಇಲ್ಲಿ ಪ್ರಕಟಣೆಗೆ ನೀಡಿದ್ದಾರೆ. ವೀರಶೈವ ಸಾಹಿತ್ಯ ಸಂಶೋಧನೆ, ಪ್ರಕಟಣೆ, ಅಧ್ಯಯನ ಶ್ರೀಮಠದ ಉದ್ದೇಶಗಳಿದ್ದಂತೆ ತೋರುತ್ತದೆ.

ಮೂರುಸಾವಿರಮಠದ ಶಿಕ್ಷಣ ಸಂಸ್ಥೆಗಳು, ಶ್ರೀಮಠದ ಜಗದ್ಗುರುಗಳ ಪರಿಚಯ ಹಿಂದಿನ ಜಗದ್ಗುರುಗಳ ಕಾರ್ಯಗಳು, ಇತ್ಯಾದಿ ವಿವರಣೆಗಳನ್ನು ಈ ಪುಸ್ತಕ ಸೂಚಿ ವಿವರಿಸುತ್ತದೆ.

## ೪.೩ : ಸಮಾರೋಪ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಗ್ರಂಥಸೂಚಿ ಕಾರ್ಯ ೧೯ ನೇ ಶತಮಾನದ ಪ್ರಾರಂಭದಲ್ಲಿ ವಿಲಿಯಂ ಜೋನ್ಸ್ ಅವರಿಂದ ಶುರುವಾಗಿ ಮೆಕೆಂಜಿ, ಫ್ಲೀಟ್ ಅಸ್ತಿಭಾರ ಹಾಕಿದರು. ಅಧ್ಯಯನದ ದೃಷ್ಟಿಯಿಂದ ಭಾರತೀಯ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಸ್ಥಿತಿ-ಗತಿಗಳ ವ್ಯವಸ್ಥಾತ್ಮಕ ದಾಖಲಾತಿಯನ್ನು ಒದಗಿಸುತ್ತದೆ. ಕನ್ನಡ ಸಾಹಿತ್ಯ ಕೃತಿಗಳ ಸಮಗ್ರ ನೋಟವನ್ನು ನೀಡುವಲ್ಲಿ ಸಹಾಯಕ ಆಕರಗಳಾಗಿವೆ. ಸಂಶೋಧಕರಿಗೆ ಮೂಲ ಆಕರಗಳನ್ನು ಒದಗಿಸುತ್ತವೆ. ಗ್ರಂಥಾಲಯಗಳಿಗೆ ಸಾಹಿತ್ಯ ಸಂದರ್ಭ ಗ್ರಂಥಗಳಾಗಿ ಮೌಲ್ಯವನ್ನು ಕಾಪಾಡಿಕೊಂಡು ಬಂದಿದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅಪೂರ್ವ ಮಾಹಿತಿ ಕೋಶಗಳಂತೆ ಸೂಚಿಗಳ ಸಾಂದರ್ಭಿಕತೆ ಎಂದಿಗೂ ಇರುವಂತಹುದೆ. ವಿಮರ್ಶಕರಿಗೆ ಮತ್ತು ಸಂಶೋಧಕರಿಗೆ ಸೂಚಿಗಳ ಆವಶ್ಯಕತೆ ಬೇಕೇ ಬೇಕು. ಗ್ರಂಥಾಲಯಗಳಿಗೆ

ಗ್ರಂಥಗಳ ಆಯ್ಕೆ ಮತ್ತು ಖರೀದಿಯಲ್ಲಿ ಇವುಗಳ ಪ್ರಸ್ತುತತೆ ಎದ್ದು ಕಾಣುತ್ತದೆ. ಇತ್ತೀಚೆಗೆ ಕನ್ನಡ ಸಾಹಿತ್ಯದಲ್ಲಿ ಗ್ರಂಥಸೂಚಿಗಳು ವಿಪುಲವಾಗಿ ಸೃಷ್ಟಿಯಾಗುತ್ತಿರುವುದು ಸಂತೋಷದ ವಿಷಯ. ಮೈಸೂರು ವಿಶ್ವವಿದ್ಯಾಲಯದ ಸಮಗ್ರ ಕನ್ನಡ ಗ್ರಂಥಸೂಚಿ ಸಂಪುಟಗಳು, ಬೆಂಗಳೂರು ವಿಶ್ವವಿದ್ಯಾಲಯದ ಸಾಹಿತ್ಯ ವಾರ್ಷಿಕ ಸಂಪುಟಗಳು, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಸಂಶೋಧನ ಸಂಸ್ಥೆಯ ಹಸ್ತಪ್ರತಿ ಸೂಚಿ ಸಂಪುಟಗಳು, ಕನ್ನಡ ಅಧ್ಯಯನ ಪೀಠ (ಕ. ವಿ. ವಿ.) ದ ಹತ್ತು ಸೂಚಿ ಸಂಪುಟಗಳು, ಎನ್. ನರಸಿಂಹಾಚಾರ್ಯರ ಕವಿಚರಿತೆಯ ಮೂರು ಸಂಪುಟಗಳು, ರಂ. ಶ್ರೀ ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ, ಎಸ್. ಶಿವಣ್ಣನವರ ಸೂಚೀ ಸಂಪುಟಗಳು, ಎಲ್. ಎಸ್. ಶೇಷಗಿರಿರಾವ್ ಅವರ ಹೊಸಗನ್ನಡ ಸಾಹಿತ್ಯ, ಶ್ರೀನಿವಾಸ ಹಾವನೂರರ ಹೊಸಗನ್ನಡ ಅರುಣೋದಯ, ರಾ. ಯ. ಧಾರವಾಡಕರವರ ಹೊಸಗನ್ನಡ ಸಾಹಿತ್ಯದ ಉದಯ ಕಾಲ – ಇವೆಲ್ಲ ಕೃತಿಗಳು ಕನ್ನಡ ಸಾಹಿತ್ಯ ಚರಿತ್ರೆಗಳ ಬೆಳವಣಿಗೆ, ಸಂಶೋಧನೆ, ವಿಮರ್ಶೆ, ವಿದ್ಯಾರ್ಥಿಗಳಿಗೆ, ಮತ್ತು ಶಿಕ್ಷಕರುಗಳಿಗೆ ಕನ್ನಡ ಸಾಹಿತ್ಯ ಚರಿತ್ರೆಯ ಸಮಗ್ರ ನೋಟವನ್ನು ನೀಡುತ್ತದೆ. ಅಲ್ಲದೆ ವಿವಿಧ ವಿಷಯಗಳಲ್ಲಿ ಸೂಚಿ ಸಂಪುಟಗಳು, ಗ್ರಂಥಸೂಚಿಗಳು ವಿಪುಲವಾಗಿ ಸೃಷ್ಟಿಯಾಗಿವೆ. ಇವೆಲ್ಲವುಗಳನ್ನು ಕಲೆಹಾಕಿದರೆ ಕನ್ನಡ ಸಾಹಿತ್ಯ ಚರಿತ್ರೆಗೆ ಹೊಸ ರೂಪ ನೀಡಬಹುದು. ಹಾಗೆಯೇ ಸಾಹಿತ್ಯ ಚರಿತ್ರೆಯ ಬರವಣಿಗೆಗೆ ಇವು ಆಕರಗಳಾಗಬಹುದು. ಗ್ರಂಥಸೂಚಿ ಕಾರ್ಯ ಎಂದಿಗೂ ಮುಗಿಯುವಂತಹದಲ್ಲ, ಇದು ಅವ್ಯಾಹತವಾಗಿ ನಡೆದಿರಬೇಕು. ಹೀಗಾಗಿ ಸಾಹಿತ್ಯದ ಸಮಾಜದ ಆಗುಹೋಗುಗಳ ಬದಲಾವಣೆಗಳನ್ನು, ಜೀವನಶೈಲಿಯ ಮಾರ್ಗಗಳನ್ನು ದಾಖಲಿಸುವ ಪ್ರಕ್ರಿಯೆ ನಡೆದೇ ಇರುತ್ತದೆ.

### • ಅಡಿಟಿಪ್ಪಣಿಗಳು •

೧. ಪ್ರಭುಶಂಕರ : ಮುನ್ನುಡಿ ಕನ್ನಡ ಗ್ರಂಥಸೂಚಿ, ಸಂ. ೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧

೨. ನಾಯಕ ಹಾ. ಮಾ. : ಗೌರಮ್ಮನವರ ಗ್ರಂಥಸೂಚಿ – ಸಂಪ್ರತಿ : ಪ್ರಜಾವಾಣಿ, ಶನಿವಾರ, ನವೆಂಬರ್ ೧, ೧೯೮೬

೩. ರಾಷ್ಟ್ರೀಯ ಗ್ರಂಥಾಲಯ, ಕಲಕತ್ತಾ, ಹೊರತರುವ 'ಭಾರತದ ರಾಷ್ಟ್ರೀಯ ಗ್ರಂಥಸೂಚಿ' ಪುರವಣಿಯಾಗಿ, ರಾಷ್ಟ್ರದ ವಿವಿಧ ಭಾಷೆಗಳಲ್ಲಿ ಅದೇ ಭಾಷೆಗಳ ಲಿಪಿಯಲ್ಲಿ ಹೊರತರುವ ಸರಣಿಗಳ, ಕನ್ನಡ ಭಾಷೆಗೆ ಸಂಬಂಧಿಸಿದ ಸೂಚಿಯು

೪. ಕನ್ನಡ ಗ್ರಂಥಸೂಚಿ : ಮುದ್ರಿತ ಕನ್ನಡ ಕೃತಿಗಳ ವಿವರಣಾತ್ಮಕ ಗ್ರಂಥಸೂಚಿ ೧೮೧೭ - ೧೯೬೮, ಸಂ. ೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧

೫. ಕನ್ನಡ ಗ್ರಂಥಸೂಚಿ : ಮುನ್ನುಡಿ, ಸಂ. ೭, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೪

೬. ನಾಗಪ್ಪ ಬಿ. : ಕನ್ನಡ ಪುಸ್ತಕಗಳ ಮಾಹಿತಿ ನಿಯಂತ್ರಣ, ಮೈಸೂರು ನಗರ ಕೇಂದ್ರ ಗ್ರಂಥಾಲಯದ ಅಮೃತ ಮಹೋತ್ಸವ ವಿಚಾರಸಂಕಿರಣದಲ್ಲಿ ಮಂಡಿಸಿದ ಪ್ರಬಂಧ ೨೩ - ೧೨ - ೧೯೯೦

೭. Shri B. S. Keshavan's Letter to Mr. Anantharamu or I. B. H. Dated 16-4-1989 with reference to " ಐ. ಬಿ. ಎಚ್. ಗ್ರಂಥಾವಳಿ. "

೮. ಪ್ರಜಾವಾಣಿ ೨೯ - ೦೬ - ೨೦೦೨, 'ಸಮನ್ವಯ ಸಮಿತಿ ರಚನೆ' ಕನ್ನಡ ಸಂಸ್ಕೃತಿ ಸಚಿವೆಯರ ಹೇಳಿಕೆ

೯. ಕರಿಸಿದ್ದಪ್ಪ ಸಿ. ಆರ್. : ಕ್ರಿ. ಶ. ೧೮೦೦ ರಿಂದೀಚೆ ಪ್ರಕಟವಾದ ಕನ್ನಡ ಸಂದರ್ಭ ಗ್ರಂಥಗಳು : ಒಂದು ತಾತ್ವಿಕ ಅಧ್ಯಯನ, ಸಂಪ್ರಪಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೨, ಪುಟ ೩೦೩

೧೦. ಕರಿಸಿದ್ದಪ್ಪ ಸಿ. ಆರ್. : ಕ್ರಿ. ಶ. ೧೮೦೦ ರಿಂದೀಚೆ ಪ್ರಕಟವಾದ ಕನ್ನಡ ಸಂದರ್ಭ ಗ್ರಂಥಗಳು : ಒಂದು ತಾತ್ವಿಕ ಅಧ್ಯಯನ, ಸಂಪ್ರಪಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೨, ಪುಟ ೩೦೩

೧೧. ಶ್ರೀನಿವಾಸ ಹಾವನೂರ : " ಗ್ರಂಥ ಪರಿಚಯ ", ಕನ್ನಡ ಪುಸ್ತಕ ಪ್ರಕಾಶನ ಕೇಂದ್ರ, ಬೆಂಗಳೂರು, ೧೯೬೮

೧೨. ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ, ಕನ್ನಡ ಪ್ರಕಟಣೆಗಳು, ಸೂಚಿ ೨೦೦೦, ನ್ಯಾಶನಲ್ ಬುಕ್ ಟ್ರಸ್ಟ್, ನವದೆಹಲಿ, ೨೦೦೦, ಪುಟಗಳು ೧೦ + ೫೦

೧೩. ಶಿವಾನಂದ ವಿ. : ಉತ್ತರ ಭಾರತದ ಕನ್ನಡ ಹಸ್ತಪ್ರತಿ ಮತ್ತು ಇತರ ದಾಖಲಾತಿ ಸೂಚಿ, ವಾರಣಾಸಿ, ಕನ್ನಡ ಪೀಠ : ಬನಾರಸ್ ಹಿಂದೂ ವಿಶ್ವವಿದ್ಯಾಲಯ, ೧೯೯೨

೧೪. ಗುಂಜಾಳ ಎಸ್. ಆರ್.; ಸಹಾಯ; ಅಸುಂಡಿ ಎ. ವೈ.; ಭಾಲ್ಕಿ, ಬೀದರ ಜಿಲ್ಲೆ; ಬಸವ ಧರ್ಮ ಪ್ರಚಾರ ಸಂಸ್ಥೆ, ೧೯೮೯

೧೫. ನಾಯಕ ಹಾ. ಮಾ. : ಗೌರಮ್ಮನವರ ಗ್ರಂಥಸೂಚಿ – ಸಂಪ್ರತಿ : ಪ್ರಜಾವಾಣಿ, ಶನಿವಾರ, ನವೆಂಬರ್ ೧, ೧೯೮೬

೧೬. ಕಲಬುರ್ಗಿಎಂ. ಎಂ. : ಕನ್ನಡ ಹಸ್ತಪ್ರತಿ ಸೂಚಿಗಳು : ಗ್ರಂಥಾಲಯ ರಜತದೀಪ್ತಿ; ಬೆಂಗಳೂರು : ಸಾರ್ವಜನಿಕ ಗ್ರಂಥಾಲಯ ಇಲಾಖೆ, ೧೯೯೪, ಪು. ೧೩೮

೧೭. ಕಲಬುರ್ಗಿಎಂ. ಎಂ. : ಕನ್ನಡ ಹಸ್ತಪ್ರತಿ ಸೂಚಿಗಳು : ಗ್ರಂಥಾಲಯ ರಜತದೀಪ್ತಿ; ಬೆಂಗಳೂರು : ಸಾರ್ವಜನಿಕ ಗ್ರಂಥಾಲಯ ಇಲಾಖೆ, ೧೯೯೪, ಪು. ೧೩೮

೧೮. ಕಲಬುರ್ಗಿಎಂ. ಎಂ. : ಕನ್ನಡ ಹಸ್ತಪ್ರತಿ ಸೂಚಿಗಳು : ಗ್ರಂಥಾಲಯ ರಜತದೀಪ್ತಿ; ಬೆಂಗಳೂರು : ಸಾರ್ವಜನಿಕ ಗ್ರಂಥಾಲಯ ಇಲಾಖೆ, ೧೯೯೪, ಪು. ೧೩೮

೧೯. ಕಲಬುರ್ಗಿಎಂ. ಎಂ. : ಕನ್ನಡ ಹಸ್ತಪ್ರತಿ ಸೂಚಿಗಳು : ಗ್ರಂಥಾಲಯ ರಜತದೀಪ್ತಿ; ಬೆಂಗಳೂರು : ಸಾರ್ವಜನಿಕ ಗ್ರಂಥಾಲಯ ಇಲಾಖೆ, ೧೯೯೪, ಪು. ೧೩೮

೨೦. ಹೆಗಡೆ ಎಂ. ಜಿ. : ಹಸ್ತಪ್ರತಿಗಳು, ಮೆಕೆಂರಿಖ ಸಂಗ್ರಹ : ' ಮಣಿಹ ', ಬಿ. ಎಂ. ಶ್ರೀ. ಪ್ರತಿಷ್ಠಾನ, ಬೆಂಗಳೂರು, ೧೯೮೨

೨೧. ಕೆಳದಿ ಗೂಂಡಾ ಜೋಯಿಸ ಮತ್ತು ಗೀತಾಚಾರ್ಯ ನಾ. : ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಸಂಪುಟ ೧, ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೮೭

೨೨. ಹಗಡೆ ಜಿ. ಎಂ. : ವೀರಶೈವ ಅಧ್ಯಯನ ಸಂಸ್ಥೆ , ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೪

೨೩. L. D. Barnet : A Descriptive Catalogue of Kannada, Badaga, Koorga Books. England, British Museum, 1910

೨೪. ಸೆಂಟ್ರಲ್ ಕಾಲೇಜು, ಬೆಂಗಳೂರು

೨೫. ಗುಂಜಾಳ ಎಸ್. ಆರ್. : ಕರ್ನಾಟಕ ಕಾಲೇಜಿನ ಕನ್ನಡ ಪುಸ್ತಕಗಳು– ಕರ್ನಾಟಕ ಕಾಲೇಜು, ಧಾರವಾಡ, ೧೯೬೭

೨೬. ಕೃಷ್ಣಮೂರ್ತಿ (ಪಿ. ವಿ.) ಮತ್ತು ಗೀತಾಚಾರ್ಯ (ನಾ.) : ಲೋಚನ ಲೇಖನ ಸೂಚಿ, ಬಿ. ಎಂ. ಪ್ರತಿಷ್ಠಾನ, ಬೆಂಗಳೂರು, ೧೯೯೯

೨೭. KAT 2 (Willium A.), Introduction reference work, Vol. I, Mackraw Hill, Newyork, 1974, p. 61

೨೮. UNESCO, 1948

೨೯. ಕರಿಸಿದ್ದಪ್ಪ ಸಿ. ಆರ್. : ೧೮೦೦ ರಿಂದ ಈಚೆಗಿನ ಸಂದರ್ಭ ಗ್ರಂಥಗಳು, ಸಂಶೋಧನಾ ಪ್ರಬಂಧ, ಪು. ೩೫೨

೩೦. ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೫೩

೩೧. ಸವದತ್ತಿಮಠ ಎಸ್. ಎಂ. : ಸಂಶೋಧನ ಪ್ರಬಂಧ ಸೂಚಿ, ಸಿದ್ದಲಿಂಗೇಶ್ವರ ಬುಕ್ ಪಬ್ಲಿಷರ್ಸ್, ಗುಲಬರ್ಗಾ, ೧೯೯೯

೩೨. ಸ್ವಾಗತ ಸಮಿತಿ ೬೮ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಸಮಿತಿ, ಬಾಗಲಕೋಟ, ೨೦೦೦

೩೩. ...................... ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೧

೩೪. ನಾಗರಾಜಯ್ಯ, ಹಂಪ, ಜನಪದ ಕಲಾವಿದರ ಸೂಚಿ, ಕ. ಸಾ. ಪ., ಬೆಂಗಳೂರು, ೧೯೭೨

೩೫. ಗುರುಪ್ರಸಾದ್ (ಸಿ. ಟಿ.) : ಕನ್ನಡ ಜಾನಪದ ಗ್ರಂಥಸೂಚಿ, ಹಂಪಿ, ಕನ್ನಡ ವಿಶ್ವವಿದ್ಯಾಲಯ, ೨೦೦೦

೩೬. ಶಿವಣ್ಣ ಎಸ್. : ಕರ್ನಾಟಕ ಕವಿಚರಿತೆಯ ಅನುಕ್ತ ಕೃತಿಸೂಚಿ ಸಂಪುಟಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೮೬೭

೩೭. ಕುಂಬಾರ ಐ. ಬಿ., ಡಾ. ಗಿರಡ್ಡಿ ಗೋವಿಂದರಾಜ ಅವರ ಕೃತಿಗಳ ಗ್ರಂಥಸೂಚಿ : ಪ್ರಬಂದ ಮಾರ್ಗದರ್ಶನ ಡಾ. ಎಸ್. ಎಲ್. ಸಂಗಮ (ಅಪ್ರಕಟಿತ), ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪

೩೮. ಚವ್ಹಾಣ ಪಿ. ಟಿ. : ಶ್ರೀರಂಗರ ನಾಟಕ ಮತ್ತು ಸಾಹಿತ್ಯ ಕೃತಿಗಳ ಗ್ರಂಥಸೂಚಿ : ಪ್ರಬಂಧ : ಮಾರ್ಗದರ್ಶನ : ಡಾ. ಎಸ್. ಎಲ್. ಸಂಗಮ (ಅಪ್ರಕಟಿತ), ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯

೩೯. ಮುದಕವಿ ವೈ. ಎಸ್. : ಡಾ. ಶಾಂತಿನಾಥ ದೇಸಾಯಿ ಕೃತಿಗಳ ಗ್ರಂಥಸೂಚಿ : ಪ್ರಬಂಧ : ಮಾರ್ಗದರ್ಶನ : ಡಾ. ಎಸ್. ಎಲ್. ಸಂಗಮ (ಅಪ್ರಕಟಿತ), ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯ - ೨೦೦೦

೪೦. ಚಿಗರಿ ಹನುಮಂತ : ಡಾ. ಎಂ. ಎಂ. ಕಲಬುರ್ಗಿ ಅವರ ಕೃತಿಗಳ ಗ್ರಂಥಸೂಚಿ : ಪ್ರಬಂಧ (ಅಪ್ರಕಟಿತ), ಗ್ರಂಥಾಲಯ ಮತ್ತು ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೨೦೦೦

೪೧. ಸಾಲಮಂಟಪ : ಡಾ. ಜಿ. ಎಸ್. ಆಮೂರ ಅವರ ಕೃತಿಗಳ ಗ್ರಂಥಸೂಚಿ : ಪ್ರಬಂಧ (ಅಪ್ರಕಟಿತ), ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦

೪೨. ಕೃಷ್ಣಮೂರ್ತಿ (ಎನ್. ಟಿ.) : ಹತ್ತೊಂಬತ್ತನೇ ಶತಮಾನದ ಪ್ರಕಟಿತ ಕೃತಿಗಳು (೧೮೦೦ - ೧೯೦೦), ಪ್ರಬಂಧ (ಅಪ್ರಕಟಿತ), ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೧ - ೧೯೯೨

೪೩. ಹಳ್ಳಿಕೇರಿ (ಎಫ್. ಟಿ.), ಮತ್ತು ರವೀಂದ್ರನಾಥ ಕೆ : ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಸಂ. ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೪೪. ವಿರೇಶ ಎಸ್. ಬಡಿಗೇರ ಮತ್ತು ಎಸ್. ಆರ್. ಚನ್ನವೀರಪ್ಪ : ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ, ಸಂಪುಟ - ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೪೫. ತರೀಕೆರೆ ರಹಮತ್ (ಸಂ.), ಸಂ. (೫), ಸಂ. (೧), ಕನ್ನಡ ಅಧ್ಯಯನ, ಹಂಪಿ

೪೬. ಕರಿಸಿದ್ದಪ್ಪ ಸಿ. ಆರ್. : ಕರ್ನಾಟಕ ಗ್ರಂಥಾಲಯ, ೧೯೮೯, ಪು. ೧೧

೪೭. ಮೇಲಿನ ೧೩ ಪತ್ರಿಕೆಗಳನ್ನು ಉಲ್ಲೇಖಿಸಬೇಕು, ೧) ಶಿವರುದ್ರಪ್ಪ ಜಿ. ಎಸ್. : ಸಾಹಿತ್ಯ ವಾರ್ಷಿಕ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೧; ೨) ಶಿರುದ್ರಪ್ಪ ಜಿ. ಎಸ್. : ಸಾಹಿತ್ಯ ವಾರ್ಷಿಕ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೧

" ಆರು ಜನ ನಂಬುಗೆಯ ಸ್ನೇಹಿತರು ನನಗೆ
ನಾನು ಅರಿತುದನೆಲ್ಲ ಅವರೆ ಕಲಿಸಿದರು
' ಏನು ' ' ಯಾಕೆ ' ' ಯಾವಾಗ ' ' ಹೇಗೆ '
' ಎಲ್ಲಿ ' ಮತ್ತು ' ಯಾರು ' ಎಂಬವರೇ ಅವರು "

— ರುಡಯಾರ್ಡ ಕಿಪ್ಲಿಂಗ

*" I have six honest faithful friends*
*They taught me all knew*
*Their names are ' what ' and ' why ' and ' when '*
*and ' how ' and ' where ' and ' who '.*

— Rudyard Kipling

## ಅಧ್ಯಾಯ : ಐದು

# ಸೂಚಿಗಳ ತೌಲನಿಕ ಅಧ್ಯಯನ

### ೫.೧ : ಪ್ರಾರಂಭ

ಗ್ರಂಥಸೂಚಿಗಳು ಗ್ರಂಥಾಲಯದ ಕೈಗನ್ನಡಿ. ಒಂದು ಗ್ರಂಥಾಲಯದಲ್ಲಿ ಏನಿದೆ ಎನ್ನುವುದನ್ನು ತೆರೆದು ತೋರಿಸುತ್ತದೆ. ಗ್ರಂಥಾಲಯಕ್ಕೆ ಬಂದ ಓದುಗ ತನ್ನ ಇಷ್ಟಕ್ಕೆ ತಕ್ಕಂತಹ ಮಾಹಿತಿ ಯಾವ ಗ್ರಂಥದಲ್ಲಿ ಸಿಗುತ್ತದೆ ಎನ್ನುವುದನ್ನು ಸೂಚಿ ಮಾತ್ರದಿಂದ ಕಂಡುಕೊಳ್ಳಬಹುದು. ಸೂಚಿಯು ಮುಖ್ಯವಾಗಿ ಮೂರು ವಿಷಯವಾಗಿ ಚಿಂತನೆ ಮಾಡುತ್ತದೆ. ಒಂದು ಪ್ರಕಟಣೆಗಳು, ಎರಡೂ ಸೂಚೀಕಾರ ಮತ್ತು ಮೂರನೆಯದು ನಿಯಮಗಳು. ಮಾಹಿತಿ ಸ್ಫೋಟದಿಂದ ಗ್ರಂಥದ ವಿವಿಧ ಬಗೆಯ ರಾಶಿಯೇ ಬರಹತ್ತಿದೆ. ಸೂಚೀಕಾರ ಅಥವಾ ಗ್ರಂಥಸೂಚಿ ತಯಾರಕರು ಅವುಗಳ ಸೂಚೀಕರಣ ಕ್ರಿಯೆಯಲ್ಲಿ ತೊಡಗಿದಾಗ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಸೂಚೀಕಲ್ಪದಲ್ಲಿದ್ದ ನಿಯಮಗಳು ಸಾಲದಾಗುತ್ತವೆ. ನಿಯಮಗಳನ್ನು ನವೀಕರಿಸಬೇಕಾಗುತ್ತದೆ. ಓದುಗರ ಸಮಸ್ಯೆಗಳನ್ನು ಊಹೆಯಿಂದಲೇ ನಿರ್ಧರಿಸಿ ದಾಖಲೆಗಳ ರಾಶಿಯೇ ತಯಾರಾಗುತ್ತದೆ. ಪತ್ರಕ ಸೂಚಿ ಹೊಂದಿದಂತೆ ಗ್ರಂಥಾಲಯ ಸ್ಥಳದ ಅಭಾವವನ್ನು ಎದುರಿಸಬೇಕಾಗುತ್ತದೆ. ಅನವಶ್ಯಕ ದಾಖಲೆಗಳು ಸೂಚಿಯನ್ನು ದೊಡ್ಡದಾಗಿಸುವದಲ್ಲದೆ, ಎಷ್ಟೋ ಅನಾನುಕೂಲತೆಗಳಿಗೆ ಕಾರಣವಾಗುತ್ತದೆ. ಸೂಚಿ ಉದ್ದವಿದ್ದಷ್ಟು ಓದುಗನಿಗೆ ನೋಡಲು, ಓದಲು ಕಾರಣವಾಗುತ್ತದೆ. ಸೂಚಿ ಉದ್ದವಿದ್ದಷ್ಟು ಓದುಗನಿಗೆ ನೋಡಲು, ಓದಲು ಕಠಿಣವೆನಿಸುತ್ತದೆ. ಅನವಶ್ಯಕ ದಾಖಲೆಗಳನ್ನು ನೋಡುತ್ತ ಹೋದಂತೆ ಅವಶ್ಯ ದಾಖಲೆಗಳನ್ನು ನೋಡುವದು ಆಗುವುದೇ ಇಲ್ಲ. ಸೂಚೀಕರಣಗಳಿಗೆ ಮತ್ತು ಗ್ರಂಥಸೂಚಿಗಳಿಗೆ ಹೆಚ್ಚಿನ ಸಮಯ, ಹಣ, ಸ್ಥಳ ಮತ್ತು ಶ್ರಮ ಹಿಡಿಯುತ್ತದೆ.

ಇದೆಲ್ಲಕ್ಕೂ ಉತ್ತರವೆಂಬುವಂತೆ ಈಗ ಮಾಹಿತಿ ತಂತ್ರಜ್ಞಾನ ಬೆಳೆದು ಅನೇಕ ಬೆಳವಣಿಗೆಗಳನ್ನು ನಮ್ಮ ಕಣ್ಣೆದುರಿಡುತ್ತದೆ. ಯಾವ ಕ್ಷಣದಲ್ಲಾದರೂ ನಮಗೆ ಬೇಕಾದ ಮಾಹಿತಿಯನ್ನು ತುದಿ ಬೆರಳಿನಲ್ಲಿಟ್ಟುಕೊಳ್ಳುವಂತಾಗಿದೆ. ನಮಗೆ ಬೇಕಾದ ಮಾಹಿತಿಯನ್ನು ನಾವು ಕೂತಲ್ಲಿಯೇ ಪಡೆಯಬಹುದು. ಪ್ರಾರಂಭದಲ್ಲಿ ಸ್ವಲ್ಪ ಮೊತ್ತವನ್ನು ವ್ಯಯಿಸಬೇಕಾದ್ದು ಅನಿವಾರ್ಯ. ಇಲ್ಲವೇ ಈಗ ಸೈಬರ್ ಕೆಫೆ, ಗಣಕಯಂತ್ರ ಕೇಂದ್ರಗಳು ಜಾಲದ ಮೂಲಕ

ಮಾಹಿತಿಯನ್ನು ಮಾರುತ್ತಿವೆ. ಅಲ್ಲಿ ಕೂತು ನಮಗೆ ಬೇಕಾದ ಮಾಹಿತಿಯನ್ನು ನಾವು ಹೊಂದಬಹುದು. ಗಣಕಯಂತ್ರ ಪರದೆಯ ಮೇಲೆ ಮಿಲಿಯಗಟ್ಟಲೆ ಶಬ್ದಗಳು, ಶೀರ್ಷಿಕೆಗಳು ಮತ್ತಿತರ ವಿಪುಲ ವಿವರಗಳು ರಾಶಿಗಟ್ಟಲೆ ನೋಡಲು ಸಿಕ್ಕುತ್ತವೆ. ಆಯ್ಕೆ ಮಾಡಿಕೊಳ್ಳಬೇಕಾಗಿದ್ದು ಸಂಶೋಧಕರಿಗೆ, ಓದುಗರಿಗೆ ಬಿಟ್ಟದ್ದು.

ಯಾವುದೇ ಗ್ರಂಥಾಲಯ ತನ್ನದೇ ಆದ ಚೌಕಟ್ಟಿನಲ್ಲಿ ಗ್ರಂಥಗಳನ್ನು ಪತ್ರಿಕೆಗಳನ್ನು ಸಂಗ್ರಹಿಸಿ, ಸೇವೆ ಸಲ್ಲಿಸುವ ಕಾಲ ಮುಗಿಯಿತು. ಈಗ ಪರಾವಲಂಬಿಗಳಂತೆ ಕಾರ್ಯ ನಿರ್ವಹಿಸುವ ಅನಿವಾರ್ಯ ಪರಿಸ್ಥಿತಿ ಉಂಟಾಗಿದೆ. ಈ ಪರಿಸ್ಥಿತಿಯಲ್ಲಿ ಗ್ರಂಥಾಲಯಗಳು ಒಟ್ಟುಗೂಡಿ ನಮ್ಮ ಸಂಪನ್ಮೂಲ ವಿನಿಮಯ ಕ್ರಿಯೆಗೆ ಜಾಲವನ್ನು ನಿರ್ಮಿಸಿಕೊಂಡು; ಅವುಗಳನ್ನು ನೇರ ಸಂಪರ್ಕ ವ್ಯವಸ್ಥೆಗಳು ಎನ್ನುವರು. ಇವುಗಳ ಮೂಲಕ ಓದುಗರು ವಿವಿಧ ದತ್ತಾಂಶ ಕೇಂದ್ರಗಳಲ್ಲಿನ ಮಾಹಿತಿಯನ್ನು ತಾವಿರುವಲ್ಲೇ ನೇರವಾಗಿ ಪಡೆಯುವರು. ಅಂದರೆ ಸರ್ವವಿಷಗಳ ಗ್ರಂಥಗಳು, ನಿಯತಕಾಲಿಕೆಗಳು, ಗ್ರಂಥಸೂಚಿಗಳು ಮುಂತಾದ ವಿವರಗಳನ್ನು ದತ್ತಾಂಶ ಕೇಂದ್ರಗಳಲ್ಲಿ ಎಲೆಕ್ಟ್ರಾನಿಕ್ ಮಾಧ್ಯಮದಲ್ಲಿ ಸಂಗ್ರಹಿಸಲಾಗಿದ್ದು ಬೇಕಾದ ನಿರ್ದಿಷ್ಟ ಮಾಹಿತಿಯನ್ನು 'ನೇರ ಸಂಪರ್ಕ'ದ ಮೂಲಕ ನೇರವಾಗಿ ಪಡೆದುಕೊಳ್ಳಬಹುದು. 'ನೇರ ಸಂಪರ್ಕ' ಎಂದರೆ ನಮ್ಮ ದೂರವಾಣಿ ಉಪಕರಣವನ್ನು ವೈಯಕ್ತಿಕ ಗಣಕಯಂತ್ರ (personal computer) ಕ್ಕೆ ಅಳವಡಿಸಿ ಯಾವುದೇ ದತ್ತಾಂಶ ಕೇಂದ್ರಗಳಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ನಮ್ಮ ಆವಶ್ಯಕತೆಗೆ ತಕ್ಕಂತೆ ಕಂಪ್ಯೂಟರ್ ಮೂಲಕ ವಿಚಾರಣೆ ಮಾಡಿ ಉತ್ತರ ಪಡೆಯಬೇಕಾಗಬಹುದು. ಈ ವಿಚಾರಗಳಿಗೆ ಸಮಂಜಸ ಉತ್ತರವನ್ನು ಗಣಕಯಂತ್ರ ದತ್ತಾಂಶ ಕೇಂದ್ರದಲ್ಲಿ ಸಂಗ್ರಹಿಸಿದ ಮಾಹಿತಿಯಲ್ಲಿ ಹುಡುಕಿ ಒದಗಿಸುವುದು. ಇಂತಹ 'ನೇರ ಸಂಪರ್ಕ' ಮಾಹಿತಿ ಜಾಲಗಳು ವಿಶ್ವದಲ್ಲಿ ಹಲವಾರಿವೆ. ನಮ್ಮ ದೇಶಗಳಲ್ಲೂ, ನಮ್ಮ ಪ್ರಾದೇಶಿಕ ಮಟ್ಟದಲ್ಲಿ ಹಲವಾರಿವೆ. ಅವುಗಳನ್ನು ನಾವು ಉಪಯೋಗಿಸಿಕೊಳ್ಳಬೇಕಷ್ಟೆ !

## ೫.೨ : ಯಂತ್ರಚಾಲಿತ (ಓದುವ) ಗ್ರಂಥಸೂಚಿ ದಾಖಲೆ (Machine Readable Cataloguing Record)

### ೫.೨.೧ : ಹಾಗೆಂದರೇನು

ಒಂದು ಯಂತ್ರವು, ಅದು ಗಣಕಯಂತ್ರದ ಪರದೆಯ ಮೇಲೆ ಗ್ರಂಥಸೂಚೀ ದಾಖಲೆಯನ್ನು ಓದಲು ಸಾಧ್ಯವಾಗುವ ಸಾಧನ. ಅದಕ್ಕೆ ಆಂಗ್ಲ ಭಾಷೆಯಲ್ಲಿ MARC (Machine Readable Cataloguing Record) ಎನ್ನುತ್ತಾರೆ.

## ೫.೨.೨ : ಗ್ರಂಥಸೂಚೀ ದಾಖಲೆ (Cataloguing Record)

ಗ್ರಂಥಸೂಚೀ (ಕರಣ) ದಾಖಲೆ ಎಂದರೆ ವಾಙ್ಮಯ ದರ್ಶಕಗಳ ವಿವರಗಳನ್ನು (Bibliographic Records) ವಿವರಿಸುವದಾಗಿದೆ. ಅವು ಯಾವುವೆಂದರೆ – ಅ) ಸಾಮಗ್ರಿ ವರ್ಣನೆ (a description of the item) ಬ) ಪ್ರಧಾನ ದಾಖಲೆ (Main entry) ಮತ್ತು ಹೆಚ್ಚಿನ ದಾಖಲೆ (added entries) ಒಳಗೊಳ್ಳುವದು; ಕ) ವಿಷಯ ಶೀರ್ಷಿಕೆ (subject headings) ಗಳನ್ನು ಒಳಗೊಳ್ಳುವದು ಮತ್ತು ಡ) ವರ್ಗೀಕರಣ (classificatgion) ಅಥವಾ ಕರೆ ಸಂಖ್ಯೆ (call number). ಇವಿಷ್ಟು ವಿವರಗಳನ್ನು ಗ್ರಂಥಸೂಚಿ ದಾಖಲೆಯಲ್ಲಿ ನಿರೂಪಿಸಬೇಕು. ಸಮಗ್ರ ವಿವರಗಳು AACRZR ಪ್ರಕಾರವೇ ದಾಖಲಿಸಬೇಕು. ಇದು ೧೯೮೮ ರಲ್ಲಿ ಪ್ರಕಟವಾಗಿದ್ದು, ಆಂಗ್ಲೋ ಅಮೇರಿಕನ್ ಕ್ಯಾಟಲಾಗಿಂಗ್ ರೂಲ್ಸ್ ಟು (೨) ಆರ್ ಎಂದು ಕರೆಯುತ್ತಾರೆ. ಗ್ರಂಥ ಸೂಚೀಗಳ ದಾಖಲೆಗಳನ್ನು ಈ ನಿಯಮಗಳಂತೆ ನಾವು ದಾಖಲಿಸಬೇಕಾಗುದುದು ಇಲ್ಲಿ ಅವಶ್ಯವಾಗಿದೆ. ಇಲ್ಲದಿದ್ದರೆ ಮಾಹಿತಿಯು ತಪ್ಪಾಗುವ ಸಾಧ್ಯತೆಯಿರುತ್ತದೆ.

## ೫.೨.೩ : ಯಾಕೆ ಈ ದಾಖಲೆ ಆವಶ್ಯಕ ?

ಇದು ಸ್ವಯಂಚಾಲಿತ ಗ್ರಂಥಸೂಚೀ ರೂಪದ್ದಾಗಿರುವುದರಿಂದ ನಾವು ತುಂಬುವ ದಾಖಲೆಗಳೂ ಒಂದು ಮಾರ್ಗದರ್ಶಿ ರೂಪ (Format) ದಲ್ಲಿರಬೇಕು. ಇಲ್ಲದಿದ್ದರೆ ನಮ್ಮ ಮಾಹಿತಿ ಅಪೂರ್ಣವಾಗುವ ಸಾಧ್ಯತೆ ಇರುತ್ತದೆ. ಇಲ್ಲವೆ ನಿರುಪಯುಕ್ತವಾಗುತ್ತದೆ. ಆದಕ್ಕಾಗಿ MARC ದಾಖಲೆಯು ಅದರ ದಾಖಲೆಗಳಿಗಾಗಿ ಒಂದು ಮಾರ್ಗದರ್ಶಿ ಇರುತ್ತದೆ. ಅಥವಾ ಗುರುತು ಮುದ್ರೆ (signposts) ಇರುತ್ತದೆ. ಪ್ರತಿ ಗ್ರಂಥಸೂಚಿ ದಾಖಲೆಗಳ ಮುಂದೆ ಒಂದು ನಿಗದಿತ ಮಾಹಿತಿ ಇರುತ್ತದೆ. ಲೇಖಕ, ಶೀರ್ಷಿಕೆ, ಕರೆ ಸಂಖ್ಯೆ, ಇತ್ಯಾದಿಗಳಿಗೆ ಫೀಲ್ಡ್ (field) ಎನ್ನುವುದೇ ವಾಙ್ಮಯ ದರ್ಶಕಗಳ ವಿವರಗಳನ್ನೊಳಗೊಂಡಿರುತ್ತದೆ. ಈ ದಾಖಲೆಗಳು ಗಣಕ (computer) ದಲ್ಲಿ ಅವರದೇ ಆದ ಭಾಷೆ, ಜಾಗದಲ್ಲಿ, ದಾಖಲಿಸಬೇಕು. ಇದು ನಮೂನೆ (Format) ಯ ತರಹ ಇರುತ್ತದೆ.

## ೫.೨.೪ : ಮಾರ್ಕ್ - ೨೧ (MARC 21)

ಕಾಂಗ್ರೆಸ್ ಗ್ರಂಥಾಲಯ ಸಂಘವು ಅಮೇರಿಕ ಮತ್ತು ಅಂತಾರಾಷ್ಟ್ರೀಯ ಪ್ರಕಟಣೆಯ ಸಂದರ್ಭದಲ್ಲಿ ಮೇಲಿನ ವಿವರಣೆಗಳಂತೆ ದಾಖಲೆಗಳನ್ನು ಸಂಗ್ರಹಿಸಬೇಕೆಂದು ೧೯೬೦ ರಿಂದಲೆ ಕಾಂಗ್ರೆಸ್ ಗ್ರಂಥಾಲಯವು ಸಂಘ ಗ್ರಂಥಾಲಯಗಳಲ್ಲಿ ಗಣಕ (computers) ಗಳನ್ನು ಉಪಯೋಗಿಸುವಾಗ LC MARC ರೂಪದಲ್ಲಿರುತ್ತಿದ್ದವು. ಈಗ ಬದಲಾವಣೆಗಳಾಗುತ್ತ, ಈಗ MARC 21 ಸದ್ಯದಲ್ಲಿ ಬಳಸಲಾಗುತ್ತಿದೆ. ಸಂಕ್ಷಿಪ್ತ ಸಂಖ್ಯೆಗಳು, ಅಕ್ಷರಗಳು ಮತ್ತು ಸಂಕೇತಗಳು ಈ ದಾಖಲೆಗಳಲ್ಲಿ ಮಾಹಿತಿ ನಿಗದಿತವಾಗಿರಬೇಕೆಂದು ಅದು ಬಯಸುತ್ತದೆ. ಮೂಲ LC

MARC ರೂಪವೇ MACR 21 ರೂಪದಲ್ಲಿ ವಾಙ್ಮಯ ದರ್ಶಕ ರೂಪದಲ್ಲಿ (Bibliographic format) ಪರಿವರ್ತಿತವಾಗಿದೆ.

ಮೂಲ ಕಾಂಗ್ರೆಸ್ ಗ್ರಂಥಾಲಯ(LC MARC) ವು ಯಂತ್ರದಲ್ಲಿ ಓದುವ ಗ್ರಂಥಸೂಚೀ (ಕರಣ) ಮಾಹಿತಿಯು MARC 21 ದಲ್ಲಿ ಒಂದು ಮಾಪನವಾಗಿ ಪರಿವರ್ತಿಸಲಾಗಿದೆ. ಬಹಳಷ್ಟು ಗ್ರಂಥಾಲಯಗಳು ವಿಶ್ವದಲ್ಲೆಲ್ಲ ಈ ಮಾಹಿತಿಯನ್ನು ಗಣಕ (computer) ಗಳಲ್ಲಿ ಉಪಯೋಗಿಸುವಾಗ ಈ ಮಾದರಿಯನ್ನೆ ಅನುಸರಿಸಲಾಗುತ್ತದೆ. ಮಾರ್ಕ್ ೨೧ - ಮಾರ್ಗದರ್ಶಿ ವಾಙ್ಮಯದರ್ಶಕ ರೂಪ (Bibliographic format) ದಲ್ಲಿ, ಸಾಧ್ಯವಿದ್ದ ಎಲ್ಲ ಕಚೇರಿಯ ಮಾರ್ಕ್ ೨೧ ಮಾಹಿತಿ ರೂಪಗಳನ್ನು, ಕಾಂಗ್ರೆಸ್ ಗ್ರಂಥಾಲಯವು ರೂಪಿಸಿಕೊಂಡಿದೆ. ಇದನ್ನು ರೂಪಾಂತರಿಸಿಕೊಂಡು MARC 21 - ವಾಙ್ಮಯದರ್ಶಕ ದಾಖಲೆಯನ್ನು ಸೃಷ್ಟಿಸಲಾಗಿದೆ ಅಥವಾ ರೂಪಿಸಲಾಗಿದೆ.

ತುಲನಾತ್ಮಕ ದಾಖಲೆಗಳನ್ನು ಎದುರಿಗಿಟ್ಟುಕೊಂಡು ಪಠ್ಯ (Textual Information) ದ ಮಾಹಿತಿಯನ್ನು ಮತ್ತು ಜೊತೆಗೆ ಮಾರ್ಕ್ ಟ್ಯಾಗ್ಸ್ ರೂಪಗಳನ್ನು ಮಾರ್ಕ ೨೧ ರಲ್ಲಿ ರೂಪಾಂತರಿಸಿಕೊಂಡು ನಮೂನೆ (Format) ಯನ್ನು ತಯಾರಿಸಿಕೊಳ್ಳಲಾಗುತ್ತದೆ. ಇದು ವಿಷಯದ ಸಂಗ್ರಹಣೆಯ ಸ್ಥಳದ ದೃಷ್ಟಿಯಿಂದ ಮಹತ್ವದ್ದೆಂದು ಗುರುತಿಸಲ್ಪಟ್ಟಿದೆ. ಮಾರ್ಕ ೨೧ ನಮೂನೆ " ೨೬೦ " " $a " " $b " ಮತ್ತು " $c " ಕ್ಷೇತ್ರಗಳಲ್ಲಿ ಮಾಹಿತಿ ತುಂಬಲು ಮುದ್ರಣ ದಾಖಲೆಯ ಬದಲಾಗಿ (Imprint data instead of stories the words) ಪ್ರಕಾಶನದ ಸ್ಥಳ (Publication area) ಇಲ್ಲಿ " ಪ್ರಕಾಶನದ ಸ್ಥಳ " " ಪ್ರಕಾಶಕರ ಹೆಸರು " ಮತ್ತು " ಪ್ರಕಾಶನದ ವರ್ಷ " ಇತ್ಯಾದಿಗಳನ್ನು ಪ್ರತಿಯೊಂದು ದಾಖಲೆಯಲ್ಲಿ ನಮೂದಿಸಲಾಗಿದೆ. ಗಣಕ (computer) ಯಂತ್ರದಲ್ಲಿ ಸ್ಥಳದ ದೃಷ್ಟಿಯಿಂದ ಬಹಳ ಅನುಕೂಲ ಮತ್ತು ಅಸಮರ್ಥತೆಯನ್ನು ಒದಗಿಸುತ್ತದೆ.

" Record with textual signposts "

| " SINPOSTS " | DATA |
|---|---|
| Mainentry, Personal name with a singal surname | |
| The name | Arnosky Jim |
| Title and statement of responsibility Pick up title | |
| for a title addred entry, file under " Ra " | |
| Title proper | Raccoons and ripe corn / |
| Statement of responsibility | Jim Arnosky |

| | |
|---|---|
| Edition area | |
| Edition statement : | 1st ad. |
| Publication, distribution, etc., area : | |
| Place of publication : | New York |
| Name of publisher : | Lothrop, LCC and shepard Books |
| Date of publication | c 1987 |
| Physical description area : | |
| Pagination : | 25 p,; |
| Illustrative matter : | Col. ill,; |
| Size : | 26 cm. |
| Note area : | |
| Summary : | Hungry raccoons feast at night in a field of ripe corn |
| Subject added entries, from library of congress subject headings list for Children : | Rccoons |
| Topical subject : | |
| Local call number : | 599.74 ARN |
| Local Price | $15.00 |

Same record with MARC tags

| " SIGN POSTS " | | | DATA |
|---|---|---|---|
| 100 | 1# | Sa | Amsoky Jim |
| 245 | 10 | Sa | Raccoons and ripe corn / |
| | | SC | Jim Arnosky |

| | | | |
|---|---|---|---|
| 250 | ## | Sa | 1st ed. |
| 260 | ## | Sa | New York : |
| | | Sb | Lothrop, Lee and shepard Books, |
| | | Sc | C 1987 |
| 300 | ## | Sa | 25 p; |
| | | Sb | Col ill; |
| | | Sc | 26 cm. |
| 520 | ## | Sa | Hungry raccoons feast at night in a field of ripe corn. |
| 650 | # I | Sa | Raccoons |
| 900 | ## | Sa | 599.74 ARN |
| 901 | ## | Sa | 8009 |
| 903 | ## | Sa | $ 15.00 |

### ೫.೨.೫ : ಮಾರ್ಕ್‌ನ ವಿಧಿ ವಿಧಾನಗಳು

ಹೇಗೆ ಓದಬೇಕು, ತಿಳಿದುಕೊಳ್ಳಬೇಕು. ಇದು ಗ್ರಂಥಾಲಯಗಳಿಗೆ ಸ್ವಾವಲಂಬನೆಯ ಪಾಠವನ್ನು ಕಲಿಸುತ್ತದೆ. ಗಣಕಕ್ಕೆ ಏನನ್ನು ಕೂಡಿಸಬೇಕು. ಸಂಪಾದನೆ, ಪರಿವೀಕ್ಷಣೆಗಳ ಬಗ್ಗೆ ಇಲ್ಲಿ ಮಾಹಿತಿ ಇರುತ್ತದೆ. ಇಲ್ಲಿ ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಿಗೂ ಕೂಡ ಈ ಸೇವೆ ಅತ್ಯಂತ ವಿಧಾಯಕವಾಗಿ ಮಿತವ್ಯಯವನ್ನು ಸಾಧಿಸಿ ಕೊಡುತ್ತದೆ. ದೃಶ್ಯ, ಶ್ರವ ದಾಖಲೆಗಳಲ್ಲದೆ, ನಕಾಶೆ –ಇತ್ಯಾದಿಗಳು ಇಲ್ಲಿ ಹಿಡಿದಿಡಲ್ಪಟ್ಟಿವೆ. ಪುಸ್ತಕಗಳಲ್ಲದೆ ಇತರೆ ವಸ್ತುಗಳ ಮಾಹಿತಿಯು ಸೇರಿರುತ್ತದೆ.

### ೫.೨.೬ : ಕ್ಷೇತ್ರಗಳು

ಕ್ಷೇತ್ರಗಳು ಟ್ಯಾಗ್ಸ್‌ಗಳಿಂದ ಗುರುತಿಸಲ್ಪಟ್ಟಿವೆ.

## ೫.೨.೭ : ಕ್ಷೇತ್ರ (field)

ವಾಙ್ಮಯ ದರ್ಶಕಗಳನ್ನು ದಾಖಲಿಸುವ ಬಗ್ಗೆ ಇಲ್ಲಿ ಮಾಹಿತಿ ಇರುತ್ತದೆ. ಇದರ ಉಪಕ್ಷೇತ್ರಗಳು (sub field) ಇತ್ಯಾದಿ ಮತ್ತೆ ವಿಭಾಗಗಳನ್ನು ಮಾಡಲಾಗುತ್ತದೆ.

## ೫.೨.೮ : ಎ ಟ್ಯಾಗ್

ಪ್ರತಿಯೊಂದು ಕ್ಷೇತ್ರವೂ – ಮೂರು ಸಂಖ್ಯೆಗಳ ಜಾಗಕ್ಕೆ ಅದನ್ನು ಎ ಟ್ಯಾಗ್ ಎಂದು ಕರೆಯುತ್ತಾರೆ.

## ೫.೨.೯ : ಟ್ಯಾಗ್‌ಗಳ ಉಪಯೋಗ

101 tag : ಕಾಂಗ್ರೆಸ್ ಗ್ರಂಥಾಲಯದಿಂದ ನಿಗದಿತ ಸಂಖ್ಯೆ (LCCN) ಯನ್ನು ಗುರುತಿಸುತ್ತದೆ.

020 tag : ಅಂತಾರಾಷ್ಟ್ರೀಯ ಪುಸ್ತಕ ಸಂಖ್ಯೆ (ISBN) ಯನ್ನು ಗುರುತಿಸುತ್ತದೆ.

100 tag : ವೈಯಕ್ತಿಕ ಹೆಸರು ಮುಖ್ಯ ದಾಖಲೆ (Main entry) ಯಲ್ಲಿ ಲೇಖಕನನ್ನು ಗುರುತಿಸುತ್ತದೆ.

245 tag : ಶೀರ್ಷಿಕೆ (Title) ಬಗೆಗಿನ ಮಾಹಿತಿಯನ್ನು ಗುರುತಿಸುತ್ತದೆ. (ಶೀರ್ಷಿಕೆ, ಉಪಶೀರ್ಷಿಕೆ ಮಾಹಿತಿ, ಮುಖ್ಯ ಲೇಖಕ (Statement of responsibility) ನ ಬಗೆಗಿನ ಜವಾಬ್ದಾರಿಯುತ ಉಲ್ಲೇಖ.

250 tag : ಮುದ್ರಣವಾದ ವರ್ಷ, ತಿಂಗಳು (Edition) ಗಳನ್ನು ಗುರುತಿಸುತ್ತದೆ.

260 tag : ಪ್ರಕಾಶನ / ಪ್ರಕಾಶಕರ ಮಾಹಿತಿ (Publication information) ಯನ್ನು ಗುರುತಿಸುತ್ತದೆ.

300 tag : ಭೌತಿಕವಾಗಿ ಪುಸ್ತಕ ಉದ್ದ, ಅಗಲ (Physical description) ಪುಟಗಳು ಇತ್ಯಾದಿಗಳನ್ನು ಗುರುತಿಸುತ್ತದೆ.

440 tag : ಮೂಲೆ ಉಲ್ಲೇಖ (Series Statement) ಗಳನ್ನು ಜೊತೆಗೆ ಇತರೆ ದಾಖಲೆಗಳನ್ನು ಗುರುತಿಸುತ್ತದೆ.

520 tag : ಸಾರಾಂಶ, ಸಾರಾಂಶ ಸಂಗ್ರಹ (annotation or summary note) ಗಳ ದಾಖಲೆಯನ್ನು ಗುರುತಿಸುತ್ತದೆ.

650 tag : ಸ್ಥಳೀಯ ವಿಷಯ ಶೀರ್ಷಿಕೆ (Topical subject heading) ಗಳನ್ನು ಗುರುತಿಸುತ್ತದೆ.

700 tag : ವೈಯಕ್ತಿಕ ಹೆಸರು (Personal name added entry) ಗಳ ಇತರೆ ದಾಖಲೆಗಳನ್ನು (Joint another, editor, or illustrator) ಗುರುತಿಸುತ್ತದೆ.

ಒಂದು ಉದಾಹರಣೆಯ ಮೂಲಕ ಈ ವಿಷಯವನ್ನು ಇನ್ನೂ ಸ್ಪಷ್ಟಪಡಿಸಬಹುದು. ಒಂದು ಕ್ಷೇತ್ರ (Field) ವನ್ನು ಆಯ್ಕೆ ಮಾಡಿಕೊಂಡು ಅದು ಎಲ್ಲಿ ಬರುತ್ತದೆ ಎಂಬುದನ್ನು ಪರಿಶೀಲಿಸೋಣ.

ಉದಾ : 100 tag : ಇತರ ವ್ಯಾಖ್ಯೆಯೆಂದರೆ ವೈಯಕ್ತಿಕ ಹೆಸರಿನ ಮುಖ್ಯ ದಾಖಲೆಗೆ ಸೇರಿಸಬೇಕು. ಲೇಖಕನ ಕ್ಷೇತ್ರಕ್ಕೆ ಇದು ಬಳಕೆಯಾಗುತ್ತದೆ.

100 1# : $a Pirsing, Robert M

ಇವೆಲ್ಲವುಗಳ ಬಗೆಗಿನ ಮಾಹಿತಿಯನ್ನು MARC 21 ದಲ್ಲಿ ನೋಡಬಹುದು.

## ೫.೨.೧೦ : ಕೆಲವು ಕ್ಷೇತ್ರಗಳಿಗೆ ಹೆಚ್ಚಿನ ವ್ಯಾಖ್ಯಾನಗಳು

ಕೆಲವು ಕ್ಷೇತ್ರಗಳಿಗೆ ಹೆಚ್ಚಿನ ವ್ಯಾಖ್ಯಾನಗಳನ್ನು ಸೂಚನಾಂಕ (Indicators) ಗಳಿಂದ ವಿವರಿಸಬಹುದಾಗಿದೆ. (001 ರ ಮುಖಾಂತರ ೦೦೯ ಈ ಕ್ಷೇತ್ರಗಳ ಹೊರತಾಗಿ) ಒಂದಕ್ಕಿಂತ ಹೆಚ್ಚಿನ ಗುಣಾಂಕಗಳ ಸ್ಥಾನದಿಂದ ಸೂಚನಾಂಕಗಳನ್ನು ಗುರುತಿಸಬಹುದಾಗಿದೆ.

## ೫.೨.೧೧ : ಪ್ರತಿ ಸೂಚ್ಯಾಂಕ (Indicator) ದ ಬೆಲೆಯು ೦ - ೯ ರ ವರೆಗೆ

೨ ಸೂಚ್ಯಾಂಕಗಳು ೨ ಸ್ಥಾನಗಳ ಬೆಲೆಯನ್ನು ಹೊಂದಿರುತ್ತದೆ. ಒಂದೇ ಸಂಖ್ಯೆಯಾಗಿದ್ದರೂ, ನಿಜವಾಗಿಯೂ ೨ ಸಂಖ್ಯೆಗಳು. ಉದಾ : ೨೪೫ : ಇದು ಶೀರ್ಷಿಕೆಯ ಬಗ್ಗೆ ವ್ಯಾಖ್ಯಾನಿಸುತ್ತದೆ. ೧ ಮತ್ತು ೪ ಸೂಚ್ಯಾಂಕಗಳು. ೧ ಮೊದಲನೆಯ ಸೂಚ್ಯಾಂಕದ ಬೆಲೆ. ೪ ಎರಡನೆಯ ಸೂಚ್ಯಾಂಕದ ಬೆಲೆ.

| | |
|---|---|
| 100 14 $a | The emperor's new clothes / Sc adopted from Hans Christian Anderson and illustrated by Janet skvans. |

ಇಲ್ಲಿ ೧ ಶೀರ್ಷಿಕೆ ಉಲ್ಲೇಖಗಳ ಮಾಹಿತಿ ನೀಡಿದರೆ ಇನ್ನೊಂದು ಉಪಶೀರ್ಷಿಕೆಯು ಇಲ್ಲಿದೆ. ಮೊದಲ ಸೂಚ್ಯಾಂಕದ ಬೆಲೆಯ ಅರ್ಥವೆಂದರೆ ಉಪಶೀರ್ಷಿಕೆಗಳ ಬಗ್ಗೆ ಸಾಂಪ್ರದಾಯಿಕ ಸೂಚಿಯಲ್ಲಿ ಬೆಲೆ ಇರುವುದಿಲ್ಲ.

## ೫.೨.೧೨ : ಅನಿಯಮಿತ ಗುಣ (Non filing character)

ಬಹಳ ಆಸಕ್ತಿ ಕೆರಳಿಸುವುದೇನೆಂದರೆ ೨ ನೇ ಸೂಚ್ಯಾಂಕವು ಕ್ಷೇತ್ರದಲ್ಲಿ ಮೊದಲಿಗೆ ಬರುತ್ತದೆ. ಅದನ್ನು ಗಣಕ ಯಂತ್ರದಲ್ಲಿ ಸಾರ್ಟಿಂಗ್ ಮಾಡಿಕೊಂಡು ಒಂದು ವಿಧಾನದಲ್ಲಿ ಕಂಪ್ಯೂಟರ್ ಮಾರ್ಕ್ ೨೧ ರಲ್ಲಿ ಸೇರಿಸಬೇಕು.

The empror new clothes, ಶೀರ್ಷಿಕೆ ಎರಡನೆ ಸೂಚ್ಯಾಂಕವು ೪ ಆದ್ದರಿಂದ ಮೊದಲಿನ ನಾಲ್ಕು ಗುಣಗಳು (The " I ", the ' h ' the ' c ' and the space) ಕ್ಷೇತ್ರಗಳಲ್ಲಿ ಶೀರ್ಷಿಕೆ ಕೆಳಗೆ ' emperor's ' ಸೂಚಿಸಲಾಗಿದೆ.

## ೫.೨.೧೩ : ಉಪಕ್ಷೇತ್ರಗಳು : ಉಪಕ್ಷೇತ್ರಗಳ ಕೋಡ್ ಮತ್ತು ಡೆಲಿಮೀಟರ್ಸ್

ಉಪಕ್ಷೇತ್ರವು ಅನೇಕ ಸಂಬಂಧಿತ ಬೆಲೆಗಳ ದಾಖಲೆ / ಮಾಹಿತಿಯಾಗಿರುತ್ತದೆ. ಪ್ರತಿಯೊಂದು ಮಾಹಿತಿಯು ಒಂದು ಉಪಕ್ಷೇತ್ರ ಎಂದು ಕರೆಯಲಾಗುತ್ತದೆ. ಪ್ರತಿಯೊಂದು ಉಪಕ್ಷೇತ್ರವೂ ಉಪಕ್ಷೇತ್ರದ ಕೋಡನ್ನು ಹೊಂದಿರುತ್ತದೆ. ಕ್ಷೇತ್ರಗಳ ೦.೦೧ - ೦೦೯ ಉಪಕ್ಷೇತ್ರಗಳನ್ನು ಹೊಂದಿಲ್ಲ.

ಉದಾ : ಒಂದು ಕ್ಷೇತ್ರಕ್ಕಾಗಿ ಪುಸ್ತಕದ ಭೌತಿಕ ವಿವರ (Physical description) ಗಳನ್ನು (೩೦೦ ಒಂದು ವ್ಯಾಖ್ಯಾನಿಸಲಾಗಿದೆ.)

---

300 ## : $a 675 p. > $b III : Sc 24 cm

---

**೫.೨.೧೩ : ಉಪಕ್ಷೇತ್ರಗಳ ಕೋಡ್** : ಉಪಕ್ಷೇತ್ರ ಕೋಡ್‌ಗಳು ಕೆಳಗಿನ ಅಕ್ಷರ ಡೆಲಿಮೀಟರ್‌ನಿಂದ ಮುಂದುವರಿಸಲ್ಪಟ್ಟಿರುತ್ತದೆ. ಡೆಲಿಮಿನೇಟರ್ ಒಂದು ಗುಣವಾಗಿದ್ದು ಪ್ರತ್ಯೇಕ ಉಪಕ್ಷೇತ್ರಗಳನ್ನು ಹೊಂದಿರುತ್ತದೆ. ಪ್ರತಿ ಕ್ಷೇತ್ರದ ಕೋಡ್ ಸೂಚನೆಯು ಯಾವುದೇ ಒಂದು ರೀತಿಯ ಸಂಗ್ರಹವನ್ನು ಅನುಸರಿಸುತ್ತದೆ.

**೫.೨.೧೪** : ಇದೊಂದು ಉತ್ಕೃಷ್ಟ ಸತ್ಯಾಂಶವಾಗಿದ್ದು ಬೇರೆ ಬೇರೆ ಉಪನ್ಯಾಸಗಳನ್ನು ವ್ಯಕ್ತಪಡಿಸುತ್ತದೆ. ಡೆಲಿಮೀಟರ್‌ನ ಪೂರಕ ಬೆಳವಣಿಗೆಗಳಲ್ಲಿ ಇದು ಅವಶ್ಯವಾದದ್ದು.

ಉದಾಹರಣೆಗಳು : Double dagger (#),

an " at sign " @,

a dollor sign ($),

an underline (_)

or

graphic symbol (#),

ಇಲ್ಲಿ dollor sign ($) ಡಾಲರ್ ಗುರುತನ್ನು ಡೆಲಿಮೀಟರ್ ಆಗಿ ಉಪಯೋಗಿಸಬೇಕಾಗಿದೆ.

ಉಪಕ್ಷೇತ್ರಗಳ ಕೋಡ್‌ಗಳು $a ; $b ಪುಸ್ತಕದ ಉದ್ದ, ಅಗಲವನ್ನು ನೀಡುತ್ತದೆ.

### ೫.೨.೧೫ : ಶೀರ್ಷಿಕೆಗಳ ರೂಪಾಂತರಗಳು

ಶೀರ್ಷಿಕೆಗಳ ರೂಪಾಂತರಗಳನ್ನು ಗುರುತಿಸಲು ಸೂಚ್ಯಂಕಗಳು ಉಪಕ್ಷೇತ್ರಗಳ ಕೋಡ್‌ಗಳನ್ನು ಉಪಯೋಗಿಸಲಾಗುತ್ತದೆ. ಟ್ಯಾಗ್ಸ್, ಸೂಚ್ಯಾಂಕಗಳು, ಉಪಕ್ಷೇತ್ರಗಳ ಕೋಡ್‌ಗಳನ್ನು ಮುಖ್ಯವಾಗಿ ಮಾರ್ಕ್‌ದ ಕೀಲಿಕೈಗಳೆಂದು ಕರೆಯಲಾಗುತ್ತದೆ. ಗ್ರಂಥಾಲಯ ಉಪಯೋಗಕ್ಕಾಗಿ ಮಾರ್ಕ್ (Boston : G. K. Hall & Co., 1989), Walt Craw ford ಇದನ್ನು ಶಾರ್ಟ್‌ಹ್ಯಾಂಡ್ ಮಾದರಿಯೆಂದು ಕರೆಯುತ್ತಾನೆ. ಈ ಮೂರು ಶೀರ್ಷಿಕೆ ಸೂಚ್ಯಾಂಕಗಳು ಶಾರ್ಟ್‌ಹ್ಯಾಂಡ್ ಸಂಕೇತಗಳನ್ನು ವಾಙ್ಮಯ ದರ್ಶಕ ದಾಖಲೆಗಳನ್ನು ದಾಖಸಲು ಉಪಯೋಗಿಸಲಾಗಿದೆ.

### ೫.೩ : ನೇರ ಸಂಪರ್ಕ ಗ್ರಂಥಾಲಯ ಕೇಂದ್ರ (OCLC), ಡಬ್ಲಿನ್

ಒಹಿಯೋ ಕಾಲೇಜು ಗ್ರಂಥಾಲಯದ ಸಂಪನ್ಮೂಲಗಳನ್ನು ಬಳಸಿಕೊಂಡು ೧೯೭೦ ರಲ್ಲಿ ಓಸಿಎಲ್‌ಸಿ ಜನ್ಮತಾಳಿತು. ಕಾಂಗ್ರೆಸ್ ಗ್ರಂಥಾಲಯವು ಮಾರ್ಕ್ (MARC) ಯೋಜನೆಯನ್ನು ಪ್ರಾರಂಭಿಸಿ ಸೂಚೀಕರಣ ಕಾರ್ಯದಲ್ಲಿ ವಿಶ್ವಮಟ್ಟದ ಸಂಪನ್ಮೂಲ ಸಂಗ್ರಹಣೆಯ (ಸಂಯುಕ್ತ ಸೂಚಿಯ) ಕಾರ್ಯದಲ್ಲಿ ಮಹತ್ವದ ಹೆಜ್ಜೆಯನ್ನು ಒಸಿಎಲ್‌ಸಿ ಒದಗಿಸಿತು. ಮಾರ್ಕ್ (ಯಂತ್ರದಲ್ಲಿ ಓದುವ ಗ್ರಂಥಸೂಚಿ) ಸುರುಳಿಗಳನ್ನು ಕಾಂಗ್ರೆಸ್ ಗ್ರಂಥಾಲಯಕ್ಕೆ ಕಳಿಸುವ ಮೂಲಕ ಅದರ ಚಂದಾದಾರ ಖಾತೆಯಲ್ಲಿ ಓಸಿಎಲ್‌ಸಿ ಸೇರಿತು. ಈ ಎಲ್ಲ ಮಾಹಿತಿಗಳನ್ನು ಗಣಕೀಕೃತಗೊಳಿಸಿ ಸಂವಹನ ಸಂಪರ್ಕಕ್ಕೆ ವಿಶ್ವಮಟ್ಟದಲ್ಲಿ ಪ್ರಯತ್ನಗಳನ್ನು ಸಾಧಿಸಿ ತೋರಿಸಿತು. ಕೇಂದ್ರಮಟ್ಟದಲ್ಲಾದ ಈ ಸಂಯುಕ್ತ ಸೂಚಿಗಳನ್ನು ಎಲ್ಲಾ ಗ್ರಂಥಾಲಯಗಳು ಬಳಸಿಕೊಳ್ಳಲು ಅದು ಅವಕಾಶ ನೀಡಿತು.

### ೫.೩.೧ : ಇತಿಹಾಸ

೧೯೬೭ ರಲ್ಲಿ ಫ್ರೆಡರಿಕ್ ಜಿ. ಕಿಲಗೌರ್ ಎಂಬುವರು ಕಾರ್ಯನಿರ್ವಾಹಕ ನಿರ್ದೇಶಕರಾಗಿದ್ದರು. ಮಾರ್ಕ್ಸ್ ರೂಪದಲ್ಲಿ ಮಾಹಿತಿ ಕಳಿಸಲು ವಿನಂತಿಸಿದವರೆಲ್ಲರಿಗೂ ನೀಡಲು ಅವಕಾಶ ಒದಗಿಸಲಾಗಿದೆ. ೧೯೭೧ ರಲ್ಲಿ ನೇರ ಸಂಪರ್ಕ (On line) ಸೇವೆಯನ್ನು ಪ್ರಾರಂಭಿಸಿತು. ಇಲ್ಲಿ ಒದಗಿಸಲಾದ ವಾಙ್ಮಯ ದರ್ಶಕ ದಾಖಲೆಗಳನ್ನು 'ಮಾಸ್ಟರ್ - ರೆಕಾರ್ಡ್' ಎಂದು ಹೆಸರಿಸಲಾಗಿದೆ. ಅವುಗಳಿಗೆ ಬೇಕಾದರೆ ಸ್ಥಳೀಯ ಭಾಷೆಗೆ ಮಾರ್ಪಾಡು ಅಥವಾ ಲಿಪೀಕರಣ ಗೊಳಿಸಿಕೊಳ್ಳಬೇಕಾಗಿದೆ.

### ೫.೩.೨ : ಗ್ರಂಥ ವಾಙ್ಮಯ ದರ್ಶಕ (Bibliographic Standards Service) ಸೇವೆ

ಮಾಹಿತಿ ಸಂಗ್ರಹಣೆಯಲ್ಲಿ ಏಕಸ್ವಾಮ್ಯತೆಯನ್ನು ಸಾಧಿಸುವ ಮೂಲಕ ಜಾಲದಲ್ಲಿ ಪಾಲ್ಗೊಳ್ಳುವ ಎಲ್ಲ ಗ್ರಂಥಾಲಯಗಳಿಗೂ ಇದು ಗ್ರಂಥಗಳ ವಾಙ್ಮಯ ದರ್ಶಕ (Bibliographic Standards) ಗಳನ್ನು ನೀಡಲಿಚ್ಛಿಸುತ್ತದೆ.

ತನ್ನಲ್ಲಿರುವ ಪುಸ್ತಕಗಳು, ಪತ್ರಿಕೆಗಳನ್ನು, ಅವುಗಳ ಶೀರ್ಷಿಕೆಗಳನ್ನು, ಲೇಖನಗಳನ್ನು ಒದಗಿಸುವುದು ಇದರಲ್ಲಿ ಸೇರಿದೆ. ಈ ಮಾಹಿತಿಯನ್ನು ವಿಶ್ವದ ಎಲ್ಲ ಗ್ರಂಥಾಲಯಗಳು ಜಾಲಗಳ ಮೂಲಕ ಪಡೆದುಕೊಳ್ಳಬಹುದು. ಪರಿವಿಡಿಗಳ ಸೇವೆಯು ಸೇರಿದಂತೆ ಪ್ರತಿಯನ್ನು (ಕಾಪಿ) ಪಡೆಯಬಹುದಾಗಿದೆ.

### ೫.೩.೩ : ಬದಲಾವಣೆ

೧೯೭೪ ರಲ್ಲಿ " ೦೪೯ ಹಿಡುವಳಿ ಕ್ಷೇತ್ರ ಮತ್ತು ವ್ಯಾಖ್ಯೆ " (Definition and ude of the 049 Holding field) ಶೀರ್ಷಿಕೆಯಲ್ಲಿ ವಿಮರ್ಶಾತ್ಮಕ ಟೀಕೆಯನ್ನು ಅದು ಪ್ರಕಟಿಸಿ, ತನ್ನ ಲೋಪದೋಷಗಳನ್ನು ಸರಿಪಡಿಸಿಕೊಂಡಿತು. ೧೯೭೯ - ೮೦ ರಲ್ಲಿ ಸೂಚಿ ದಾಖಲೆಗಳನ್ನು ಸದಸ್ಯತ್ವ ಪಡೆದವರಿಗೆ ವಿತರಿಸಲಾಯಿತು. ಹತ್ತು ವರ್ಷಗಳ ಅವಧಿಯಲ್ಲಿ ಅಗಾಧ ಪ್ರಗತಿಯನ್ನು ಸಾಧಿಸಿದ ಓಸಿಎಲ್‌ಸಿ ದೊಡ್ಡ ಪ್ರಮಾಣದಲ್ಲಿ ಮಾಹಿತಿ (Data base collection) ಸಂಗ್ರಹವನ್ನು ಹೊಂದಿತ್ತು. ಪ್ರಾರಂಭದ ವರ್ಷಗಳನ್ನು ಅರೆಬರೆ ಮಾಹಿತಿ ನೀಡಿ ಟೀಕೆಗೆ ಒಳಗಾಗಿದ್ದ OCLC ಈಗ ಸದೃಢವಾಗಿ ಬೆಳೆದಿದೆ. ೧೯೭೫ ರಲ್ಲಿ ನಿಯತಕಾಲಿಕೆಗಳ ಪರಿವಿಡಿಗಳನ್ನು ಮಾರ್ಕ್ (MARC) ಟೇಪುಗಳಲ್ಲಿ ನೀಡಿ ದಾಖಲೆಯನ್ನು ಮಾಡಿತು. ಸೂಚೀಕರಣದ ಕ್ರಿಯೆಯಲ್ಲಿ ಇದೊಂದು ಸಾಧನೆ ಎನ್ನದೆ ವಿಧಿಯಿಲ್ಲ.

ಮೊದಮೊದಲು ಅನೇಕ ದೋಷಗಳನ್ನು ಹೊಂದಿದ್ದ OCLC ಕಾಲಾನಂತರದಲ್ಲಿ ಸುಧಾರಣೆ ಹೊಂದಿ ಈಗ ಸದಸ್ಯ ಗ್ರಂಥಾಲಯಗಳು ತಮ್ಮ ಸಂಪನ್ಮೂಲ ಸಂಗ್ರಹಣೆ (storage) ಯನ್ನು ಅಲ್ಲಿ ಮೂಡಿ ' ಮಾಸ್ಟರ್ ರೆಕಾರ್ಡ್ ' ನಲ್ಲಿ ದಾಖಲಿಸಿಕೊಳ್ಳಬಹುದು. ಸ್ವಯಂಚಾಲಿತ ಮತ್ತು ವಿಕೇಂದ್ರೀಕೃತ ಮಾಹಿತಿ ನೀಡಿ ಜಗತ್ತಿನ, ಮಾಹಿತಿ ಸಂಗ್ರಹ ಮತ್ತು ವಿತರಣೆ, ಸಹಕಾರ ತತ್ವಗಳೊಡನೆ ಸಾಹಸಚರ್ಯೆಯನ್ನು ಮಾಡಲಾಗಿದೆ. ಇದೊಂದು ಅತ್ಯುತ್ತಮ ಪ್ರಯೋಗ. ಸ್ವಯಂಚಾಲಿತ ಗ್ರಂಥಾಲಯಗಳಿಗೆ (Library Automation) ಮಾರ್ಗದರ್ಶಿಯಾಗಿದೆ.

### ೫.೩.೪ : ಕಾರ್ಯಗಳು

ಇದರ ಕಾರ್ಯಚಟುವಟಿಕೆಗಳು ತುಂಬಾ ವಿಸ್ತಾರವಾಗಿವೆ. ಒಸಿಎಲ್‌ಸಿ ರಾಷ್ಟ್ರ (Western countries) ಗಳಲ್ಲಿ ತನ್ನ ಕೇಂದ್ರಗಳನ್ನು ಹೊಂದಿದೆ. ಅವುಗಳೆಂದರೆ PACNET - The OCLC Pacific NETWORK ಕೇಂದ್ರವು ಅನೇಕ ಉಪಶಾಖೆಗಳನ್ನು ಹೊಂದಿದೆ. ಇನ್ನೊಂದು OCLC ಯುರೋಪ್, ಏಶಿಯಾ, ಏಶಿಯಾ ಉಪಖಂಡಗಳು ಕೂಡ ಓಸಿಎಲ್‌ಸಿ ಯ ಪ್ರಮುಖ ಶಾಖೆಗಳಾಗಿದ್ದು OCLC ಅಡಿಯಲ್ಲಿ ಅನೇಕ ಜಾಲಗಳನ್ನು ನಿರ್ಮಿಸಿಕೊಂಡಿವೆ. OCLC ಅಡಿಯಲ್ಲಿ ಅನೇಕ ಜಾಲಗಳನ್ನು ನಿರ್ಮಿಸಿಕೊಂಡಿವೆ.. OCLC ಯು ೨೦ ಕೇಂದ್ರಗಳೊಂದಿಗೆ

ಸಂಯೋಜನೆ (Affiliation) ಯನ್ನು ಕೊಡುತ್ತಿದೆ. ೮೦೦ ಕ್ಕಿಂತಲೂ ಹೆಚ್ಚಿನ ಸಂಸ್ಥೆಗಳು ಈ ಕೇಂದ್ರದ ಯೋಜನೆಯ ಲಾಭವನ್ನು ಪಡೆಯುತ್ತಿವೆ. ಮುಖ್ಯವಾಗಿ ಸಾರ್ವಜನಿಕ, ವಿಶಿಷ್ಠ (public, special libraries) ಗ್ರಂಥಾಲಯಗಳು ಮೊದಲು ಸೇವೆಯನ್ನು ಪಡೆಯುತ್ತಿದ್ದವು. ಈಗೀಗ ಅಕಾಡೆಮಿಕ್ ಗ್ರಂಥಾಲಯಗಳು, ವಿಶ್ವವಿದ್ಯಾಲಯಗಳು, ಸಂಶೋಧಕರುಗಳು, ಕಾಲೇಜುಗಳ ಮಟ್ಟದಲ್ಲೂ ತನ್ನ ಸೇವೆಯನ್ನು ವಿಸ್ತರಿಸಿಕೊಂಡಿದೆ. ತನ್ನ ಕಾರ್ಯಚಟುವಟಿಕೆಯನ್ನು ಅತ್ಯಂತ ಕೊನೆಯ ಮಟ್ಟದಲ್ಲಿ ಸಣ್ಣ ಪುಟ್ಟ ಗ್ರಂಥಾಲಯಗಳಿಗೂ ಸೇವೆಯನ್ನು ನೀಡುತ್ತದೆ ಎಂದರೆ ಅದರ ಕಾರ್ಯಚಟುವಟಿಕೆಯ ಅಗಾಧತೆ ವಿಸ್ಮಯವನ್ನುಂಟು ಮಾಡುತ್ತದೆ.

### ೫.೩.೫ : ಆಡಳಿತ ಮಂಡಳಿ

ಇದು ಯಾವುದೇ ಆಯ್ಕೆಗೊಂಡ ಆಡಳಿತ ಮಂಡಳಿಯನ್ನು ಹೊಂದಿಲ್ಲ. ಶಾಶ್ವತ ಸದಸ್ಯರ ಟ್ರಸ್ಟನ್ನು ಹೊಂದಿದೆ. ಆರ್ಥರ್. ಡಿ. ಲಿಟ್ಲ್ ಕ್ಯಾಂಬ್ರಿಜ್‌ದಿಂದ, ಮೆಸ್ಸಾಚೂಟ್‌ದ ಒಬ್ಬ ಸದಸ್ಯರು, ಇದರ ಕಾರ್ಯನಿರ್ವಾಹಕ ಟ್ರಸ್ಟಿಯಾಗಿ ಕೆಲಸ ನಿರ್ವಹಿಸುತ್ತಾರೆ. ಇವರೆಲ್ಲರೂ ಕೂಡಿ ೧೯೮೧ ರಲ್ಲಿ ಇದರ ಹೊಸ ಬದಲಾವಣೆಯೊಂದಿಗೆ ನೇರ ಸಂಪರ್ಕದ ಗಣಕಯಂತ್ರ ಗ್ರಂಥಾಲಯ ಇದರ ಹೊಸ ಬದಲಾವಣೆಯೊಂದಿಗೆ ನೇರ ಸಂಪರ್ಕದ ಗ್ರಂಥಾಲಯ (OCLC on line computer library catalogue centre) ಹೆಸರಿನಿಂದ ಮಾಡಲಾಯಿತು. ಈಗ ಬಿ.ಇ.ಎಚ್. ಚಿವ್ ಲೆಂಗ್ ಇವರು ಮುಖ್ಯ ಕಾರ್ಯನಿರ್ವಾಹಕ (ChiefExecutive Officer) ಅಧಿಕಾರಿಯಾಗಿದ್ದಾರೆ.

### ೫.೩.೬ : ಚಟುವಟಿಕೆಗಳು

- ವಿಶ್ವದೆಲ್ಲೆಡೆ ಗ್ರಂಥಾಲಯಗಳನ್ನು ಕಾರ್ಯಪ್ರವೃತ್ತವಾಗುವಂತೆ ಪ್ರೇರೇಪಿಸುವದು.
- ವಿಶ್ವದೆಲ್ಲೆಡೆ ಏಶಿಯಾ ಫ್ಯಾಸಿಫಿಕ್, ಲ್ಯಾಟಿನ್ ಅಮೇರಿಕಾ, ಕೆರಿಬಿಯನ್ ಮುಂತಾದ ದೇಶಗಳಲ್ಲೂ ಪ್ರಸಾರ ಹೆಚ್ಚಿಸುವದು.
- ಗ್ರಂಥಾಲಯಗಳ ಜಾಲ ನಿರ್ವಹಣೆ.
- ಡಿಜಿಟಲ್ ಯುಗನಿರ್ಮಾಣ ಮತ್ತು ಅದರ ಮೂಲಕ ಶಿಕ್ಷಣ.
- ಅಂತರಿಕ್ಷದಲ್ಲೂ (placeinspace) ಗ್ರಂಥಾಲಯ ಸೇವೆಗಳನ್ನು ವಿಸ್ತರಿಸುವುದು ಮತ್ತು ಆಕಾಶ ಜಾಲವನ್ನು (space network) ನಿರ್ಮಿಸುವುದು.
- ಅಂತಾರಾಷ್ಟ್ರೀಯ (ದೇಶ-ದೇಶಗಳ ನಡುವೆ) ಮಟ್ಟದಲ್ಲಿ ಸಹಕಾರ ಅಭಿವೃದ್ಧಿ ಮತ್ತು ಜಂಟಿ ಸಂಬಂಧಗಳನ್ನು ಗಟ್ಟಿಗೊಳಿಸುವುದು. ಅಂತರ್‌ಜಾಲಗಳ ಬಳಕೆಯಲ್ಲಿ ಅಭಿವೃದ್ಧಿ ಸಾಧಿಸುವುದು.

- ದೂರ ಶಿಕ್ಷಣದಲ್ಲಿ ಗ್ರಂಥಾಲಯ ಸೇವೆ ಚುರುಕುಗೊಳಿಸುವುದು.
- ಮಾಹಿತಿ ಹಕ್ಕುಗಳ ಬಗ್ಗೆ ತಿಳಿವಳಿಕೆ ನೀಡುವುದು.
- ಗ್ರಂಥಾಲಯಗಳಲ್ಲಿ ಪರಿವಿಡಿ ಸೇವೆಗಳನ್ನು ಮಾರುಕಟ್ಟೆ ರೂಪದಲ್ಲಿ ನೀಡುವುದು.
- ಸಂರಕ್ಷಣಾತ್ಮಕ ಸಂಗತಿಗಳು (preservation issues) ಜಗತ್ತಿನ ಎಲ್ಲ ಗ್ರಂಥಾಲಯ ಕೇಂದ್ರಗಳ ಜೊತೆ ನೇರ ಸಂಪರ್ಕ ಹೊಂದುವದು ಓಸಿಎಲ್‌ಸಿ ಮುಖ್ಯ ಉದ್ದೇಶ.

## ೫.೪ : ಕನ್ನಡ ಹಸ್ತಪ್ರತಿಗಳು ಮತ್ತು ಗ್ರಂಥಸೂಚಿಗಳ ವ್ಯವಸ್ಥಾಪನೆ

ಕರ್ನಾಟಕದಲ್ಲಿಯೂ ಹೆಚ್ಚು ಕಡಿಮೆ ಹಸ್ತಪ್ರತಿಗಳ ಸಂಗ್ರಹ, ಸೂಚಿ ಕಾರ್ಯವು ಸರ್ ವಿಲಿಯಂ ಜೋನ್ಸ್ ರವರು ೧೮೦೭ ರ ಹೊತ್ತಿಗೆ ಹಸ್ತಪ್ರತಿಗಳ ಸೂಚೀ ಪ್ರಕಟಿಸಿದ್ದನ್ನು ಗಮನಿಸಿದರೆ, ಇದಕ್ಕೂ ಪೂರ್ವದಲ್ಲಿ ಅಂದರೆ ೧೮ ನೆಯ ಶತಮಾನದ ಉತ್ತರಾರ್ಧದಲ್ಲಿಯೇ ಹಸ್ತಪ್ರತಿ ಸಂಗ್ರಹಣ ಕಾರ್ಯ ಆರಂಭಗೊಂಡಿರಬಹುದು. ಹಸ್ತಪ್ರತಿ ಸಂಗ್ರಹಣ ಹಾಗೂ ಹಸ್ತಪ್ರತಿ ಸೂಚಿಗಳನ್ನು ರಚಿಸುವ ಈ ಕಾರ್ಯವನ್ನು ಅಂದು ' critical scholorahip ' ಎಂದು ಗುರುತಿಸಿದ್ದರು. "[೧] ೧೭೭೪ - ೧೭೭೭ ರ ವರೆಗೆ ಬಂಗಾಲದ ಏಷಿಯಾಟಿಕ್ ಸಂಸ್ಥೆಯ ಅಧ್ಯಕ್ಷರಾಗಿದ್ದ ಸರ್ ಹೋಬರ್ಟ್ ಚೇಂಬರ್ಸ್ ಗ್ರಂಥಗಳನ್ನು ಸಂಗ್ರಹಿಸಿ ಒಂದು ಭಂಡಾರವನ್ನೇ ರೂಪಿಸಿದ್ದರು. ಅಮೂಲ್ಯವಾದ ಈ ಸಂಗ್ರಹವನ್ನು ಪ್ರಷಿಯನ್ ಸರಕಾರವು ೧೮೮೨ ರಲ್ಲಿ ಖರೀದಿಸಿ ಬರ್ಲಿನ್‌ನ ಇಂಪೀರಿಯಲ್ ಲೈಬ್ರರಿ ಸಂಗ್ರಹಕ್ಕೆ ಸೇರ್ಪಡೆಗೊಳಿಸಿದ ಸಂಗತಿಯು ತಿಳಿದು ಬರುತ್ತದೆ.[೨] ಇದು ಅಷ್ಟು ಹಿಂದೆಯೇ ನಡೆದ ಹಸ್ತಪ್ರತಿ ಸಂಗ್ರಹದ ಒಂದು ನಿದರ್ಶನವಷ್ಟೆ. ಹಸ್ತಪ್ರತಿಗಳ ಸಂಗ್ರಹ ಯೋಜನೆಯೊಂದು ೧೮೬೮ ನವ್ಹಂಬರ್ ೩ ರಂದು ಸ್ವೀಕೃತವಾಗಿ ಅಂದು ಸರಕಾರದ ಮಟ್ಟದಲ್ಲಿ ಲೆಜಿಸ್ಲೇಟಿವ್ ಕೌನ್ಸಿಲ್‌ದ ಕಾರ್ಯದರ್ಶಿಗಳಾದ ಸ್ಟೋಕ್ಸ್ ಅವರು ಹಸ್ತಪ್ರತಿಗಳ ಯೋಜನೆಯಡಿಯಲ್ಲಿ ಡಾ. ಕೀಲ್‌ಹಾರ್ನ್ ಮತ್ತು ಬ್ಯೂಲರ್ ಅವರು ಮುಂಬಯಿ ಪ್ರಾಂತದಲ್ಲಿನ ಹಸ್ತಪ್ರತಿ ಸಂಗ್ರಹ ಕಾರ್ಯ ಕೈಗೊಳ್ಳಲು ಕಾರಣವಾಗಿ ಮುಂದೆ ಅದೇ ಭಂಡಾರಕರ ಓರಿಯಂಟಲ್ ರಿಸರ್ಚ್ ಸಂಸ್ಥೆಯಾಯಿತು.[೩]

ಹಸ್ತಪ್ರತಿಗಳು ಅವುಗಳ ಸಂಗ್ರಹಗಳು, ಸಂಪಾದನಾ ಕಾರ್ಯಗಳು ಕನ್ನಡದಲ್ಲಿ ಸಾಕಷ್ಟು ನಡೆದಿವೆ. ಮೆಕೆಂಜಿ ಮೊದಲ್ಗೊಂಡು ಇಂದಿನವರೆಗೂ ಸಹಸ್ರಾರು ಜನರು, ಮಠಗಳು, ವಿಶ್ವವಿದ್ಯಾಲಯಗಳು ಹಸ್ತಪ್ರತಿಗಳ ಸಂಗ್ರಹ, ಸೂಚಿ ಕಾರ್ಯಗಳನ್ನು ಮಾಡುತ್ತಾ ಬಂದಿವೆ. ಎಚ್. ದೇವೀರಪ್ಪನವರು " ಕನ್ನಡ ನಾಡಿನ ಒಳಗೆ ಹೊರಗೆ ಒಂದು ಲಕ್ಷಕ್ಕಿಂತ ಹೆಚ್ಚು ಕನ್ನಡದ ಕೈಬರಹಗಳು ಸೆರೆ ಸಿಕ್ಕಿರುತ್ತವೆ. "[೪] ಎಂಬುದಾಗಿ ಅಭಿಪ್ರಾಯ ಪಟ್ಟರೆ ಡಾ. ಎಂ. ಎಂ. ಕಲಬುರ್ಗಿಯವರು " ಒಟ್ಟಿನಲ್ಲಿ ಈಗ ಸರಕಾರಿ ಸಂಸ್ಥೆಗಳಲ್ಲಿ, ಧಾರ್ಮಿಕ ಕೇಂದ್ರಗಳಲ್ಲಿ ವ್ಯಕ್ತಿಗಳ ವಶದಲ್ಲಿ

ರಕ್ಷಿತ, ಅರೆರಕ್ಷಿತ ಸ್ಥಿತಿಯಲ್ಲಿ ಸಂಗ್ರಹಿತವಾಗಿರುವ ಒಟ್ಟು ಕಟ್ಟುಗಳು ೨೭ ಸಾವಿರ, ಬಹುಶಃ ನಾಡಿನ ಒಳ ಹೊರಗೆ ಅರಕ್ಷಿತ ಸ್ಥಿತಿಯಲ್ಲಿ ಬಿಡಿಯಾಗಿ, ಸಂಗ್ರಹ ರೂಪವಾಗಿ ಬಿದ್ದುಕೊಂಡಿರುವ ಹಸ್ತಪ್ರತಿಗಳು ೧೩ ಸಾವಿರ ಎಂದು ಲೆಕ್ಕ ಹಾಕಿದರೂ ಈ ಸಂಖ್ಯೆ ೪೦ ಸಾವಿರವನ್ನು ಮೀರದು. ಇದು ಕನ್ನಡ ಹಸ್ತಪ್ರತಿಗಳ ಒಟ್ಟು ಸಂಪತ್ತು "[೫] ಎನ್ನುತ್ತಾರೆ.

ಶಿವಯೋಗ ಮಂದಿರದಲ್ಲಿ ೧ ಸಾವಿರ ಓಲೆಗರಿಗಳು, ೫೦೦ ಕಾಗದ ಪ್ರತಿಗಳು ಸಂಗ್ರಹಗೊಂಡಿದ್ದುದು ತಿಳಿಯುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸುಮಾರು ೧೫೦೦ ಹಸ್ತಪ್ರತಿಗಳು, ೮೧೭ ಕಾಗದ ಪ್ರತಿಗಳು, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ೪,೦೦೦ ಹಸ್ತಪ್ರತಿಗಳು, ಬೆಂಗಳೂರು ವಿಶ್ವವಿದ್ಯಾಲಯವು ಸುಮಾರು ಐದು ಸಾವಿರ ಕವಿಕೃತಿಗಳನ್ನು ಒಳಗೊಳ್ಳುವ, ಒಂದು ಸಾವಿರದ ಐದುನೂರು ಹಸ್ತಪ್ರತಿಗಳನ್ನು ಕೂಡಿಸಿಕೊಂಡಿದೆ. "[೬]

ಧಾರ್ಮಿಕ ಕ್ಷೇತ್ರಗಳಾದ ದೇವಾಲಯ, ಮಠ, ವಿದ್ಯಾಕೇಂದ್ರ, ಪಂಡಿತರುಗಳ ಮನೆ ಮುಂತಾದ ನೆಲೆಗಳಲ್ಲಿದ್ದ, ಬಹುಶಃ ಅಲ್ಲಲ್ಲಿ ಅಲಕ್ಷ್ಯಕ್ಕೆ ಗುರಿಯಾಗಿದ್ದ ಹಸ್ತಪ್ರತಿಗಳನ್ನು, ಕೈಫಿಯತ್ತುಗಳನ್ನು, ವಂಶಾವಳಿ ಲೇಖನಗಳನ್ನು, ಆಗಿನ ಕಾಲದ ಬರವಣಿಗೆಯ ವಿವಿಧ ಧಾರ್ಮಿಕ ಕಾರ್ಯಗಳ ರೀತಿ ರಿವಾಜುಗಳ ಬರವಣಿಗೆ ದಾಖಲೆಗಳನ್ನು, ಕಂದಾಯ, ಸಾಲ ಪತ್ರಗಳನ್ನು, ಕೈಗಡ ಪತ್ರಗಳನ್ನು, ಲಗ್ನ ಪತ್ರಿಕೆಗಳು, ಕರಾರು ಪತ್ರಗಳನ್ನು, ಭೂಮಿ ಮೋಜಣಿಯ ದಾಖಲೆಗಳನ್ನು ಕರ್ನಲ್ ಮೆಕೆಂಜಿ ಸಂಗ್ರಹಿಸಿ ದಾಖಲೆಗಳನ್ನು ನಿರ್ಮಾಣ ಮಾಡುವದು ಮತ್ತು ಕಚೇರಿಗಳಲ್ಲಿ ದಾಖಲೆಗಳನ್ನು ಸಂಗ್ರಹಿಸುವದಕ್ಕೂ ಇವುಗಳು ಕೈಪಿಡಿಗಳಾಗಿ ಕೆಲಸ ಮಾಡಿದವೆಂಬುದನ್ನು ಮರೆಯುವಂತಿಲ್ಲ. ಇವೆಲ್ಲ ಹಸ್ತಪ್ರತಿ ಸಂಗ್ರಹ ಮತ್ತು ಸೂಚಿಗಳಿಗೆ ನಾಂದಿಯಾದವು. ಮೆಕೆಂಜಿಯ ಹಿರಿತನದಲ್ಲಿ ಚಾವಲಿ ಬೋರಯ್ಯ ಅವನ ತಮ್ಮ ವೆಂಕಟಲಕ್ಷ್ಮಯ್ಯ, ಬ್ರಾಹ್ಮಣ ಪಂಡಿತ ತಮಿಳು ಕನ್ನಡ ಬಲ್ಲ ನಾರಾಯಣರಾವ್ ಮತ್ತು ರಾಮದಾಸ ಇವರುಗಳು ಸಂಗ್ರಹ ಕಾರ್ಯಕ್ಕೆ ಮೆಕೆಂಜಿಯೊಡನೆ ಮೇಳದವರಾಗಿ ನಿಂತಂತಿದೆ. ೩೮ ವರ್ಷಗಳ ದೀರ್ಘಾವಧಿಯಲ್ಲಿ ೧೩ ಭಾಷೆಗಳ ೧೫೭೮ ಹಸ್ತಪ್ರತಿಗಳ ದೊಡ್ಡ ಸಂಗ್ರಹದಲ್ಲಿ ನೂರಾರು ಮಾತ್ರ ಕನ್ನಡದವರಾಗಿದ್ದರೂ ಕನ್ನಡ ಹಸ್ತಪ್ರತಿ ಸಂಗ್ರಹ ಮತ್ತು ಸೂಚಿಗೆ ಇದು ತಳಹದಿಯಾಯಿತು. ಕ್ರಿ. ಶ. ೧೮೫೮ ರಲ್ಲಿ ಸ್ಥಾಪಿತವಾದ ಸರಕಾರಿ ಹಸ್ತಪ್ರತಿ ಭಂಡಾರಕ್ಕೆ ಈ ಮೆಕೆಂಜಿ ಸಂಗ್ರಹವೇ ಮೂಲವಾಯಿತು. ಎಂದು ಎಚ್. ದೇವೀರಪ್ಪ ಅಭಿಪ್ರಾಯ ಪಡುತ್ತಾರೆ.[೭]

ಕರ್ನಾಟಕದ ದಕ್ಷಿಣ ಭಾಗದಲ್ಲಿ ಸರಕಾರಿ ಹಾಗೂ ಸಾರ್ವಜನಿಕ ಸಂಸ್ಥೆಗಳ ಪರವಾಗಿ ನಡೆದಷ್ಟು ಸಂಗ್ರಹಣ ಹಾಗೂ ಸೂಚಿ ಕಾರ್ಯ ಉತ್ತರ ಕರ್ನಾಟಕದಲ್ಲಿ ನಡೆಯಲಿಲ್ಲ. ಈ ಭಾಗದಲ್ಲಿ ಕೆಲವು ಮಹನೀಯರುಗಳು ವೈಯಕ್ತಿಕವಾಗಿ ಸಂಗ್ರಹ ಕಾರ್ಯ ಕೈಗೊಂಡುದು ಗಮನಾರ್ಹ ಸಂಗತಿ. ಫ. ಗು. ಹಳಕಟ್ಟಿ, ಬಸವಣ್ಣನವರ ವಚನ ಸಂಗ್ರಹ, ಶಿ. ಚ. ನಂದೀಮಠ ಅವರ (ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಗೆ ಸಂಗ್ರಹಿಸಿ ಕೊಟ್ಟುದು) ಸಂಗ್ರಹ,

ಜಿ. ಎಂ. ಉಮಾಪತಿ ಶಾಸ್ತ್ರಿಗಳ ಎರಡು ಸಾವಿರ ಸಮೀಪದ ಸಂಗ್ರಹ, ಎಂ. ಎಂ. ಕಲಬುರ್ಗಿಯವರ ಶಾಸನ ಸೂಚಿ ಸಂಪುಟಗಳು (ಬಿಜಾಪುರ, ಧಾರವಾಡ ಜಿಲ್ಲೆ, ಧಾರವಾಡ ತಾಲೂಕ), ಕನ್ನಡ ವಿಶ್ವವಿದ್ಯಾಲಯದ ಸೂಚಿ ಸಂಪುಟಗಳು, ತೋಂಟದಾರ್ಯಮಠ, ಗದಗ, ಬೆಳಗಾವಿಯ ವೀರಶೈವ ಅಧ್ಯಯನ ಅಕಾಡೆಮಿ, ಭಾಲ್ಕಿಯ ಮಠಗಳು, ಶಿವಮೊಗ್ಗ ಜಿಲ್ಲೆಯ ಕೆಳದಿ ಸಂಸ್ಥಾನದ ಸೂಚಿ ಸಂಪುಟಗಳು, ಹೊರನಾಡಿನ ಸಂಸ್ಥೆಗಳಾದ ಕೊಲ್ಹಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕರಮಠ, ಮಹಾರಾಷ್ಟ್ರದ ಬಾಹುಬಲಿ ಆಶ್ರಮ, ಬಿಹಾರದಲ್ಲಿನ ಜೈನ ಸಿದ್ಧಾಂತ ಭವನ, ಮದ್ರಾಸ್ ವಿಶ್ವವಿದ್ಯಾಲಯದ ಪ್ರಾಚೀನ ಹಸ್ತಪ್ರತಿ ಭಂಡಾರ, ಹೈದ್ರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯಗಳು, ಸ್ಮರಣೀಯ ಕೆಲಸಗಳನ್ನು ನಿರ್ವಹಿಸಿದ್ದು ತಿಳಿದು ಬರುತ್ತದೆ. ಮೈಸೂರು ವಿ. ವಿ. ಗಳು ಸೂಚೀಕಾರ್ಯದಲ್ಲಿ ಗುರುತರವಾಗಿ ಕಾರ್ಯ ನಿರ್ವಹಿಸಿವೆ. ಬಿ. ಎಂ. ಶ್ರೀ ಪ್ರತಿಷ್ಠಾನದ ಕೆಲಸಗಳು ಈ ಪಂಕ್ತಿಗೆ ಸೇರಿವೆ.

ಹಸ್ತಪ್ರತಿ ಸೂಚಿಗಳನ್ನು ಪ್ರಕಟಿಸುವಲ್ಲಿ ಜೈನಮಠಗಳು ಮಾಡಿದ ಕಾರ್ಯ ಗಣನೀಯವಾಗಿದೆ. ಕೊಲ್ಹಾಪುರದ ಲಕ್ಷ್ಮೀಸೇನ ಭಟ್ಟಾರಕ ಮಠವು ೧೯೦೦ ರಷ್ಟು ಹಿಂದೆ, ಆರಾದ ಜೈನ ಸಿದ್ಧಾಂತ ಭಾವನವು ೧೯೧೯ ರಷ್ಟು ಹಿಂದೆಯೇ ಸೂಚಿಗಳನ್ನು (ದೇವನಾಗರಿಯಲ್ಲಿ) ಅಚ್ಚಿಸಿದ್ದು ತಿಳಿಯುತ್ತದೆ. ಮೂಡಬಿದಿರೆಯ ಜೈನಮಠ, ಜೈನ ಭವನ ಅನ್ಯಗ್ರಂಥ ಭಂಡಾರ, ಕಾರ್ಕಳದ ಜೈನಮಠ ಮತ್ತು ಅಲಿಯೂರ ಆದಿನಾಥ ದೇವಾಲಯದ ಸಂಗ್ರಹಗಳ ಸಂಯುಕ್ತ ಸೂಚಿಯೊಂದು ೧೯೮೪ ರಲ್ಲಿ ಪ್ರಕಟವಾಗಿದೆ. ಅದರಂತೆ ಶ್ರವಣಬೆಳಗೊಳದ ಶ್ರೀ ಜೈನಮಠವು ಕನ್ನಡದಲ್ಲಿ ಹಸ್ತಪ್ರತಿ ಸೂಚಿಯೊಂದನ್ನು ಪ್ರಕಟಿಸಿದ್ದು (೧೯೭೭) ಶ್ಲಾಘನೀಯ. ಸ್ವಾದಿ ಮಠದಲ್ಲಿನ ಹಸ್ತಪ್ರತಿಗಳನ್ನು ' ಜಯಕರ್ನಾಟಕ ' (೧೯೨೫) ಪತ್ರಿಕೆ, ಹುಂಬಜ ಮಠದ ಗ್ರಂಥಾಳ ಪಟ್ಟಿಯನ್ನು ಜೈನ ಸಿದ್ಧಾಂತ ಭಾಸ್ಕರ (೧೯೮೪) ಪತ್ರಿಕೆ, ಶ್ರೀ ಬಾಹುಬಲಿ ಬ್ರಹ್ಮಚರ್ಯಾಶ್ರಮದ ಗ್ರಂಥಗಳ ಯಾದಿಯನ್ನು ಸನ್ಮತಿ (೧೯೭೮) ಪತ್ರಿಕೆ ಮೂಲಕ ಪ್ರಕಟಿಸಿದ್ದು ಕೂಡಾ ಗಮನಾರ್ಹವಾದುದು. ವೀರಶೈವ ಮಠಗಳಲ್ಲಿ ಅನೇಕ ಕಡೆ, ಹಸ್ತಪ್ರತಿಗಳ ದೊಡ್ಡ ಸಂಗ್ರಹಗಳಿದ್ದರೂ ಹಸ್ತಪ್ರತಿಗಳ ಸೂಚಿಯನ್ನು ಗ್ರಂಥರೂಪದಲ್ಲಿ ಪ್ರಕಟಿಸಿದ್ದು ಕಂಡುಬರುವುದಿಲ್ಲ. ಇಂಥ ಕೊರತೆಯನ್ನು ಸ್ವಲ್ಪ ಮಟ್ಟಿಗೆ ನೀಗಿಸುವಲ್ಲಿ ' ಸುಕುಮಾರ ', ' ಶರಣ ' ಸಾಹಿತ್ಯ ', ' ಹೇಮಕೂಟ ' ' ಬಸವಪಥ ', ' ಕರ್ನಾಟಕ ಭಾರತಿ ', ' ಸಾಧನೆ ', ' ತರಳಬಾಳು ', ' ಪ್ರಬುದ್ಧ', ಕರ್ನಾಟಕ, ಮಾನವಿಕ ಕರ್ನಾಟಕ, ಕಸ್ತೂರಿ (ಆರು ತಿಂಗಳಿಗೊಮ್ಮೆ), ಪರಿಷತ್ಪತ್ರಿಕೆ ಮುಂತಾದ ಪತ್ರಿಕೆಗಳು ಸೂಚಿಗಳನ್ನು ಪ್ರಕಟಿಸಲು ಸಹಕರಿಸುತ್ತವೆ.

**ಸೂಚಿ ರಚನೆಗೆ ನಿಯಮಗಳು ಮತ್ತು ಕಾಯಿದೆ ರೂಪ :**

ಈ ಸಂದರ್ಭದಲ್ಲಿ ಹಸ್ತಪ್ರತಿ ಸೂಚಿಗಳ ದೀರ್ಘವಾದ ಪಟ್ಟಿಯೊಂದನ್ನು ಕೊಡುತ್ತ ಎಸ್. ಎಂ. ಕತ್ರೆಯವರು ಬರೆದ Inspite of this progress which has brought home to the Indian schollors importance of their undying national wealth of the work publishing Descriptive catalogues of Mss. has not

received the attention it deserves " ಎಂಬೀ ಅಭಿಪ್ರಾಯವು ಇಂದಿಗೂ ತನ್ನ ಪ್ರಸ್ತುತತೆಯನ್ನು ಕಳೆದುಕೊಂಡಿಲ್ಲ. ಇದೇ ಸಮಯದಲ್ಲಿ ಪ್ರೊ.. ಚಿಂತಾಹರಣ ಚಕ್ರವರ್ತಿಯವರು ಹಸ್ತಪ್ರತಿಗಳ ಯೋಗ್ಯ ಸಂಗ್ರಹಣ, ಸಂರಕ್ಷಣೆ ಹಾಗೂ ವೈಜ್ಞಾನಿಕ ಸೂಚಿ ಸಿದ್ಧಪಡಿಸುವದಕ್ಕೆ ಸರಕಾರವು ಎಪಿಗ್ರಾಫಿ ವಿಭಾಗಗಳಂತೆ ಹಸ್ತಪ್ರತಿ ವಿಭಾಗಗಳನ್ನು ಪ್ರಾರಂಭಿಸಬೇಕು ಹಾಗೂ ಹಸ್ತಪ್ರತಿಗಳನ್ನು ಅಕ್ರಮವಾಗಿ ಮಾರುವವರನ್ನು ಶಿಕ್ಷಿಸುವ ಶಾಸನವನ್ನು ಜಾರಿಗೆ ತರಬೇಕು ಎಂಬುದಾಗಿ ಸೂಚನೆ ಇತ್ತುದು.[೮] ತಿಳಿದುಬರುತ್ತದೆ. ಅದರಂತೆ ಕನ್ನಡ ಸಾಹಿತ್ಯದಲ್ಲಿ ಸೂಚಿ ನಿರ್ಮಾಣ ಮಾಡುವವರಿಗೆ ಒಂದು ಮಾದರಿಯನ್ನು ನಾವೀಗ ನಿರ್ಮಾಣ ಮಾಡಲು ಕಾಯದೆಯನ್ನು / ಗೊತ್ತುವಳಿಯನ್ನು ತರಬೇಕಾಗಿದೆ. ಈಗಾಗಲೇ ತಯಾರಿಸಿದ ಸೂಚಿಗಳಲ್ಲಿ ಕ್ರಮಬದ್ಧತೆ ಇಲ್ಲ. ನಿಯಮಬದ್ಧತೆ ಇಲ್ಲ, ವೈಜ್ಞಾನಿಕ ರೂಪರೇಷೆಗಳಿಲ್ಲ. ಗ್ರಂಥಾಲಯ ತಜ್ಞರೇ ಇವುಗಳನ್ನು ರಚಿಸಬೇಕಾಗಿದೆ. ಸೂಚಿಗಳನ್ನು ರಚಿಸಬೇಕಾದಾಗ ಗ್ರಂಥಾಲಯ ತಜ್ಞರ ಅಭಿಪ್ರಾಯಗಳನ್ನು ಗಮನಿಸಿ ಅವರೊಡನೆ ಸಹಕರಿಸಿ ತಜ್ಞತೆಯನ್ನು ಉಪಯೋಗಿಸಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಸೂಚಿಗಳು ವೈಜ್ಞಾನಿಕವಾಗಿ ತಯಾರಾಗದೆ ಅಪೂರ್ಣ ಕಾರ್ಯವಾಗಬಹುದು.

**ಸಂಶೋಧಕರಲ್ಲಿ ಮನವಿ :**

ಕೆಲವೇ ಕೆಲವು ಜನ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನದ ಪ್ರಾಧ್ಯಾಪಕರು, ಸಂಶೋಧಕರು ಸೂಚಿ ರಚನೆ, ಬರವಣಿಗೆಗಳಲ್ಲಿ ತೊಡಗಿಸಿಕೊಂಡಿದ್ದುದು ಕಾಣಲಾಗಿದೆ. ಯಾಕೆಂದರೆ ಇನ್ನೂ ಹೆಚ್ಚು ಹೆಚ್ಚಿಗೆ ಒಂದು.... ಎರಡು... ಸಹಸ್ರಾರು ರೂಪದಲ್ಲಿ ಅನೇಕ ವಿದ್ಯಾರ್ಥಿಗಳು, ಸಂಶೋಧಕರು ಇವರ ಅಧೀನದಲ್ಲಿ ಕಾರ್ಯ ಹಮ್ಮಿಕೊಂಡಿರುತ್ತಾರೆ. ಸಂಶೋಧನೆ ನಡೆಸಿರುತ್ತಾರೆ. ಅಂತಹ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ ಸೂಚಿ ಕುರಿತು ಶೋಧಿಸಲು, ಬರೆಯಲು, ದಾಖಲಿಸಲು ಉದ್ದೀಪಿಸಬೇಕಾಗಿದೆ, ದೀಕ್ಷೆ ನೀಡಬೇಕಾಗಿದೆ, ಪ್ರಮಾಣ ಮಾಡಬೇಕಾಗಿದೆ. ಹೀಗಾಗಿ ಇಂತಹ ವಿಭಾಗಗಳು ಸಹಸ್ರಾರು ವಿದ್ಯಾರ್ಥಿಗಳನ್ನು ತಯಾರಿಸುವ ಕೆಲಸ ಮಾಡುತ್ತಿರುವದಲ್ಲದೆ ಇಂತಹ ವಿಷಯಗಳ ಕಡೆ ಗಮನ ಕೊಟ್ಟಿದ್ದಾದರೆ ಸೂಚಿ ಸಾಹಿತ್ಯ ಬೆಳೆಯಲು, ಅದರ ಮಹತ್ವದ ಬಗ್ಗೆ ಪ್ರಾಜ್ಞರಿಗೆ ತಿಳಿವಳಿಕೆ, ಒಳನೋಟಗಳು ಸಿಕ್ಕು ಅದಕ್ಕೆ ಹೆಚ್ಚಿನ ಮಹತ್ವ ಸಿಗಬಹುದಾಗಿದೆ. ಈ ಕೆಲಸ ಈಗ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ತಜ್ಞರಿಂದ, ವಿದ್ವಾಂಸರಿಂದ, ಸಂಶೋಧಕರಿಂದ ಆಗಬೇಕಾಗಿದೆ. ಈಗಾಗಲೆ ಕೆಲವೇ ಜನ ವಿದ್ವಾಂಸರು, ಖಾಸಗಿ ಸಂಸ್ಥೆಗಳು, ಮಠಗಳು, ಈ ಕೆಲಸವನ್ನು ಮಾಡಿ ಒಂದು ಪಥವನ್ನು ನಿರ್ಮಿಸಿದ್ದಾರೆ. ಈ ಪಥದಲ್ಲಿ ಸಾಗಿ ಹೆದ್ದಾರಿ, ರಾಷ್ಟ್ರೀಯ ಹೆದ್ದಾರಿ, ಉನ್ನತ ಮಾರ್ಗಗಳನ್ನು ಇನ್ನೂ ನಿರ್ಮಿಸಬೇಕಾಗಿದೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಎಚ್. ದೇವೀರಪ್ಪ, ಬಿ. ಎಸ್. ಸಣ್ಣಯ್ಯ, ಹಾ. ಮಾ. ನಾ., ಕೆ. ಎಸ್. ದೇಶಪಾಂಡೆ, ಎಂ. ಎಂ. ಕಲಬುರ್ಗಿ, ಎಸ್. ಶಿವಣ್ಣ, ಸಿ. ಪಿ. ಕೆ., ಎಸ್. ಆರ್. ಗುಂಜಾಳ, ಎಸ್. ರಾಜಶೇಖರ,

ಎಸ್. ಶೆಟ್ಟರ, ಚನ್ನಕ್ಕ ಪಾವಟೆ, ಹನುಮಾಕ್ಷಿ ಗೋಗಿ, ಆರ್. ಎಲ್. ಅನಂತರಾಮಯ್ಯ, ವೆಂಕಟರಮಣಯ್ಯ, ಎಂ. ಆರ್. ಸಣ್ಣರಾಮೇಗೌಡ ಇವರಲ್ಲದೆ ಇನ್ನೂ ಅನೇಕರು ಈ ಕ್ಷೇತ್ರದಲ್ಲಿ ಅವಿಸ್ಮರಣೀಯ ಸೇವೆ ನೀಡಿದ್ದಾರೆ.

## ೫.೫ : ತುಲನಾತ್ಮಕ ಅಭ್ಯಾಸ

ಕನ್ನಡ ಹಸ್ತಪ್ರತಿ ಸೂಚಿಗಳು, ವರ್ಣನಾತ್ಮಕ ಸೂಚಿಗಳು, ಕನ್ನಡ ಗ್ರಂಥ ಸೂಚಿಗಳು ಈ ಯಾವುದನ್ನೆ ಸಿದ್ಧಪಡಿಸಲು ಅವುಗಳಲ್ಲಿ ಯಾವ ಯಾವ ಮಾಹಿತಿ ಇರಬೇಕು ? ಹೇಗಿರಬೇಕು ? ಯಾಕೆ ಇರಬೇಕು ? ಅವುಗಳ ಆವಶ್ಯಕತೆ ಏನು ? ಎಂಬ ಬಗ್ಗೆ ಯೋಚನೆ ಮಾಡಬೇಕಾದ ಸಂದರ್ಭ ಈಗಿಲ್ಲವಾದರೂ ಅವುಗಳ ತೌಲನಿಕ ಅಧ್ಯಯನದ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಯಾವುದರಲ್ಲಿಯ ಅಂಶಗಳು ಹೆಚ್ಚು ಅನೂಕೂಲ. ಅನಾನುಕೂಲತೆಗಳನ್ನು ಅಭ್ಯಾಸ ಮಾಡುವ ಬದಲು ಅವುಗಳ ಧನಾತ್ಮಕ ಅಂಶಗಳ ಬಗ್ಗೆ ಹೆಚ್ಚು ನಿಗಾ ವಹಿಸುವದಷ್ಟೆ ಈ ತೌಲನಿಕ ಅಧ್ಯಯನದ ಸಾಧ್ಯತೆಗಳಲ್ಲಿ ಮುಖ್ಯವಾದುದೆಂದು ಅನ್ನಿಸುತ್ತದೆ. ಹಾಗೆ ನೋಡಿದರೆ ಸಾಹಿತ್ಯ ಸಂದರ್ಭದಲ್ಲಿ ಎಲ್ಲ ದಾಖಲೆ (record) ಗಳನ್ನು ಬಳಸಿಕೊಳ್ಳುವದು ಒಂದು ಅನುಕೂಲವೇ ಸರಿ ಎಂದುಕೊಳ್ಳಲಾದರೂ ಅನವಶ್ಯಕ ಅಂಶಗಳನ್ನು ಗಮನಿಸಿ ಉಳಿದುದನ್ನು ಗಮನದಲ್ಲಿರಿಸಿಕೊಂಡು (Pin-pointed) ದಾಖಲೆಗಳನ್ನು ಸೃಷ್ಟಿಸಬಹುದೆಂಬುದು ವಿಚಾರ ಮಾಡಬೇಕಾದುದೆ. ಶಾಸ್ತ್ರೀಯವಾಗಿ ರಚನೆಗೊಂಡು ಪ್ರಕಟವಾದ ಮಾದರಿಗಳು ನಮಗಿಂದು ಒದಗುತ್ತವೆ. ಮೇಲೆ ವಿವರಿಸಿದ ಸೂಚೀ ಸಿದ್ಧತೆಯ ತುರ್ತು ಅಗತ್ಯದ ಹಿನ್ನೆಲೆಯಲ್ಲಿ ನಮಗೀಗ ಪ್ರಸ್ತುತವಾದದ್ದು ವರ್ಣನಾತ್ಮಕ ಸೂಚಿಯೇ ? ಈ ಪೂರ್ವದಲ್ಲಿ ಕೆಲವು ಪ್ರಾತಿನಿಧಿಕ ವರ್ಣನಾತ್ಮಕ ಸೂಚಿಗಳಲ್ಲಿನ ವಿವರಗಳನ್ನು ನೋಡಬಹುದು.

**ಪ್ರಾತಿನಿಧಿಕ ಸಂಸ್ಥೆಗಳ ವರ್ಣನಾತ್ಮಕ ಸೂಚಿ ಪ್ರಯತ್ನಗಳು :**

ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯು ಪ್ರಕಟಿಸಿದ ವರ್ಣನಾತ್ಮಕ ಸೂಚಿಯ ವಿವರಗಳು : ೧) ಗ್ರಂಥಗಳ ಕ್ರಮಾಂಕ, ೨) ವಸ್ತು, ೩) ಅಂಕ, ೪) ವಿವರ, ೫) ದೊರೆತ ಸ್ಥಳ, ೬) ಕಾಲ, ೭) ಕರ್ತೃ, ೮) ಪ್ರತಿ ಮಾಡಿದವರು, ೯) ವಿಷಯ, ೧೦) ಶೈಲಿ, ೧೧) ಆರಂಭ, ೧೨) ಮುಕ್ತಾಯ, ೧೩) ಸಂದರ್ಭ, ೧೪) ಶರಾ (Remarks) – ಇಂತಿವೆ. ಸಂಪುಟ ೫ ರಿಂದ ಮಾತ್ರ ಸೂಚಿಗಳಲ್ಲಿನ ವಿವರಗಳು ಪೂರ್ತಿ ಕನ್ನಡದಲ್ಲಿ ಅಚ್ಚಾಗಿವೆ. ಇದಕ್ಕೂ ಮೊದಲಿನ ಸೂಚಿಗಳಲ್ಲಿ ಗ್ರಂಥಭಾಗ ಮಾತ್ರ ಕನ್ನಡದಲ್ಲಿ ಉಳಿದೆಲ್ಲ ವಿವರಗಲು ಇಂಗ್ಲೀಷಿನಲ್ಲಿವೆ. ಸಂಪುಟ ೪ ರಲ್ಲಿ ಈ ವಿವರಗಳ ಜೊತೆಗೆ Colophon ಎಂಬ ಹೆಚ್ಚಿನ ಅಂಶ ಸೇರಿಸಿದ್ದಾರೆ. ಆ ನಂತರದ ಸಂಪುಟಗಳಲ್ಲಿ ಅದನ್ನು ಕೈ ಬಿಡಲಾಗಿದೆ. Remarks ಎಂಬುದು ಕೂಡಾ ಕನ್ನಡ ಅರಿಯದವರಿಗಾಗಿ ಹಸ್ತಪ್ರತಿಗಳ ಬಗೆಗೆ ಒದಗಿಸಿದ ತೀರ ಸಹಕ್ಷೇಪವಾದ ಮಾಹಿತಿಯಾಗಿದೆ.

ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ವರ್ಣಾನಾತ್ಮಕ ಸೂಚಿಯ ವಿವರಗಳು ಈ ಕೆಳಗಿನಂತಿವೆ. ೧) ಗ್ರಂಥಗಳ ಕ್ರಮಾಂಕ, ೨) ಗ್ರಂಥದ ಸಾಂಕೇತಿಕಾಂಕ, ೩) ಗ್ರಂಥದ ಹೆಸರು, ೪) ಗ್ರಂಥ ಪ್ರಭೇದ, ೫) ಅಳತೆ, ೬) ಕವಿಯ ಹೆಸರು, ೭) ಕವಿಯ ಕಾಲ, ೮) ಗ್ರಂಥ ಪ್ರಾರಂಭವಾಗುವ ಮತ್ತು ಮುಗಿಯುವ ಪತ್ರಸಂಖ್ಯೆ, ೯) ಸಾಲಿನ ಸಂಖ್ಯೆ, ೧೦) ಅಕ್ಷರ ಸಂಖ್ಯೆ, ೧೧) ಆದಿ, ೧೨) ಅಂತ್ಯ, ೧೩) ವಿಷಯ, ೧೪) ವಿಶೇಷ.

ಅನಂತರ ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟವಾದ ೫ ಸಂಪುಟಗಳು (ಸಂಪುಟ ೫ ರಿಂದ ೯); ಬೆಂ. ವಿ. ವಿ. ಕನ್ನಡ ಅಧ್ಯಯನ ಕೇಂದ್ರದಿಂದ ಪ್ರಥಮ ವರ್ಣನಾತ್ಮಕ ಸೂಚಿ. ಇವು ಈ ಮೇಲಿನ ಅಂಶಗಳನ್ನೇ ಮಾದರಿಯಾಗಿಟ್ಟುಕೊಂಡು ಅನುಸರಿಸಿವೆ. ಶ್ರವಣಬೆಗೊಳದ ಶ್ರೀ ಜೈನಮಠದ ವರ್ಣಾನಾತ್ಮಕ ಸೂಚಿಯು ಕೂಡ ೧೪ ವಿವರಗಳನ್ನು ಒಳಗೊಂಡಿದೆ. ಈಗ ಪ್ರಕಟಗೊಂಡಿರುವ ಎಲ್ಲ ವರ್ಣಾನಾತ್ಮಕ ಸೂಚಿಗಳಿಗೆ ಮದ್ರಾಸ್ ಸೂಚಿಯೇ ಮೂಲವಾಗಿರಬೇಕು.

೧೯೮೫ ರಲ್ಲಿ ಪ್ರಕಟಗೊಂಡ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ಹಸ್ತಪ್ರತಿ ಸೂಚಿಯ ವಿವರಗಳನ್ನು ಮುಂದಿರಿಸಿಕೊಂಡು ಆಲೋಚಿಸಬಹುದು.

೧) ಕ್ರಮ, ೨) ಕೃತಿಯ ಹೆಸರು, ೩) ಕೃತಿಕಾರ, ೪) ಕಾಲ, ೫) ಸಂಖ್ಯೆ, ೬) ಗರಿ / ಹಾಳೆ, ೭) ಪ್ರಕಾರ, ೮) ಇತರ ವಿವರ –ಹೀಗೆ ಒಟ್ಟು ಎಂಟು ವಿವರಗಳನ್ನೊಳಗೊಂಡಿದೆ. ಈ ಪಟ್ಟಿಯಲ್ಲಿನ ಪತ್ರ / ಪುಟ ಸಂಖ್ಯೆಗಳನ್ನು ಸೂಚಿಸುವ ಗರಿ / ಹಾಳೆ ಮತ್ತು ಸಾಹಿತ್ಯ ಪ್ರಕಾರ (ಚಂಪು, ಷಟ್ಪದಿ ಇತ್ಯಾದಿ) ವನ್ನು ಸೂಚಿಸುವ ' ಪ್ರಕಾರ ' ಎಂಬಿವುಗಳನ್ನು ಇನ್ನುಳಿದ ಆರು ವಿವರಗಳನ್ನು ಇಟ್ಟುಕೊಳ್ಳಬಹುದು. ಪ್ರತಿಕಾರನ ಹೆಸರುಗಳಿರುವ ಪ್ರತಿಗಳ ಸಂಖ್ಯೆ ಕಡಿಮೆ. ಆದುದರಿಂದ ಇಂಥ ಮಾಹಿತಿಯನ್ನು ಜೊತೆಗೆ ಕೃತಿ ಅಪೂರ್ಣವೋ, ಗ್ರಂಥ ಪ್ರಕಾರ ಚಂಪುವೋ, ಷಟ್ಪದಿಯೋ ಈ ಮುಂತಾದ ಅಂಶಗಳನ್ನು ಇತರ ವಿವರ ಎಂಬಲ್ಲಿ ಸೂಚಿಸಬಹುದಾಗಿದೆ. ಒಂದೇ ಕಟ್ಟಿನಲ್ಲಿ ಒಂದಕ್ಕಿಂತ ಹೆಚ್ಚು ಕೃತಿಗಳಿದ್ದಾಗ ಹುಡುಕಲು ಸಹಾಯವಾಗುವ ಸಂಗತಿಯನ್ನು ಬಿಟ್ಟರೆ ಹೆಚ್ಚಿನ ಪ್ರಯೋಜನ ಈ ಮಾಹಿತಿಯಿಂದ ಆಗದು.

ಮೈಸೂರು ವಿ. ವಿ. ಪ್ರಕಟಿಸಿರುವ ಒಂದೇ ಹಸ್ತಪ್ರತಿಯ ಕ್ರಮ ಅಥವಾ ಕ್ರಮಾಂಕ ಅಥವಾ ಕ್ರಮಸಂಖ್ಯೆಯೂ, ಹಸ್ತಪ್ರತಿಗೆ ಕೊಡಲಾಗುವ ಸಂಖ್ಯೆಯೂ ಆಗುವಂತೆ ಸಂಯೋಜಿಸಿದರೆ ಇನ್ನೂ ಒಂದು ವಿವರವನ್ನು ಕೈಬಿಡಲು ಸಾಧ್ಯವಾಗುತ್ತದೆ. ಅದರಂತೆ ತಾಡವೋಲೆ ಮತ್ತು ಕಾಗದ ಪ್ರತಿಗಳ ಸೂಚಿಯನ್ನು ಪ್ರತ್ಯೇಕವಾಗಿಯೇ ಪ್ರಕಟಿಸಿದರೆ (ಕೆ/ ಕೆ.ಎ./ಕೆ.ಬಿ. ಈ ಮುಂತಾದ) ಸಂಕೇತಗಳ ಗೊಂದಲವನ್ನು ತಪ್ಪಿಸಬಹುದು. ಒಟ್ಟಿಗೆ ಮಾಡುವದಾದರೆ

ಗ್ರಂಥ ಸಂಖ್ಯೆಯ ಜೊತೆಗೆ ಕಂಸಿನಲ್ಲಿ (ತಾ.) (ಕಾ) ಎಂದೂ ಸೂಚಿಸಿದರೂ ಸಾಕೆನಿಸುತ್ತದೆ. ಶ್ರಮದ ಉಳಿಕೆ ಹಾಗೂ ಪ್ರಯೋಜನದ ದೃಷ್ಟಿಯಿಂದ ಬಹುಶಃ ಯಾವ ಕೊರತೆಯೂ ಕಂಡುಬರದ ಇಂಥ ಸೂಚಿಗಳ ನಿರ್ಮಾಣವು ಇಂದು ಹೆಚ್ಚು ಅಗತ್ಯವೆನಿಸುತ್ತದೆ. ಕೆ : ಓಲೆಯ ಪ್ರತಿ; ಕೆ.ಎ=ದೊಡ್ಡ ಅಳತೆಯ ಕಾಗದ ಪ್ರತಿ; ಕೆ.ಬಿ.=ಚಿಕ್ಕ ಅಳತೆಯ ಕಾಗದದ ಪ್ರತಿ ಎಂದು ಸಂಕೇತಾಕ್ಷರಗಳಿಂದ ಸೂಚಿಸಿ ಗೊಂದಲಗಳನ್ನು ಸೃಷ್ಟಿಸಿದ್ದಾರೆ.

**ಕನ್ನಡದಲ್ಲಿ ಗ್ರಂಥಸೂಚಿ ರಚಿಸಿದ ಮಹನೀಯರು :**

ದೇಶದ ಪ್ರಸಿದ್ಧ ಗ್ರಂಥಪಾಲಕರೆಂದು ಖ್ಯಾತಿ ವೇತ್ತರಾದ ಪದ್ಮ, ಶ್ರೀ ಬಿ. ಎಸ್. ಕೇಶವನ್, ಶ್ರೀ ಕೆ. ಎಸ್. ದೇಶಪಾಂಡೆ, ಡಾ. ಶ್ರೀನಿವಾಸ ಹಾವನೂರು, ಡಾ. ಎಸ್. ಆರ್. ಗುಂಜಾಳ, ಡಾ. ಸಿ. ಆರ್. ಕರಿಸಿದ್ದಪ್ಪ, ಟಿ. ವಿ. ವೆಂಕಟರಮಣಯ್ಯ, ಎಸ್. ಶಿವಣ್ಣ, ಸಣ್ಣ ರಾಮೇಗೌಡ, ಡಾ. ಎಂ. ಎಂ. ಕಲಬುರ್ಗಿ, ಎಚ್. ದೇವೀರಪ್ಪ, ಅನಂತರಾಮಯ್ಯ ಆರ್. ಎಲ್. –ಇನ್ನೂ ಅನೇಕರು ಈ ಕ್ಷೇತ್ರದಲ್ಲಿ ತಜ್ಞತೆಯನ್ನು ಪಡೆದು ವೈಜ್ಞಾನಿಕವಾಗಿ ಗ್ರಂಥಸೂಚಿ ರಚನೆಯ ಜೊತೆ ಜೊತೆಗೆ ನಿರ್ದೇಶಿಗಳನ್ನು ರಚಿಸಿ ಗ್ರಂಥಸೂಚಿ ಅಭ್ಯಾಸಿಗಳಿಗೆ, ಸಂಶೋಧಕರಿಗೆ ಮೂಲ ಆಕರಗಳನ್ನು ಒದಗಿಸಿಕೊಟ್ಟಿದ್ದಾರೆ. ಉದಾಹರಣೆಗಳೆಂದರೆ : ಬಸವ ಸಾಹಿತ್ಯ ದರ್ಪಣ, ಕನ್ನಡ ಗ್ರಂಥಸೂಚಿ, ವಾರ್ಷಿಕ ಗ್ರಂಥಾವಳಿ, ಕನ್ನಡ ಸಾಹಿತ್ಯ ದರ್ಶನ, ಸಾವಿರಾರು ಪುಸ್ತಕಗಳು ಸಂಶೋಧನ ಲೇಖನ ಸೂಚಿ, ೧೯೫೬ ರಲ್ಲಿ ಪ್ರಕಟಿತ ಪುಸ್ತಕಗಳು, ಸಂಕ್ರಮಣ ಶತಕ, ಮುಂತಾದವುಗಳು ವೈಜ್ಞಾನಿಕ ವರ್ಗೀಕರಣದೊಂದಿಗೆ, ಲೇಖಕ ನಿರ್ದೇಶಿ, ವಿಷಯ ನಿರ್ದೇಶಿಗಳನ್ನು ಒಳಗೊಂಡುದುದು ವಿಶೇಷವಾಗಿದೆ. ಕನ್ನಡ ಸಾಹಿತ್ಯದಲ್ಲಿ ಸೂಚಿ ರಚನೆ ಕೈಗೊಳ್ಳುವವರು ಇವುಗಳ ಅಧ್ಯಯನ ಮಾಡಿ ಸೂಚಿ ರಚನೆಗೆ ತೊಡಗಿಸಿಕೊಂಡಲ್ಲಿ ಉತ್ತಮ ಸೂಚಿಗಳು ಹೊರಬಂದಾವು.

ಗ್ರಂಥಾಲಯ ತಜ್ಞರಲ್ಲದವರು ಸೂಚಿಗಳನ್ನು ರಚಿಸಿದ್ದು ಕಂಡುಬರುತ್ತದೆ. ಈ ಸಾಲಿನಲ್ಲಿ ಸಾಂಗಲಿ ವೆಂಕಟೇಶ, ಆರ್. ನರಸಿಂಹಾಚಾರ್, ಆರ್. ಎಲ್. ಅನಂತರಾಮಯ್ಯ, ಎಸ್. ಶಿವಣ್ಣ, ಪಂಡಿತ ಕೆ. ಭುಜಬಲ ಶಾಸ್ತ್ರಿ, ಹಾ. ಮಾ. ನಾಯಕ, ವಿ. ಗ. ನಾಯಕ, ಎಂ. ಎಂ. ಕುಲಕರ್ಣಿ, ಎಚ್. ಎಸ್. ಸುಜಾತಾ, ವಿ. ಶಿವಾನಂದ, ಚಂದ್ರಶೇಖರ ಕಂಬಾರ, ಹಂ. ಪ. ನಾಗರಾಜಯ್ಯ, ಸಿ.ಪಿ.ಕೆ. –ಮುಂತಾದವರು ಜಾನಪದ ಕನ್ನಡ ಹಸ್ತಪ್ರತಿ ಸೂಚಿಗಳು, ಶಾಸನ ಸೂಚಿಗಳು, ಕವಿಗಳ, ಕಲಾವಿದರ, ಸಾಹಿತಿಗಳ ಬಗೆಗಿನ ಸೂಚಿಗಳನ್ನು ಹೊರತಂದಿದ್ದಾರೆ. ಇವೆಲ್ಲ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅತ್ಯುಪಯುಕ್ತವಾಗುವ ಮೂಲ ಆಕರಗಳಾಗಿವೆ. ಇಲ್ಲಿ ವಿಷಯಗಳ ವಿವರಗಳಿಗೆ ಮಹತ್ವ ನೀಡಲಾಗಿದೆ. ಆದ್ದರಿಂದ ಇವುಗಳನ್ನು ವಿವರಣಾತ್ಮಕ ಸೂಚಿಗಳೆಂದು ಕರೆಯಬಹುದು. ಗ್ರಂಥಾಲಯ ತಜ್ಞರಂತೆ ವಿಷಯಗಳನ್ನು ಪಟ್ಟಿ ಮಾಡಿ, ಪತ್ರಕಗಳನ್ನು ತಯಾರಿಸಿಕೊಂಡು ವರ್ಗೀಕರಣ ನಿಯಮಗಳಾದ ದ್ವಿಬಿಂದ ವರ್ಗೀಕರಣ, ಡ್ಯುಯಿ ದಶಾಂಶ ಪದ್ಧತಿ (ಡ್ಯುಯಿ ಡೆಸಿಮಲ್ ಸಿಸ್ಟಮ್) ಗಳಿಗನುಸಾರವಾಗಿ ವಿಷಯಗಳನ್ನು

ವಿಭಾಗವಾರು ಹಂಚಿ ಆಯಾ ವಿಭಾಗದಲ್ಲಿ ಬರುವ ವಿಷಯುಗಳು / ಲೇಖನಗಳನ್ನು ವಿಂಗಡಿಸಿ ಸೂಚಿಗಳನ್ನು ತಯಾರಿಸಿ ಸಿದ್ಧಪಡಿಸಿದ್ದಾರೆ. ವಿಶೇಷತೆಯೆಂದರೆ ಇವುಗಳಿಗೆ ಲೇಖಕ ನಿರ್ದೇಶಿಗಳು, ವಿಷಯ ನಿರ್ದೇಶಿಗಳು, ಪದಸೂಚಿಗಳು, ಗ್ರಂಥಸೂಚಿಗಳನ್ನು ನೀಡಿ ಉಪಕರಿಸಿರುವದರಿಂದ ಸಾಹಿತ್ಯ ಸಂದರ್ಭದಲ್ಲಿ ಬಹುಪಯೋಗಿಯಾಗಿವೆ. ಪುಸ್ತಕಗಳ ವಿವರಣಾತ್ಮಕ (Electric Bibliographies) ಸೂಚಿಗಳು ತಜ್ಞರಲ್ಲದವರ ಸೂಚಿಗಳಲ್ಲಿ ಒಮ್ಮೊಮ್ಮೆ ಪರಿವಿಡಿಯು ಇರುವದಿಲ್ಲ. ಗ್ರಂಥಸೂಚಿಗಳಲ್ಲಿ ವಿಷಯ ನಿರ್ದೇಶಿಗಳು, ಲೇಖಕ ನಿರ್ದೇಶಿಗಳು, ಆಕರ ಸೂಚಿಗಳು ಇರುವುದಿಲ್ಲವಾದ್ದರಿಂದ ಉಪಯೋಗಿಸಲು ಅಡೆತಡೆಗಳಾಗಬಹುದು. ಉದಾಹರಣೆಗಳೆಂದರೆ ಸಿ. ಆರ್. ಚಂದ್ರಶೇಖರ ಅವರ ಕೃತಿ ಪರಿಚಯ, ಸಿ.ಪಿ.ಕೆ. : ನೂರು ಮತ್ತು ಸಿ.ಪಿ.ಕೆ : ಇನ್ನೂರು, ಲೋಚನ ಲೇಖನಸೂಚಿ, ಗುರುಪ್ರಸಾದರ ಜಾನಪದ ಗ್ರಂಥಸೂಚಿ, ಎಚ್. ಎಸ್. ಸುಜಾತಾ ಅವರ ಹಾಮಾನಾ ಹೊತ್ತಗೆಗಳು ಈ ತೆರನಾದವು. ಇಂತಹ ಗ್ರಂಥಗಳಲ್ಲಿ ಕಾಲಾನುಕ್ರಮದಲ್ಲಿ ಪ್ರಕಟವಾದ ಪುಸ್ತಕಗಳ ಬಗ್ಗೆ ಸಮಗ್ರ ವಿಷಯಗಳನ್ನು ದಾಖಲಿಸಿದ್ದಾರೆ. ಇಂತ ಗ್ರಂಥಸೂಚಿಗಳನ್ನು ಡಾ. ಸಿ. ಆರ್. ಕರಿಸಿದ್ದಪ್ಪ ಅವರು ಪುಸ್ತಕಗಳ ವಿವರಣಾತ್ಮಕ (Eclectric Bibliographies) ಸೂಚಿಗಳೆಂದು ವಿವರಿಸಿ ಅವುಗಳ ಪಟ್ಟಿ ನೀಡಿದ್ದಾರೆ.[೯] ಇವುಗಳನ್ನು ಸರ್ವಸಮಗ್ರ ಸೂಚಿಗಳೆಂದು ಕರೆಯಲಾಗದಿದ್ದರೂ ಇವುಗಳಲ್ಲಿಯ ವಿವರಣಾತ್ಮಕ ವಿಷಯಗಳು ಸಂದರ್ಭ ಸಾಹಿತ್ಯದಲ್ಲಿ ಅಲ್ಲಗಳೆಯಲಾಗಿಲ್ಲ. ತೊಡಕುಗಳೆಂದರೆ ಒಂದು ವಿಷಯದ ಮಾಹಿತಿ ಮತ್ತು ಒಬ್ಬ ಲೇಖಕನ ಬಗೆಗಿನ ವಿವರಗಳನ್ನು ಬೇಕಾದಾಗ ನಿರ್ದೇಶಿಗಳನ್ನು ನೋಡಿ ಬಿಟ್ಟರೆ ಆಯಾ ಪುಟಸಂಖ್ಯೆಯಲ್ಲಿ ತಕ್ಷಣವೇ ನಾವು ವಿವರಗಳನ್ನು ನೋಡಿ ಉಪಯೋಗಿಸಿಕೊಳ್ಳಬಹುದು. ಇಲ್ಲಿ ಹಾಗಾಗುವುದಿಲ್ಲ.

## ೫.೬ : ಉತ್ತಮ ಪ್ರಯತ್ನಗಳು :

ಮೈಸೂರು ವಿಶ್ವವಿದ್ಯಾಲಯ ಕನ್ನಡ ಗ್ರಂಥಸೂಚಿಗಳು, ಭಾಷಾ ಲೇಖನ ಸೂಚಿಗಳು, ಪಿ. ಕೆ. ಪಾಟೀಲರ ಅಭಿನಂದನಾ ಗ್ರಂಥಗಳ ಲೇಖನಸೂಚಿಗಳು, ಬೆಂಗಳೂರು ವಿಶ್ವವಿದ್ಯಾಲಯ ಸಾಹಿತ್ಯ ವಾರ್ಷಿಕಗಳು ಭಿನ್ನವಾಗಿ ಓದುಗರ, ಸಂಶೋಧಕರ ವಿಷಯದ ಆಯ್ಕೆಯನ್ನು ತಕ್ಷಣ ನಿರ್ಧರಿಸುತ್ತವೆ. ಹಾಗೆಯೇ ಎಸ್. ಆರ್. ಗುಂಜಾಳ ತಯಾರಿಸಿರುವ ಬಸವದರ್ಪಣ ಭಾಗ ೧, ೨; ಸಂಶೋಧನಾ ಲೇಖನಸೂಚಿ, ಬಸವಪಥ ಲೇಖನಸೂಚಿಗಳು, ಸಿ. ಆರ್. ಕರಿಸಿದ್ದಪ್ಪ ಅವರ ಸಂಕ್ರಮಣ ಶತಕಗಳು ಕ. ಚ. ಪಾಟೀಲರ ' ತರಳಬಾಳು ' ಲೇಖನಸೂಚಿಗಳು ಇದಕ್ಕೆ ಉತ್ತಮ ಉದಾಹರಣೆಗಳು.

## ೫.೭ : ಶಾಸನಸೂಚಿಗಳು :

ಕನ್ನಡದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಶಾಸನಸೂಚಿಗಳು, ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. ಕರ್ನಾಟಕ ಬಾರತಿ, ಪ್ರಬುದ್ಧ ಕರ್ನಾಟಕ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವುಗಳು ಗ್ರಂಥಸೂಚಿ ಸಿದ್ಧಮಾದರಿಯಲ್ಲಿ

ರಚನೆಯಾಗಿಲ್ಲ. ಇವುಗಳ ನಮೂದುಗಳು ಕಾಲಾನುಕ್ರಮವಾಗಿವೆ. ಆದ್ದರಿಂದ ಇವುಗಳ ಶೋಧದಲ್ಲಿ ಸಮಸ್ಯೆಗಳೇರ್ಪಡುತ್ತವೆ. ಕೊನೆಗೆ ನಿರ್ದೇಶಿ, ವಿಷಯ ನಿರ್ದೇಶಿ, ಲೇಖಕ ನಿರ್ದೇಶಿಗಳನ್ನು ಒದಗಿಸಿದ್ದಾದರೆ ಉಪಯೋಗದಲ್ಲಿ ಹೆಚ್ಚಿನ ಅನುಕೂಲಗಳು ಇರುತ್ತವೆ. ಇವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಪ್ರಯತ್ನ ಮಾಡಿದಲ್ಲಿ ಪರಿವಿಡಿಯಿಂದ ಹಿಡಿದು ಪದಸೂಚಿಗಳ ವರೆಗೆ ಸಮಗ್ರ ಸೂಚಿಗಳನ್ನಾಗಿ ಮಾಡಬಹುದಾಗಿದೆ. ಡಾ. ಎಂ. ಎಂ. ಕಲಬುರ್ಗಿಯವರು ಶಾಸನ ಸಾಹಿತ್ಯದಲ್ಲಿ ಮೂರು ಕೃತಿಗಳನ್ನು ನೀಡಿ ಶಾಸನಸೂಚಿ ಸಾಹಿತ್ಯದಲ್ಲಿ ತಮ್ಮದೇ ಮಾರ್ಗ ಕಂಡುಕೊಂಡಿದ್ದಾರೆ. ಆನೆ ನಡೆದದ್ದೆ ಮಾರ್ಗ ಎನ್ನುವಂತೆ ಅವರು ಬಿಜಾಪುರ, ಧಾರವಾಡ ಜಿಲ್ಲೆಗಳ ಶಾಸನಸೂಚಿಗಳು ಮತ್ತು ಧಾರವಾಡ ತಾಲೂಕ ಶಾಸನಸೂಚಿಗಳನ್ನು ಪ್ರಕಟಿಸಿದ್ದಾರೆ. ನಮೂದುಗಳು ಅಕಾರಾದಿಯಲ್ಲಿ ಪ್ರಕಟವಾಗಿವೆ. ಪ್ರತಿಯೊಂದು ಜಿಲ್ಲೆಯಲ್ಲಿನ ತಾಲೂಕುಗಳನ್ನು ಕೂಡಾ ಅಕಾರಾದಿಯಾಗಿ ಹೊಂದಿಸಿಕೊಂಡು ಗ್ರಾಮಗಳನ್ನು ಕೂಡಾ ಅಕಾರಾದಿಯಾಗಿ ಪಟ್ಟಿ ಮಾಡಿ ಸಿಕ್ಕಿರುವ ಶಾಸನಸೂಚಿಗಳ ವಿವರಗಳನ್ನು ನೀಡಿದ್ದಾರೆ. ಹೀಗಾಗಿ ಎಸ್. ಶೆಟ್ಟರ್ ಮತ್ತು ಎಸ್. ರಾಜಶೇಖರ ಅವರ ಸೂಚಿಗಳಿಗಿಂತ ಕಲಬುರ್ಗಿಯವರ ಸೂಚಿಗಳು ಸರ್ವಸಮಗ್ರ ಸೂಚಿಗಳಾಗಿವೆ.

## ೫.೮ : ವ್ಯವಸ್ಥೆ (Arrangement) :

ಕನ್ನಡ ಹಸ್ತಪ್ರತಿಗಳು ಅಧ್ಯಯನಗಳಲ್ಲಿ ಶೀರ್ಷಿಕೆಗಳನ್ನು ಅಕಾರಾದಿಯಾಗಿ ಜೋಡಿಸಿಕೊಂಡು ಹಸ್ತಪ್ರತಿ ಸೂಚಿಗಳನ್ನು ತಯಾರು ಮಾಡಿದ್ದಾರೆ. ಅದೇ ಸಮಯದಲ್ಲಿ ಲೇಖಕರ ಸೂಚಿ ಮತ್ತು ವಿಷಯ ಸೂಚಿಗಳನ್ನು ರಚಿಸಲಾಗಿದ್ದುದು ಕಾಣಬಹುದಾಗಿದೆ. ಇದು ವಿಷಯ ಸಂಪ್ರಾಪ್ತಿಗೆ ಇನ್ನಷ್ಟು ಅನುಕೂಲತೆಯನ್ನು ಒದಗಿಸುತ್ತದೆ. ಹಸ್ತಪ್ರತಿಗಳನ್ನು ಕೃತಿ ಪರಿಚಯ ಮತ್ತು ಕವಿ ಪರಿಚಯದಿಂದಲೇ ಇವುಗಳನ್ನು ಗುರುತಿಸಲಾಗುತ್ತದೆ. ಹಸ್ತಪ್ರತಿಗಳ ನಮೂದುಗಳಲ್ಲಿ ಅನೇಕ ಸಮಸ್ಯೆಗಳನ್ನು ಕಾಣಬಹುದು. ಹೀಗಾಗಿ ಬಹು ಎಚ್ಚರಿಕೆಯಿಂದ ಇವುಗಳನ್ನು ಅಕಾರಾದಿಯಾಗಿ ಜೋಡಿಸುವ ವ್ಯವಸ್ಥೆಯನ್ನು ಮಾಡಬಹುದಾಗಿದೆ.

**ವಿಶ್ವವಿದ್ಯಾಲಯ ಗ್ರಂಥಾಲಯಗಳ ಗ್ರಂಥಸೂಚಿಗಳು :**

ಗ್ರಂಥಾಲಯಗಳು ಪ್ರಕಟಿಸಿದ ಗ್ರಂಥಸೂಚಿಗಳು ಅಕಾರಾದಿಯಾಗಿ ಪ್ರಕಟಗೊಂಡಿದ್ದಾಗ್ಯೂ ಗ್ರಂಥಾಲಯ ವರ್ಗೀಕರಣ ನಿಯಮಗಳನ್ನು ಅಳವಡಿಸಿಕೊಂಡು ಪ್ರಕಟಿಸಲಾಗಿದೆ. ಕರ್ನಾಟಹಕ ವಿ. ವಿ. (೧೯೭೩ - ೭೫) ಗ್ರಂಥಾಲಯ ಪ್ರಕಟಿಸಿದ " ಹೊಸ ಪ್ರಕಟಣೆಗಳು ", ಬೆಂಗಳೂರು ಸೆಂಟ್ರಲ್ ಕಾಲೇಜು ಪ್ರಕಟಿಸಿದ " ಗ್ರಂಥಸೂಚಿ ", ಮೈಸೂರು ವಿ. ವಿ. ಪ್ರಕಟಿಸಿದ ಗ್ರಂಥಸೂಚಿಗಳು ಜಗನ್ನಾಥನ್ ಅವರ ದ್ವಿಬಿಂದು ವರ್ಗೀಕರಣ ನಿಯಮಗಳಿಗನುಸಾರವಾಗಿ

ವೈಜ್ಞಾನಿಕವಾಗಿ ಪ್ರಕಟಿಸಲ್ಪಟ್ಟಿವೆ. ಆದರೆ ಲೇಖಕ ಮತ್ತು ಶೀರ್ಷಿಕೆ ಸೂಚಿಗಳನ್ನು ಒಳಗೊಂಡಿಲ್ಲವಾದ್ದರಿಂದ ಸಂಶೋಧಕರಿಗೆ ಅಡೆತಡೆಗಳನ್ನು ಒಡ್ಡುತ್ತದೆ.

ಈಗಾಗಲೇ ಅಧ್ಯಾಯ ಮೂರರಲ್ಲಿ ಈ ಬಗ್ಗೆ ಚರ್ಚಿಸಲಾಗಿದೆ. ಡಾ. ಕಲಬುರ್ಗಿಯವರು ಲಂಡನ್ ಲೈಬ್ರರಿಗಾಗಿ ತಯಾರಿಸಿದ ವರ್ಣನಾತ್ಮಕ ಸೂಚಿಯ ಮಾದರಿಯನ್ನೂ ಪರಿಶೀಲಿಸಬಹುದು. ಇವರು ಒಂದು ಹಸ್ತಪ್ರತಿಯ ಬಗೆಗೆ ಕೊಡಬೇಕಾದ ವಿವರಗಳನ್ನು ಎರಡು ಭಾಗವಾಗಿ ವಿಂಗಡಿಸಿ ಒಂದನ್ನು 'ಕೃತಿಪರಿಚಯ' ಎಂದೂ ಇನ್ನೊಂದನ್ನು ಪ್ರತಿ ಪರಿಚಯ ಎಂದು ಗುರುತಿಸಿದ್ದಾರೆ. ಈ ವಿಂಗಡಣೆ ಮತ್ತು ವಿವರಗಳು ಹಿಂದಿನ ವರ್ಣನಾತ್ಮಕ ಸೂಚಿಗಳ ವಿವರಗಳಿಗಿಂತ ಹೆಚ್ಚು ಶಾಸ್ತ್ರೀಯವಾದುದು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಇದು ಹದಿನೈದು ವಿವರಗಳನ್ನು ಒಳಗೊಳ್ಳುವದಾಗಿದೆ.

ಕೃತಿ ಪರಿಚಯವು ೧) ಹೆಸರು, ೨ ಕವಿ, ೩) ಪ್ರಕಾರ, ೪) ಕಾಲ, ೫) ವಿಷಯ ಎಂಬ ಐದು ಅಂಶಗಳನ್ನು ಒಳಗೊಂಡಿದ್ದರೆ ಪ್ರತಿ ಪರಿಚಯವೂ ೬) ವಸ್ತು, ೭) ಹಸ್ತಪ್ರತಿಯ ಕ್ರಮಾಂಕ, ೮) ಅಕ್ಷರ, ೯) ಆಕಾರ, ೧೦) ಸ್ವರೂಪ, ೧೧) ಗರಿ / ಪುಟ, ೧೨) ಸ್ಥಿತಿ (ಪೂರ್ಣ/ಅಪೂರ್ಣ), ೧೩) ಮಿತಿ, ೧೪) ಪ್ರಾರಂಭ, ೧೫) ಅಂತ್ಯ ಎಂಬ ಹದಿನೈದು ಅಂಶಗಳನ್ನು ಒಳಗೊಂಡಿರುತ್ತದೆ.

## ೫.೯ : ನಮೂನೆ (Format) :

ಗ್ರಂಥಸೂಚಿಗಳ ಸೂಚೀಕರಣವು ಸಿದ್ಧ ಮಾದರಿಯಲ್ಲಿ ಸಿಗುತ್ತದೆ. ವಿಶೇಷವಾಗಿ ಹಸ್ತಪ್ರತಿಗಳನ್ನು ಪ್ರಕಟಿಸಿರುವ ವಿವಿಧ ಪ್ರಕಾಶಕರು ಖಾಸಗಿ ಸಂಸ್ಥೆಗಳು ಈ ಕೆಳಗಿನ ನಮೂನೆಯಲ್ಲಿ ಕನ್ನಡ ಹಸ್ತಪ್ರತಿಗಳ ಸೂಚಿಗಳ ಸೂಚೀಕರಣವನ್ನು ನೋಡಬಹುದು. ಅವರು ತಮ್ಮ ಹಸ್ತಪ್ರತಿಗಳ ನಮೂದುಗಳಿಗಾಗಿ ಸಿದ್ಧ ಮಾದರಿಯ ನಮೂನೆಯನ್ನು ಉಪಯೋಗಿಸಿದ್ದಾರೆ. ಬಹಳಷ್ಟು ಕನ್ನಡದ ಹಸ್ತಪ್ರತಿಗಳು ಈ ಮಾದರಿಗಳನ್ನು (ನಮೂನೆ) ಬಳಸಿಕೊಂಡಿವೆ.

**ನಮೂನೆ :**

ಅನುಕ್ರಮ ಸಂಖ್ಯೆ

ಶೀರ್ಷಿಕೆ

ವಸ್ತು

ಹಸ್ತಪ್ರತಿ ಸಂಖ್ಯೆ

ಗಾತ್ರ

ಅವಧಿ (Exlent)

ಸಿಕ್ಕ ಸ್ಥಳ

ವಯಸ್ಸು

ಲೇಖಕ

ವಿಷಯ

ಶೈಲಿ

ಪ್ರಾರಂಭ

ಅಂತ್ಯ

ಸಂದರ್ಭ ಮತ್ತು ಟಿಪ್ಪಣಿಗಳು

ಅಂಶಗಳು (Points)

## ಗ್ರಂಥಸೂಚಿ ರಕ್ಷಣೆ

ಹಸ್ತಪ್ರತಿಯ ಬಗ್ಗೆ ಸಾಧ್ಯವಿದ್ದ ಎಲ್ಲ ದಾಖಲೆಗಳನ್ನು ನಮೂನೆಯಲ್ಲಿ ಅಥವಾ ಸೂಚೀಕರಣದಲ್ಲಿ ದಾಖಲಿಸಬಹುದಾಗಿದೆ. ಹಸ್ತಪ್ರತಿಯ ಪಠ್ಯದ ಬಗ್ಗೆ ಸಾಕಷ್ಟು ಕಾಳಜಿ ವಹಿಸಿ ಎಲ್ಲ ವಿಷಯಗಳನ್ನು ಸಮಗ್ರವಾಗಿ ನಿರೂಪಿಸಬಹುದಾಗಿದೆ. ಮೈಸೂರಿನ ಓರಿಯಂಟಲ್ ಸಂಶೋಧನಾ ಸಂಸ್ಥೆ, ಕನ್ನಡ ಸಂಶೋಧನಾ ಸಂಸ್ಥೆ ಧಾರವಾಡ ಸಂಸ್ಥೆಗಳು ಪ್ರಕಟಿಸಿರುವ ಬಹಳಷ್ಟು ಸಂಪುಟಗಳು ಈ ನಮೂನೆಯಲ್ಲಿ ಮುದ್ರಣಗೊಂಡಿವೆ. ಆದರೆ ಇವುಗಳ ರಟ್ಟು ಕಟ್ಟುವಿಕೆ ಮತ್ತು ಸಾದಾ ಪ್ರತಿಗಳಾಗಿರುವದರಿಂದ ತಾಳಿಕೆ ಬಗ್ಗೆ ಹೇಳುವಂತಿಲ್ಲ. ಇಂತಹ ಸಂಪುಟಗಳನ್ನು ಶುದ್ಧ ಕ್ಯಾಲಿಕೊ ಪ್ರತಿಗಳಲ್ಲಿ ಪ್ರಕಟಿಸುವುದರಿಂದ ಅವುಗಲ ತಾಳಿಕೆ ಬಹುಕಾಲ ಬಾಳುವಂತೆ ಅವುಗಳನ್ನು ರಕ್ಷಿಸಿಡಬೇಕಾದದ್ದು ಆವಶ್ಯಕವಾಗಿರುತ್ತದೆ. ಗ್ರಂಥಾಲಯಗಳು ಪ್ರಕಟಿಸುವ ಗ್ರಂಥಸೂಚಿಗಳ ಸೂಚೀಕರಣವು ಗ್ರಂಥಾಲಯ ಶಾಸ್ತ್ರದ ಸಿದ್ಧ ಮಾದರಿಯಲ್ಲಿಯೇ ಇವೆ. ಕೇಂದ್ರ ಗ್ರಂಥಾಲಯ ಬೆಂಗಳೂರು ಇವರು ಕೂಡ ಗ್ರಂಥಸೂಚಿಯನ್ನು ಪ್ರಕಟಿಸಿದ್ದು ಸೈಕ್ಲೋಸ್ಟೈಲ್ ನಮೂನೆಯಲ್ಲಿದೆ. ಇದನ್ನು ಬೆರಳಚ್ಚು ಮಾಡಿ ಸೈಕ್ಲೋಸ್ಟೈಲ್ ಮಾಡಿಸಲಾಗಿದೆ. ಇಲ್ಲಿ ಎಲ್ಲ ಕಾರ್ಯಗಳು ಪೇಪರ ಬ್ಯಾಕ್ಸ್ ನಮೂನೆಯಲ್ಲಿವೆ. ಇವೆಲ್ಲವುಗಳಿಗಿಂತಲೂ ಎಲ್. ಡಿ. ಬಾರ್ನೆಟ್ ಪ್ರಕಟಿಸಿರುವ ಸೂಚೀಕರಣವು ಮಾತ್ರ ವಿಶೇಷವಾಗಿ ಆಯಿಲ್ ಕಂಟೆಂಟ್ ಪೇಜಿನಲ್ಲಿ ಮುದ್ದಾದ ಅಕ್ಷರಗಳಿಂದ ಕಾಲಂನ ನಲ್ಲಿ ಗ್ರಂಥಸೂಚೀಕರಣದ ಸಮಗ್ರ ಅಂಶಗಳಿಂದ ಮೈದುಂಬಿ ದಪ್ಪ ಗಾತ್ರದ ಬಾಂಡ್ ಪೇಪರಿನಲ್ಲಿ ಅಚ್ಚಾಗಿ ಓದುಗರ ಗಮನ ಸೆಳೆಯುತ್ತವೆ. ಕಾರಣ ಇಷ್ಟೆ, ಇದು ಇಂಗ್ಲೆಂಡಿನಲ್ಲಿ ಅಚ್ಚಾಗಿದ್ದು ಇದನ್ನು ಬ್ರಿಟಿಷ್ ಮ್ಯೂಜಿಯಂ ಬೋರ್ಡ್ ಟ್ರಸ್ಟ್ ಪ್ರಕಟಿಸಿದೆ. ಗ್ರಂಥಸೂಚಿಗಳನ್ನು ಪ್ರಕಟಿಸಲು ಸಾಕಷ್ಟು

ತಾಳ್ಮೆಯ ಜೊತೆಗೆ ಪಂಡಿತ ಪಾಮರರೇ ಇಂತಹ ಕಾರ್ಯಗಳಲ್ಲಿ ತೊಡಗಿಕೊಳ್ಳಬೇಕು. ಅವರ ವಿದ್ವತ್ತು, ಅನುಭವ, ಅಪಾರ ತಾಳ್ಮೆ, ಶ್ರದ್ಧೆ, ಹಠಮಾರಿತನ, ಪ್ರಾಮಾಣಿಕ ಪ್ರಯತ್ನಗಳು ಬೇಕಾಗುತ್ತವೆ. ಅರಿವಿನ ಆಕರವನ್ನು ಸಾಧಕನ ಮನೋಭಾವಗಳನ್ನು ಪರಿಕಲ್ಪನಾತ್ಮಕವಾಗಿ ವಿಸ್ತರಿಸಿಕೊಳ್ಳುವಲ್ಲಿ ಇಂಥ ಸಂಪುಟದ ಕೆಲಸಗಳು ಸಹಕರಿಸುತ್ತವೆ.

## ೫.೧೦ : ಕನ್ನಡ ವಿಶ್ವವಿದ್ಯಾಲಯ ಸೂಚಿಗಳು :

ಕನ್ನಡ ವಿಶ್ವವಿದ್ಯಾಲಯವು ಎರಡು ಹಸ್ತಪ್ರತಿ ಸೂಚಿಗಳನ್ನು ಪ್ರಕಟಿಸಿದೆ. ವಿವರಣಾತ್ಮಕವಾಗಿ ಕೃತಿಗಳ ಪರಿಚಯ ಮಾಡಿಕೊಡುತ್ತವೆ ಎಂಬುದರಲ್ಲಿ ಎರಡು ಮಾತಿಲ್ಲ. ಸ್ವರೂಪದ ದೃಷ್ಟಿಯಿಂದ ಹೇಳುವುದಾದರೆ ಮೊದಲು ಕೃತಿ ಪರಿಚಯ ಮಾಡಿ, ನಂತರ ಪ್ರತಿ ಪರಿಚಯ ಮಾಡಲಾಗಿದೆ. ಇದನ್ನು ಮಧ್ಯದಲ್ಲಿ (•) ಕಪ್ಪು ಚುಕ್ಕೆ ಬಳಸುವ ಮೂಲಕ ಬೇರ್ಪಡಿಸಲಾಗಿದೆ. ಕೃತಿ ಪರಿಚಯ ಭಾಗದಲ್ಲಿ ಮಧ್ಯೆ ದೊಡ್ಡ ಅಂಕಿಯಲ್ಲಿ ಇದ್ದು ಕೃತಿಯ ಕ್ರಮ ಸಂಖ್ಯೆ. ನಂತರ ಕೃತಿನ ಹೆಸರು. ಅದರ ಎಡಭಾಗದಲ್ಲಿ ಕವಿಯ ಹೆಸರು, ಮತ್ತು ಕಾಲವನ್ನು ಕೊಡಲಾಗಿದೆ. ಬಲಭಾಗದಲ್ಲಿ ಕೃತಿಯ ಪ್ರಕಾರವನ್ನು ಹೇಳಿರುವುದಲ್ಲದೆ ಕೆಳಗಿನ ಸಾಲಿನಲ್ಲಿ ಕೃತಿಯ ವಸ್ತುವಿಷಯವನ್ನು ಸೂಚಿಸಲಾಗಿದೆ.

ಇನ್ನೂ ಕೃತಿ ಪರಿಚಯ ಭಾಗದಲ್ಲಿ ಮೊದಲ ಸಾಲಿನಲ್ಲಿ ಕೃತಿ ಅಥವಾ ಕಟ್ಟಿನ ಬರವಣಿಗೆ ಮಾಧ್ಯಮವನ್ನು ತಾ. ಪ್ರ., ಕಾ. ಪ್ರ. (ತಾಳೆ ಪ್ರತಿ, ಕಾಗದ ಪ್ರತಿ) ಎಂದು ಸಂಕ್ಷೇಪಿಸಿ ಕೊಡಲಾಗಿದೆ. ಅಲ್ಲದೆ ಕಟ್ಟಿನ ಕ್ರಮಸಂಖ್ಯೆಯನ್ನು ಇಲ್ಲಿಯೇ ನಮೂದಿಸಲಾಗಿದೆ. ನಂತರ ಹಸ್ತಪ್ರತಿ ಆಕಾರ ಮತ್ತು ಗರಿ / ಪುಟ ಸಂಖ್ಯೆಗಳನ್ನು ಕೊಡಲಾಗಿದೆ. ಎರಡನೆಯ ಸಾಲಿನಲ್ಲಿ ಕ್ರಮವಾಗಿ ಹಸ್ತಪ್ರತಿಗಳ ಸ್ವರೂಪ, ಲಿಪಿ, ಭಾಷಾ ಸ್ವರೂಪಗಳನ್ನು ಉತ್ತಮ, ಮಧ್ಯಮ, ಸಾಧಾರಣ ಎಂದು ಆಯಾ ಹಸ್ತಪ್ರತಿಗಳ ಗುಣಮಟ್ಟದ ಮೇಲೆ ಇವುಗಳಲ್ಲಿ ಒಂದು ಪದದಿಂದ ನಿರ್ದೇಶಿಸಲಾಗಿದೆ.

ಆದಿ ಎಂಬುದರ ಮುಂದೆ ಆಯಾ ಕೃತಿಯ ಪ್ರಾರಂಭದ ಸ್ವಲ್ಪ ಪಾಠವನ್ನು ಅಂತ್ಯ ಎಂಬುದರ ಮುಂದೆ ಆಯಾ ಕೃತಿಯ ಅಂತ್ಯದ ಸ್ವಲ್ಪ ಪಾಠವನ್ನು ಬರೆಯಲಾಗಿದೆ. ಹೀಗೆ ಬರೆಯುವಾಗ ಲುಪ್ತ ಪಾಠಕ್ಕಾಗಿ × × × × ಈ ಚಿಹ್ನೆಯನ್ನು ಮುಂದುವರಿದ ಪಾಠಕ್ಕಾಗಿ........ ಈ ಚಿಹ್ನೆಯನ್ನು ಬಳಸಲಾಗಿದೆ. ಇನ್ನು 'ವಿಶೇಷ'ವೆನ್ನುವ ಭಾಗದಲ್ಲಿ ಹಸ್ತಪ್ರತಿಯ ಸಮಗ್ರತೆ, ಗುಣಲಕ್ಷಣ, ಚಿತ್ರಗಳು, ಶಕಟರೇಫದ ಬಳಕೆಗಳಂತಹ ವಿಶೇಷ ನಮೂದುಗಳಿದ್ದರೆ ಅವನ್ನು ಕೊಡಲಾಗಿದೆ. ಈ 'ಕಟ್ಟಿನಲ್ಲಿರುವ ಕೃತಿಗಳು' ಎಂಬ ಭಾಗದಲ್ಲಿ ಕಟ್ಟಿನಲ್ಲಿಯ ಪ್ರಥಮ ಕೃತಿಯ ಕೆಳಭಾಗದಲ್ಲಿ ಮಾತ್ರ ಅದರೊಳಗಿರುವ ಎಲ್ಲ ಕೃತಿಗಳ ಹೆಸರನ್ನು ಸೂಚಿ ಸಂಖ್ಯೆ ಸಮೇತ ಕೊಡಲಾಗಿದೆ. ಆದರೆ ಪ್ರಥಮೇತರ ಕೃತಿಗಳ ಕೆಳಭಾಗದಲ್ಲಿ 'ಈ ಕಟ್ಟಿನಲ್ಲಿರುವ ಕೃತಿಗಳು' ಎನ್ನುವದರ ಮುಂದೆ 'ನೋಡಿರಿ' ಎಂದು ನಿರ್ದೇಶಿಸಿ ಕೃತಿಯ ಹೆಸರು ಮತ್ತು ಕ್ರಮಸಂಖ್ಯೆಗಳನ್ನು ನೀಡಲಾಗಿದೆ. ಇನ್ನೂ ಸಂಪುಟದ ಕೊನೆಯ ಭಾಗವಾದ

ಅನುಬಂಧದಲ್ಲಿ ಕವಿ, ಸ್ಥಳನಾಮ, ಲಿಪಿಕಾರರು, ಬರೆಸಿದವರು, ಹಸ್ತಪ್ರತಿ ನೀಡಿದ ದಾನಿಗಳ ಕುರಿತು ಆಯಾ ಸೂಚಿಗಳ ಕ್ರಮಸಂಖ್ಯೆಗಳ ಸಮೇತ ವಿವರಗಳನ್ನು ಕೊಡಲಾಗಿದೆ. ಇದರಿಂದ ಅಧ್ಯಯನಕಾರರಿಗೆ ಅನುಕೂಲವಾಗುವದಲ್ಲದೆ ನಮ್ಮ ಪಾರಂಪರಿಕ ಬರಹಗಾರರ ಸ್ಥಳನಾಮಗಳು, ಬರೆಸಿದ ವಿವರಗಳು, ಒಟ್ಟಿಗೆ ಸಿಕ್ಕಂತಾಗುತ್ತದೆ. ಇದು ಸಾಂಸ್ಕೃತಿಕ ಅಧ್ಯಯನಕ್ಕೆ ಬಹುಪಯೋಗಿಯಾಗುತ್ತದೆ.

ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಎರಡು ಹಸ್ತಪ್ರತಿ ಸೂಚಿಗಳು, ಒಂದು ಜಾನಪದ ಗ್ರಂಥಸೂಚಿಯ ಅನಾನುಕೂಲತೆಗಳೆಂದರೆ ಲೇಖಕ ನಿರ್ದೇಶಿ, ವಿಷಯ ನಿರ್ದೇಶಿಗಳನ್ನು ಒಳಗೊಂಡಿಲ್ಲ. ಅಧ್ಯಯನಕಾರರಿಗೆ ತೊಂದರೆಗಳು ಇದ್ದೇ ಇವೆ. ಅಲ್ಲದೆ ಕೃತಿಗಳು ಯಾವ ಕಾಲದಲ್ಲಿ ರಚಿಸಲ್ಪಟ್ಟಿವೆ ಎಂಬುದು ಗೌಣವಾಗಿದೆ. ಅಥವಾ ಉದ್ದೇಶಪೂರ್ವಕ ಬಿಟ್ಟುಹೋಗಿದೆಯೇ ಗೊತ್ತಾಗುವುದಿಲ್ಲ. ಆದಾಗ್ಯೂ ಈ ಸೂಚಿಗಳ ಉಪಯೋಗಗಳು ಇದ್ದೇ ಇವೆ. ಸ್ತುತ್ಯಾರ್ಹ ಕಾರ್ಯಗಳೇ. ಮುಂದಿನ ಸೂಚಿಗಳಲ್ಲಿ ಈ ಅರೆಕೊರೆಗಳನ್ನು ವಿಶ್ವವಿದ್ಯಾಲಯ ತುಂಬಿಕೊಳ್ಳಬಹುದೆಂಬ ಆಶಯವನ್ನು ಇರಿಸಿಕೊಳ್ಳೋಣ.

## ೫.೧೧ : ವ್ಯವಸ್ಥಿತ ಗ್ರಂಥಸೂಚಿಗಳು : ವಸ್ತುನಿಷ್ಠ (objective) ಮತ್ತು ವಿಷಯನಿಷ್ಠ (subjective) ಗ್ರಂಥಸೂಚಿಗಳು :

ಕನ್ನಡದಲ್ಲಿ ಪ್ರಕಟವಾದ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ ಕನ್ನಡ ಗ್ರಂಥಸೂಚಿಯ ಏಳು ಸಂಪುಟಗಳು ನಾಲ್ಕು ಪುರವಣಿಗಳು, ಎಸ್. ಆರ್. ಗುಂಜಾಳರ ಬಸವಸಾಹಿತ್ಯ ದರ್ಪಣ, ಸಂಶೋಧನ ಲೇಖನಸೂಚಿ, ಬಸವಪಥ ಲೇಖನಸೂಚಿ, Lingayat Bibliography; ಕನ್ನಡ ಜಾನಪದ ಗ್ರಂಥಸೂಚಿ; ಭಾರತೀಯ ಸಾಹಿತ್ಯದ ರಾಷ್ಟ್ರೀಯ ಗ್ರಂಥಸೂಚಿ (National Bibliography of Indian Literature); ಎಂ. ಆರ್. ಸಣ್ಣರಾಮೇಗೌಡರ ' ಜೀವನ ' : ಜಯಕರ್ನಾಟಕ ಜಯಂತಿ, ಶಿವಾನುಭವ ಪತ್ರಿಕೆಗಳಲ್ಲಿನ ಸಮಗ್ರ ಸೂಚಿ; ಕ. ಚ. ಪಾಟೀಲರ ' ತರಳಬಾಳು ' ಲೇಖನ ಸೂಚಿ; ಟಿ. ವಿ. ಸುಬ್ರಹ್ಮಣ್ಯಂ ಅವರ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ' ಲೇಖನ ಸೂಚಿ '; ಅನಿಲ ಧಾರವಾಡಕರ ಅವರ ಜಯಂತಿ - ಲೇಖಕರ ಸೂಚಿ; ಪಿ. ಕೆ. ಪಾಟೀಲರ ಅಭಿನಂದನ ಗ್ರಂಥಗಳಲ್ಲಿನ ಲೇಖನಸೂಚಿ; ಸಿ. ಆರ್. ಕರಿಸಿದ್ದಪ್ಪ ಅವರ ಸಂಕ್ರಮಣ ಶತಕ ಮುಂತಾದ ಗ್ರಂಥಸೂಚಿಗಳು ಶಾಸ್ತ್ರೀಯವಾಗಿ, ಸಮಗ್ರವಾಗಿ, ವಸ್ತುನಿಷ್ಠ (objective) ವಾಗಿಯೂ; ವಿಷಯನಿಷ್ಠ (subjective) ವಾಗಿಯೂ ರಚಿಸಲ್ಪಟ್ಟಿವೆ. ಅಧ್ಯಯನಕಾರರಿಗೆ ಬಹುಪಯೋಗಿಯಾಗಿವೆ. ಇವೆಲ್ಲ ಮಾದರಿಯಲ್ಲಿ ಮತ್ತು ಗುಣಗ್ರಾಹಿಗಳಾಗಿ ಇಂಗ್ಲೀಷ ಗ್ರಂಥಸೂಚಿಗಳ ಮಾದರಿಯಲ್ಲೇ ಪ್ರಕಟಿಸಲ್ಪಟ್ಟು ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನದ ತಜ್ಞರು, ಸಾಹಿತಿಗಳು, ವಿಜ್ಞಾನ

ಲೇಖಕರು ಇವುಗಳ ರಚನೆಯಲ್ಲಿ ಅಪಾರ ಶ್ರಮ ವಹಿಸಿದ್ದಾರೆ. ಸಮರ್ಥವಾಗಿ, ವಸ್ತುನಿಷ್ಠವಾಗಿ, ವೈಜ್ಞಾನಿಕ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ರಚಿಸಿದ ವ್ಯವಸ್ಥಿತ ಸೂಚಿಗಳಾಗಿವೆ. ಹೀಗಾಗಿ ವಿದ್ವಾಂಸರ ಗಮನ ಸಹಜವಾಗಿ ಈ ಸೂಚಿಗಳ ಕಡೆ ಇದೆ ಹೊಗಳಿಕೆಯನ್ನು ಇವು ಪಡೆದಿವೆ. ಸರ್ವದೃಷ್ಟಿಯಿಂದಲೂ ಇವು ಯೋಗ್ಯ ಸಂದರ್ಭ ಗ್ರಂಥಗಳು ಎಂದು ವಿದ್ವಾಂಸರಿಂದ ಮನ್ನಿಸಲ್ಪಟ್ಟಿವೆ. ಇವುಗಳ ಮುದ್ರಣ ಕೂಡಾ ಅತ್ಯುತ್ತಮವಾಗಿ ನಿರ್ವಹಿಸಲ್ಪಟ್ಟಿದೆ. ಪೇಪರ್ ಬ್ಯಾಕ್ ರೂಪದಲ್ಲಿ ಇವು ಮುದ್ರಿಸಲ್ಪಟ್ಟಿವೆ. ರಟ್ಟು ಕಟ್ಟುವಿಕೆ, ಕ್ಯಾಲಿಕೋ ಪ್ರತಿಗಳಾಗಿರುವದರಿಂದ ಇವುಗಳು ಬಹುಕಾಲ ಬೆಲೆಯುಳ್ಳವು. ಉಪಯೋಗ ಉಳ್ಳವುಗಳು ಆಗಿವೆ. ಇವುಗಳು ಅಧ್ಯಯನಕಾರರ ಗಮನವನ್ನು ಸೆಳೆದಿವೆ. ಶಬ್ದಕೋಶಗಳಂತೆ ಇವು ಬಹುಪಯೋಗಿಗಳೆಂದು ಈಗಾಗಲೇ ವಿದ್ವಾಂಸರು ಮನ್ನಣೆ ನೀಡಿದ್ದಾರೆ. ಕೆಲವು ಗ್ರಂಥಸೂಚಿಗಳು ಪುನಃ ಮುದ್ರಣವಾದದ್ದು ಇದೆ. ಅದರಲ್ಲಿ ಸಾಂಗಲಿ ವೆಂಕಟೇಶ ಅವರ ಗ್ರಂಥಕರ್ತರ ಚರಿತ್ರಕೋಶ ೩ ನೇ ಮುದ್ರಣ ಕಂಡಿದೆ.

ಶಾಸನಸೂಚಿಗಳಲ್ಲಿ ನಮೂದುಗಳು ಶಾಸ್ತ್ರೀಯ ರೀತಿಯಲ್ಲಿ ನಮೂದಿಸಲ್ಪಟ್ಟಿಲ್ಲ. ಅವು ಕಾಲಾನುಕ್ರಮ ರೂಪದಲ್ಲಿ ಜರುಗಿದ ಘಟನೆಗಳನ್ನೆ ಆಕರಗಳನ್ನಾಗಿ ಉಪಯೋಗಿಸಿರುವುದರಿಂದ ಕಾಲಾನುಕ್ರಮಗಳ ಘಟನೆಗಳನ್ನು ಸೂಚಿ ರೂಪದಲ್ಲಿ ಹೊಂದಿಸಲಾಗಿದೆ. ಆದರೆ ಅವುಗಳನ್ನು ಸೂಚಿಗಳೆನ್ನಲು ಅಭ್ಯಂತರವೇನೂ ಇಲ್ಲ ಎಂದು ಡಾ. ಸಿ. ಆರ್. ಕರಿಸಿದ್ದಪ್ಪ ಅಭಿಪ್ರಾಯಪಡುತ್ತಾರೆ.[೧೦] ಸಾಮಾನ್ಯವಾಗಿ ಅನುಕ್ರಮ ಸಂಖ್ಯೆ, ಗ್ರಾಮ, ತಾಲೂಕು, ಜಿಲ್ಲೆ, ಅವಧಿ, ರಾಜ, ರಾಯಲ್ ಕುಟುಂಬ, ಶಾಸನಗಳ ವಿವರಗಳು, ವರದಿ, ಅಡಿಟಿಪ್ಪಣಿಗಳೆಲ್ಲವೂ ಗ್ರಂಥಸೂಚೀಕರಣ ನಿಯಮಗಳಿಗನುಸಾರವಾಗಿ ದಾಖಲಾಗಿವೆ.

ಇದಕ್ಕೆ ಉತ್ತಮ ಉದಾಹರಣೆ ಎಂದರೆ ಎಸ್. ರಾಜಶೇಖರ ಅವರ ವಿಜಯನಗರ ಕಾಲದ ಘಟನಾವಳಿಗಳ ಸೂಚಿ.[೧೧] ಇಲ್ಲಿ ಘಟನಾವಳಿಗಳನ್ನು ಕಾಲಾನುಕ್ರಮದಲ್ಲಿ ಹೊಂದಿಸಿ ನೀಡಲಾಗಿದೆ. ವಿಜಯನಗರ ಕಾಲದ ಮುಖ್ಯ ಘಟನಾವಳಿಗಳನ್ನು ಇಲ್ಲಿ ಪಟ್ಟಿ ಮಾಡಿ ವಿವರಣಾತ್ಮಕವಾಗಿ ವಿವರಿಸಲಾಗಿದೆ. ಹೀಗಾಗಿ ಇದೊಂದು ಕಾಲದ ಘಟನಾವಳಿಗಳನ್ನು ಅಭ್ಯಾಸ ಮಾಡುವವರಿಗೆ, ಸಂಶೋಧಕರಿಗೆ ಆಕರಸೂಚಿಯಾಗುವುದರಲ್ಲಿ ಸಂಶಯವಿಲ್ಲ. ಈಗಾಗಲೇ LC - MARC 21, OCLC, OPAC ಗಳು ಸಿದ್ಧ ಮಾದರಿಯಲ್ಲಿ ಸಿಗುತ್ತಿವೆ. ಇವುಗಳನ್ನು ಇಡಿ ವಿಶ್ವವೇ ಗಣಕಯಂತ್ರ (computer) ಪರದೆಯ ಮೇಲೆ ಮೂಲ ಆಕರಗಳಾಗಿ ಬಳಸುತ್ತಿದೆ. ಕನ್ನಡದಲ್ಲಿ ಪ್ರಾದೇಶಿಕವಾಗಿ ಸಿಗುವ ನಮೂನೆಗಳಿಗಿಂತ ಇವು ಭಿನ್ನವಾಗಿವೆ. ಗಣಕಯಂತ್ರ (computer) ದಲ್ಲಿ ನೇರ ಸಂಪರ್ಕ (online service) ದಲ್ಲಿ ಇವುಗಳ ಬಹುಪಯೋಗ ವಿಶ್ವದಲ್ಲೆಲ್ಲ ಸಾಬೀತಾಗಿದೆ. ಇವುಗಳ ನಮೂನೆಯನ್ನು ಇಲ್ಲಿ ಚರ್ಚಿಸಲಾಗಿದೆ. ಕನ್ನಡಕ್ಕೆ ಎಲ್. ಡಿ. ಬಾರ್ನೆಟ್, ವಿಲಿಯಂ ಜೋನ್ಸ್, ಕೀಲ್ ಹಾರ್ನ್ ಅವರುಗಳ ಬ್ರಿಟಿಷ್

ಮಾದರಿಯನ್ನು ಮೂಲವಾಗಿಟ್ಟುಕೊಂಡೇ ಗ್ರಂಥಸೂಚೀಕರಣ ರಚನೆಯಾಗಿದೆ. ಹೀಗಾಗಿ ಎಲ್ಲ ವಿಜ್ಞಾನಗಳಿಗೆ ಬ್ರಿಟಿಷರು ಭದ್ರ ಬುನಾದಿಯನ್ನು ಹಾಕಿ ಕೊಟ್ಟಿದ್ದಾರೆ. ಹಾಗೆಯೇ ಕನ್ನಡದಲ್ಲಿ ವ್ಯಾಕರಣ, ಸಾಹಿತ್ಯ ಚರಿತ್ರೆಗಳ ರಚನೆ, ಜಾನಪದ, ಲಾವಣಿಗಳ ಸಂಗ್ರಹ, ಕೈಫಿಯತ್‌ಗಳ ಸಂಗ್ರಹ, ಶಬ್ದಮಣಿದರ್ಪಣ ರಚನೆ, ಕಿಟೆಲ್‌ರ ಕನ್ನಡ - ಇಂಗ್ಲಿಷ್ ಶಬ್ದಕೋಶ ಈ ಅವಧಿಯಲ್ಲಿ ರಚನೆಯಾದವು. ಅವುಗಳಿಗೆ ಸಹಾಯಕರಾಗಿ ದುಡಿದ ಆರ್. ನರಸಿಂಹಚಾರ್ ಕವಿ ಚರಿತೆಯ ಮೂರು ಸಂಪುಟಗಳನ್ನು ರಚಿಸಿ ಕನ್ನಡ ಸಾಹಿತ್ಯದಲ್ಲಿ ಗ್ರಂಥಮುದ್ರಣ, ಕವಿಯ ಹುಟ್ಟು, ಸಾವು, ಕೃತಿಗಳ ಪರಿಚಯಕ್ಕೆ ಮೂಲ ಆಕರಗಳಾದವು. ಕವಿಚರಿತ್ರೆಯ ಸಂಪುಟಗಳನ್ನು ಯಾವ ಕಾಲಕ್ಕೂ ಮರೆಯುವಂತಿಲ್ಲ. ಹಾಗೆಯೇ ಸಾಂಗಲಿ ವೆಂಕಟೇಶರ ಸಿರಿಗನ್ನಡ ಗ್ರಂಥಕರ್ತರ ಚರಿತ್ರೆ ಕೋಶವೂ ಕೂಡ ಕನ್ನಡ ಸಾಹಿತ್ಯದಲ್ಲಿ ಚರಿತ್ರೆಯನ್ನು ಅರಿಯಲು ಸಹಾಯಕ ಗ್ರಂಥಗಳಾಗಿವೆ.

## ೫.೧೨ : ನಮೂದುಗಳ ಸ್ವರೂಪ (Nature of the entries) :

ಕನ್ನಡ ಹಸ್ತಪ್ರತಿ ಸೂಚಿಗಳು ಮತ್ತು ಗ್ರಂಥಸೂಚಿಗಳ ನಮೂದುಗಳಲ್ಲಿ ಗ್ರಂಥಸೂಚೀಕರಣ ಬಹುಶಃ ಒಂದೇ ತೆರನಾಗಿದೆ. ವಾಙ್ಮಯದರ್ಶಕದ ವಿವರಗಳನ್ನು ಹೋಲುವ ಗ್ರಂಥಸೂಚಿಯಲ್ಲಿ ಲೇಖಕ, ಶೀರ್ಷಿಕೆ, ಮುದ್ರಣ, ಪ್ರಕಾಶಕ, ಪ್ರಕಾಶನದ ಸ್ಥಳ, ವರ್ಷ, ಮಾಲೆ ಇತ್ಯಾದಿ ವಿವರಗಳಿರುತ್ತವೆ. ಹಸ್ತಪ್ರತಿಗಳ ನಮೂದುಗಳಲ್ಲಿ ಕೆಲವು ಭಿನ್ನವಾಗಿರುತ್ತವೆ. ಬೆಲೆ, ಮಾಲೆ, ಪ್ರಕಾಶಕರ ವಿಳಾಸ, ಇತ್ಯಾದಿಗಳು ಹಸ್ತಪ್ರತಿಗಳ ನಮೂದುಗಳಲ್ಲಿ ಕಾಣಸಿಗುವುದಿಲ್ಲ. ಆಗ ಲಿಪಿಕಾರರಿರುತ್ತಿದ್ದರು. ದಾನಿಗಳು, ಬರೆಸಿದ ವಿವರಗಳನ್ನು ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದ ಹಸ್ತಪ್ರತಿಸೂಚಿಗಳಲ್ಲಿ ಕಾಣಬಹುದಾಗಿದೆ ಅತ್ಯಂತ ವ್ಯವಸ್ಥಿತವಾಗಿ, ವಿದ್ವಾಂಸರಿಂದ ಸೃಷ್ಟಿಸಲ್ಪಟ್ಟ ಕನ್ನಡ ಗ್ರಂಥಸೂಚಿಗಳಲ್ಲಿ ಹೆಚ್ಚಿನ ವಿವರಗಳು ಕಾಣಸಿಗುತ್ತವೆ. ಪುಸ್ತಕಗಳು ಎಲ್ಲಿ ಸಿಗುತ್ತವೆ, ಎಷ್ಟೋ ಸಲ ಮೊದಲ ಮುದ್ರಣ, ಮರು ಮುದ್ರಣಗಳ ವರ್ಷದ ದಾಖಲೆಗಳನ್ನು ಸೂಚಿಸುವದಿಲ್ಲ. ಇದರಿಂದ ಕೆಲವು ಗೊಂದಲಗಳು ಉಂಟಾಗುತ್ತವೆ. ಈ ಕೊರತೆಯನ್ನು ಹೋಗಲಾಡಿಸಲು ಸಾಕಷ್ಟು ಯತ್ನಿಸಿರುವ 'ಕನ್ನಡ ಗ್ರಂಥಸೂಚಿ' ಯಂಥ ಪ್ರಯತ್ನಗಳನ್ನು ಗಮನಿಸಬೇಕು.[೧೧] ಇದೇ ರೀತಿಯ ಅನುಕೂಲಗಳು ಆರ್. ನರಸಿಂಹಾಚಾರ್ ಅವರ ಕವಿಚರಿತೆ ಸಂಪುಟಗಳು, ಎಸ್. ಶಿವಣ್ಣ - ಕವಿ ಚರಿತ್ರೆಯ ಸಂಪುಟಗಳು ಮತ್ತು ಸಾಂಗಲಿ ವೆಂಕಟೇಶ ಅವರ ಸಿರಿಗನ್ನಡ ಗ್ರಂಥಕರ್ತರ ಕೋಶಗಳಿಂದಲೂ ಸಾಧ್ಯವಾಗಿದೆ. ಈಗಾಗಲೇ ತಿಳಿಸಿದಂತೆ ಕೆಲವು ಗ್ರಂಥಸೂಚಿಗಳು ಮತ್ತು ಗ್ರಂಥಸೂಚಿಕರಣಗಳು ವಿವರಣಾತ್ಮಕ ಟಿಪ್ಪಣಿಗಳನ್ನು ಅಥವಾ ಸಾರರೂಪ (Annotations) ಗಳನ್ನು ಕೊಟ್ಟು ಅಧ್ಯಯನಕಾರರಿಗೆ ಉಪಕಾರ ಮಾಡುತ್ತಿವೆ. ಹಸ್ತಪ್ರತಿಗಳ ವಿಷಯದಲ್ಲಿ ಈ ವ್ಯವಸ್ಥೆ ಬಹಳ ಚೆನ್ನಾಗಿ ನಿರ್ವಹಿಸಿಕೊಂಡು ಬರಲಾಗಿದೆ. ಕೆಲವು ಸಾರೆ ಅಪರೂಪದ ಗ್ರಂಥಸೂಚಿಗಳಲ್ಲಿ ಬೆಲೆ, ಪ್ರಕಟವಾದ ವರ್ಷ,

ಲೇಖನಗಳ ಹಕ್ಕುಗಳು ಇರುವದಿಲ್ಲ. " ಪ್ರಕಾಶನ ಪದ್ಧತಿ (publishing methods) ಗಳು ಇವತ್ತಿನವರೆಗೂ ಯಾವುದೇ ಮಾನದಂಡ ಇಲ್ಲದೆ ಪುಸ್ತಕಗಳು ಪ್ರಕಟವಾಗುತ್ತಿರುವುದು ಇನ್ನೊಂದು ಕಾರಣವಾಗಿರಬೇಕು. ಪ್ರಕಾಶಕರಿಗೆ ಪುಸ್ತಕವನ್ನು ಒಂದು ಶಿಸ್ತುಬದ್ಧ ಅಳತೆಗೋಲುಗಳಿಂದ ಪ್ರಕಾಶಿಸಲು ಯಾವುದೇ ಗೊತ್ತುಗುರಿಗಳಿಲ್ಲ. ಕನ್ನಡ ಗ್ರಂಥಸೂಚಿಯಲ್ಲಿ ಕೂಡ ಇಂಥ ಗ್ರಂಥಗಳು ಸಾಕಷ್ಟು ಸ್ಥಳವನ್ನು ಪಡೆದಿವೆ. ಇವು ಗ್ರಂಥಸೂಚಿಯ ಅವಶ್ಯಕತೆಗಳನ್ನು ಪೂರೈಸುವುದಿಲ್ಲ. ಆದ್ದರಿಂದ ಶೇಕಡಾ ೩೦ ರಷ್ಟು ಪ್ರಕಟಣೆಗಳನ್ನು ಗ್ರಂಥಸೂಚಿಯಲ್ಲಿ ಸೇರಿಸಲಾಗಿಲ್ಲ " ವೆಂದು ಕೆ. ಎಸ್. ದೇಶಪಾಂಡೆ ವಿಷಾದ ವ್ಯಕ್ತಪಡಿಸಿದ್ದಾರೆ. [೧೨]

### ೫.೧೩ : ಉಪಯೋಗಕ್ಕೆ ಸಹಾಯಕ ಅಂಶಗಳು (Aids to facilitate use) :

ಈಗಾಗಲೇ ಕನ್ನಡ ಗ್ರಂಥಸೂಚಿಯ ವ್ಯಾಪ್ತಿ, ಉದ್ದೇಶಗಳನ್ನು ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಗ್ರಂಥಸೂಚಿಗಳ ಉಪಯೋಗಗಳು ಮತ್ತು ಅವುಗಳ ವ್ಯವಸ್ಥೆ, ಮಾದರಿ, ನಮೂನೆಗಳನ್ನು ಚರ್ಚಿಸಲಾಗಿದೆ. ಮೈಸೂರು ವಿಶ್ವವಿದ್ಯಾಲಯವು ಪ್ರಕಟಿಸಿರುವ ಕನ್ನಡ ಗ್ರಂಥಸೂಚಿಗಳು ಅವುಗಳನ್ನು ಹೇಗೆ ಉಪಯೋಗಿಸಬೇಕೆನ್ನುವುದನ್ನು ಪರಿಚಯಾತ್ಮಕ ರೂಪದಲ್ಲಿ ವಿವರಿಸಲಾಗಿದೆ. ಗ್ರಂಥಸೂಚಿಗಳ ವಿಶೇಷತೆಯೆಂದರೆ ಅವುಗಳ ಚರಿತ್ರಾತ್ಮಕ ಮತ್ತು ಭೌಗೋಳಿಕ ಅಂಶಗಳು ಅಧ್ಯಯನಕಾರರಿಗೆ ಬಹುಪಯೋಗವೆನಿಸಿವೆ. ಲೇಖಕ ನಿರ್ದೇಶಿಗಳೊಂದಿಗೆ ಅಂತರ್ ನಿರ್ದೇಶಿ " ನೋಡು " ಮತ್ತು " ಮತ್ತೆ ನೋಡಿ " ಮುಂತಾದ ನಮೂದುಗಳು ಹೆಚ್ಚಿನ ವಿವರಗಳನ್ನು ನೀಡಿ ವಿಷಯದ ಆಳಕ್ಕೆ ಇಳಿಯಲು ಉದ್ದೀಪಿಸುತ್ತವೆ. ಇದು ಹೆಚ್ಚಿನ ಶ್ರಮವಾದರೂ ಕೂಡ ಅಧ್ಯಯನದ ದೃಷ್ಟಿಯಿಂದ ಅನುಕೂಲವಾಗಿದೆ. ಗ್ರಂಥಸೂಚಿಗಳು, ಪರಿವಿಡಿ ಸೇವೆಯನ್ನು ನೀಡುವುದರ ಮೂಲಕ ಪರಿಚಯಾತ್ಮಕ ಒಳನೋಟಗಳನ್ನು ದಾಖಲಿಸುತ್ತವೆ. ಲೇಖಕ ನಿರ್ದೇಶಿ, ವಿಷಯ ನಿರ್ದೇಶಿ, ಶೀರ್ಷಿಕೆ ನಿರ್ದೇಶಿ, ಮಾಲೆಗಳ ನಿರ್ದೇಶಿಗಳನ್ನಲ್ಲದೆ ಭೌಗೋಳಿಕ ಮತ್ತು ಚರಿತ್ರಾತ್ಮಕ ವಿಷಯಗಳ ನಮೂದುಗಳನ್ನು ಒಳಗೊಂಡುದು ವಿಶೇಷವೆನಿಸಿದೆ. ಕನ್ನಡದಲ್ಲಿ ಅನೇಕ ಪುಸ್ತಕಗಳಿಗೆ ನಿರ್ದೇಶಿಗಳಿಲ್ಲ, ವಾಙ್ಮಯದರ್ಶಕ ವಿವರಗಳಿಗಿರುವುದು ನಿರ್ದೇಶಿಗಳಿಂದ ಪುಸ್ತಕದ ಸ್ಥಳವನ್ನು ನಿರ್ಧರಿಸಿ, ನಮೂದನ್ನು ನಿರ್ಧರಿಸಲು ಸಹಾಯಕ ಅಂಶಗಳಾಗಿವೆ.

### ೫.೧೩.೧ : ನವೀನ ಮತ್ತು ಪರಿಪೂರ್ಣವಾಗಿಡಲು ಬರಬೇಕು (To keep it up-to date) :

ಹೊಸ ಗ್ರಂಥಗಳ ದಾಖಲೆಗಳನ್ನು ಸೂಚಿಯಲ್ಲಿ ನಿರ್ದಿಷ್ಟ ಸ್ಥಾನದಲ್ಲಿ ಸೇರಿಸಲು ಸಂಪತ್ತನ್ನೆಲ್ಲ ಓದುಗನಿಗೆ ತೆರಿಸಿಕೊಡುವದಾಗಿದೆ. ಅಂದರೆ ಸೂಚಿ ಕಾರ್ಯವನ್ನು ಯೋಗ್ಯವಾಗಿ ನಿರ್ವಹಿಸಲು ಅನುಕೂಲವಾಗಬೇಕಾದರೆ ಸೂಚಿಯು ಯಾವ ಸ್ವರೂಪದಲ್ಲಿರಬೇಕು.

ಹೊಸ ಹೊಸ ಗ್ರಂಥಗಳ ಸೇರ್ಪಡೆಯಿಂದ ಸೂಚೀಕರಣ, ವರ್ಗೀಕರಣ, ಸಂಗ್ರಹ ಕಾರ್ಯಗಳ ದಾಖಲೀಕರಣಗಳ ಪ್ರಕ್ರಿಯೆಯಿಂದ ಪುಸ್ತಕವನ್ನು ಗ್ರಂಥಾಲಯದಲ್ಲಿ ಮಾಹಿತಿಗೆ ದೊರಕದೆ ತುಂಬಾ ತಡವಾಗಬಹುದು. ಈಗ ಮಾಹಿತಿ ತಂತ್ರಜ್ಞಾನ ಬೆಳೆದಿದ್ದು ನಾವು ನೇರಸಂಪರ್ಕದ ಮೂಲಕ ಪುಸ್ತಕಗಳ ಮಾಹಿತಿಯು ನವೀನ ಮತ್ತು ಪರಿಪೂರ್ಣವಾಗಿಡಲು ಬರುವಂತಾಗಿದೆ. ಗ್ರಂಥಾಲಯದಲ್ಲಿ ಈಗಿನ ಪರಿಸ್ಥಿತಿಯಲ್ಲಿಯೂ ಇದು ಸಾಧ್ಯವಾಗುವದಿಲ್ಲ. ಅದು ಆನ್‌ಲೈನ್ ಮೂಲಕ ನಮಗೆ ಬೇಕಾದ ಮಾಹಿತಿಯನ್ನು ನಮ್ಮ ಆವಶ್ಯಕತೆಗೆ ತಕ್ಕಂತೆ ಹೊಂದಿಸಿಕೊಳ್ಳಬಹುದು. ಈ ಎಲ್ಲ ವಿವರಗಳಿಂದ ತಿಳಿದು ಬರುವ ವಿಷಯವೇನೆಂದರೆ ಸೂಚಿಗಳು ಒಮ್ಮೆ ರಚಿಸಿದ ಮೇಲೆ ಅದನ್ನು ನವೀಕರಿಸಲು ಸಾಧ್ಯವಾಗದೆ ಹೋಗಬಹುದು. ಸಾಧ್ಯವಾದರೂ ಅದಕ್ಕೆ ಅವರದೇ ಆದ ಅನೇಕ ಮಿತಿಗಳನ್ನು ಹೊಂದಿದೆ. ಅದನ್ನು ಒಂದು ಪದ್ಧತಿಗೆ ಅನುಸಾರವಾಗಿ ರಚಿಸಲಾಗಿರುತ್ತದೆ. ನೇರಸಸಂಪರ್ಕದಲ್ಲಿ ಬಹಳ ಎಂದರೆ ಅದು ' ಒಸಿಎಲ್‌ಸಿ ' ಮತ್ತು ' ಮಾರ್ಕ್ ' ರೂಪಗಳಲ್ಲಿ ರಚನೆಯನ್ನು ಹೊಂದಿರುತ್ತದೆ. ನವೀನವಾಗಿಡಲು ಮತ್ತು ಪರಿಪೂರ್ಣವಾಗಿಡಲು ಸಾಧ್ಯವಾಗುವುದಿಲ್ಲ. ಹೊಸ ಬದಲಾವಣೆಗಳಿಗೆ ಹೊಂದಿಕೊಳ್ಳಲು ಕಾಲಾವಕಾಶವನ್ನು ಬೇಡುತ್ತದೆ. ಆನ್‌ಲೈನ್‌ದಲ್ಲಿ ಯಾವುದೇ ಬದಲಾವಣೆಗಳು ಬೇಕಾಗುವುದಿಲ್ಲ. ಎಂತಹ ಬದಲಾವಣೆ ಎಂದರೆ ಮಾಹಿತಿ ಎಷ್ಟು ತುರ್ತಾಗಿ ಬೇಕೆಂದರೆ ಅಷ್ಟು ತುರ್ತಾಗಿ ಸಿಗುತ್ತದೆ. ಹೀಗೆ ಪರಂಪರೆ, ಸಾಂಪ್ರದಾಯಿಕ ಪದ್ಧತಿಗಳಲ್ಲೂ ನಾವೀಗ ನಾವೀನ್ಯತೆ. ಪರಿಪೂರ್ಣತೆಯನ್ನು ' ಆನ್‌ಲೈನ್ ' ಮುಖಾಂತರ ತರಬೇಕಾಗಿದೆ.

### ೫.೧೩.೨ : ಒಂದು ವಿಷಯದ ದಾಖಲೆಗಳು ಒಂದೆಡೆ ಬರುವಂತಿರಬೇಕು (To bring togetgher entries) :

ಒಂದು ವಿಷಯದ ದಾಖಲೆಗಳು ಒಂದೆಡೆ ಬರುವಂತಾಗಬೇಕಾದರೆ ಹೊಸ ಹೊಸ ಗ್ರಂಥಗಳು ಬೆಳಕಿಗೆ / ಪ್ರಕಟಣೆಗೆ ಬರುತ್ತವೆ. ಅಂತಹ ಗ್ರಂಥಗಳ ಸೇರ್ಪಡೆ ಮಾಡಲು ಸೂಚಿಗಳಲ್ಲಿ ಅವಕಾಶವಿರಬೇಕು. ಹಾಗೆ ಮಾಡಲು ಅನುಕೂಲ ಇರಬೇಕು. ಗ್ರಂಥಾಲಯಕ್ಕೆ ಬಂದ ನವೀನ ಗ್ರಂಥಗಳ ದಾಖಲೆಗಳನ್ನು ಸೂಚಿಯ ಕರಡು ಪ್ರತಿಯಲ್ಲಿ ಸೇರಿಸಲು ಸಾಧ್ಯವಿಲ್ಲ. ಪ್ರಕಟಣೆಯ ಕೆಲಸ ಮಿತವ್ಯಯವಾದುದಲ್ಲ. ಬೇಡವಾದ ಅಥವಾ ಗ್ರಂಥಾಲಯದಿಂದ ತೆಗೆದು ಹಾಕಿದ ಗ್ರಂಥಗಳ ದಾಖಲೆಗಳನ್ನು ಹೊರಗೆ ತೆಗೆಯಲು ಬರುವುದಿಲ್ಲ. ಕಾರ್ಡುಗಳಂತೆ ಪ್ರಕಟಿತ ಪುಟಗಳು ಬಾಳಿಕೆ ಬರುವದಿಲ್ಲ. ಇದು ಸೀಮಿತ ವಲಯದಲ್ಲಿ ಮಾತ್ರ ಸಾಧ್ಯ. ವಿಶ್ವದಾದ್ಯಂತ ಇದೇ ಪ್ರಕಟಣೆ / ಇದೇ ರೀತಿಯ ಸೇರ್ಪಡೆಗೆ ಬೇರೆ ಬೇರೆ ರೀತಿಯ ಮಾನದಂಡಗಳು ಇರುತ್ತವೆಯಾದ್ದರಿಂದ ನಡುವೆ ಸೇರಿಸಲು ಸಾಧ್ಯವಾಗುವುದಿಲ್ಲ. ಮಾನವ ಸಂಪನ್ಮೂಲ ಬಳಕೆ ಅತ್ಯಂತ ಖರ್ಚಿನದು, ಮಿತವ್ಯಯದ್ದಲ್ಲ. ಮಾಹಿತಿ ಸಂಗ್ರಹ ಕೂಡ ತಾತ್ಕಾಲೀನವಾದುದು. ಅಡಕ ತಟ್ಟೆಯಲ್ಲಿನ ಮಾಹಿತಿಯನ್ನು ಲೇಸರ್ ಕಿರಣ ಬಳಸಿ

ದಾಖಲಿಸಲಾಗುವುದು. ಮತ್ತೆ ಉಪಯೋಗಿಸುವಾಗ ಸಹ ಲೇಸರ್ ತಾಂತ್ರಿಕತೆ ಸಹಾಯದಿಂದಲೆ ಮಾಹಿತಿಯನ್ನು ಪಡೆಯಲಾಗುವುದು. ಇಲ್ಲೂ ಕೂಡ ಓದಲು ಬಳಸಬಹುದು; ವಿನಹ ಯಾವ ರೀತಿಯಲ್ಲೂ ಸೇರ್ಪಡೆ, ತಿದ್ದುಪಡಿ, ಅಳಿಸುವಿಕೆ ಸಾಧ್ಯವಿಲ್ಲ. ಆದುದರಿಂದ ಇವನ್ನು 'ರೀಡ್ ಓನ್ಲಿ ಮೆಮೊರಿ' (ROM) ಎಂದು ಕರೆಯುತ್ತಾರೆ. ಪ್ರಕಟವಾಗಿರುವ ಎಲ್ಲ ಲೇಖನಗಳ, ಪುಸ್ತಕಗಳ ವಿವರಗಳನ್ನು ಸಂಗ್ರಹಿಸಿ ಜೇಬಿನಲ್ಲಿ ಇರಿಸಿಕೊಳ್ಳಬಹುದು.

### ೫.೧೩.೩ : ಸಹಜವಾಗಿ ಸಿಗುವಂತಿರಬೇಕು (Easily Accessible)

ಬೇಕಾದ ಗ್ರಂಥಗಳ ಮಾಹಿತಿ ಪಡೆಯಲು ಬೇಕೆಂದಾಗ ಸೂಚಿ ನೋಡಿ ಪಡೆಯಲು ಅನುಕೂಲವಾಗುವಂತಿರಬೇಕು. ಸೂಚಿಯ ಓದುಗನಿಗೆ ಸಹಜವಾಗಿ ಸಿಗುವಂತಿರಬೇಕು. (within approach) ಅಂದರೆ ತನಗೆ ಬೇಕಾದ ಗ್ರಂಥಗಳನ್ನು ಸೂಚಿಯಲ್ಲಿ ನೋಡಿ ಪಡೆದುಕೊಳ್ಳಲು ಅನುಕೂಲವಿರಬೇಕು. ಕಾರ್ಡ್ ಕ್ಯಾಬಿನೆಟ್ ನೋಡಿ ಶೆಲ್ಫಿನಲ್ಲಿರುವ ಪುಸ್ತಕವನ್ನು ನಾವು ಪಡೆಯುತ್ತೇವೆ.

ನೇರ ಸಂಪರ್ಕದಲ್ಲಿ ಇದು ದ್ವಿಗುಣ ಹೊಂದಿರುತ್ತದೆ. ಅಲ್ಲಿ ಒಂದು ಪುಸ್ತಕ ಅಲ್ಲ, ಪುಸ್ತಕಗಳ ಗುಂಪನ್ನೇ, ಗ್ರಂಥಾಲಯವನ್ನು ಅಲ್ಲಿರುವ ಪುಸ್ತಕಗಳ, ಪತ್ರಿಕೆಗಳ ಶೀರ್ಷಿಕೆಗಳನ್ನು ನಾವು ಪಡೆಯಬಹುದು. ಈ ಮೂಲಕ ಓದುಗರು ನೇರವಾಗಿ ಮಾಹಿತಿ ಪಡೆಯಬಹುದು. ಅಲ್ಲಿ ಯಾವುದೇ ಅಡೆತಡೆ ಇಲ್ಲದೆ ಸೂಚಿ ನೋಡದೆ ಕ್ರಶರ್‌ನಿಂದ ನಮಗೆ ಬೇಕಾದ ಶಬ್ದವನ್ನು ಕಂಪ್ಯೂಟರ್ ಮೇಲೆ ಮೂಡಿಸಿದರೆ ಸಾವಿರಾರು / ಮಿಲಿಯನ್‌ಗಟ್ಟಲೆ ಪುಸ್ತಕಗಳ ಶೀರ್ಷಿಕೆಗಳನ್ನು ಪತ್ರಿಕೆಗಳ ಶೀರ್ಷಿಕೆಯನ್ನು ನಾವು ಪಡೆಯುತ್ತೇವೆ. ಇಲ್ಲಿ ಹಣ, ಶ್ರಮ, ವೇಳೆ ಉಳಿತಾಯವಾಗುತ್ತದೆ ಮಾತ್ರವಲ್ಲ, ನಮಗೆ ಬೇಕಾದ ಮಾಹಿತಿಯನ್ನು ಕ್ಷಣಾರ್ಧದಲ್ಲಿ ಪಡೆದುಕೊಳ್ಳಬಹುದು. ಗ್ರಂಥಾಲಯದಲ್ಲಿಯ ಸೂಚೀಕರಣ, ಸೂಚಿಗಳ ಸಿಬ್ಬಂದಿಗಳ ಸಹಾಯವಿಲ್ಲದೆ ಮಾಹಿತಿ ಪಡೆಯಬಹುದು. ಒಂದು ವೇಳೆ ಗ್ರಂಥಾಲಯದಲ್ಲಿ ಮಾಹಿತಿ ಇಲ್ಲದಿದ್ದರೆ ನಿರಾಶರಾಗಬಹುದು. ಇದು ನೇರ ಸಂಪರ್ಕದಲ್ಲಿ ಸಾದ್ಯವಿದ್ದು ಪಡೆಯಬಹುದು. ಮಾನವ ಸಂಪನ್ಮೂಲಗಳ ನ್ಯೂನತೆ ಇರುವದಿಲ್ಲ. ನಾವು ಬೇಕೆಂದಾಗ ಬೇಕಾದ ವೇಳೆಯಲ್ಲಿ ಬೇಕಾದ ಮಾಹಿತಿಯನ್ನು ನಾವು ಸಹಜವಾಗಿ ಪಡೆಯಬಹುದು.

### ೫.೧೩.೪ : ಬೇಕೆಂದಲ್ಲಿ ಸಾಗಿಸಲು ಸಾಧ್ಯವಾಗಿರಬೇಕು (Easily Transferable)

ಗ್ರಂಥಾಲಯದ ಒಳಗೂ / ಹೊರಗೂ ಬೇಕಾದವರಿಗೆ ಕಳಿಸಲು ಬರುವಂತಿರಬೇಕು. ಸೂಚಿಯು ಓದುಗನು ತನಗೆ ಬೇಕೆಂದಲ್ಲಿ ಉಪಯೋಗ ಮಾಡಲು ದೊರೆಯುತ್ತಿರಬೇಕು. ಗ್ರಂಥಾಲಯದ ಒಳಗೂ ಮತ್ತು ಹೊರಗೂ

ಅದನ್ನು ಉಪಯೋಗ ಮಾಡುವಂತಿರಬೇಕು. ಅಂದರೆ ಗ್ರಂಥಗಳ ಉಪಯೋಗವನ್ನು ಹೆಚ್ಚಿಸಲು ಗ್ರಂಥಸೂಚಿಗಳು, ಗ್ರಂಥಗಳುಬಹು ಉಪಯೋಗ (Multiple uses) ಕ್ಕೆ ಬಂದದ್ದಾದಲ್ಲಿ ಅದರ ಉಪಯುಕ್ತತೆ ಇನ್ನೂ ಹೆಚ್ಚಾಗುತ್ತದೆ. ಪುಸ್ತಕ ರೂಪದಲ್ಲಿರುವ ಗ್ರಂಥಸೂಚಿಗಳಿಂದ ಇದು ಸಾಧ್ಯವಾದರೂ ಇದಕ್ಕಿರುವ ಅನೇಕ ಮಿತಿಗಳಿಂದ ಸಾಧ್ಯವಿಲ್ಲ. ನಾವು ಆಯ್ದುಕೊಳ್ಳುವದು ಮಾಹಿತಿಯನ್ನು ಹೊರತು ಸೂಚಿಯನ್ನಲ್ಲ. ಹೀಗೆ ಸೂಚಿಗೆ ಅದರ ಉಪಯುಕ್ತತೆಯಷ್ಟೆ ಅನಾನುಕೂಲತೆಗಳು ಇವೆ. ಬೇಕೆಂದಲ್ಲಿ ಸಾಗಿಸಲು ಬರುವದಿಲ್ಲ. ಅದು ಆಯಾ ಗ್ರಂಥಾಲಯದ ಸ್ವತ್ತು ಮಾತ್ರ.

ಆದರೆ ನೇರ ಸಂಪರ್ಕದಲ್ಲಿ ಇದಾವುದರ ಗೊಡವೆಗಳಿಲ್ಲ. ತಂಟೆಗಳಿಲ್ಲ. ನಮಗೆ ಬೇಕೆಂದ ಮಾಹಿತಿಯನ್ನು ಬೇಕಾದಲ್ಲಿ ಒಯ್ಯಬಹುದು. ಬಳಸಬಹುದು. ಈಗಂತೂ CD ROM ಗಳಲ್ಲಿರುವ ವಿಪುಲ ಮಾಹಿತಿ ನಮ್ಮ ಜೇಬಿನಲ್ಲಿಯೇ ಇಡೀ ಮಾಹಿತಿಯನ್ನು ಬೇಕೆಂದಲ್ಲಿ ಸಾಗಿಸಲು ಸಾಧ್ಯವಾಗಿದೆ.

ಮುಂದುವರಿದ ದೇಶಗಳಾದ ಅಮೆರಿಕಾ, ಬ್ರಿಟನ್‌ಗಳಲ್ಲಿ ನಾವು ಗ್ರಂಥಾಲಯದಿಂದ ಪಡೆದ ಪುಸ್ತಕಗಳನ್ನು ಅದೇ ದೇಶದ ಯಾವುದೇ ಗ್ರಂಥಾಲಯದಲ್ಲಿ ಮರಳಿಸಬಹುದು. ಯಾವುದೇ ಗ್ರಂಥಾಲಯದಲ್ಲಿ ಮಾಹಿತಿಯನ್ನು ಪಡೆಯಬಹುದು. ಅಕ್ಯಾಡೆಮಿಕ್ ಲೈಬ್ರರಿಗಳಲ್ಲಿ ಪಡೆದ ಮಾಹಿತಿಯನ್ನು ಬೇರಾವುದೆ ಅಕ್ಯಾಡೆಮಿಕ್ ಗ್ರಂಥಾಲಯದಲ್ಲಿ ಹಿಂತಿರುಗಿಸಬಹುದು. ಅದೇ ರೀತಿ ಯಾವುದೇ ಸಾರ್ವಜನಿಕ ಗ್ರಂಥಾಲಯದ ಪುಸ್ತಕಗಳನ್ನು, ಸಾಮಗ್ರಿಗಳನ್ನು ಮತ್ತಾವುದೇ ಸಾರ್ವಜನಿಕ ಗ್ರಂಥಾಲಯದಲ್ಲಿ ಪಡೆಯಬಹುದು, ಹಿಂತಿರುಗಿಸಬಹುದು.

### ೫.೧೩.೫ : ಸರಳವಾಗಿ ಉಪಯೋಗಿಸಲು ಬರುವಂತಿರಬೇಕು (Easy to handle and consult)

ಸೂಚಿಯನ್ನು ಓದುಗನು ಯಾರ ಸಹಾಯವು ಇಲ್ಲದೆ ಸರಳವಾಗಿ ಉಪಯೋಗಿಸಲು ಬರುವಂತಿರಬೇಕು. ಇದು ಸರಳೀಕರಣವೆಂದರೂ ವಿಷಯ ಅಷ್ಟು ಸರಳವಿಲ್ಲ. ಗ್ರಂಥಾಲಯದ ತಜ್ಞರು ಪರಿಣಿತರು ಮಾತ್ರ ಸರಳವಾಗಿ ಉಪಯೋಗಿಸಲು ಬರುತ್ತದೆ. ಅಥವಾ ಆ ವಿಷಯದ ಪರಿಣಿತರು ಮಾತ್ರ ಉಪಯೋಗಿಸಬಹುದಾಗಿದೆ. ಇದು ಅಭ್ಯಾಸ ಬಲದಿಂದ ರೂಢಿಯಿಂದ ಮಾತ್ರ ಸರಳವಾಗಿ ಉಪಯೋಗಿಸಲು ಬರುವಂತೆ ತೋರುತ್ತದೆ. ಇಲ್ಲಿ ಸಂವಹನಕ್ಕೆ ಭಾಷೆ (communication barriers) ಗಳು ಇನ್ನೊಂದು ತೊಡಕಾಗಬಹುದು. ಪ್ರಾದೇಶಿಕ ಭಾಷೆಗಳು, ಆಂಗ್ಲ ಭಾಷೆಗಳು... ಹೀಗೆ ಆಯಾ ಭಾಷಾ ಸಮಸ್ಯೆಗಳು ಎದುರಾಗಬಹುದು. ಲಿಪ್ಯಂತರದ ಮೂಲಕ ಈ ಸಮಸ್ಯೆಗಳನ್ನು ನಿವಾರಿಸಬಹುದಾಗಿದೆ. ಅಲ್ಲದೆ ಸ್ವಲ್ಪ ಮಟ್ಟಿಗಿನ ಸಹಾಯವು ಬೇಕಾಗುತ್ತದೆ. ಇದಕ್ಕೆ ಗ್ರಂಥಾಲಯ ಸಿಬ್ಬಂದಿಯ ಸಹಾಯ ಬೇಕು.

ಆದರೆ ' ನೇರ ಸಂಪರ್ಕ ' ದಲ್ಲಿ ಇವಾವೂ ತೊಂದರೆಗಳು ಉದ್ಭವಿಸುವುದಿಲ್ಲ. ನಮ್ಮಲ್ಲಿ ಗಣಕಯಂತ್ರ ಮತ್ತು ಜಾಲ ಇದ್ದರೆ ಮುಗಿಯಿತು. ಮಾಹಿತಿಯನ್ನು ಸರಳವಾಗಿ ಉಪಯೋಗಿಸಲು ಬರುತ್ತದೆ. ಛಾಯಾಚಿತ್ರ ತೆಗೆಯುವ ಕ್ರಮ, ಹಂತಗಳು, ತಂತ್ರಗಳು, ಸೂತ್ರಗಳು, ಕುಶಲತೆ ಮುಂತಾದವುಗಳನ್ನು ಪ್ರಯೋಗ ಪುಸ್ತಕಗಳು ' ಮಾಡಿ ಕಲಿ ' ಎಂದು ತಿಳಿಸಿದರೆ ಕೈಪಿಡಿಗಳು, ಛಾಯಾಚಿತ್ರದ ತತ್ವಗಳು, ಹಿನ್ನೆಲೆ, ಬೆಳವಣಿಗೆ, ವಿಧಗಳು ಮತ್ತು ಅಭ್ಯಾಸವನ್ನು ಕುರಿತಾಗಿ ' ಓದಿ ತಿಳಿ ' ಎಂಬುದಾಗಿ ಮಾಹಿತಿ ನೀಡುತ್ತವೆ. ಸಾಮಾನ್ಯ ವಿಷಯದಿಂದ ಆರಂಭಿಸಿ ಆಳವಾದ ತಂತ್ರಗಳ ವರೆಗೆ ಅನುಕಮಣಿಕೆಯಲ್ಲಿ ಕಲಿಕೆ ಹಾಗೂ ಅಭ್ಯಾಸಕ್ಕೆ ಸರಾಗವಾಗುವಂತೆ ಮಾಹಿತಿಯನ್ನು ಅಳವಡಿಸಿರಲಾಗುತ್ತದೆ. ಕೈಯಲ್ಲಿ ಹಿಡಿಯಲು ಸುಲಭವಾಗುವಂತೆ ಕಿಸೆಯಲ್ಲಿಯೂ ಇಟ್ಟುಕೊಂಡು ಸರಳವಾಗಿ ಉಪಯೋಗಿಸಬಹುದಾಗಿದೆ.

## ೫.೧೩.೬ : ಮಿತವ್ಯಯ (Economy)

ಗ್ರಂಥಪಾಲಕನು ಉಪಯೋಗಿಸುವ ಸೂಚಿಯು ಗ್ರಂಥಾಲಯಕ್ಕೆ ಆರ್ಥಿಕ ದೃಷ್ಟಿಯಿಂದ ಹೊರೆಯಾಗಬಾರದು. ಮಿತವ್ಯಯವಾಗಿರಬೇಕು. ಪತ್ರಕ (card catalogue) ಗ್ರಂಥಸೂಚಿಯು ಇತ್ತೀಚಿನ ಗ್ರಂಥಾಲಯ ವಿಕಾಸದ ಬೆಳವಣಿಗೆಗಳಲ್ಲಿ ಅತ್ಯಂತ ಜನಪ್ರಿಯವಾದುದು. ಇದರ ಬಾಹ್ಯ ರಚನೆಗಳು ಓದುಗನ ಪುಸ್ತಕ ಮಾಹಿತಿಗೆ ಸಂಬಂಧಪಟ್ಟಿರುತ್ತದೆ. ಅನೇಕ ಅನಾನುಕೂಲತೆಗಳನ್ನು ಇದು ಹೊಂದಿದೆ. ಅನುಭವಿಕ ಗ್ರಂಥಪಾಲಕರು ಕಾರ್ಡು ಅಥವಾ ಪತ್ರಕ ಗ್ರಂಥಸೂಚಿಯನ್ನು ಜಾರಿಗೆ ತಂದರು. ಇದರಲ್ಲಿ ಒಂದೇ ಸಮನಾದ ೫" × ೩" ಉದ್ದಗಲದ ಏಕರೂಪದ ಪತ್ರಕಗಳನ್ನು ಬಳಸಲಾಗುತ್ತದೆ. ಈ ಪತ್ರಕಗಳನ್ನು ಸೆಳೆಖಾನೆಗಳಲ್ಲಿ (Drawers) ಹೊಂದಿಸಿಡಲಾಗುತ್ತದೆ. ಒಂದೊಂದು ಸೆಳೆಖಾನೆಗಳಲ್ಲಿ (ಕ್ಯಾಬಿನೆಟ್) ಸುಮಾರು ೧೦೦೦ ದಿಂದ ೧೫೦೦ ಪತ್ರಕಗಳನ್ನು ಇಡಲು ಸ್ಥಳಾವಕಾಶ ಇದೆ. ಪತ್ರಕಗಳನ್ನು ಸ್ಕ್ರೂ ಸಳಿಯಿಂದ ಬಿಗಿದು ಬಂದುಮಾಡಿದ ನಂತರ ಅಂತಹ ಹಲವಾರು ಪೆಟ್ಟಿಗೆ ಸೆಳೆಖಾನೆಗಳನ್ನು ಇಡಲು ಕಬ್ಬಿಣದ ಅಥವಾ ಕಟ್ಟಿಗೆಯ ಪೆಟ್ಟಿಗೆ ಇರುತ್ತದೆ. ಈ ತೆರನಾದ ಪೆಟ್ಟಿಗೆಗಳನ್ನು ನೆಲದಿಂದ ಸುಮಾರು ಮೂರು ಅಥವಾ ಮೂರೂವರೆ ಅಡಿ ಎತ್ತರದ ಆಸನದ ಮೇಲೆ ಇಡುತ್ತಾರೆ. ಇದರಿಂದ ಓದುಗರು ತಮಗೆ ಬೇಕೆನಿಸಿದ ಸೆಳೆಖಾನೆಯನ್ನು ತೆಗೆದು ತಮಗೆ ಬೇಕಾದ ಗ್ರಂಥದ ಉಲ್ಲೇಖವನ್ನು ಹುಡುಕಬಹುದು. ಇದು ಅತ್ಯಂತ ದುಬಾರಿಯೂ ವೇಳೆ ಸವೆಸುವಂತಹದು ಆಗಿರುತ್ತದೆ. ಈ ಆಧುನಿಕ ತಂತ್ರಜ್ಞಾನದಲ್ಲಿ ಇದು ಹೇಗೆ ಮಿತವ್ಯಯಿ ಆಗಲು ಸಾಧ್ಯ. ಈಗ ಏನಿದ್ದರೂ ಒಪೆಕ್ (OPAC), ಕಂಪ್ಯೂಟರ್ ಪರದೆಯ ಮೇಲೆ ನಮಗೆ ಬೇಕೆನಿಸಿದ ಮಾಹಿತಿಯನ್ನು ಕ್ಷಣಾರ್ಧದಲ್ಲಿ ಪಡೆಯುವುದರಿಂದ ಇದರ ಉಪಯೋಗ ಅವಶ್ಯವಿಲ್ಲ ಎನಿಸುತ್ತದೆಯಾದರೂ ಹಿಂದೆ ಇದರ ಉಪಯೋಗ ಇತ್ತು ಎನ್ನುವುದನ್ನು ಮರೆಯುವಂತಿಲ್ಲ. OPAC ಈಗ ಎಲ್ಲ ದೃಷ್ಟಿಯಿಂದಲೂ ಮಿತವ್ಯಯಿ.

### ೫.೧೩.೭ : ಗಾತ್ರದಲ್ಲಿ ಚಿಕ್ಕದಾಗಿರಬೇಕು (Compact in size) :

ಗ್ರಂಥಾಲಯದ ಬಹಳಷ್ಟು ಸ್ಥಳವನ್ನು ಸೂಚಿಯೇ ಆಕ್ರಮಿಸುವಂತಾಗಬಾರದು. ಗಾತ್ರದಲ್ಲಿ ಚಿಕ್ಕದಾಗಿದ್ದ ಅತಿ ಕಡಿಮೆ ಸ್ಥಳದಲ್ಲಿ ಇಡಲು ಬರುವಂತಿರಬೇಕು. ಪ್ರಕಟಣೆಯ ಕೆಲಸ ಮಿತವ್ಯಯದ್ದಾಗಿರುವುದಿಲ್ಲ. ಈ ಅನುಕೂಲ ಎಲ್ಲ ಗ್ರಂಥಾಲಯಗಳಿಗೂ ವ್ಯಕ್ತಿಗಳಿಗೂ ಸಂಸ್ಥೆಗಳಿಗೂ ಸಾಧ್ಯವಾಗದೇ ಹೋಗಬಹುದು. ಇಲ್ಲಿ ಬೇಡವಾದ ಅಥವಾ ಗ್ರಂಥಾಲಯದಿಂದ ತೆಗೆದುಹಾಕಿದ ಗ್ರಂಥಗಳು ಮತ್ತು ದಾಖಲೆಗಳನ್ನು ಹೊರಗೆ ತೆಗೆಯಲು ಬರುವುದಿಲ್ಲ. ಕಾರ್ಡುಗಳಂತೆ ಪ್ರಕಟಿತ ಪುಟಗಳು ಬಾಳಿಕೆ ಬರುವುದಿಲ್ಲ. ಅವಶ್ಯವೆನಿಸಿದಾಗ ಸುಲಭವಾಗಿ ಈ ಬಿಗಿತವನ್ನು ಸಡಲಿಸಿ ಬೇರೆ ಪತ್ರಗಳನ್ನು (pages) ನಮಗೆ ಬೇಕಾದ ರೀತಿಯಲ್ಲಿ ಮೊದಲಿನವುಗಳ ಜೊತೆಗೆ ಸೇರಿಸಿಕೊಳ್ಳಲು ಬರುವಂತಿರುತ್ತದೆ. ಚಿಕ್ಕ ಗ್ರಂಥಾಲಯಗಳಿಗೆ ಇದು ಬಹಳ ಪ್ರಯೋಜನವುಳ್ಳದ್ದು. ಗ್ರಂಥಾಲಯದ ಬೇಕೆಂದ ಸ್ಥಳದಲ್ಲಿ ಇದನ್ನು ಉಪಯೋಗ ಮಾಡಲು ಬರುತ್ತದೆ. ಓದುಗನಿಗೆ ಸಹಜವಾಗಿ ದೊರಕುವಂತಿರುತ್ತದೆ. ಗ್ರಂಥಾಲಯದಲ್ಲಿ ಪ್ರಕಟಿತ ಪುಸ್ತಕ ಸೂಚಿಗಳನ್ನಿಡಲು ಸ್ಥಳ ಬೇಕು. ಕಾರ್ಡುಗಳಿಗೂ ಸ್ಥಳ ಬೇಕು. ಹೀಗೆ ಇದು ಎರಡು ರೀತಿಯಿಂದಲೂ ಸ್ಥಳವನ್ನು ಆಕ್ರಮಿಸಿ ವೇಳೆಯ ಅಪವ್ಯಯಕ್ಕೆ ಕಾರಣವಾಗುತ್ತದೆ.

ಆದರೆ 'ಆನ್‌ಲೈನ್' ಸಂಪರ್ಕದಲ್ಲಿ ಸ್ಥಳ ಬೇಕಾಗುವುದಿಲ್ಲ. ನಮಗೆ ಒಸಿಎಲ್‌ಸಿ ಮತ್ತು ಮಾರ್ಕ್ ನಮೂನೆಗಳಲ್ಲಿ ಸೂಚಿಗಳು ನೋಡಲು ಸಿಗುತ್ತವೆ. ಸಂಖ್ಯಾ ಮಾಹಿತಿ ನಮ್ಮ ಮುಂದೆ ನಿಲ್ಲುತ್ತದೆ. ಅದರಲ್ಲಿ ನಮಗೆ ಬೇಕಾದ್ದನ್ನು ನಾವು ಆಯ್ಕೆ ಮಾಡಿಕೊಳ್ಳಬಹುದು. ಚೊಕ್ಕ ಮತ್ತು ಚಿಕ್ಕ ನಿಗದಿತ ಸ್ಥಳದಲ್ಲಿ ನಾವು ನಮಗೆ ಬೇಕಾದ ಮಾಹಿತಿಯನ್ನು ಕಂಪ್ಯೂಟರ್ ಮೂಲಕ ಅತ್ಯಂತ ವೇಗವಾಗಿ ಪಡೆಯಬಹುದು. ಇದು ಪರಂಪರಾಗತವಾಗಿ ಬಂದ ಪುಸ್ತಕ ಸೂಚಿಗಳಲ್ಲಿ ಸೂಚೀಕರಣಗಳಲ್ಲಿ ಸಾಧ್ಯವಿರುವುದಿಲ್ಲ. ಹೀಗಾಗಿ ಗಣಕೀಕೃತ ವ್ಯವಸ್ಥೆಯಲ್ಲಿ ಮಾಹಿತಿ ದ್ವಿಗುಣ ಹೊಂದುತ್ತಾ ಸಮಯವನ್ನು, ಶಕ್ತಿಯನ್ನು ಉಳಿಸುತ್ತದೆ.

### ೫.೧೩.೮ : ಪ್ರತಿ ಮಾಡಲು ಬರುವಂತಿರಬೇಕು (Possible for reproduction) :

ಸೂಚೀಕರಣದಲ್ಲಿ ಸಡಿಲಿಸಿ ಬೇರೆ ಪತ್ರಕಗಳನ್ನು ಸೇರಿಸುವ ಅನುಕೂಲ ಇದೆ. ದಾಖಲೆಯನ್ನು ಸಹಜ ಸೇರಿಸಲು ಬರುವದಾದರೂ ಪ್ರತಿಸಾರೆ ಬಿಗಿಬಂದು ಮಾಡುವಲ್ಲಿ ಹೆಚ್ಚು ಸಮಯ ಹಿಡಿಯುತ್ತದೆ. ದಾಖಲೆಗಳು ಕಾಗದದಲ್ಲಿ ಇರುವದರಿಂದ ಮುದುಡಿಯಾಗಿ ಬೇಗನೆ ಹಾಳಾಗುತ್ತವೆ. ಗ್ರಂಥಾಲಯ ಬೇಕೆಂದ ಸ್ಥಳದಲ್ಲಿ ಇದನ್ನು ಉಪಯೋಗ ಮಾಡಲು ಬರುತ್ತದೆ. ಗಾತ್ರದಲ್ಲಿ ಬಹಳ ದೊಡ್ಡದಾಗಿರುತ್ತದೆ. ಕಾರ್ಡ ಕ್ಯಾಬಿನೆಟ್‌ಗಳನ್ನೆಲ್ಲ ಬೇಧಿಸುವಂತಹ ಕೆಲಸ ಇದು. ಪ್ರತಿ ಮಾಡಲು ಬರುವುದಿಲ್ಲ. ದಾಖಲೆಯನ್ನು ಲಿಖಿತದ ಮೂಲಕ ಪ್ರತಿ ಮಾಡಿಕೊಳ್ಳಬಹುದು. ಪುಸ್ತಕ ಸೂಚಿಯ ಮಾಹಿತಿಯನ್ನು ಪ್ರತಿ ಮಾಡಲು ಬರುತ್ತದೆ. ಇಲ್ಲಿ ಎರಡು ಕಡೆಯ

ಮಾಹಿತಿಯ ಹುಡುಕಾಟ ನಡೆಯುತ್ತದೆ. ಗಾತ್ರದಲ್ಲಿ ಬಹಳ ದೊಡ್ಡದಾಗಿದ್ದು, ಹೆಚ್ಚು ಸ್ಥಳವನ್ನು ಆವರಿಸುತ್ತದೆ, ಬೇಕೆಂದಲ್ಲಿ ಹೊತ್ತೊಯ್ಯಲು ಸಾಧ್ಯವಿದ್ದರೂ ಅವುಗಳ ವರ್ಗೀಕರಣ, ಸೂಚೀಕರಣಗಳಿಂದ ಅವುಗಳಿಗೆ ಅವುಗಳದೇ ಆದ ನಿಶ್ಚಿತವಾದ ಸ್ಥಾನ ಮತ್ತು ಮಾನದಂಡಗಳು ಅವಕ್ಕಿರುವುದರಿಂದ ಬೇರೆ ಕಡೆ ಒಯ್ಯುವಂತಿಲ್ಲ. ಇವುಗಳ ಉಪಯೋಗ ಒಬ್ಬ ವ್ಯಕ್ತಿ ಮಾಡುವಾಗ ಮತ್ತೊಬ್ಬರು ಇವನ್ನು ಈಗಾಗಲೇ ವಿದ್ಯುನ್ಮಾನ ಮಾಧ್ಯಮಗಳ ಮುಖಾಂತರ ಸೂಕ್ಷ್ಮ ಮುದ್ರಣ ಪಟ (Microfilm) ಗಳ ಬಳಕೆಗೆ ಬಂದಿವೆ. ಹಾಗೆಯೆ Magnetic tapes, Disc, Punch ಕಾರ್ಡುಗಳು ಗ್ರಂಥಸೂಚಿಯ ಸುಲಭ ಅವಲೋಕನದಲ್ಲಿ ಈಗಾಗಲೇ ಮುಂದೆ ಬಂದಿವೆ. ಈಗಾಗಲೇ ಕಂಪ್ಯೂಟರ್ - ಇಂಟರ್‌ನೆಟ್‌ನಲ್ಲಿ ನಾವು ಬೇಕೆಂದ ಮಾಹಿತಿಯನ್ನು ಕ್ಷಣಾರ್ಧದಲ್ಲಿ ಪ್ರತಿ ಮಾಡಲು ಬರುತ್ತದೆ. ಒಂದೇ ಪ್ರತಿಯಲ್ಲಿ ಸಾವಿರಾರು ಪುಟಗಳನ್ನು ಪಡೆಯಬಹುದು. ಇದು ವಿಶ್ವವ್ಯಾಪಿ.

### ೫.೧೫.೯ : ತೀವ್ರಗತಿಯಲ್ಲಿ ಮಾಹಿತಿ ಹುಡುಕಲು ಬರಬೇಕು (Fast speed of search)

ಸೂಚಿಯು ಹೆಚ್ಚು ಕಠಿಣವಿರದೆ ಓದುಗರಿಗೆ ತಮಗೆ ಬೇಕಾದ ಮಾಹಿತಿಯನ್ನು ಬೇಗನೆ ಹುಡುಕಲು ಬರುವಂತಿರಬೇಕು. ದಿನದಿನಕ್ಕೂ ಹೆಚ್ಚುತ್ತಿರುವ ಗ್ರಂಥರಾಶಿ ' ಮಾಹಿತಿ ಸ್ಫೋಟ ' ಉಂಟು ಮಾಡಿ; ವಿದ್ಯಾರ್ಥಿಗಳು, ಶಿಕ್ಷಕರು, ವಿಜ್ಞಾನಿಗಳು, ಸಂಶೋಧಕರು ಮತ್ತು ಅಧಿಕಾರಿ ವರ್ಗದವರು, ತಮ್ಮ ಕಾರ್ಯ ಚಾಲನೆಗಾಗಿ ಮಾಹಿತಿ ಹುಡುಕಾಟದಲ್ಲಿ ತಲೆ ಕೆರೆಯತೊಡಗಿದ್ದಾರೆ. ಇವರ ಸಮಸ್ಯೆಗಳನ್ನು ಕಂಡುಹಿಡಿದು ತ್ವರಿತಗತಿಯಲ್ಲಿ ಮಾಹಿತಿ ಪೂರೈಸಲು ಗ್ರಂಥಪಾಲರು ಮತ್ತು ಗ್ರಂಥಾಲಯ ಹಾಗೂ ಮಾಹಿತಿ ವಿಜ್ಞಾನಿಗಳು ನೂತನ ಮಾರ್ಗಗಳನ್ನು ಕಂಡುಹಿಡಿದು ಇವುಗಳನ್ನು ಪರಿಹರಿಸಲು ಯತ್ನಿಸಿದ್ದಾರೆ. ಓದುಗರಿಗೆ ಎಲ್ಲ ರೀತಿಯ ನೆರವು ನೀಡಲು ಮತ್ತು ಸಮರ್ಥ ರೀತಿಯಲ್ಲಿ ಸೇವೆಯನ್ನೊದಗಿಸಲು ಹೊಸ ಹೊಸ ಸಂಶೋಧನೆಗಳು ನಡೆಯುತ್ತಲೇ ಇರುತ್ತವೆ. ಹೀಗೆ ನಡೆದ ಕೆಲವು ಸಂಶೋಧನೆಗಳೆಂದರೆ– ದೂರದರ್ಶನ, ಗಣಕಯಂತ್ರ, ಈ ದಿಸೆಯಲ್ಲಿ ಮುಖ್ಯವಾದವುಗಳಾಗಿವೆ. ಕ್ಷಿಪಣಿಗಳ ತಂತ್ರಜ್ಞಾನ ಈ ಶತಮಾನದ ಎಲ್ಲ ಸಂಶೋಧನೆ ಇನ್‌ಸ್ಟ್ಯಾಟ್ ಮೂಲಕ ನಮಗೆ ನೇರ ಸಂಪರ್ಕ (ಆನ ಲೈನ್) ಗಳ ಮುಖಾಂತರ ಮಾಹಿತಿಯ ಹೆದ್ದಾರಿ (super information highway) ಯನ್ನೇ ನಿರ್ಮಿಸಿ ಪ್ರಗತಿಯತ್ತ ಈ ಯುಗ ಹೆಜ್ಜೆ ಹಾಕಿದೆ. ೨೦ ನೇ ಶತಮಾನದ ಕೊನೆಯಂತೂ ' ಮಾಹಿತಿ ತಂತ್ರಜ್ಞಾನ ' ಉಳಿದ ತಂತ್ರಜ್ಞಾನಗಳಿಗಿಂತಲೂ ಮುಂದಿದ್ದುದು ನಾವೆಲ್ಲ ನೋಡಿದ್ದಾಗಿದೆ.

ಇದರಿಂದ ಅನೇಕ ಸಂಶೋಧನೆಗಳು ಬೆಳೆದು ತೀವ್ರಗತಿಯಲ್ಲಿ ಮಾಹಿತಿ ಹುಡುಕಲು ಬರುವಂತಾಯಿತು. ವಿಶ್ವವೆನ್ನುವುದು ಒಂದು ಹಳ್ಳಿಯಾಗಿ (Global Village) ಮಾರ್ಪಾಡಾಯಿತು. ಇದು ಪ್ರಗತಿಯ ಮುನ್ನೋಟವಲ್ಲದೆ

ಮತ್ತೇನು ? ಬೇರೆ ಬೇರೆ ಕ್ಷೇತ್ರಗಳಲ್ಲಿ ಅದರ ಸಾಧಕ ಬಾಧಕಗಳು ಏನೇ ಇದ್ದರೂ ಗ್ರಂಥಾಲಯ ಮತ್ತು ಮಾಹಿತಿ ತಂತ್ರಜ್ಞಾನಗಳಿಗೆ ಮಾಹಿತಿ ತಂತ್ರಜ್ಞಾನ ಅವಶ್ಯವಿದೆ.

## ೫.೧೪ : ಸಂಗ್ರಹಗಳು (Frequency and cumulation)

ಹಸ್ತಪ್ರತಿಗಳ ಸಂಗ್ರಹಗಳು ರಾಜ್ಯದ ಎಲ್ಲಾ ಕಡೆಯು ಹೇರಳವಾಗಿ ಸಿಗುತ್ತಿವೆ. ಇವುಗಳ ಸಂಗ್ರಹ, ಸಂಪಾದನೆ ತುರ್ತಾಗಿ ನಡೆಯಬೇಕಾಗಿದೆ. ಕನ್ನಡ ಸಾಹಿತ್ಯದಲ್ಲಿ ಈಗಾಗಲೇ ಹಸ್ತಪ್ರತಿ ಸಂಗ್ರಹ ನಡೆದಿದೆ, ನಡೆಯುತ್ತಾ ಇದೆ. ಈ ದಿಶೆಯಲ್ಲಿ ಓರಿಯಂಟಲ್ ರಿಸರ್ಚ್ ಕೇಂದ್ರಗಳು, ಜೈನ ಸಂಸ್ಥೆಗಳು, ವೀರಶೈವ ಮಠಗಳು ಸಾಕಷ್ಟು ಪ್ರಯತ್ನ ಮಾಡಿವೆ.

| | |
|---|---|
| ಮದ್ರಾಸ್ ಓರಿಯಂಟಲ್ ರಿಸರ್ಚ್ ಸಂಸ್ಥೆಯ | ೧೨ ಹಸ್ತಪ್ರತಿಸೂಚಿಗಳು |
| ಮೈಸೂರು ಓರಿಯಂಟಲ್ ರಿಸರ್ಚ್ ಸಂಸ್ಥೆಯ | ೧೪ ಹಸ್ತಪ್ರತಿಸೂಚಿಗಳು |
| ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯ | ೧೩ ಹಸ್ತಪ್ರತಿಸೂಚಿಗಳು |
| ಧಾರವಾಡ ಕನ್ನಡ ಅಧ್ಯಯನ ಪೀಠ | ೧೦ ಹಸ್ತಪ್ರತಿಸೂಚಿಗಳು |
| ಬೆಂಗಳೂರು ಮತ್ತು ಹೈದ್ರಾಬಾದ್ ವಿಶ್ವವಿದ್ಯಾಲಯಗಳು ಎರಡೂ ಕೂಡಿ | ೨ ಹಸ್ತಪ್ರತಿಸೂಚಿಗಳು |
| ಬಿ.ಎಂ.ಶ್ರೀ ಪ್ರತಿಷ್ಠಾನ ಬೆಂಗಳೂರು | ೧ ಹಸ್ತಪ್ರತಿಸೂಚಿಗಳು |

## ೧೫.೪.೧ : ಮೆಕೆಂಜಿ ಸಂಗ್ರಹಿಸಿದ್ದ ಕನ್ನಡ ಹಸ್ತಪ್ರತಿಗಳ ವಿವರಗಳು

(ಎಚ್. ಎಚ್. ವಿಲ್ಸನ್ ಅವರ The Machenzie collection descriptive vatalogue ನ ಪ್ರಕಾರ) ೧೩

| | |
|---|---|
| ಜೈನ ಸಾಹಿತ್ಯ | ೨೧ |
| ಹಳಗನ್ನಡ ಗ್ರಂಥಗಲು | ೪೮ |
| ಸ್ಥಳ, ಪುರಾಣ, ಜೀವನಚರಿತ್ರೆ | ೧೭ |
| ಕತೆ, ಕವನ, ನೀತಿ, ಧರ್ಮ | ೧೮ |
| ವ್ಯಾಕರಣ, ಜ್ಯೋತಿಷ್ಯ, ವೈದ್ಯ ಇತ್ಯಾದಿ | ೧೬ |
| ಕನ್ನಡದಲ್ಲಿ ಚರಿತ್ರೆ, ಕೈಗಾರಿಕೆ ವಂಶಾವಳಿ ಇತ್ಯಾದಿ | ೩೨ |
| ಒಟ್ಟು | ೧೫೨ |

### ೫.೧೪.೨ : ಇತರ ಸೂಚಿಗಳು

- ಕನ್ನಡ ಪ್ರಾಂತೀಯ ಗ್ರಂಥಸೂಚಿ, ಕೆ. ಭುಜಬಲಶಾಸ್ತ್ರಿ (೧೯೮೪), ಪ್ರತಿ ೩೫೩೮
- ಶ್ರವಣಬೆಳಗೊಳ ಶ್ರೀ ಜೈನಮಠದ ತಾಡಪತ್ರಿಯ ಗ್ರಂಥಗಳ ವಿವರ, ದೇವಕುಮಾರ ಶಾಸ್ತ್ರಿ; (೧೯೮೦), ಪ್ರತಿ ೪೪೮೦೧೯
- ಕೊಲ್ಹಾಪುರ ಲಕ್ಷ್ಮೀಸೇವೆ ಬಸದಿಯ ಹಸ್ತಪ್ರತಿ ಸೂಚಿ (೧೯೦೦)
- ಕೊಲ್ಹಾಪುರ ಶ್ರೀ ಲಕ್ಷೀಸೇನ ಭಟ್ಟಾರಕ ಜೈನಬಸದಿಯ ಹಸ್ತಪ್ರತಿಸೂಚಿ, ಎಂ. ಎಂ. ಕಲಬುರ್ಗಿ - ಬಿ. ಆರ್. ಹಿರೇಮಠ ಮತ್ತು ಎಸ್. ವ್ಹಿ ಅಯ್ಯನಗೌಡರ, (೧೯೮೮), ಪ್ರತಿ ೮೫೧
- ಗದುಗಿನ ತೋಂಟದಾರ್ಯಮಠದ ಹಸ್ತಪ್ರತಿ ಸೂಚಿ, ಎಸ್. ಶಿವಣ್ಣ (೧೯೮೩), ಪ್ರತಿ ಕನ್ನಡ ೧೧೪೦, ಇತರೆ ೨೫೬
- ವೀರಶೈವ ಅಪ್ರಕಟಿತ ಗ್ರಂಥಸೂಚಿ, ಎಸ್. ಶಿವಣ್ಣ (೧೯೮೨), ಕೃತಿ ೧೭೧೨
- ಎ ಕ್ಲಾಸಿಫೈಡ್ ಕ್ಯಾಟ್‌ಲಾಗ್ ಆಫ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನ್ಯುಸ್ಕ್ರಿಫ್ಟ್ಸ್ ಇನ್ ದಿ ಸರಸ್ವತಿ ಭಂಡಾರಮ್ (ಪ್ಯಾಲೇಸ್ ಸಂಸ್ಕೃತ ಲೈಬ್ರರಿ) ಆಫ್ ಎಚ್. ಎಚ್ ಮಹಾರಾಜಾ ಆಫ ಮೈಸೂರು, ಕಲೆಕ್ಷನ್ ಆಫ್ (೧೯೦೦ - ೧೯೦೫), ಪ್ರತಿ ೩೦೦
- ದಿ ಲಿಸ್ಟ್ ಆಫ್ ದಿ ಅನ್‌ಪಿಂಟೆಡ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನ್ಯುಸ್ಕಿಪ್ಟ್ ಇನ್ ದಿ ಪ್ಯಾಲೇಸ್ ಸರಸ್ವತಿ ಭಂಡಾರ (ಮಹಾರಾಜಾ ಸಂಸ್ಕೃತ ಕಾಲೇಜು ಮೈಸೂರು (೧೯೪೩), ಪ್ರತಿ ೧೦೩)
- ಎ ಕ್ಯಾಟಲಾಗ್ ಆಫ್ ಸಂಸ್ಕೃತ ಆ್ಯಂಡ್ ಪ್ರಾಕೃತ ಆ್ಯಂಡ್ ಹಿಂಧದಿ ವರ್ಕ್ಸ್ ಇನ್ ದಿ ಜೈನ್ ಸಿದ್ಧಾಂತ ಭವನ ಅರಾ. ಸಂ. ಪಾರ್ಶ್ವದಾಸ ಗುಪ್ತ ಮತ್ತು ಮೂಲಚಂದ್ರ ಜೈನ; (೧೯೧೯), ಪ್ರತಿ ೫೦೦
- ಕ್ಯಾಟಲಾಗ್ ಆಫ್ ಸಂಸ್ಕೃತ ಆ್ಯಂಡ್ ಪ್ರಾಕೃತ ಮ್ಯಾನ್ಯುಸ್ಕ್ರಿಫ್ಟ್ಸ್ ಇನ್ ದಿ ಸೆಂಟ್ರಲ್ ಪ್ರಾವಿನ್ಸಿಸ್ ಆ್ಯಂಡ್ ಬೇರಾರ್ (ಅನುಬಂಧ), ರಾವಬಹಾದ್ದೂರ ಹೀರಾಲಾಲ್; (೧೯೧೯), ಪ್ರತಿ ೪೩
- ದಿ ಅನ್‌ನೋನ್ ಪೇಜೆಸ್ ಇನ್ ದಿ ಹಿಸ್ಟರಿ ಆಫ್ ಕನ್ನಡ ಲಿಟರೇಚರ್, ಸಿ ಮಹಾದೇವಪ್ಪ (೧೯೬೦), ಪ್ರತಿ ೧೩
- ಶ್ರೀ ಜಗದ್ಗುರು ಮೂರು ಸಾವಿರಮಠದ ವರ್ಣನಾತ್ಮಕ ಹಸ್ತಪ್ರತಿ ಸೂಚಿ –ಕೆಳದಿ ಗುಂಡಾಜೋಯಿಸ (೧೯೮೯), ಪ್ರತಿ ೩೬೦
- ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿ ಸೂಚಿ, ಶಿ. ಎಸ್. ಶಿವಣ್ಣ (೧೯೯೧), ಪ್ರತಿ ೪೭೭೧
- ಕೆಳದಿ ಸಂಗ್ರಹಾಲಯ ಮತ್ತು ಐತಿಹಾಸಿಕ ಸಂಶೋಧನಾ ಕೇಂದ್ರ ವರ್ಣನಾತ್ಮಕ ಹಸ್ತಪ್ರತಿ ಸೂಚಿ –ಎಸ್. ಆರ್. ರಾವ್ ಮತ್ತು ಕೆಳದಿ ಗುಂಡಾಜೋಯಿಸ. [೧೪]

## ೫.೧೪.೬ : ಲೇಖನ ರೂಪದ ಸೂಚಿಗಳು

- ಅ) ಸ್ವಾದಿಯ ಜೈನಮಠದೊಳಗಿರುವ ಕನ್ನಡ ಗ್ರಂಥಗಳು. ಪ್ರತಿ ೨೯

  ಆ) ಧರಣೇಂದ್ರಪ್ಪ ಅಣ್ಣಾ ಅಲೂರು ಹಿರೆ. ಇವರಲ್ಲಿಯ ತಾಡಪತ್ರ ಗ್ರಂಥಗಳು. ಪ್ರತಿ ೮ = ೨

  ಇ) ಇಸ್ಲೂರ ಮಠದಲ್ಲಿರುವ ವೀರಶೈವ ಗ್ರಂಥಗಳು – ಕೆ. ಜಿ. ಗುಂಡಣ್ಣಾಚಾರ. ಜ. ಕ. ೭ = ೮ (೧೯೨೯). ಪ್ರತಿ ೨ – ೭
- ಕೈಬರಹದ ಗ್ರಂಥಗಳ ಶೋಧನೆಯು. ಎಸ್. ಸಿ. ನಂದೀಮಠ. ತ್ರೈ. ಪಾ. ೭ - ೧ (೧೯೩೨). ಪ್ರತಿ ೨೦೫
- ಹೈದರಾಬಾದ್ ಪ್ರಾಂತದಲ್ಲಿ ಕನ್ನಡ ಗ್ರಂಥಗಳ ಸಂಶೋಧನೆ. ವಿ. ಕೆ. ಭೀಮಸೇನರಾವ್: ಕ. ಸಾ. ಪ. ೨೧ - ೩ (೧೯೩೬). ಪ್ರತಿ ೨೦
- ಐನೋಲಿ ಗುಂಡಯ್ಯನ ಮನೆಯ ಸಂಗ್ರಹ. ಕಪಟರಾಳ ಕೃಷ್ಣರಾಯ. ಶ. ಸಾ. ೪ - ೨ (೧೯೪೦). ಪ್ರತಿ ೮೫
- ಹೊಂಬುಜ ಮಠದ ಗ್ರಂಥಗಳ ಪಟ್ಟಿ ಸಂಗ್ರಾಹಕ. ಶ. ಸಾ. ೧೯೪೮. ಪ್ರತಿ
- ಕಂಚಗಲ್ಲ – ಬಿದರೆ ದೊಡ್ಡಮಠದಲ್ಲಿ ದೊರೆತ ತಾಡವೋಲೆ ಗ್ರಂಥಗಳು. ಜಿ. ಎಂ. ಉಮಾಪತಿ ಶಾಸ್ತ್ರಿ. ಸುಕುಮಾರ. ೪ - ೩. ೪ - ೯ (೧೯೫೪). ಪ್ರತಿ
- ಗದಗ ತೋಂಟದಾರ್ಯ ಮಠದ ತಾಡವೋಲೆ. ಜಿ. ಎಂ. ಉಮಾಪತಿ ಶಾಸ್ತ್ರಿ. ಸುಕುಮಾರ ೫ - ೩ (೧೯೫೦೫೫). ಪ್ರತಿ
- ಹಾವೇರಿ ಹುಕ್ಕೇರಿ ಮಠದ ಓಲೆ ಸಂಗ್ರಹ. ಜಿ. ಎಂ. ಉಮಾಪತಿ ಶಾಸ್ತ್ರಿ. ಸುಕುಮಾರ ೫ - ೫ (೧೯೫೫). ಪ್ರತಿ
- ಹಾನ್ನಳ್ಳಿ ಕೋಡಿಮಠದ ಓಲೆಗಳು. ಜಿ. ಎಂ. ಉಮಾಪತಿಶಾಸ್ತ್ರಿ. ಸುಕುಮಾರ. ೫ - ೮ ೯ (೧೯೫೫)
- ಮದರಾಸು ಅಡಿಯಾರು ಪುಸ್ತಕಾಲಯದಲ್ಲಿರುವ ಕನ್ನಡ ಗ್ರಂಥಗಳು. ಶ. ಸಾ. ೨೦ - ೬ (೧೯೫೭). ಪ್ರತಿ ೫೬
- ಶರಣ ಸಾಹಿತ್ಯ ಕಾರ್ಯಾಲಯದಲ್ಲಿರುವ ತಾಳೆಯೋಲೆ ಹಾಗೂ ಕಾಗದ ಪ್ರತಿಗಳು. ಶ. ಸಾ. ೨೦ - ೫ (೧೯೫೮)
- ಬಳ್ಳಾರಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನಮಠದ ಗ್ರಂಥ ಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿ ಗ್ರಂಥಗಳ ಸೂಚಿ. ಜಿ. ಎಂ. ಉಮಾಪತಿಶಾಸ್ತ್ರಿ ಹೇಮಕೂಟ ೧ - ೨ (೧೯೬೫). ೩೩ ಕಟ್ಟು, ೧೧೬ ಪ್ರತಿ
- ಬಳ್ಳಾರಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನಮಠದ ಗ್ರಂಥ ಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿ ಗ್ರಂಥಗಳ ಸೂಚಿ. ಎಸ್. ಎಸ್. ಹಿರೇಮಠ ಹೇಮಕೂಟ ೧ - ೧೧ (೧೯೬೬). ಪ್ರತಿ
- ಶ್ರೀ ಬಾಹುಬಲಿ ಬ್ರಹ್ಮಚರ್ಯಾಶ್ರಮದಲ್ಲಿ ಮೈಕ್ರೊಫಿಲ್ಮ್ ಮಾಡಿರುವ ಗ್ರಂಥಗಳು. ಬಿ. ಎಸ್. ಸಣ್ಣಯ್ಯ ಸನ್ಮತಿ. ೨೨ - ೧ (೧೯೭೮). ಪ್ರತಿ ೩೭

- ಶ್ರೀ ತಾತನವರ ಮಠದ ಗ್ರಂಥಭಂಡಾರ ಸೂಚಿ, ಜಿ. ಎಂ. ಉಮಾಪತಿ ಶಾಸ್ತ್ರಿ, ಹೇಮಕೂಟ, ೪ - ೧೨ (೧೯೭೯), ಪ್ರತಿ ೧೪
- ಇಂಗ್ಲೆಂಡಿನಲ್ಲಿರುವ ಕನ್ನಡ ಹಸ್ತಪ್ರತಿಗಳು, ಎಂ. ಎಂ. ಕಲಬುರ್ಗಿ, ಮಾರ್ಗ - ೧, ಪ್ರತಿ ೮೦. [೧೫]

## ೫.೧೪.೪ : ಸಮುದಾಯಿಕ ಸಂಗ್ರಹಗಳು

ಇಂಗ್ಲೀಷಿನ ಬಾರ್ನೆಟ್ ಮತ್ತು ಶ್ರೀಮತಿ ಗೌರ್ ಅವರ ೩ ಗ್ರಂಥಸೂಚಿಗಳು ೧೮೬೪ ನೇ ಡಿಸೆಂಬರ್ ವರೆಗೆ ಮುಂಬಯಿ ಪ್ರಾಂತದಲ್ಲಿ ಪ್ರಕಟವಾಗಿರುವ ದೇಶೀಯ ಪ್ರಕಟಣೆಗಳು –ಸರ್. ಎ. ಗ್ರ್ಯಾಂಟ್ ತಯಾರಿಸಿ ೧೮೬೫ ರಲ್ಲಿ ಪ್ರಕಟಿಸಿದರು. ೧೯೦೧ - ೧೯೫೩ ರ ವರೆಗೆ ನ್ಯಾಶನಲ್ ಬಿಬ್ಲಿಯೋಗ್ರಫಿ ಆಫ್ ಇಂಡಿಯನ್ ಲಿಟರೇಚರ್‌ನ ಗ್ರಂಥಸೂಚಿಗಳು –೧೯೬೬ ರಲ್ಲಿ ಶ್ರೀ ಕೇಶವನ್ ಮತ್ತು ಮುಳೆಯವರು ಪ್ರಕಟಿಸಿದ್ದಾರೆ. ರಂ. ಶ್ರೀ ಮುಗಳಿನವರ ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿ. ವಿ. ಪ್ರಕಟಿಸಿರುವ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿ. ವಿ. ಕನ್ನಡ ಸಾಹಿತ್ಯ ಚರಿತ್ರೆ, ಹಾ. ಮಾ. ನಾಯಕರ ಜಾನಪದ ಕನ್ನಡ ಗ್ರಂಥಸೂಚಿ, ಹಂಪನಾರವರ ಕಲಾವಿದರ ಸೂಚಿ, ಗುಂಜಾಳರ ಬಸವ ಸಾಹಿತ್ಯ ದರ್ಪಣ ಭಾಗ ೧, ೨, ಆರ್ ನರಸಿಂಚಾರರ ಕವಿಚರಿತೆಯ ಮೂರು ಸಂಪುಟಗಳು, ಪ್ರಬುದ್ಧ ಕರ್ನಾಟಕದ ಗಾಂಧಿ ಸಂಚಿಕೆ, ಓ. ಕೆ. ಪಾಟೀಲರ ಕನ್ನಡ ಅಭಿನಂದನ ಗ್ರಂಥಗಳ ಲೇಖನಸೂಚಿ, ಬೆಂಗಳೂರು ವಿ. ವಿ. ಯ ೧೩ ಸಾಹಿತ್ಯ ವಾರ್ಷಿಕಗಳು (೧೯೭೧-೮೩), ಭಾರತೀಯ ರಾಷ್ಟ್ರೀಯ ಗ್ರಂಥಸೂಚಿಯ ಜನೇವರಿ - ಡಿಸೆಂಬರ್ ೧೯೮೬ –೧೨ ಸಂಚಿಕೆಗಳು, ಆರ್. ಎಲ್ ಅನಂತರಾಮಯ್ಯನವರ ವಾರ್ಷಿಕ ಗ್ರಂಥಾವಳಿ, ರಂಗಸೌರಭ, ಅನಂತರಾಮಯ್ಯನವರು ಸತತವಾಗಿ ೧೫ ವರುಷಗಳ ವರೆಗೆ ಬಂದ ಗ್ರಂಥಲೋಕ ಪತ್ರಿಕೆಯ ಸಂಚಿಕೆಗಳಲ್ಲಿನ ಪುಸ್ತಕಗಳ ಸಂಖ್ಯೆ –೧೭೦೦೦ ವನ್ನು ದಾಟುತ್ತದೆ. ಇದು ಕನ್ನಡದಲ್ಲಿ ಪುಸ್ತಕಗಳ ಸಂಕ್ಷಿಪ್ತ ದಾಖಲಾತಿ ಮತ್ತು ನೋಟ.

ಇತ್ತೀಚಿನ ವರುಷಗಳಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯ ಸಾಹಿತ್ಯ, ವಾರ್ಷಿಕ, ಪುಸ್ತಕ ಮಾಹಿತಿಗಳು ಇನ್ನಷ್ಟು ವಿವರಗಳು ಲಭ್ಯವಾಗಬೇಕಾಗಿದೆ. ಇತ್ತೀಚಿಗೆ ಮೈಸೂರು, ಕರ್ನಾಟಕ, ಬೆಂಗಳೂರು ವಿಶ್ವವಿದ್ಯಾಲಯಗಳು ಈ ತೆರನಾದ ಕೆಲಸದಲ್ಲಿ ನಿರಾಸಕ್ತಿಯನ್ನು ತೋರಿಸುತ್ತಿವೆ. ಪ್ರಸಿದ್ಧ ವಿದ್ವತ್ ಪತ್ರಿಕೆಗಳಾದ ಪ್ರಬುದ್ಧ ಕರ್ನಾಟಕ, ಮಾನವಿಕ ಕರ್ನಾಟಕ, ಸಾಧನೆ, ಕರ್ನಾಟಕ ಭಾರತಿ ಪತ್ರಿಕೆಗಳು ಸಂಪೂರ್ಣವಾಗಿ ನಿಂತು ಹೋಗಿವೆ. ಇವುಗಳ ಪ್ರಕಟಣೆಯ ಕಾಲಾವಧಿಯಲ್ಲಿ ಅನೇಕ ವಿದ್ವಾಂಸರು ತಮ್ಮ ಲೇಖನಗಳನ್ನು ಪ್ರಕಟಿಸಲು ಕಾತುರದಿಂದ ಇದ್ದುದು ಕಂಡುಬರುತ್ತಿತ್ತು. ಶಾಸನ ಸಂದರ್ಭದಲ್ಲಿ ಕಲಬುರ್ಗಿಯವರೊಬ್ಬರೇ ೨೫,೦೦೦ ಶಾಸನಗಳ ಸೂಚಿ ಕಾರ್ಯ ಪ್ರಶಂಸನಾರ್ಹ. ಈ ಪತ್ರಿಕೆಗಳಲ್ಲಿ ಶಾಸನಸೂಚಿಗಳು ಅಧ್ಯಯನಕಾರರಿಗೆ ಆಕರಗಳಾಗಿದ್ದವು.

## ೫.೧೫ : ಸಮಾರೋಪ

ಕನ್ನಡ ಸಾಹಿತ್ಯದಲ್ಲಿ ವಿವಿಧ ವಿಷಯಗಳ ಮೇಲಿನ ಸೂಚಿಗ್ರಂಥಗಳು, ಲೇಖನಸೂಚಿಗಳು ರಚಿಸಲ್ಪಟ್ಟಿದ್ದು ಒಂದು ಯೋಗಾಯೋಗವೇ ಸರಿ. ಅವುಗಳ ಕನ್ನಡ ಸಾಹಿತ್ಯ ಸಮೃದ್ಧಿಯನ್ನು ಸೂಚಿಸುತ್ತವೆ. ಕನ್ನಡದ ನಿಯತಕಾಲಿಕೆಗಳು ಗ್ರಂಥಸೂಚಿಗಳನ್ನು, ಲೇಖನ ಸೂಚಿಗಳನ್ನು ಪ್ರಕಟಿಸಿ ಆಸಕ್ತರಿಗೆ ಉಪಯೋಗಿವಾಗಿವೆ. ಗ್ರಂಥಾಲಯ ಸೂಚಿಗಳು, ಪ್ರಕಾಶಕರ ಗ್ರಂಥಸೂಚಿಗಳು, ಕೈಪಿಡಿಗಳು, ಡೈರೆಕ್ಟರಿಗಳು, ಚರಿತ್ರೆಗಳು, ಸಾಕಷ್ಟು ಪ್ರಮಾಣದಲ್ಲಿ ರಚಿಸಲ್ಪಟ್ಟಿಲ್ಲ. ವಿದ್ವತ್ ಪಟ್ಟಿಕೆಗಳೆಂದು ಹೆಸರಾದ ಸಾಹಿತ್ಯ ಅಕಾಡೆಮಿಯ ಅನಿಕೇತನ, ಮುಂತಾದವುಗಳನ್ನು ಕೈಗೆತ್ತಿಕೊಳ್ಳಬೇಕಾಗಿದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಗ್ರಂಥಸೂಚಿ ಕಾರ್ಯಕ್ಕೆ ಉನ್ನತೀಕರಣ (promotion) ನೀಡಬೇಕಾದುದು ನಮ್ಮ - ನಿಮ್ಮೆಲ್ಲರ ಕರ್ತವ್ಯವಾಗಬೇಕಾಗಿದೆ.

ಈಚೆಗೆ ನಡೆದ ಗಣಕಯಂತ್ರ, ದೂರದರ್ಶನ, ಅಂತರ್‌ಜಾಲಗಳ ಸಂಶೋಧನೆಯಿಂದ ಇಡಿ ವಿಶ್ವವೇ ಒಂದು (Global Village) ಹಳ್ಳಿಯಾಗಿ ಮಾರ್ಪಾಡಾಗಿದೆ. MARC 21, OCLC, OPAC ಗಳ ಸಹಾಯದಿಂದ ಗ್ರಂಥಸೂಚಿಗಳು ಸರಳವಾಗಿ ನಮಗೆ ಸಿಗುತ್ತಿವೆ. ಸಾಂಪ್ರದಾಯಿಕವಾಗಿದ್ದ ಹಸ್ತಪ್ರತಿಗಳು, ಗ್ರಂಥಸೂಚಿಗಳು ವಿದ್ಯುನ್ಮಾನ ಮಾಧ್ಯಮ (Electronic Media) ಗಳ ಮುಖಾಂತರ ಸೂಕ್ಷ್ಮ ಮುದ್ರಣ ಪಟ (Micro film) ಗಳ ಮುಖಾಂತರ ಸೂಕ್ಷ್ಮ ಮುದ್ರಣ ಪಟ (micro film) ಗಳು ಬಳಕೆಗೆ ಬಂದಿವೆ. ಹಾಗೆಯೇ Magnetic tapes, Disc, Punch ಕಾರ್ಡುಗಳು ಗ್ರಂಥಸೂಚಿಯ ಸುಲಭ ಅವಲೋಕನಕ್ಕೆ ದಾರಿ ಮಾಡಿಕೊಟ್ಟಿವೆ. ಹೀಗಾಗಿ ಈ ಎಲ್ಲ ಮಾಹಿತಿಗಳನ್ನು CD ROM, ROM ಅಲ್ಲದೆ C.D. ಗಳಲ್ಲಿ ಸಂಗ್ರಹಿಸಿಟ್ಟು ಮುಂದಿನ ಜನಾಂಗಕ್ಕೆ ಅನುಕೂಲ ಒದಗಿಸಬಹುದು. ರಕ್ಷಣೆಯ ದೃಷ್ಟಿಯಿಂದ CD ಸಂಗ್ರಹಗಳು ಅವುಗಳ ಉಪಯೋಗ ಈಗ ಹೆಚ್ಚಾಗಿದೆ. ಈ ಎಲ್ಲವುಗಳ ಅವಲೋಕನವೇ ಈ ತೌಲನಿಕ ಅಧ್ಯಯನ. ಅರ್ವಾಚೀನದಿಂದ ಹಿಡಿದು ಆಧುನಿಕದವರೆಗಿನ ಬೆಳವಣಿಗೆಗಳ ಅವಲೋಕನ, ಅವುಗಳ ಉಪಯೋಗ ಮತ್ತು ಅನಾನುಕೂಲತೆಗಳನ್ನು ಇಲ್ಲಿ ವಿವರಿಸಲಾಗಿದೆ. ಹಳೆ ಪದ್ಧತಿಗಳಿಂದ ಉಪಯೋಗ ಒಂದೇ ಸ್ಥಳದಲ್ಲಾದರೆ ಆಧುನಿಕ ಪದ್ಧತಿಗಳ ಉಪಯೋಗ ದ್ವಿಗುಣ, ಬಹುಮುಖ (multiple uses) ಉಪಯೋಗ ಸಾಧ್ಯವಾಗಿದೆ. ವಿಜ್ಞಾನಿ ಮಯೋಕ ಆಧುನಿಕ ವಿಜ್ಞಾನಗಳ ಮಾಹಿತಿಯ ಉಪಯೋಗದ ಬಗ್ಗೆ ಹೀಗೆ ಹೇಳಿದ್ದಾರೆ : " ಪ್ರಕಟವಾಗಿರುವ ಎಲ್ಲ ಲೇಖನಗಳ, ಪುಸ್ತಕಗಳ ವಿವರಗಳನ್ನು ಸಂಗ್ರಹಿಸಿ ಜೇಬಿನಲ್ಲಿ ಇರಿಸಿಕೊಳ್ಳಬಹುದು. ಎಲ್ಲ ವಿಶ್ವವಿದ್ಯಾಲಯ ಗ್ರಂಥಗಳನ್ನು, ವಿಶ್ವಕೋಶ ಸಂಪುಟಗಳನ್ನು ಮತ್ತೊಂದರಲ್ಲಿ ಲೈಬ್ರರಿ ಆಫ್ ಕಾಂಗ್ರೆಸ್‌ನ ಗ್ರಂಥಸೂಚಿಯನ್ನು ಪ್ರಕಟಿಸಿ, ನಾಲ್ಕನ್ನು ಕಡಿಮೆ ಬೆಲೆಗೆ ಮಾರಾಟ ಮಾಡಿದಲ್ಲಿ ಮನೆಗಳಿಗೆ ಕೊಂಡೊಯ್ಯಬೇಕೆಂದಾಗ ಪರಾಮರ್ಶಿಸಿ ಮಾಹಿತಿ ಪಡೆಯಬಹುದು. ಈ ಸೌಕರ್ಯದಿಂದ ಪ್ರತಿ

ಮನೆಯು ವಿಶ್ವವಿದ್ಯಾಲಯದಂತೆ ವಿಜೃಂಭಿಸುವುದು. ಇವೆಲ್ಲವುಗಳನ್ನು ನಾಲ್ಕು ಅಡಕ ತಟ್ಟೆಗಳಲ್ಲಿಯೇ ನಮ್ಮ ಮನೆಯಲ್ಲಿ ಸಂಗ್ರಹಿಸಿ ಆಕರ ಕೋಶವನ್ನು ಒಂದೆಡೆ ಬರುವಂತೆ ಮಾಡಬಹುದಾಗಿದೆ. ಬೇಕೆಂದಲ್ಲಿ ಒಯ್ಯಬಹುದು" ಇಂತಹ ಬೆಳವಣಿಗೆಗಳು ನಮಗೂ ಸಿಗಲಿ, ಈಗಾಗಲೇ ಇಂಗ್ಲೀಷ ಪುಸ್ತಕಗಳು, ಪತ್ರಿಕೆಗಳು ಸಿಡಿ ಯಲ್ಲಿ ದೊರಕುತ್ತಿವೆ. ಇಂತಹ ಅವಕಾಶಗಳು ಕನ್ನಡ ಸಾಹಿತ್ಯಕ್ಕೂ ಒದಗಿ ಬರಬೇಕಾಗಿದೆ.

## • ಅಡಿಟಿಪ್ಪಣಿಗಳು •

೧. A critical scholorship in the field of research in Indology is necessarily connected with te idea of collecting MSS, and printing their lists or catalogues. Indian Textual criticism Appendix II. Footnote 5, p. 101

೨. ಅದೇ.

೩. ಹಿರೇಮಠ ಬಿ. ಕೆ. : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಪು. ೨೪೮

೪. ದೇವೀರಪ್ಪ ಎಚ್. : ಕನ್ನಡ ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೦೮

೫. ಹಿರೇಮಠ ಬಿ. ಕೆ. : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ ವೇದಿಕೆ, ೧೯೯೨, ಪುಟ ೨೫೧ - ೨೫೨

೬. ಅದೇ.

೭. ಹಿರೇಮಠ ಬಿ. ಕೆ. : ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ, ಪು. ೨೫೧ - ೨೪೯

೮. Indian Textual criticism Appendix II. Footnote 5, p. III

೯. ಕರಿಸಿದ್ದಪ್ಪ ಸಿ. ಆರ. : ಕ್ರಿ. ಶ. ೧೮೦೦ ರಿಂದೀಚಿಗೆ ಕನ್ನಡ ಸಂದರ್ಭ ಗ್ರಂಥಗಲು : ಒಂದು ತಾಂತ್ರಿಕ ಅಧ್ಯಯನ, ಪು. ೩೩೩

೧೦. ಅದೇ.

೧೧. ಎಸ್. ರಾಜಶೇಖರ : ವಿಜಯನಗರ ಕಾಲದ ಘಟನಾವಳಿ ಸೂಚಿ, ಸುಜಾತ್ ಪಬ್ಲಿಕೇಶನ್, ಧಾರವಾಡ

೧೨. ನಾರಾಯಣ ಕೆ. ವಿ. : ಹೊಸಗನ್ನಡ ಸಾಹಿತ್ಯ ಸಂಶೋಧನೆಯ ಪೂರ್ವಚರಿತ್ರೆ ಮುನ್ನೋಟಗಳು. ಸಂಶೋಧನೆ ಪ್ರಜ್ಞೆ –ಸಂ. : ಹೆರಂಜೆ ಕೃಷ್ಣಭಟ್ಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ, ೧೯೯೫, ಪು. ೬೪

೧೩. Deshpande (K. S.) : Towards a retrospective bibliography of books Indian languages : Case studyt of kannada publications. pp. 176 - 77, In : comparative librarianship edited by N. N. Gidwani, Vikas Publications, Delhi, 1973

೧೪. ಹೆಗಡೆ ಜಿ. ಎಂ. : ಹಸ್ತಪ್ರತಿಗಳು ಮೆಕೆಂಜಿ ಸಂಗ್ರಹ, ಮಣಿಹ, ಬಿ. ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರು, ೧೯೮೨

೧೫. ಕಲಬುರ್ಗಿ ಎಂ. ಎಂ. : ಕನ್ನಡ ಹಸ್ತಪ್ರತಿಶಾಸ್ತ್ರ, ಸ್ನೇಹ ಪ್ರಕಾಶನ ಬೆಂಗಳೂರು, ೧೯೯೩, ಪು. ೮೯ - ೯೮

೧೬. ಅದೇ.

## ಅಧ್ಯಾಯ : ಆರು

# ವಿಜ್ಞಾನ ಹಾಗೂ ತಂತ್ರಜ್ಞಾನ ಬೆಳವಣಿಗೆಗಳು

೬.೧ : ಭಾರತದ ಸನ್ನಿವೇಶ

೬.೨ : ಸೂಚಿಗಳ ಮೇಲೆ ಮಾಹಿತಿ ತಂತ್ರಜ್ಞಾನದ ಪರಿಣಾಮ

೬.೩ : ಮುಕ್ತಾಯ

## ಅಧ್ಯಾಯ : ಆರು

# ವಿಜ್ಞಾನ ಹಾಗೂ ತಂತ್ರಜ್ಞಾನ ಬೆಳವಣಿಗೆಗಳು

ಮನುಷ್ಯಕುಲಕ್ಕೆ ದೇವರು ನೀಡಿದ ದೇಣಿಗೆಗಳಲ್ಲಿ ಜೀವದ ನಂತರ ಅತ್ಯಂತ ಮಹತ್ತರವಾದದ್ದು ತಂತ್ರಜ್ಞಾನವೆಂದು ಬಹಳ ಸಾರಿ ಹೇಳಲಾಗುತ್ತದೆ. ಮನುಷ್ಯನ ನಾಗರಿಕತೆಯ ಇತಿಹಾಸದತ್ತ ಹೊರಳಿ ನೋಡಿದರೆ ಕೇವಲ ಕಳೆದ ೪೦೦೦ ವರ್ಷಗಳಲ್ಲಿ, ಅಂದರೆ ಮನುಷ್ಯ ಕುಲದ ಅಸ್ತಿತ್ವದ ಪ್ರತಿಶತ ೦.೧ ಅವಧಿಯಲ್ಲಿ ಮಾತ್ರ ಮನುಷ್ಯ ಹೊಸ ಸಾಧನ, ಉಪಕರಣಗಳ ಆವಿಷ್ಕಾರ ಮಾಡಿಕೊಂಡು ಜೀವನದ ಗುಣಮಟ್ಟದಲ್ಲಿ ಗಣನೀಯವಾದ ಸುಧಾರಣೆಗಳನ್ನು ಮಾಡಿಕೊಂಡಿದ್ದು, ವ್ಯವಸ್ಥಿತವಾದ ಕೃಷಿ ಪದ್ಧತಿಯನ್ನು ಹಾಗೂ ಸಾಮುದಾಯಿಕ ಜೀವನವನ್ನು ರೂಪಿಸಿಕೊಂಡಿದ್ದು, ನಮಗೆ ಕಂಡುಬರುತ್ತದೆ. ವಿದ್ಯುಚ್ಛಕ್ತಿ, ಕ್ವಾಂಟಮ್ ಮೆಕ್ಯಾನಿಕ್ಸ್, ಅಣುತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ರೇಡಿಯೋ ಸಂವಹನ, ಗಣಕಯಂತ್ರಗಳು ಮತ್ತು ಬಾಹ್ಯಾಕಾಶ ತಂತ್ರಜ್ಞಾನ ಇಂತಹ ಗಮನಾರ್ಹವಾದ ಆಧುನಿಕ ವೈಜ್ಞಾನಿಕ, ತಾಂತ್ರಿಕ ಬೆಳವಣಿಗೆಗಳು ಈ ಶತಮಾನದಲ್ಲಿ ನಡೆದ ವೈಜ್ಞಾನಿಕ ಪ್ರಯತ್ನಗಳ ಫಲಗಳಾಗಿವೆ. ಶಿಲಾಯುಗದ ಮಾನವನಿಂದ ಶಿಲಾ ಉಪಕರಣಗಳ ಆವಿಷ್ಕಾರ ಮತ್ತು ಅಗ್ನಿ ಹಾಗೂ ಶಿಲೆಯ ಸಂಯುಕ್ತ ಬಳಕೆ, ಔದ್ಯೋಗಿಕ ಕ್ರಾಂತಿ, ಅಣುಯುಗ ಹಾಗೂ ಬಾಹ್ಯಾಕಾಶ ಯುಗದ ಅನುಷ್ಠಾನ – ಇಂಥ ಪ್ರತಿಯೊಂದು ಪ್ರಮುಖ ತಾಂತ್ರಿಕ ಪ್ರಗತಿಯೂ ಮಾನವನ ಸಮಾಜದ ಭೌತಿಕ ಹಾಗೂ ಸಾಂಸ್ಕೃತಿಕ ಬೆಳವಣಿಗೆಯ ಮೇಲೆ ಆಳವಾದ ಮಹತ್ವಪೂರ್ಣವಾದ ಪರಿಣಾಮವನ್ನು ಬೀರಿದೆ.

ಕಳೆದ ಕೆಲವು ದಶಕಗಳಲ್ಲಿ ಆಗಿರುವ ಆವಿಷ್ಕಾರಗಳು ಬೆರಗುಗೊಳಿಸುವಂತಹವು. ಆದರೆ ವಿಜ್ಞಾನ ಮತ್ತು ತಂತ್ರಜ್ಞಾನದ ನಿಜವಾದ ಪ್ರಯೋಜನ ವಿಶ್ವದ ಪ್ರತಿಶತ ೨೦ ರಷ್ಟು ಸಂಪನ್ಮೂಲಗಳ ಮೇಲೆ ವಿಶ್ವದ ಪ್ರತಿಶತ ೮೦ ರಷ್ಟು ಜನಸಂಖ್ಯೆಯನ್ನು ಪೋಷಿಸುತ್ತಿರುವ ತೃತೀಯ ಜಗತ್ತಿನ ಅಭಿವೃದ್ಧಿಪರ ರಾಷ್ಟ್ರಗಳ ಬಹುಪಾಲು ಜನರಿಗೆ ಲಭ್ಯವಾಗುತ್ತಿಲ್ಲ ಎನ್ನುವುದು ಕೂಡ ವಾಸ್ತವ ಸಂಗತಿಯಾಗಿದೆ. ಆಹಾರ ಪೌಷ್ಟಿಕಾಂಶಗಳ ಕೊರತೆಯಿಂದ ಬಳಲಿ ಪ್ರತಿದಿನವೂ ಹಸಿದ ಹೊಟ್ಟೆಗಳ ಮೇಲೆ ನಿದ್ದೆ ಹೋಗುವ ನಮ್ಮ ದೇಶದ ಲಕ್ಷಾಂತರ ಜನರ ಭೀಕರ ಚಿತ್ರ ಈ ದೇಶದ ಜೀವನದ ಗುಣಮಟ್ಟದ ಮೇಲೆ ಒಂದು ವ್ಯಾಖ್ಯಾನವೇ ಆಗಿದೆ. ವ್ಯಾಪಕವಾದ ಅನಕ್ಷರತೆ, ಕಡು

ಬಡತನ, ಹರಡುತ್ತಿರುವ ರೋಗಗಳು ಮತ್ತು ಪರಿಸರದ ನಾಶ, ಇವುಗಳು ನಮ್ಮ ಸಾಮಾನ್ಯ ಬದುಕಿನ ಭಾಗಗಳಾಗಿ ಬಿಟ್ಟಿವೆ. ಭಾರತ ದೇಶದಲ್ಲಿ ಶ್ರೇಷ್ಠ ಪ್ರಾಚೀನ ವೈಜ್ಞಾನಿಕ ಪರಂಪರೆಗಳಿದ್ದರೂ ಕೂಡ ವಿಜ್ಞಾನ ಹಾಗೂ ತಂತ್ರಜ್ಞಾನದ ಅಭಿವೃದ್ಧಿ ಮತ್ತು ಅನ್ವಯಿಕೆಯಲ್ಲಿ ಖಚಿತವಾದ ದೃಷ್ಟಿ ಕೇಂದ್ರವಿಲ್ಲದೇ ಇರುವುದು, ತಂತ್ರಜ್ಞಾನದ ಕ್ಷೇತ್ರದಲ್ಲಿರಲಿ ಅಥವಾ ಸಾಮಾಜಿಕ ವ್ಯವಸ್ಥೆಗಳಲ್ಲಿಯೇ ಇರಲಿ ಗುಣಮಟ್ಟದ ವಿಷಯದಲ್ಲಿ ಸುಲಭವಾಗಿ ರಾಜಿ ಮಾಡಿಕೊಳ್ಳಲು ಸಿದ್ಧವಾಗಿರುವ ಅತಿ ಸಹನಶೀಲವಾದ ದೈವವಾದ – ಅವುಗಳಿಂದಾಗಿ ನಮ್ಮ ಸಮಾಜ ಗತಕಾಲದ ಸ್ಮಾರಕಗಳ ಬಂಧನದಲ್ಲಿಯೇ ಮುಂದುವರಿಯುತ್ತಿದೆಯೆ ಹೊರತು ಭವಿಷ್ಯದ ತಂತ್ರಜ್ಞಾನದ ಸವಾಲುಗಳನ್ನು ಎದುರಿಸುವ ಸಾಮರ್ಥ್ಯವನ್ನು ಪಡೆದಿಲ್ಲ. ಆಧುನಿಕ ವಿಜ್ಞಾನದ ಪುನಶ್ಚೇತನವನ್ನು ಆರಂಭಿಸಿದ ಪಂಡಿತ ಜವಾಹರಲಾಲ ನೆಹರು ಅವರು ದೃಢವಾಗಿ ನಂಬಿದ್ದೇನೆಂದರೆ " ಹಸಿವು, ಬಡತನ, ನೈರ್ಮಲ್ಯದ ಕೊರತೆ, ಅನಕ್ಷರತೆ, ಮೂಢನಂಬಿಕೆ, ನಿರ್ಜೀವಗೊಳಿಸುವ ಸಂಪ್ರದಾಯ ಹಾಗೂ ಕಟ್ಟಳೆಗಳು, ಅಪಾರವಾದ ಸಂಪನ್ಮೂಲಗಳು ಹಾಳು ಬೀಳುತ್ತಿರುವುದು. ಅಲ್ಲದೇ ನಮ್ಮದು ಆಹಾರಕ್ಕೆ ಗತಿಯಿಲ್ಲದ ಜನರು ಬದುಕುವ ಒಂದು ಸಂಪದ್ಭರಿತ ದೇಶವಾಗಿರುವದು ವಿಪರ್ಯಾಸ – ಇಂಥ ಸಮಸ್ಯೆಗಳನ್ನು ಕೇವಲ ವಿಜ್ಞಾನ ಮಾತ್ರ ಬಗೆಹರಿಸಬಲ್ಲದು". ಆದರೆ ಈಗಲೂ ಕೂಡ ಬಾಹ್ಯಾಕಾಶ, ಅಣುಶಕ್ತಿ ಮತ್ತು ಕೃಷಿ ಇಂಥ ಕೆಲವು ಕ್ಷೇತ್ರಗಳನ್ನು ಹೊರತುಪಡಿಸಿದರೆ ಇತರ ಕ್ಷೇತ್ರಗಳಲ್ಲಿ ನಮ್ಮ ಸಮಾಜದ ಸಾಮಾನ್ಯ ಬದುಕಿನ ಮೇಲೆ ವಿಜ್ಞಾನ ಹಾಗೂ ತಂತ್ರಜ್ಞಾನದ ಅನ್ವಯಿಕೆಯ ಪರಿಣಾಮ ಕಂಡುಬರುತ್ತಿಲ್ಲ.

ಸಮಾಜದ ಸಗಾತ್ರ ಬದಲಾವಣೆ ಮಾತ್ರವಲ್ಲ, ಅದರ ಅಸ್ತಿತ್ವವು ಕೂಡ ವಿಜ್ಞಾನ ಹಾಗೂ ತಂತ್ರಜ್ಞಾನದಿಂದ ಗರಿಷ್ಠ ಬಳಕೆಯನ್ನು ಅವಲಂಬಿಸಿದೆಯೆನ್ನುವುದನ್ನು ಒಪ್ಪುವುದಾದರೆ ನಮ್ಮೆಲ್ಲರ ಮುಂದಿರುವ ಸವಾಲೆಂದರೆ ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಿಕೊಂಡು ಅದು ನಮ್ಮ ಸಮಾಜದ ಸಾಂಸ್ಕೃತಿಕ ಚೌಕಟ್ಟಿನೊಳಗೆ ಬೆರೆತುಕೊಳ್ಳುವಂತೆ ಶ್ರದ್ಧೆಯಿಂದ ದುಡಿಯುವುದಾಗಿದೆ. ಕಾಲದ ಗತಿಶೀಲತೆಗೆ ಪರ್ಯಾಯವಾಗಿ ವಿಜ್ಞಾನ ಮಾಡಿದ ತೀವ್ರ ಪ್ರಗತಿಯಿಂದಾಗಿ ಹುಟ್ಟಿಕೊಂಡ ಸವಾಲುಗಳನ್ನು ಗುರುತಿಸಿದಾಗ ಮಾತ್ರ ವಿಜ್ಞಾನ ಹಾಗೂ ತಂತ್ರಜ್ಞಾನದ ಅನ್ವಯಿಕೆಯಿಂದ ದೊರೆಯುವ ಪ್ರಯೋಜನಗಳ ವಾಸ್ತವಿಕ ಅರಿವು ನಮಗೆ ಬರುತ್ತದೆ. ತಂತ್ರಜ್ಞಾನವು ಬಹಳ ತ್ವರಿತವಾಗಿ ಬಳಕೆಯಲ್ಲಿರುವುದರಿಂದ ಸಮಾಜವು ಸತತವಾಗಿ ಬೌದ್ಧಿಕ ಹೊಂದಾಣಿಕೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಇಲ್ಲದೇ ಇದ್ದಲ್ಲಿ ಅಂಥ ತಂತ್ರಜ್ಞಾನ ಶಕ್ತಿಹೀನ ಪಳೆಯುಳಿಕೆಯಾಗಿ ಬಿಡುತ್ತದೆ. ಆರ್ಥಿಕ ಹಾಗೂ ವೈಜ್ಞಾನಿಕ ಜಾಗತೀಕರಣವನ್ನು ಆಧರಿಸಿ ದೊಡ್ಡ ಹೆಜ್ಜೆಗಳನ್ನು ತಂತ್ರಜ್ಞಾನ ಕ್ಷೇತ್ರದಲ್ಲಿ ಇಡಲು ನಾವು ಸಿದ್ಧವಾಗಿರದಿದ್ದಲ್ಲಿ ಸದ್ಯದ ಸ್ಥಿತಿಯನ್ನು ಬದಲಾಯಿಸುವ ನಮ್ಮ ಪ್ರಯತ್ನದಲ್ಲಿ ನಾವು ಸೋಲುವುದು ಖಂಡಿತ.

## ೬.೧ : ಭಾರತದ ಸನ್ನಿವೇಶ

ಅತಿಯಾದ ರಾಜಕೀಯ ಅವಕಾಶವಾದಿತ್ವದ ಇಂದಿನ ಸನ್ನಿವೇಶದಲ್ಲಿ ಸಾಮಾಜಿಕ ನ್ಯಾಯದ ಹೆಸರಿನಲ್ಲಿ ಅಲ್ಪಾವಧಿ ವೈಯಕ್ತಿಕ ಲಾಭಗಳನ್ನು ಮಾತ್ರ ಮನಸ್ಸಿನಲ್ಲಿ ಇಟ್ಟುಕೊಂಡು ಅಷ್ಟೇನೂ ಪ್ರಯೋಜನವಿಲ್ಲದ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತದೆ. ಇದರಿಂದಾಗಿ ಜೀವಂತ ವ್ಯಕ್ತಿಗಳನ್ನು ಗೌಣಗೊಳಿಸಲಾಗುತ್ತದೆ ಅಥವಾ ಕಡೆಗಣಿಸಲಾಗುತ್ತಿದೆ. ನಮ್ಮಲ್ಲಿರುವ ಸೀಮಿತವಾದ ಸಂಪನ್ಮೂಲಗಳನ್ನು ದೇಶದ ಸಂಪತ್ತನ್ನು ನಿಜವಾಗಿ ಅಭಿವೃದ್ಧಿಗೊಳಿಸಬಲ್ಲ ಶಿಕ್ಷಣಕ್ಕಾಗಿ ವೈಜ್ಞಾನಿಕ ತಾಂತ್ರಿಕ ಪ್ರಗತಿಗಾಗಿ ವಿನಿಯೋಗಿಸುವ ಬದಲು ನಮ್ಮ ದುಂದುಗಾರ ಸಮಾಜ ನಿರುಪಯೋಗಿ ಧಾರ್ಮಿಕ ಸಂಪ್ರದಾಯಗಳ ಆಚರಣೆಯಲ್ಲಿ ಅವನ್ನು ವ್ಯಯ ಮಾಡುತ್ತದೆ; ಬದುಕಿರುವ ಹಸಿದ ಹೊಟ್ಟೆಗಳ ಬಗ್ಗೆ ಕಾಳಜಿ ತೋರಿಸುವ ಬದಲಾಗಿ ಸತ್ತವರಿಗೆ ದೊಡ್ಡ ಸ್ಮಾರಕಗಳನ್ನು ಕಟ್ಟಿಸುವುದರಲ್ಲಿ ಧನ್ಯತೆ ಕಾಣುತ್ತದೆ. ವರ್ತಮಾನದ ಬದಲಾಗಿ ಭೂತಕಾಲದ ಬಗ್ಗೆ ಮಾತ್ರ ಮಾತನಾಡುವ ದೇಶ ನಮ್ಮದಾಗಿದೆ. ಎಲ್ಲ ವಿಷಯಗಳ ಬಗ್ಗೆ ನೈತಿಕತೆಯ ಹುಸಿ ಧೋರಣೆಯನ್ನು ತೋರುತ್ತಲೇ ವಾಸ್ತವದಲ್ಲಿ ಅನೈತಿಕ ಚಟುವಟಿಕೆಗಳಲ್ಲಿ ನಾವು ತೊಡಗಿರುತ್ತೇವೆ. ಆದರೆ ನಮ್ಮ ಸಾಮಾಜಿಕ - ರಾಜಕೀಯ ವ್ಯವಸ್ಥೆಯಲ್ಲಿ ಅಪರಾಧಿ ಚಟುವಟಿಕೆಗಳಿಗೆ ಇಂಬು ಮಾಡಿಕೊಡುತ್ತೇವೆ. ನಮ್ಮ ಅತ್ಯಂತ ಅಮೂಲ್ಯವಾದ ಮಾನವೀಯ ಸಂಪನ್ಮೂಲಗಳನ್ನು ಬೆಳೆಸುವ ಪ್ರಜ್ಞಾಪೂರ್ವಕ ಪ್ರಯತ್ನವನ್ನು ನಾವು ಮಾಡಿ ಪ್ರತಿಭೆ, ಸ್ವಂತಿಕೆ, ಸ್ವತಂತ್ರ ಚಿಂತನೆಗಳನ್ನು ಬೆಳೆಸುವ ಪ್ರಜ್ಞಾಪೂರ್ವಕ ಪ್ರಯತ್ನವನ್ನು ನಾವು ಮಾಡಿ ಪ್ರತಿಭೆ, ಸ್ವಂತಿಕೆ, ಸ್ವತಂತ್ರ ಚಿಂತನೆಗಳನ್ನು ಅರಳಿಸಬಲ್ಲಂಥ ಆರೋಗ್ಯಕರವಾದ ವಾತಾವರಣವನ್ನು ಸೃಷ್ಟಿಸುವವರೆಗೆ ವಿಜ್ಞಾನಿಗಳ ಪ್ರತಿಭಾ ಪಲಾಯನ, ಅಸಂಖ್ಯಾತ ಶಿಕ್ಷಿತ ಜನರ ನಿರುದ್ಯೋಗ ಇವೇ ಮುಂತಾದ ಭೀಕರ ಸಮಸ್ಯೆಗಳು ನಮ್ಮನ್ನು ಕಾಡುತ್ತಲೇ ಇರುತ್ತವೆ.

ಇಂಥ ಎಲ್ಲಾ ಬಿಕ್ಕಟ್ಟುಗಳ ಮಧ್ಯೆಯೂ ವಿಜ್ಞಾನ ಹಾಗೂ ತಂತ್ರಜ್ಞಾನದಂಥ ಕೆಲವು ಆಯ್ದ ಕ್ಷೇತ್ರಗಳಲ್ಲಿ ಕಳೆದ ಐದು ದಶಕಗಳಲ್ಲಿ ಸಾಧಿಸಲಾದ ಪ್ರಗತಿಯಿಂದ ನಮ್ಮ ದೇಶ ಗಮನಾರ್ಹವಾದ ಸಾಧನೆಯನ್ನು ಮಾಡಿದೆಯೆನ್ನುವುದನ್ನು ಅಲ್ಲಗಳೆಯಲಾಗದು. ಇದರ ಬೆಂಬಲವಿಲ್ಲದಿದ್ದರೆ ಹೆಚ್ಚು ಕಡಿಮೆ ಸ್ವಾವಲಂಬನದ ಸ್ಥಿತಿಯನ್ನು ನಾವು ತಲುಪುವುದು ಸಾಧ್ಯವಾಗುತ್ತಿರಲಿಲ್ಲ. ಹಸಿರು ಕ್ರಾಂತಿಯಿಂದಾಗಿ ಐವತ್ತರ ದಶಕದಲ್ಲಿ ೫೫ ಮಿಲಿಯ ಟನ್ ಮಾತ್ರವಾಗಿದ್ದ ವಾರ್ಷಿಕ ಕೃಷಿ ಉತ್ಪಾದನೆ ೧೮೦ ಮಿಲಿಯ ಟನ್‌ಗಳನ್ನು ತಲುಪಿದೆ. ವ್ಯವಸ್ಥಿತವಾದ ವಿದ್ಯುಚ್ಛಕ್ತಿ ಉತ್ಪಾದನೆ, ಕಚ್ಚಾ ತೈಲದ ಉತ್ಪನ್ನ, ಸರಕುಗಳ ಮತ್ತು ಔದ್ಯೋಗಿಕ ಸರಕುಗಳು ಉತ್ಪಾದನೆ ಮತ್ತು ಒಟ್ಟು ರಾಷ್ಟ್ರೀಯ ಉತ್ಪನ್ನ ಈ ಆರ್ಥಿಕ ಸೂಚ್ಯಾಂಕಗಳಲ್ಲಿ ಕಳೆದ ನಾಲ್ಕು ದಶಕಗಳಲ್ಲಿ ಹತ್ತು ಪಟ್ಟಿನ ಹೆಚ್ಚಳವಾಗಿದೆ ಮತ್ತು ಈ ಹೆಚ್ಚಳಕ್ಕೆ ದೇಶದ ಪ್ರಧಾನ ಧಾರೆಯ ಚಟುವಟಿಕೆಗಳಲ್ಲಿ ನಾವು ಮಾಡಿದ ವೈಜ್ಞಾನಿಕ

ಹೂಡುವಿಕೆಯೇ ಕಾರಣವಾಗಿವೆ. ದೇಶದ ಅತ್ಯಂತ ದೂರದ ಮೂಲೆಯಲ್ಲಿರುವ ಸ್ಥಳಗಳೊಂದಿಗೆ ಸಂಪರ್ಕ ಸಾಧ್ಯವಾಗುವಂತೆ ಮಾಡಿದ ಸಂವಹನಾ ಕ್ರಾಂತಿಯನ್ನು ತಂದಿದ್ದು ಮಾತ್ರವಲ್ಲ ತುರ್ತು ಸಂವಹನೆ, ನೈಸರ್ಗಿಕ ಅವಘಡಗಳ ಬಗ್ಗೆ ಮುನ್ಸೂಚನೆ ಕೊಡುವುದು, ಮಾಹಿತಿ ಪ್ರಸರಣ ಇವುಗಳನ್ನು ಸಾಧ್ಯ ಮಾಡಿದ್ದು ನಮ್ಮ ಬಾಹ್ಯಾಕಾಶ ಉಪಗ್ರಹಗಳು. ಸೂಕ್ತವಾದ ಕಾಲಾವಧಿಯಲ್ಲಿ ಅನಕ್ಷರತೆಯನ್ನು ನಿವಾರಿಸುವ ಸಾಮರ್ಥ್ಯವುಳ್ಳ ತೆರಹಿನ ಶಿಕ್ಷಣವನ್ನು ಪ್ರಬಲವಾದ ವಾಕ್-ದೃಶ್ಯ ಮಾಧ್ಯಮವಾದ ದೂರದರ್ಶನದ ಮೂಲಕ ಕೊಡಬಲ್ಲ, ಸಾಧ್ಯತೆಯನ್ನು ನಮ್ಮ ಉಪಗ್ರಹ ದೂರದರ್ಶನ ನಮಗೆ ತಂದುಕೊಟ್ಟಿದೆ. ಅರಣ್ಯ ಕೃಷಿ, ಮಣ್ಣು ಅಂತರ್ಜಲ ಮತ್ತು ಜಲ ಸಂಪನ್ಮೂಲಗಳು, ಬಂಜರು ಭೂಮಿ, ಖನಿಜಗಳು, ಪರ್ಯಾವರಣ, ನಗರಾಭಿವೃದ್ಧಿ, ಸಾಗರ ಸಂಪನ್ಮೂಲಗಳು, ಹವಾಮಾನ, ನೆರೆ ಮತ್ತು ಕ್ಷಾಮದ ವಿಕೋಪಗಳು ಇವುಗಳ ನಿರ್ವಹಣೆಯಲ್ಲಿ ದೂರ ಸಂವೇದಿ ಉಪಗ್ರಹಗಳನ್ನು ವ್ಯಾಪಕವಾಗಿ ಬಳಸಲಾಗುತ್ತಿದೆ.

## ೬.೧.೧ : ಭವಿಷ್ಯದ ಸವಾಲುಗಳು

ಅತ್ಯಂತ ಆಶಾದಾಯಕವಾದ ಅಂದಾಜಿನ ಪ್ರಕಾರ ಕೂಡ ೨೦೦೦ ಇಸ್ವಿಯ ಹೊತ್ತಿಗೆ ಭಾರತದ ಜನಸಂಖ್ಯೆ ೧ ಶತಕೋಟಿಯನ್ನು ದಾಟಿ ೨೦೫೦ ನೇ ಇಸ್ವಿಯ ಹೊತ್ತಿಗೆ ೧.೮ ಶತಕೋಟಿಗೆ ಸ್ಥಿರಗೊಳ್ಳುತ್ತದೆ. ಇದರಿಂದಾಗಿ ನಮ್ಮ ಆಹಾರ ಧಾನ್ಯದ ಉತ್ಪಾದನೆಯನ್ನು ಕೊನೇಪಕ್ಷ ದ್ವಿಗುಣಗೊಳಿಸುವ ಮೂಲಕ ಭವಿಷ್ಯದ ತಲೆಮಾರುಗಳ ಕನಿಷ್ಟ ಆವಶ್ಯಕತೆಯನ್ನು ಪೂರೈಸಬೇಕಾಗುತ್ತದೆ. ತಲಾ ಭೂಹಿಡುವಳಿ ಕೇವಲ ೦.೦೭ ಹೆಕ್ಟೇರು ಎನ್ನುವುದನ್ನು ಗಮನಿಸಿದರೆ ಇದು ಭಗೀರಥದ ಪ್ರಯತ್ನವೇ ಸರಿ. ನಮ್ಮ ಅರಣ್ಯ ನೀತಿ ಗೊತ್ತುವಳಿಯಲ್ಲಿ ಅತ್ಯುತ್ಸಾಹದಿಂದ ಘೋಷಣೆ ಮಾಡಿದ ಪ್ರತಿಶತ ೩೩ ರಷ್ಟು ಅರಣ್ಯ ಆವರಣದ ಉದ್ದೇಶಿತ ಗುರಿಗೆ ವ್ಯತಿರಿಕ್ತವಾಗಿ ಇಂದು ವ್ಯಾಪಕವಾದ ಅರಣ್ಯ ವಿನಾಶದಿಂದ ಒಟ್ಟು ಭೌಗೋಳಿಕ ಕ್ಷೇತ್ರದ ಪ್ರತಿಶತ ೧೧ ರಷ್ಟು ಮಾತ್ರ ಅರಣ್ಯ ಆವರಣವನ್ನು ಹೊಂದಿದೆ. ನಮ್ಮ ದೇಶದ ಪ್ರಮುಖ ನದಿಗಳು ಅತ್ಯಂತ ಕಲುಷಿತವಾದ ಮಡ್ಡಿಯ ವಾಹಕಗಳಾಗಿವೆ. ಪವಿತ್ರ ಗಂಗಾ ಮತ್ತು ಬ್ರಹ್ಮಪುತ್ರ ನದಿಗಳೇ ಜಗತ್ತಿನ ಉಳಿದ ಎಲ್ಲಾ ನದಿಗಳ ಒಟ್ಟು ಮಡ್ಡಿಯ ಪ್ರತಿಶತ ೨೦ ರಷ್ಟು ಮಡ್ಡಿಯನ್ನು ಹೊಂದಿದೆ. ಹಸಿರು ಕ್ರಾಂತಿಯ ನಂತರವೂ ದೇಶದ ಕೃಷಿ ಉತ್ಪಾದನಾ ಸಾಮರ್ಥ್ಯ ಪ್ರತಿ ಹೆಕ್ಟೇರಿಗೆ ೧.೬ ಟನ್ ಮಾತ್ರವಾಗಿದ್ದು, ಇದು ವಿಶ್ವದ ಸರಾಸರಿಯ ಹೆಕ್ಟೇರಿಗೆ ೨.೬ ಟನ್‌ಗಳ ಪ್ರಮಾಣಕ್ಕಿಂತ ಬಹಳ ಕಡಿಮೆಯಾಗಿದೆ. ವಿಶ್ವದಲ್ಲಿ ಅತ್ಯುತ್ತಮ ಪ್ರಮಾಣ ಹೆಕ್ಟೇರಿಗೆ ೫ ಟನ್ನುಗಳಾಗಿದೆ. ಮೇಲ್ ಮಣ್ಣು ಮತ್ತು ಜಲಸಂಪನ್ಮೂಲಗಳ ನಿರ್ವಹಣೆ ಅದೆಷ್ಟು ಶೋಚನೀಯವಾಗಿದೆಯೆಂದರೆ, ಒಟ್ಟು ಸಾಗುವಳಿ ಭೂಮಿಯ ಕಾಲು ಭಾಗದಷ್ಟು ಸಮಸ್ಯಾತ್ಮಕ ಭೂಮಿಯಾಗಿ ಬಿದ್ದಿದ್ದು, ಅಷ್ಟೇ ಪ್ರಮಾಣದ ಭೂಮಿ ಕನಿಷ್ಟ ಉತ್ಪಾದನಾ ಸಾಮರ್ಥ್ಯ

ಹೊಂದಿದೆ. ಹಸಿರು ಕ್ರಾಂತಿಯ ಪ್ರತಿಕೂಲ ಪರಿಣಾಮವೆಂದರೆ ಜವುಗು ಹಿಡಿಯುವಿಕೆ. ಅಸಮರ್ಪಕ ನೀರ್ಗಾಲುವೆ ವ್ಯವಸ್ಥೆ ಮತ್ತು ರಾಸಾಯನಿಕ ಗೊಬ್ಬರಗಳ ಅತಿಶಯ ಬಳಕೆಯಿಂದಾಗಿ ಅದು ಒಂದು ಕಾಲದಲ್ಲಿ ಅತ್ಯಂತ ಹೆಚ್ಚಿನ ಉತ್ಪಾದನಾ ಸಾಮರ್ಥ್ಯವುಳ್ಳ ಪ್ರದೇಶಗಳು ಇಂದು ಲವಣಯುಕ್ತ ಮರುಭೂಮಿಗಳಾಗಿ ಬಿಟ್ಟಿವೆ. ಇವೆಲ್ಲಾ ಅಂಶಗಳಿಗೆ ಮಿಗಿಲಾಗಿ ಮಾನವಜನ್ಯ ಚಟುವಟಿಕೆಗಳಿಂದಾಗಿ 'ಹಸಿರು ಮನೆ' ಸಮತೋಲನವು ಅಸ್ಥಿರತೆಗೊಂಡಿದ್ದರ ಪರಿಣಾಮವಾಗಿ ವಿಶ್ವದ ಉಷ್ಣಾಂಶದ ಏರಿಕೆಯ ಅಪಾಯವಿದೆ. ಈ ಅಪಾಯದಿಂದಾಗಿ ಈ ಗೃಹದ ಮೇಲಿನ ಇಡೀ ಜೈವಿಕ ಜಗತ್ತಿನ ಮೇಲೇನೇ ದುಷ್ಪರಿಣಾಮವಾಗುವ ಸಾಧ್ಯತೆಯಿದೆ. ಜನಸಂಖ್ಯೆಯ ಸ್ಫೋಟದಿಂದಾಗಿ ಮತ್ತು ಭೂಮಿ ಸಂಪನ್ಮೂಲದ ಕೊರತೆಯಿಂದಾಗಿ ಬೃಹತ್ ಪ್ರಮಾಣದ ನಗರೀಕರಣ ಅನಿವಾರ್ಯವಾಗಿ ಬಿಟ್ಟು ಈಗಾಗಲೇ ಕಲುಷಿತವಾದ ನಮ್ಮ ನಗರಗಳು ಬೃಹತ್ ಕೊಳೆಗೇರಿಗಳಾಗುತ್ತವೆ. ದೊಡ್ಡ ಪ್ರಮಾಣದ ಶಿಕ್ಷಣ ಪ್ರಸರಣ, ಅದರಲ್ಲೂ ಮಹಿಳಾ ಅನಕ್ಷರತೆಯ ನಿರ್ಮೂಲನ ಇಂದಿನ ಬಹುದೊಡ್ಡ ಸವಾಲಾಗಿದೆ. ಇವುಗಳಿಲ್ಲದಿದ್ದರೆ ಜನಸಂಖ್ಯೆ ನಿಯಂತ್ರಣ ಮತ್ತು ಪೌಷ್ಟಿಕ ಭದ್ರತೆ ಸಾಧ್ಯವಾಗುವುದಿಲ್ಲ. ರಿಯೋ - ಡಿ ಜನಿರೋಧ ಐತಿಹಾಸಿಕ ವಿಶ್ವ ಶಿಖರ ಸಮ್ಮೇಳನದಲ್ಲಿ ಸುಂದರವಾಗಿ ಹೇಳಲಾದ ಹಾಗೆ " ಇಂದು ಮನುಕುಲ ಚರಿತ್ರೆಯ ನಿರ್ಣಾಯಕ ಗಳಿಗೆಯೊಂದರಲ್ಲಿ ನಿಂತಿದೆ. ನಮ್ಮನ್ನು ಎದುರಿಸುತ್ತಿರುವ ಸಮಸ್ಯೆಗಳೆಂದರೆ ದೇಶ ದೇಶಗಳ ಮಧ್ಯೆ, ದೇಶದ ಒಳಗೆ ಅಂತರಗಳು ಶಾಶ್ವತಗೊಳ್ಳುತ್ತಿರುವುದು; ಬಡತನ, ಹಸಿವು, ಅನಾರೋಗ್ಯ ಹಾಗೂ ಅನಕ್ಷರತೆಗಳು ಉಲ್ಬಣಗೊಳ್ಳುತ್ತಿರುವುದು ಮತ್ತು ನಮ್ಮ ಅಭ್ಯುದಯಕ್ಕಾಗಿ ನಾವು ಅವಲಂಬಿಸುವ ಪರಿಸರ ವಲಯವು ನಿರಂತರವಾಗಿ ಹದಗೆಡುತ್ತಿರುವುದು ". ಆಹಾರ, ಆರ್ಥಿಕ ಹಾಗೂ ಆರೋಗ್ಯಗಳ ಸುಭದ್ರತೆಯನ್ನು ನಾವು ಪಡೆಯುವುದಕ್ಕೆ ಒಂದೇ ವಿಧಾನವೆಂದರೆ ವಿಜ್ಞಾನ ಹಾಗೂ ತಂತ್ರಜ್ಞಾನಗಳಿಗೆ ಮೊರೆ ಹೋಗುವುದು ಬಾಹ್ಯಾಕಾಶ ಹಾಗೂ ಜೈವಿಕ ತಂತ್ರಜ್ಞಾನದ ಹೂಡುವಿಕೆಯಿಂದ ನವೀನ ಹಸಿರುಕ್ರಾಂತಿಯನ್ನು ಆರಂಭಿಸುವುದು. ಉಪಗ್ರಹ ದೂರಶಿಕ್ಷಣದ ಕಾರ್ಯಕ್ರಮಗಳಿಂದ ಗ್ರಾಮೀಣ ಅನಕ್ಷರತೆಯನ್ನು ನಿರ್ಮೂಲಗೊಳಿಸುವುದು. ಇವುಗಳಿಂದ ನಮ್ಮ ಗುರಿಯನ್ನು ಸಾಧಿಸಬಹುದೇ ಹೊರತು ತತ್ವಜ್ಞಾನದ ನೀತಿ ಬೋಧನೆಯಿಂದ, ಜನಪ್ರಿಯ ಘೋಷಣೆಗಳಿಂದ ಅಥವಾ ಕುರುಡು ಆಶಾವಾದದಿಂದಲ್ಲ. ಹೀಗೆ ಮಾಡಬೇಕೆಂದರೆ ಇಂದಿನ ಮೂಲಭೂತ ಅವಶ್ಯಕತೆಗಳನ್ನು ಮಾತ್ರವಲ್ಲ ಭವಿಷ್ಯದ ತಲೆಮಾರುಗಳ ನಿರೀಕ್ಷಿತ ಆವಶ್ಯಕತೆಗಳನ್ನು ಪೂರೈಸಬಲ್ಲ ಸಮಗ್ರವಾಗಿ ನಿರ್ವಹಿಸಬಹುದಾದ ಹೊಸ ಅಭಿವೃದ್ಧಿ ನೀತಿಯ ಅನುಷ್ಠಾನ ಅತ್ಯಂತ ಅವಶ್ಯಕವಾಗಿದೆ. ಇದು ಪರಿಸರಪರವಾದ ವೈಜ್ಞಾನಿಕ ದೃಷ್ಟಿಕೋನದ ಸ್ವೀಕಾರದಿಂದ ಸಾಧ್ಯವಾಗಬೇಕು ಆಗ ಮಾತ್ರ ಪ್ರಾಣಿಕುಲದ ನಾಶವನ್ನು ಮಾಡದೇ ತ್ವರಿತ ಪ್ರಗತಿಯನ್ನು ಸಾಧಿಸಬಹುದು.

## ೬.೧.೨ : ಶಿಕ್ಷಣ, ಸಂಶೋಧನೆ, ಅಭಿವೃದ್ಧಿ ಮತ್ತು ಕೈಗಾರಿಕೆ

ಆಧುನಿಕ ತಂತ್ರಜ್ಞಾನದಲ್ಲಿನ ಬೆಳವಣಿಗೆಗಳ ಪ್ರಮುಖ ಲಕ್ಷಣವೆಂದರೆ ವಿವಿಧ ಜ್ಞಾನಶಾಖೆಗಳ ಇಕ್ಕಟ್ಟಿನ ಗಡಿರೇಖೆಗಳನ್ನು ದಾಟಿಕೊಂಡು ಹೋಗುವ ಅಂತರ್ ಶಾಸ್ತ್ರೀಯ ಸ್ವಭಾವ ೧೫ ಕೋಟಿ ಶಾಲಾ ಮಕ್ಕಳಿಗೆ ಶಿಕ್ಷಣ ಕೊಡುತ್ತಿರುವ ನಮ್ಮ ದೇಶದ ಶಾಲೆಗಳಲ್ಲಿ ಪ್ರತಿಶತ ಐವತ್ತು ಶಾಲೆಗಳಲ್ಲಿ ಗ್ರಂಥಾಲಯ, ಪ್ರಯೋಗಶಾಲೆಯ ಸೌಲಭ್ಯಗಳ ಮಾತಿರಲಿ ಕರಿಹಲಗೆಗಳೂ ಇಲ್ಲ. ಕಳೆದ ಕೆಲ ವರ್ಷಗಳಲ್ಲಿ ವಿಜ್ಞಾನ ವಿಷಯಗಳನ್ನು ಆಯ್ಕೆ ಮಾಡಿಕೊಳ್ಳುವವರ ಸಂಖ್ಯೆ ಪ್ರತಿಶತ ೩೦ ರಿಂದ ೨೦ ಕ್ಕೂ ಇಳಿದಿದೆ. ನಮ್ಮ ದೇಶದ ಒಟ್ಟು ಉತ್ಪಾದನೆಯ ಪ್ರತಿಶತ ೧ ಕ್ಕಿಂತ ಕಡಿಮೆಯಷ್ಟು ಮೊತ್ತವನ್ನು ಮಾತ್ರ ವೈಜ್ಞಾನಿಕ ಸಂಶೋಧನೆಗಾಗಿ ಮೀಸಲಿಡಲಾಗುತ್ತಿದೆ. ಇದು ಭವಿಷ್ಯದ ತಂತ್ರಜ್ಞಾನಬದ್ಧ ಸಮಾಜದ ಸೃಷ್ಟಿಗೆ ಪೂರಕವಂತೂ ಖಂಡಿತ ಅಲ್ಲ. ನಮ್ಮ ದೇಶದ ಇಂದಿನ ಶಿಕ್ಷಣ ಪದ್ಧತಿ ಸಮಕಾಲೀನ ಪ್ರಸ್ತುತತೆ ಇಲ್ಲದ ಪಠ್ಯಕ್ರಮಗಳ ಮತ್ತು ಜಡವಾದ ವಿಭಾಗೀಕರಣದ ಹೊರೆಯಿಂದ ಬಳಲುತ್ತಿದೆ. ಹೀಗಾಗಿ ಅದು ನಿಸರ್ಗದ ಅಂತರ್-ಶಾಸ್ತ್ರೀಯವೆನ್ನಬಹುದಾದ ಬಹುಮುಖ್ಯತೆಯನ್ನು ಅರ್ಥ ಮಾಡಿಕೊಳ್ಳುವವರಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಮೂರ್ತಗೊಂಡಿರುವ ಅವಿನಾಭಾವ ಸಂಬಂಧಗಳನ್ನು ಗುರುತಿಸಬಲ್ಲ ಆಸಕ್ತ ವಿದ್ಯಾರ್ಥಿಗಳನ್ನು ಸೃಷ್ಟಿಸುವಲ್ಲಿ ಅಸಮರ್ಥವಾಗಿದೆ. "ಬೆಳಕು ಸ್ವಾತಂತ್ರ್ಯ ಮತ್ತು ಜ್ಞಾನಾರ್ಜನೆಯ" ಸ್ಥಾನಗಳಾಗಬೇಕಾಗಿದ್ದ ನಮ್ಮ ವಿಶ್ವವಿದ್ಯಾಲಯಗಳು ಇಂದು ದ್ವಿತೀಯ ದರ್ಜೆಯ ಜ್ಞಾನವನ್ನು ನಿಗದಿತ ಪ್ರಮಾಣದಲ್ಲಿ ಕೊಟ್ಟು ಇದನ್ನು ಪ್ರಾಚೀನವಾದ ಪರೀಕ್ಷಾ ಪದ್ಧತಿಯಲ್ಲಿ ಪುನರುಚ್ಚಾರ ಮಾಡಿಸುವ ಕಳಪೆ ಮಟ್ಟದ ಉತ್ಪಾದನಾ ಘಟಕಗಳಾಗಿಬಿಟ್ಟಿವೆ. ವಿಜ್ಞಾನದ ಅಂತಃಸತ್ವವನ್ನು ಮತ್ತು ಉತ್ತೇಜತೆಯನ್ನು ಮನದಟ್ಟು ಮಾಡಿಕೊಡುವ ರೀತಿಯಲ್ಲಿ ನಮ್ಮ ಪಠ್ಯಕ್ರಮಗಳನ್ನು ನಾವು ಬದಲಾಯಿಸಿಕೊಳ್ಳದಿದ್ದಲ್ಲಿ ಮತ್ತು ಶ್ರೇಷ್ಠತೆಯ ಅತ್ಯುನ್ನತ ಮಟ್ಟವನ್ನು ಒತ್ತಾಯಿಸದಿದ್ದಲ್ಲಿ ತ್ವರಿತವಾಗಿ ಬದಲಾಗುತ್ತಿರುವ ಜಗತ್ತಿನಲ್ಲಿ ವಿಜ್ಞಾನ ನಿರ್ವಹಿಸಬೇಕಾದ ಕಾರ್ಯದಲ್ಲಿ ಭಾಗಿಗಳಾಗಬಲ್ಲ ವಿಜ್ಞಾನಿಗಳನ್ನು ತಂತ್ರಜ್ಞರನ್ನು ಸೃಷ್ಟಿಸುವ ನಮ್ಮ ಗುರಿಯನ್ನು ಸಾಧಿಸಲಾರೆವು. ಮಹಾಕವಿ ಕುವೆಂಪು ಅವರ ಪ್ರಸಿದ್ಧ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

> ವಿಶ್ವವಿದ್ಯಾಲಯಗಳು ಆಣೆಕಟ್ಟುಗಳಂತಲ್ಲ; ಉಕ್ಕಿನ ಅಥವಾ
> ಹಂಚಿನ ಕಾರ್ಖಾನೆಗಳಂತಲ್ಲ; ಅವುಗಳಿಂದ ಹೊರಬೀಳುವ
> ವಸ್ತುಗಳು ಸಜೀವವಾದುವು, ಸಚೇತನವಾದುವು;
> ಒಂದೊಂದು ತನ್ನ ವಿಶಿಷ್ಟತೆಯಿಂದ ನಿರುಪಮವಾದುದು.

ಒಂದು ವಿಶ್ವವಿದ್ಯಾಲಯದ ಮೂಲಭೂತ ಜವಾಬ್ದಾರಿಯೆಂದರೆ ಸೃಷ್ಟಿಶೀಲತೆ ಹಾಗೂ ಸ್ವೋಪಜ್ಞ ವಿಚಾರಶೀಲತೆಯನ್ನು ಪ್ರೋತ್ಸಾಹಿಸುವುದು. ವಿದ್ಯಾರ್ಥಿಗಳು ವೈಚಾರಿಕವಾಗಿ ಯೋಚಿಸುವಂತೆ, ತರ್ಕಬದ್ಧವಾಗಿ

ಚಿಂತಿಸುವಂತೆ ಮತ್ತು ಹೊಸ ವಿಚಾರಗಳನ್ನು ಒಪ್ಪಿಕೊಳ್ಳಲು ಹೆದರದಂತೆ ತರಬೇತಿ ಮಾಡಬಲ್ಲ, ನಿಷ್ಠಾವಂತ ಶಿಕ್ಷಕರಿಂದ ಮಾತ್ರ ಇದು ಸಾಧ್ಯವಾಗಬಲ್ಲದು. ಜಾನ್ ರಸ್ಕಿನ್ ಅವರ ಮಾತಿನಲ್ಲಿ ಹೇಳುವುದಾದರೆ " ಜನರಿಗೆ ಗೊತ್ತಿಲ್ಲದಿದ್ದನ್ನು ಕಲಿಸುವುದು ಶಿಕ್ಷಣವಲ್ಲ, ಶಿಕ್ಷಣವೆಂದರೆ ಅವರು ಹೇಗೆ ವರ್ತಿಸುತ್ತಿಲ್ಲವೋ ಹಾಗೆ ವರ್ತಿಸುವಂತೆ ಕಲಿಸಿ ಕೊಡುವುದಾಗಿದೆ. ಯುವಜನರಿಗೆ ಅಕ್ಷರಗಳ ಆಕಾರಗಳನ್ನು ಮತ್ತು ಸಂಖ್ಯೆಗಳ ಚಮತ್ಕಾರವನ್ನು ಹೇಳಿಕೊಟ್ಟು ಪರಿವರ್ತಿಸಲಾಗುತ್ತದೆ. ಇದಕ್ಕೆ ತದ್ವಿರುದ್ಧವಾಗಿ ಶಿಕ್ಷಣವೆಂದರೆ ಅವರಿಗೆ ದೇಹ ಹಾಗೂ ಆತ್ಮಗಳ ಪರಿಪೂರ್ಣ ಬಳಕೆ ಹಾಗೂ ನಿಗ್ರಹಗಳಲ್ಲಿ ತರಬೇತಿ ಕೊಡುವುದಾಗಿದೆ. ಅದು ಕಷ್ಟಕರವಾದ, ನಿರಂತರವಾದ ಮತ್ತು ತ್ರಾಸದಾಯಕವಾದ ಕೆಲಸ; ಅದನ್ನು ಸಹಾನುಭೂತಿಯಿಂದ, ಎಚ್ಚರ ವಹಿಸುವುದರ ಮೂಲಕ, ತಿಳಿ ಹೇಳುವುದರ ಮೂಲಕ, ಮೆಚ್ಚುಗೆ ತೋರಿಸುವ ಮೂಲಕ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ನಾವೇ ಮಾದರಿಯಾಗುವ ಮೂಲಕ ಮಾಡಬೇಕಾಗುತ್ತದೆ. " ಕಳಪೆ ಗುಣಮಟ್ಟದ ಶಿಕ್ಷಣ ಪದ್ಧತಿ ಕಳಪೆತನವನ್ನು ಹೆಚ್ಚಿಸಬಲ್ಲದೇ ಹೊರತು ಶ್ರೇಷ್ಠತೆಯನ್ನು ಸೃಷ್ಟಿಸಲಾರದು.

ಉನ್ನತ ಮಟ್ಟದ ಸಂಶೋಧನೆ ಮತ್ತು ಅಭಿವೃದ್ಧಿಯ ಕೆಲಸದಲ್ಲಿ ತೊಡಗಿಕೊಂಡಿರುವ ಆಸಕ್ತ, ಶಿಕ್ಷಕರಿಂದ ಮಾತ್ರ ಉನ್ನತ ಶಿಕ್ಷಣ ರಂಗದಲ್ಲಿ ಶ್ರೇಷ್ಠತೆಯನ್ನು ಕಾಪಾಡುವುದು ಸಾಧ್ಯ. ಇದರರ್ಥವೆಂದರೆ ಉನ್ನತ ಶಿಕ್ಷಣವು ಮೂಲತಃ ಧೀಮಂತ ವರ್ಗದ ಪಕ್ಷಪಾತಿಯಾಗಿರುತ್ತದೆ. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಗಂಭೀರ ಲೋಪಗಳಿದ್ದರೂ ಕೂಡ ವಿಜ್ಞಾನ ಹಾಗೂ ತಂತ್ರಜ್ಞಾನದ ಕೆಲವು ಆಯ್ದ ಕ್ಷೇತ್ರಗಳಲ್ಲಿ ಆದ ಬೆಳವಣಿಗೆ ಗಮನಾರ್ಹವಾಗಿದೆ ಮಾತ್ರವಲ್ಲ ಜಾಗತಿಕ ಮಟ್ಟದ್ದಾಗಿದೆ ಎನ್ನುವುದನ್ನು ಗಮನಿಸಿದರೆ ನಮ್ಮ ಯುವ ಜನಾಂಗ ಯಾರಿಗೂ ಕಡಿಮೆಯಿಲ್ಲ ಮತ್ತು ನಮ್ಮ ದೇಶದ ಹಿರಿಮೆಯನ್ನು ಮತ್ತೆ ಗಳಿಸಿಕೊಡಬಲ್ಲದು ಎನ್ನುವುದು ಸ್ಪಷ್ಟವಾಗಿದೆ. ಆದರೆ ಇದು ಸಾಧ್ಯವಾಗುವುದು ನಾವು ಉತ್ಕೃಷ್ಟತೆಯನ್ನು ಬೆಂಬಲಿಸಿದರೆ ಗುಣಮಟ್ಟದ ಮೇಲೆ ಒತ್ತು ಕೊಟ್ಟರೆ ಮತ್ತು ನಮ್ಮ ವಿಶ್ವವಿದ್ಯಾಲಯಗಳಲ್ಲಿ ಸ್ವಂತಿಕೆಯನ್ನು ಪೋಷಿಸುವ ವಾತಾವರಣವನ್ನು ನಿರ್ಮಿಸಿದರೆ ಮಾತ್ರ ಹಾಗೆ ಅಂದಾಗ ಮಾತ್ರ ನಮ್ಮ ವಿಶ್ವವಿದ್ಯಾಲಯಗಳು ಅನುಕರಣೆಯ ಬದಲು ಆವಿಷ್ಕಾರ ಮಾಡುವವರನ್ನು ಕಡತವನ್ನು ನೆಚ್ಚಿಸಿಕೊಳ್ಳುವ ನೌಕರಶಾಹಿ ಮನೋಭಾವದವರ ಬದಲು ಯೋಜನೆಗಳನ್ನು ಕಲ್ಪಿಸಬಲ್ಲವರನ್ನು ಉದ್ಯೋಗಗಳನ್ನು ಅರಸುವ ಬದಲು ಉದ್ಯೋಗಗಳನ್ನು ಸೃಷ್ಟಿಸಬಲ್ಲವರನ್ನು, ಹಿಂಬಾಲಕರ ಬದಲಾಗಿ ಚಿಂತಕರನ್ನು ಸೃಷ್ಟಿ ಮಾಡಬಲ್ಲದು. ಹಾಗಾದಾಗ ಮಾತ್ರ ನಮ್ಮ ವಿಶ್ವವಿದ್ಯಾಲಯಗಳ ಸ್ನಾತಕರು ಫ್ರಾನ್ಸಿನ, ಶ್ರೇಷ್ಠ ಚಿಂತಕನಾದ ದೇಕಾರ್ತನ ಹೇಳಿಕೆಯನ್ನು ಆತ್ಮವಿಶ್ವಾಸದಿಂದ ಪುನರುಚ್ಚರಿಸಬಲ್ಲರು, " ನಾನು ಯೋಚಿಸುತ್ತೇನೆ ಆದ್ದರಿಂದ ನಾನು ಇದ್ದೇನೆ " ಅವರು ಮಾತ್ರ ನಮ್ಮ ಸಮಾಜವನ್ನು ಒಂದು ಜೀವಂತ ಚಲನಶೀಲ ಸಮಾಜವನ್ನಾಗಿ ಪರಿವರ್ತಿಸಬಲ್ಲರು.

ಈಗ ರೂಢಿಯಲ್ಲಿರುವಂತೆ ವಿದೇಶಗಳಿಂದ ಆಮದಾದ ತಂತ್ರಜ್ಞಾನದಿಂದ ಮಾತ್ರ ನಮ್ಮ ಕೈಗಾರಿಕೆಗಳು ಉಳಿಯಬಲ್ಲವು ಎಂದು ನಂಬಿರುವ ಸಿದ್ಧ ಸಂಸ್ಕೃತಿಯ ಬದಲಾಗಿ ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಯ ಕೆಲಸ ನಡೆಯದಿದ್ದರೆ ನಮ್ಮ ಕೈಗಾರಿಕೆಗಳು ಚೈತನ್ಯಪೂರ್ಣವೂ, ಸ್ವಾವಲಂಬಿಗಳೂ ಮತ್ತು ಪ್ರಗತಿಪರವೂ ಆಗುವುದು ಅಸಾಧ್ಯ. ಅಶಕ್ತ ಕೈಗಾರಿಕೆಗಳ ವಿವೇಚನಾರಹಿತ ಸಂರಕ್ಷಣೆ ಮತ್ತು ಬೆಂಬಲಗಳು ವಿತ್ತದ ಕೊರತೆಯನ್ನು ಹೆಚ್ಚಿಸುತ್ತವೆ. ಅಭಿವೃದ್ಧಿಯನ್ನು ಕುಂಠಿತಗೊಳಿಸುತ್ತವೆ. ಆಮದಾದ ತಂತ್ರಜ್ಞಾನದ ಮೇಲಿನ ನಿರಂತರ ಅವಲಂಬನೆಯನ್ನು ಹೆಚ್ಚಿಸುತ್ತವೆ. ಪ್ರಯೋಗಶೀಲತೆಯ ಸತ್ವವನ್ನು ನಾಶ ಮಾಡುತ್ತವೆ ಮತ್ತು ದೇಶದ ಆರ್ಥಿಕ ವ್ಯವಸ್ಥೆಯ ಮೇಲೆ ಹೊರೆಯಾಗುತ್ತವೆ. ಗ್ಯಾಟ್ ನಂತರ ಸಂದರ್ಭದಲ್ಲಿ ಕೈಗಾರಿಕೆಗಳು ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯಗಳು ಇವುಗಳ ಮಧ್ಯೆ ಜೈವಿಕ ಸಂಬಂಧ ಮತ್ತು ಚಲನಶೀಲವಾದ ಪಾಲುಗಾರಿಕೆಯನ್ನು ಸೃಷ್ಟಿಸದಿದ್ದಲ್ಲಿ ನಮ್ಮ ಕೈಗಾರಿಕೆಗಳು ಜಾಗತಿಕ ಅರ್ಥವ್ಯವಸ್ಥೆಯ ಮಾರುಕಟ್ಟೆಯಲ್ಲಿ ಬೆಲೆ ಮತ್ತು ಗುಣಮಟ್ಟ ಇವೆರಡರಲ್ಲೂ ಸ್ಪರ್ಧಿಸಲು ಅಸಾಧ್ಯವಾಗುತ್ತದೆ.

## ೬.೧.೩ : ತಂತ್ರಜ್ಞಾನ : ಪ್ರಾಬಲ್ಯದ ನಾಣ್ಯ

"ನಾವು ಈ ಜಗತ್ತನ್ನು ಆಶಾದಾಯಕವಾದ ಭವಿಷ್ಯದ ಕಡೆಗೆ ಕರೆದುಕೊಂಡು ಹೋಗಬೇಕಾದರೆ ಇಂದು ತಂತ್ರಜ್ಞಾನ ನಮ್ಮ ಗೃಹದ ವಾತಾವರಣದ ಅಂಗವಾಗಿದೆಯೆನ್ನುವುದು ಅರ್ಥಮಾಡಿಕೊಳ್ಳಬೇಕು. ಅದನ್ನು ವಾಯು ಮತ್ತು ನೀರಿನ ಹಾಗೆ ಮನುಷ್ಯಕುಲದ ಇತರರ ಜತೆಗೆ ಹಂಚಿಕೊಳ್ಳಬೇಕು" ಎನ್ನುವ ತಾತ್ವಿಕ ಹೇಳಿಕೆಗಳನ್ನು ಎಲ್ಲಾ ಬಗೆಯ ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ಘೋಷಿಸಲಾಗುತ್ತದೆ.[೧] ಆದರೆ ವಾಸ್ತವವಾಗಿ ನಾವು ನೋಡುತ್ತಿರುವುದೆಂದರೆ ಹಳೆಯ ವಸಾಹತುಶಾಹಿಯ ಅನುಷ್ಠಾನವನ್ನು ಮುಂದುವರಿದ ರಾಷ್ಟ್ರಗಳು ತಂತ್ರಜ್ಞಾನದ ನಿಯಂತ್ರಣವನ್ನು ಹೇರುವ ಚಾಣಾಕ್ಷತನದ, ವಿವೇಚನಾಶೂನ್ಯ ಮತ್ತು ಕ್ರೂರವಾದ ಯಜಮಾನಿಕೆಯ ತಾಂತ್ರಿಕ ವಸಾಹತುಶಾಹಿ ಇದಾಗಿದೆ. ಹಿಂದುಳಿದ ದೇಶಗಳ ಮೇಲಿನ ಸತತವಾದ ಶೋಷಣೆ ಹಾಗೂ ದಬ್ಬಾಳಿಕೆಯ ಅಸ್ತ್ರವಾಗಿ ವಿಜ್ಞಾನ ಹಾಗೂ ತಂತ್ರಜ್ಞಾನಗಳು ಬಳಕೆಯಾಗುತ್ತಿವೆ. ಈ ಅರ್ಥದಲ್ಲಿ ಅವು ಚಲಾವಣೆಯಲ್ಲಿರುವ ಪ್ರಭುತ್ವದ ಮಾಧ್ಯಮಗಳಾಗಿವೆ. ವಿಜ್ಞಾನ ಹಾಗೂ ತಂತ್ರಜ್ಞಾನಗಳು ಹೊಸ ಸಂಪತ್ತಿನ ಸೃಷ್ಟಿಯ ಸಾಧನಗಳಾಗಿವೆ. ಆದರೆ ನಾವು ನಡೆಯುವ ಪ್ರತಿಯೊಂದು ಯಶಸ್ಸಿನ ಜತೆಗೆ ಹೊರಗಡೆಯಿಂದ ತಾಂತ್ರಿಕ ಜ್ಞಾನವನ್ನು ಪಡೆಯುವುದು ಹೆಚ್ಚು ಕಷ್ಟಕರವಾಗುತ್ತದೆ; ಅಲ್ಲದೇ ನಾವು ಅಂತಾರಾಷ್ಟ್ರೀಯ ಮಾರುಕಟ್ಟೆಯ ಅಡಚಣೆಗಳಿಗೆ ಹಾಗೂ ಒತ್ತಡಗಳಿಗೆ ಹೆಚ್ಚು-ಹೆಚ್ಚಾಗಿ ಒಳಗಾಗುತ್ತೇವೆ ಎನ್ನುವುದನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಸಂಪೂರ್ಣ ಸ್ವಾವಲಂಬನೆಯ ನೆಲೆಯನ್ನು ಒದಗಿಸಬಲ್ಲ ವಿಜ್ಞಾನ ಹಾಗೂ ತಂತ್ರಜ್ಞಾನದ ಶ್ರೇಷ್ಠತೆಯ ಆಧಾರದ ಮೇಲೆ ಕಟ್ಟಿದಾಗ ಮಾತ್ರ ಈ ದೇಶ ಪ್ರಗತಿಯನ್ನು ಸಾಧಿಸಬಲ್ಲದು.

## ೬.೨. : ಸೂಚಿಗಳ ಮೇಲೆ ಮಾಹಿತಿ ತಂತ್ರಜ್ಞಾನದ ಪರಿಣಾಮ

**ಪ್ರಸ್ತಾಪ :**

ವಿಲಿಯಂ ವರ್ಡ್ಸ್‌ವರ್ತ್ ಕವಿಯ ' The world is too much with us ' ಕವಿತೆಯಲ್ಲಿ ನಿಸರ್ಗದಿಂದ ಮನುಷ್ಯ ದೂರ ಸರಿಯುತ್ತಿರುವ ಬಗ್ಗೆ ಹೇಳಿದ್ದಾನೆ. ಇಂಗ್ಲೆಂಡಿನಲ್ಲಿ ಕೈಗಾರಿಕಾ ಕ್ರಾಂತಿ ಆಗ ಯೌವನಾವಸ್ಥೆಯಲ್ಲಿತ್ತು. ಇಂದು ನಾವು ದೂರವಾಣಿ, ಆಕಾಶವಾಣಿ, ಅಂಚೆ, ತಂತಿಯಿಂದ, ಫ್ಯಾಕ್ಸ್, ಕೃತಕ ಉಪಗ್ರಹಗಳು, ಕೇಬಲ್ ಟಿ.ವಿ., ಕಂಪ್ಯೂಟರ್ ನೆಟ್‌ವರ್ಕ್‌ಗಳ ಯುಗದಲ್ಲಿ ಬದುಕುತ್ತಿದ್ದೇವೆ. ತಂತ್ರಜ್ಞಾನ ಹಿಂದೆಂದೂ ಕಾಣದಿದ್ದ ವೇಗ ಪಡೆದುಕೊಂಡು ನಾವು ಇಪ್ಪತ್ತೊಂದನೇ ಶತಮಾನಕ್ಕೆ ಕಾಲಿಟ್ಟಿದ್ದೇವೆ. ದೂರ ಸಂಪರ್ಕ ಮಾಧ್ಯಮಗಳು ಹೆಚ್ಚು ಪ್ರಬಲಗೊಂಡಂತೆ ನಮ್ಮ ಸಂಸ್ಕೃತಿಯ ಮೇಲೆ ಈ ಪ್ರಗತಿಯ ಪರಿಣಾಮಗಳು ಕಾಣಿಸಿಕೊಂಡಿವೆ. ದೂರದರ್ಶನದ ಮೂಲಕವೇ ಜಗತ್ತಿನ ಮೂಲೆ ಮೂಲೆಗಳಿಂದ ವಿಷಯವನ್ನೆಲ್ಲ ತಿಳಿದುಕೊಂಡು ತೀಕ್ಷ್ಣಮತಿಗಳಾಗುತ್ತಿರುವ ನಮ್ಮ ತಲೆಮಾರು ನಮ್ಮ ಸಮೀಪದಲ್ಲಿರುವವರೊಂದಿಗೆ ಹೆಚ್ಚು ಸಂಪರ್ಕಿಸದೆ ಹೆಚ್ಚು ಅಂತರ್ಮುಖಿಗಳಾಗುತ್ತಿದ್ದೇವೆ. ಇದೀಗ ' Dail a message ' ಬೆಂಗಳೂರಿನಲ್ಲಿ ಸೇವೆ ಪ್ರಾರಂಭಿಸಿದೆ. ಇದಕ್ಕೆ Computer ಬೇಕಿಲ್ಲ, ನಾವು ತಿಳಿಯಬಯಸಿದ್ದನ್ನು ಡಯಲ್ ಮಾಡಿದರೆ ಸಾಕು E-mail ಮಾಡಬಹುದು. ಇದು ಈಗ ಬೆಂಗಳೂರಿಗೆ ಸೀಮಿತವಾಗಿದ್ದು ಮುಂದೆ ಕರ್ನಾಟಕದ ಮೂಲೆ ಮೂಲೆಗೂ ಬರುವ ಸೂಚನೆ ಇದೆ.

ದೂರಮಾಧ್ಯಮ (ಸಂಪರ್ಕ) ಗಳ ಪಟ್ಟಿಗೆ ಇತ್ತೀಚೆಗೆ ಸೇರಿಕೊಂಡಿದ್ದು ಕಂಪ್ಯೂಟರ್ ಜಾಲ ಈ ಮೂಲಕ ಇಂದು ಜಗತ್ತಿನ ಯಾವುದೇ ಕಂಪ್ಯೂಟರ್ ಜೊತೆ ಸಂಪರ್ಕ ಸಾಧಿಸುವುದು ಸಾಧ್ಯವಿದೆ. ದೂರವಾಣಿ ಮೂಲಕ ಕೇವಲ ಮಾತನಾಡಬಹುದು; ಪತ್ರ ಬರೆದಾಗ ಲಿಖಿತ ಸಂದೇಶ ಕಳಿಸಲು ಮಾತ್ರ ಸಾಧ್ಯ. ಕಂಪ್ಯೂಟರ್ ಮೂಲಕ ಸಂಪರ್ಕ ಸಾಧಿಸಿದಾಗ ಈ ಎಲ್ಲಾ ಮಾಧ್ಯಮಗಳನ್ನು; ಈ ಎಲ್ಲಾ ಮಾಧ್ಯಮಗಳೆಂದರೆ– ದೃಶ್ಯ, ವಾಕ್ ಮತ್ತು ಲೇಖನ ಒಂದಾಗಿ ದುಡಿಸಿಕೊಳ್ಳುವದು ಸಾಧ್ಯ. ಇದನ್ನು ಕಂಪ್ಯೂಟರ್ ಪರಿಭಾಷೆಯಲ್ಲಿ " ಮಲ್ಟಿಮೀಡಿಯಾ " ಎನ್ನುತ್ತಾರೆ. ಮಲ್ಟಿಮೀಡಿಯಾ ಇದೀಗ ಹೆಜ್ಜೆಯಿಡಲು ಕಲಿಯುತ್ತಿರುವ ತಂತ್ರಜ್ಞಾನ, ಆದರೆ ಆರಂಭದಲ್ಲೇ ಇದು ಜನರ ಕುತೂಹಲ ಕೆರಳಿಸಿದೆ. ತನ್ನ ಅಪೂರ್ವ ಸಾಧ್ಯತೆಗಳ ಮೂಲಕ ಇದು ಸಂಶೋಧಕರನ್ನು ಸೂಜಿಗಲ್ಲಿನಂತೆ ಆಕರ್ಷಿಸುತ್ತಿದೆ. ನೆಟ್‌ವರ್ಕ್ ಇಲ್ಲದೆಯೂ ವರ್ಚುಯಲ್ ರಿಯಾಲಿಟಿಯ ಪ್ರಯೋಜನವನ್ನು ಶಾಲೆ - ಕಾಲೇಜುಗಳು ಪಡೆಯಬಹುದು. ಸಿ. ಡಿ. ರಾಮ್ (C. D. ROM) ಮೂಲಕ ಶೈಕ್ಷಣಿಕ ಸಾಫ್ಟ್‌ವೇರ್ ಲಭ್ಯವಾಗಿದೆ. ಹೊಸಬಗೆಯ ತಂತ್ರಜ್ಞಾನವನ್ನು ಶಿಕ್ಷಣದ ಮಾಧ್ಯಮದಲ್ಲಿ ಕಂಪ್ಯೂಟರ್ ತಂತ್ರಜ್ಞಾನ ಹುಟ್ಟುಹಾಕಲಿದೆ.

## ೬.೨.೧ : ಭಾರತದಲ್ಲಿ ತಂತ್ರಜ್ಞಾನ ಬೆಳವಣಿಗೆಗಳು : ಕಂಪ್ಯೂಟರ್ ಮಾಹಿತಿ

ಕಂಪ್ಯೂಟರ್ ಇಂಟರ್‌ನೆಟ್ ಜಾಲವು ೨೦ ನೇ ಶತಮಾನದಲ್ಲಿ ೬೦ ರ ದಶಕದಲ್ಲಿ ಅಮೇರಿಕಾದಲ್ಲಿ ಹುಟ್ಟಿ ೨೦ ನೇ ಶತಮಾನದ ಕೊನೆಯ ದಶಕದಲ್ಲಿ ಭಾರತದಲ್ಲಿ ಪ್ರಾರಂಭವಾಯಿತು. ಕೇಂದ್ರ ಸರಕಾರ ಸಂಪರ್ಕ ಸಚಿವಾಲಯದ (Ministry of communication) ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತದೆ. ಏಪ್ರಿಲ್ ೧, ೧೯೮೬ ರಲ್ಲಿ ಪ್ರಾರಂಭವಾಗಿ ಇಲ್ಲಿಯವರೆಗೆ ಭಾರತದಲ್ಲಿ ಅಂತರ್ಜಾಲ ಸೌಲಭ್ಯ (Internet facility) ಕಲ್ಪಿಸುವ ಪ್ರಮುಖ ಸಂಸ್ಥೆಗಳಲ್ಲಿ ಒಂದಾಗಿದೆ. ಇದರ ಸೇವಾಶಾಖೆಗಳು ದೇಶದ ಪ್ರಮುಖ ನಗರಗಳಲ್ಲಿದ್ದು ಅಂತರ್ಜಾಲ ಸೌಲಭ್ಯ ವಿಸ್ತರಿಸುವಲ್ಲಿ ಸಹಕಾರಿಯಾಗಿವೆ. ಬಹುಮುಖ್ಯವಾಗಿ ಮಾಹಿತಿ ಜಾಲವನ್ನು ವಿಶ್ವಮಟ್ಟದಲ್ಲಿ ಸ್ಥಾಪಿಸಿ; ಜನತೆಗೆ ಬೇಕೆಂದ ಮಾಹಿತಿ, ಬೇಕಾದ ಕ್ಷಣದಲ್ಲಿ ನೀಡುವ ಹಾಗೂ ಅತೀ ಕಡಿಮೆ ವೆಚ್ಚದಲ್ಲಿ ಹೆಚ್ಚು ಪರಿಣಾಮಕಾರಿ ಸೇವೆ ಸಲ್ಲಿಸುವ ನಿಟ್ಟಿನಲ್ಲಿ ಈ ಸಂಸ್ಥೆ ಕಾರ್ಯೋನ್ಮುಖವಾಗಿದೆ.

ಸಾರ್ವಜನಿಕ ಕ್ಷೇತ್ರದಲ್ಲಿ ವಿದೇಶ ಸಂಚಾರ ನಿಗಮ ಲಿಮಿಟೆಡ್ (VSNL) ಸಂಸ್ಥೆಯ ಪರಿಚಯದಿಂದ ಭಾರತದಲ್ಲಿ ೪೦,೦೦೦ ಜನ ವಾಣಿಜ್ಯ, ವ್ಯಾಪಾರ ಕ್ಷೇತ್ರದಲ್ಲಿ ಇಂಟರ್‌ನೆಟ್ ಜಾಲದಿಂದ ಉಪಯೋಗ ಪಡೆದುಕೊಂಡಿದ್ದಾರೆ. ಶಿಕ್ಷಣ ಕ್ಷೇತ್ರದಿಂದ ೭೦,೦೦೦ ಸಾವಿರ ಜನ; ಸಂಶೋಧನೆ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಈ ಜಾಲ (ERNET) ದ ಸದುಪಯೋಗ ಪಡೆದುಕೊಂಡಿದ್ದಾರೆ ಎಂದರೆ ಈ ಕ್ಷೇತ್ರದ ಮಹತ್ವ ಎಷ್ಟೆಂಬುದನ್ನು ತಿಳಿಯಬಹುದು. ಹೀಗಾಗಿ ಒಟ್ಟು ೧,೧೦,೦೦೦ ಜನ ಈ ಇಂಟರ್‌ನೆಟ್ ಜಾಲದ ಉಪಯೋಗ ಪಡೆದಿದ್ದಾರೆ. [೨]

ಭಾರತದಲ್ಲಿ ಇಂದು ಇಂಟರ್‌ನೆಟ್ ಜಾಲವು ಈ ಕೆಳಗಿನ ಸಂಸ್ಥೆಗಳ ಅಧೀನದಲ್ಲಿದೆ. ಅವುಗಳು ಯಾವುವೆಂದರೆ :

೧. ದೂರ ಸಂಪರ್ಕ ಇಲಾಖೆ Department of Telecommunication (DOT);

೨. ವಿದೇಶ ಸಂಚಾರ ನಿಗಮ ಲಿಮಿಟೆಡ್ (VSNL).

ಶಿಕ್ಷಣ ಕ್ಷೇತ್ರವೂ ಈ ಜಾಲದ ಉಪಯೋಗದಲ್ಲಿ ಪ್ರಮುಖ ಸ್ಥಾನದಲ್ಲಿದೆ. VSNL ಸಂಸ್ಥೆ ಮುಂಬೈ, ಚೆನ್ನೈ, ಕಲ್ಕತ್ತಾ, ದೆಹಲಿ ನಗರಗಳಿಗೆ ಜಾಲವನ್ನು ನೀಡಿತ್ತು. ಈಗ ಅದು ಎಲ್ಲ ರಾಜಧಾನಿ ನಗರಗಳಿಗೂ ತನ್ನ ಸೇವಾ ಕ್ಷೇತ್ರವನ್ನು ವಿಸ್ತರಿಸಿಕೊಂಡಿದೆ. ಭಾರತದ ಎಲ್ಲ ಸ್ಥಳಗಳಲ್ಲೂ ಇಂಟರ್‌ನೆಟ್ ಮತ್ತು ಈ-ಮೇಲ್ ಸೌಲಭ್ಯವನ್ನು ಒದಗಿಸಿಕೊಟ್ಟಿದೆ. ಪ್ರಮುಖ ನಗರಗಳಿಗೂ ಇಂಟರ್‌ನೆಟ್ ಜಾಲ ಹರಡತೊಡಗಿದೆ. ಈಗೀಗ ಜಿಲ್ಲೆ ಮತ್ತು ತಾಲೂಕು ಸ್ಥಳಗಳಲ್ಲೂ ಕಾಲಿಟ್ಟಿದೆ.

## ೬.೨.೧.೧ : ಗ್ರಂಥಾಲಯದಲ್ಲಿ ಇಂಟರ್‌ನೆಟ್ ಉಪಯೋಗ ಕಾರ್ಯನಿರ್ವಹಣೆ

**೬.೨.೧.೨** : ಗ್ರಂಥಪಾಲಕ ತನ್ನ ಚಾಣಾಕ್ಷತೆಯಿಂದ ತೀವ್ರ ಜ್ಞಾನ ಕುತೂಹಲಿಯಾಗಿರಬೇಕು. ಇಲ್ಲದಿದ್ದರೆ, ಬೆಳವಣಿಗೆಯ ತೀವ್ರ ಸ್ವರೂಪದ ಕಡೆ ಮುಖ ಮಾಡದಿದ್ದರೆ ನಾವಿನ್ನು ಶಿಲಾಯುಗ ಅಥವಾ ಯಾವುದೊ ಹಳೆ ಪದ್ಧತಿಯಲ್ಲಿ ಕೂತರೆ ನಮ್ಮನ್ನು ಕೇಳುವವರು ಯಾರೂ ಇಲ್ಲ ? ಅದರಿಂದಾಗುವ ನಷ್ಟಕ್ಕೆ ನಾವು ಹೊಣೆಗಾರರಾಗುತ್ತೇವೆ. ತೀವ್ರ ಗತಿಯಲ್ಲಿ ಬೆಳೆಯುತ್ತಿರುವ ತಂತ್ರಜ್ಞಾನದೊಂದಿಗೆ ನಾವು ಬೆಳೆಯಬೇಕು. ನಾವು ಈ ಕ್ಷೇತ್ರದಲ್ಲಿ ಪ್ರವೇಶಿಸಬೇಕಾದರೆ ದೂರವಾಣಿ ಸಂಪರ್ಕ, ಒಂದು ಮೋಡೆಮ್ ಮತ್ತು ಕಂಪ್ಯೂಟರ್ ಇದ್ದರೆ ಸಾಕು. ಭಾರತ ವಿದೇಶ ಸಂಚಾರ ನಿಗಮ ಲಿಮಿಟೆಡ್‌ನಲ್ಲಿ ಹೆಸರು ನೋಂದಾವಣಿ ಮಾಡಿ ರೂ. ೫೦೦೦/೫೦೦ ತಾಸುಗಳು = ೫೦೦೦/೫೦೦ ತಾಸುಗಳು = $\frac{೫೦೦೦}{೫೦೦}$ = ೧೦/- ರೂ. ಗಳು/ತಾಸು ಫೀಯನ್ನು ತುಂಬಬೇಕು. ವಿಎಸ್‌ಎನ್‌ಎಲ್ ಸಂಪರ್ಕ ದೊರೆಯುತ್ತದೆ. ಹೀಗೆ ವೆಬ್‌ಸೈಟನ್ನು ಸ್ಥಾಪಿಸಿಕೊಳ್ಳಬೇಕು. ಒಮ್ಮೆ ಸಂಪರ್ಕ ದೊರೆತ ಮೇಲೆ ಆಯಾ ಕ್ಷೇತ್ರಗಳ ಒಂದು ಪಟ್ಟಿ ಕಂಪ್ಯೂಟರ್ ಸ್ಕ್ರೀನ್ ಮೇಲೆ ಮೂಡುತ್ತದೆ. ಉದಾ : ವಿಜ್ಞಾನಗಳು, ಮಾನವಿಕಗಳು, ಸಮಾಜ ವಿಜ್ಞಾನ ವಿಷಯಗಳು, ತಾಂತ್ರಿಕ ವಿಜ್ಞಾನ ವಿಷಯಗಳ ಒಂದು ಪಟ್ಟಿಯಿಂದ ನಮಗೆ ಬೇಕಾದ್ದನ್ನು ಆರಿಸಿಕೊಳ್ಳಬಹುದು.

**೬.೨.೧.೩** : ಕಾಲೇಜು ಮತ್ತು ವಿಶ್ವವಿದ್ಯಾಲಯ ಮಟ್ಟದಲ್ಲಿಯ ಸಂಶೋಧಕರಿಗೆ (ಪ್ರಖ್ಯಾತರಾದ) ಸಿದ್ಧವಾದ ಮಾಹಿತಿ ಬೇಕು. ಉದಾ : ಆಯ್ಕೆ ಸಮಿತಿ ಪ್ರಸರಣ ಸೇವೆ (S.D.I.) ಮೇಲಿನ ಉದ್ದೇಶಗಳ ಸಾಧನೆ ಗ್ರಂಥಪಾಲಕ ಸಾಧ್ಯವಿದ್ದ ಮಾಹಿತಿ ಮೂಲಗಳೊಂದಿಗೆ ಸಂಪರ್ಕವಿಟ್ಟುಕೊಂಡಿರಬೇಕು. ವೃತ್ತಿನಿರತ ಸಂಸ್ಥೆಗಳಾದ ಭಾರತೀಯ ವಿಜ್ಞಾನ ಸಲ್ಲೇಖನಗಳ ಕೇಂದ್ರ INSDOC, DESIDOC, INFLIBNET, ERNET ಮತ್ತು NICNET ಮುಂತಾದ ಸಂಸ್ಥೆಗಳು ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಮಾಹಿತಿಯನ್ನು ನೀಡುತ್ತವೆ.

ನೇರ ಸಂಪರ್ಕ ಜಾಲ (On line Internet) ದ ಮೂಲಕ ಪೆಂಗ್ವಿನ್ ಪುಸ್ತಕ ಕಂ., ಬಿಝಿನೆಸ್ ಇಂಡಿಯಾ, ಪಿ. ಸಿ. ವರ್ಡ್ ಮತ್ತು ಇತರ ಪ್ರಕಾಶಕರು ಪುಸ್ತಕ ಪ್ರೇಮಿಗಳಿಗೆ ಅಥವಾ ಪುಸ್ತಕ ಕೊಳ್ಳುವವರಿಗೆ ಆರ್ಡರ್‌ಗಳನ್ನು ನೀಡಿದರೆ ಪುಸ್ತಕಗಳ ಸೂಚಿಯು ಕಂಪ್ಯೂಟರ್ ಸ್ಕ್ರೀನ್ ಮೇಲೆ ಮೂಡಿದರೆ ನಮಗೆ ಬೇಕಾದ ಪುಸ್ತಕಗಳ ಮತ್ತು ನಿಯತಕಾಲಿಕೆಗಳ ಪಟ್ಟಿ ಸಿಕ್ಕುತ್ತದೆ. ಈ ನೇರ ಸಂಪರ್ಕದ ಮೂಲಕ ಪುಸ್ತಕ ಮತ್ತು ನಿಯತಕಾಲಿಕೆಗಳನ್ನು ಪಡೆಯಬಹುದು. ಇದು ವೇಳೆ, ಹೆಚ್ಚಿನ ಧನ ವ್ಯಯವನ್ನು ತಪ್ಪಿಸುತ್ತದೆ.

ಚಂದಾದಾರರು ಆರ್ಡರ್‌ಗಳನ್ನು ಪೆಂಗ್ವಿನ್ ಇಂಡಿಯಾ / ಇನಫಾರ್ಮೆಟಿಕ್ಸ್ ಬೆಂಗಳೂರು ಅಥವಾ ಅದರ ಸಂಬಂಧಿತ ಸಂಸ್ಥೆಗಳಲ್ಲಿ ರಿಯಾಯಿತಿ ಎಷ್ಟಿದೆ ಎಂಬುದು ನೇರ ಸಂಪರ್ಕ ಜಾಲದಲ್ಲಿ ಲಭ್ಯವಾಗುತ್ತದೆ. ಸದ್ಯ ದುಬೈ, ದೆಹಲಿ, ಚೆನ್ನೈ, ಕಲಕತ್ತಾ, ಬೆಂಗಳೂರು, ಹೈದರಾಬಾದ್ ಮತ್ತು ಹೈಟೆಕ್ ಪಟ್ಟಣಗಳಲ್ಲೂ ಈ ಸೇವೆಗೆ ಅವಕಾಶವಿದೆ. ಕೆಲವು ಪೂರಕ ವಿಷಯಗಳು ನೇರ ಸಂಪರ್ಕದಲ್ಲಿ ಸಿಗುತ್ತವೆ. ನಿಯತಕಾಲಿಕೆಗಳ ಚಂದಾ ಹಣ, ನೆನಪಿನ / ಮಾರುತ್ತರಗಳು; (Reminders), ತಪ್ಪಿಸಿಕೊಂಡ ಸಂಚಿಕೆ, ಪೇಮೆಂಟ್ ಕ್ಲಿಯರೆನ್ಸ್ ಇತ್ಯಾದಿಗಳು ಈ ಸೇವೆಯಲ್ಲಿ ಲಭ್ಯ. ಉದಾ : ರೆಫರೆನ್ಸ್ ಲೈಬ್ರರಿಯನ್ ಮದ್ರಾಸ್ ವಿಶ್ವವಿದ್ಯಾಲಯದೊಂದಿಗೆ ಸಂಪರ್ಕ ಬೆಳೆಸಬೇಕೆಂದರೆ MALIBNET (ಇದು ದೆಹಲಿ INSDOC ಸಹಯೋಗದಲ್ಲಿ) ವಿದ್ವಾಂಸರ ಸಂವಹನ ಮತ್ತು ಸಂಪರ್ಕದಿಂದ ಅಲ್ಲಿರುವ ಎಲ್ಲ ವಿಷಯಗಳ ಪಟ್ಟಿ ನಮಗೆ ದೊರಕುತ್ತದೆ. ಈ ವೆಬ್‌ಸೈಟ್‌ನಲ್ಲಿ ಜಗತ್ತಿನ ಎಲ್ಲ ನಿಯತಕಾಲಿಕೆಗಳು ಸಿಕ್ಕುತ್ತವೆ. ಹೋಮ್‌ಪೇಜ್ ಈ ವೆಬ್‌ಸೈಟ್‌ನಲ್ಲಿ ಜಗತ್ತಿನ ಎಲ್ಲ ನಿಯತಕಾಲಿಕೆಗಳು ಸಿಕ್ಕುತ್ತವೆ. ಹೋಮ್‌ಪೇಜ್ Protocol http : //www.insc.ernet/in/insdoc ಸೈಟ್ ವಿಜ್ಞಾನ ವಿಷಯದ ಮೇಲಿನ ಎಲ್ಲ ಪತ್ರಿಕೆಗಳನ್ನು ಇದು ಒಳಗೊಂಡಿರುತ್ತವೆ.

ಜಗತ್ತಿನ ಎಲ್ಲ ಶಬ್ದಕೋಶಗಳು, ಮಾನವಿಕ ವಿಷಯಗಳು, ಭಾಷಾಂತರ, ಜೀವನಚರಿತ್ರೆಗಳು, ವಿರುದ್ಧಾರ್ಥ ಶಬ್ದಕೋಶಗಳು, ಪಡೆನುಡಿಗಳು, ಕ್ರೀಡೆ ಮತ್ತು ಕಲೆಯ ವಿಷಯಗಳು, ಸಿನಿಮಾ ಜಗತ್ತು ಕೂಡಾ ಈ ವೆಬ್‌ಸೈಟ್‌ಗಳಲ್ಲಿ ಹಿಡಿದಿಟ್ಟಿದೆ. ಇನ್ನೂ ಫೋಟೋಗ್ರಾಫ್ ಕೂಡಾ ಮಾಡಿ ಅಲ್ಲಿಯ ದೃಶ್ಯಗಳನ್ನು ಮನರಂಜನೀಯವಾಗಿಸಿದ್ದಾರೆ. ದಣಿದ ಬೇಸತ್ತ ಮನುಷ್ಯ ಕೂಡಾ ಈ ವಿಶಾಲ ಜಗತ್ತನ್ನು ನೋಡಿ ದಣಿವಾರಿಸಿಕೊಳ್ಳಬಹುದು. ಸಾಧ್ಯವಾದ ಎಲ್ಲ ವಿಷಯಗಳು ಕಂಪ್ಯೂಟರ್ ಪರದೆ ಮೇಲೆ ನಾವು ಕಲ್ಪಿಸಿಕೊಂಡ ವಿಷಯ ಮತ್ತು ವೆಬ್‌ಸೈಟ್ ಸಂಪರ್ಕಿಸಿದರೆ ಅದ್ಭುತ ಲೋಕವೇ ನಮ್ಮ ಮುಂದೆ ನಿಲ್ಲುತ್ತದೆ.

ನಿಮಗೆ ನೆನಪಿರಬಹುದು ಸೆಪ್ಟಂಬರ್ ೧೧,೨೦೦೧ ರಂದು ಬೆಳಿಗ್ಗೆ ೯-೦೦ ಗಂಟೆ, ವಿಶ್ವ ಮಾರುಕಟ್ಟೆ ಮೇಲೆ ಬಾಂಬ್ ಸ್ಫೋಟ, ಇದು ಮೊದಲು ಕಾಣಿಸಿಕೊಂಡದ್ದು ಇಂಟರ್‌ನೆಟ್ ಮುಖಾಂತರ ಮತ್ತು ಮೋಬೈಲ್ ಇಂಟರ್‌ನೆಟ್ ಸಂಪರ್ಕಗಳ ಮುಖಾಂತರ ಇಡಿ ಜಗತ್ತಿಗೆ ಜೀವಂತ ಸುದ್ದಿಯನ್ನು ಟೀವಿಗಳು; ಕಂಪ್ಯೂಟರ್‌ಗಳು ಬಿಟ್ಟೂ ಬಿಡದೆ ಸುದ್ದಿ ಮಾಡಿದವು. ಪೆಂಟಗಾನ್ ಕಟ್ಟಡದ ಸ್ಫೋಟ ಮತ್ತು ಆ ಹಾಗೆ, ವಿನಾಶ ! ನಮ್ಮ ಕಣ್ಮುಂದೆ ತೋರುತ್ತದೆ. ಇದಕ್ಕಿಂತ ಜೀವಂತ ಉದಾಹರಣೆ ಎಲ್ಲಿದೆ.

## ೬.೨.೩ : ಮಾಹಿತಿ ತಂತ್ರಜ್ಞಾನದ ಉಪಯೋಗಗಳು

ಮಾಹಿತಿ ತಂತ್ರಜ್ಞಾನದಲ್ಲಿ ಮೂರು ಬಗೆಯ ತಂತ್ರಜ್ಞಾನವನ್ನು ಕಾಣಬಹುದು :




ನೇರ ಸಂಪರ್ಕ ಸಾರ್ವಜನಿಕ ಸೂಚಿ (OPAC)



ಗಣಕಯಂತ್ರ ಪ್ರಯೋಗಾಲಯ Computer Laboratory

### ೬.೨.೩.೧ : ಕಂಪ್ಯೂಟರ್ ತಂತ್ರಜ್ಞಾನ

### ೬.೨.೩.೨ : ದೂರ (ಸಂಪರ್ಕ) ತಂತ್ರಜ್ಞಾನ

### ೬.೨.೩.೩ : ಗ್ರಾಫಿಕ್ ತಂತ್ರಜ್ಞಾನ

ಮೇಲ್ಕಂಡ ತಂತ್ರಜ್ಞಾನಗಳನ್ನು ಗ್ರಂಥಾಲಯ ಮತ್ತು ಮಾಹಿತಿ ಸೇವಾ ಕ್ಷೇತ್ರಗಳಿಗೆ ಗ್ರಂಥಗಳ ಮಾಹಿತಿಯ ಆಯ್ಕೆ, ಸಂಗ್ರಹಣ, ನಿಯಂತ್ರಣ, ಸಂಸ್ಕರಣ, ಶೇಖರಣೆ, ಮತ್ತು ಭೌತಿಕ ಪ್ರಸಾರ ಮತ್ತು ಪುನಃ ಪ್ರಾಪ್ತಿ, ಮಾಹಿತಿ - ಉಪಯೋಗ, ಮಾಹಿತಿ ಉತ್ಪನ್ನಗಳ ತಯಾರಿಕೆ ಮುಂತಾದ ಕಾರ್ಯಚಟುವಟಿಕೆಗಳಲ್ಲಿ ಲಾಭದಾಯಕವಾಗಿ ಉಪಯೋಗಿಸಿಕೊಳ್ಳಬಹುದು. ಇತರ ಗ್ರಂಥಾಲಯಗಳಂತೆ, ಸಾರ್ವಜನಿಕ ಗ್ರಂಥಾಲಯಗಳೂ ಈ ಕೆಳಕಂಡ ಕಾರಣಗಳಿಗಾಗಿ ಮೇಲಿನ ವಿವಿಧ ಮಾಹಿತಿ ತಂತ್ರಜ್ಞಾನಗಳನ್ನು ಉಪಯೋಗಿಸಿಕೊಳ್ಳಬಹುದು.

೧. ನಿಖರತೆ

೨. ದಕ್ಷತೆ

೩. ಸಂಪನ್ಮೂಲಗಳ ಸಹಭಾಗಿತ್ವ

೪. ಮಿತವ್ಯಯ

೫. ಉತ್ತಮ ಸೇವೆ

೬. ಸ್ಥಳಾವಕಾಶ

೭. ಕಾರ್ಯಭಾರದ ಸಮರ್ಥ ನಿರ್ವಹಣೆ

೮. ವೇಗ

ಮೇಲೆ ಉದಾಹರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮಾಹಿತಿ ತಂತ್ರಜ್ಞಾನ ಬಳಕೆಯಿಂದ ಆಗಿರುವ ಪ್ರಭಾವ ಮತ್ತು ಗ್ರಂಥಾಲಯ ಕಾರ್ಯಚಟುವಟಿಕೆಗಳಲ್ಲಿ ಆಗುವ ಬದಲಾವಣೆಗಳನ್ನು ಈ ಕೆಳಕಂಡಂತೆ ಚಿತ್ರಿಸಬಹುದು.[೩]

| ಕಾರ್ಯಸೇವೆ | ಹಳೆ ತಂತ್ರಜ್ಞಾನ | ಹೊಸ ತಂತ್ರಜ್ಞಾನ |
|---|---|---|
| ಗ್ರಂಥಗಳ ಆಯ್ಕೆ | ಪ್ರಕಾಶಕರ ಗ್ರಂಥಸೂಚಿ | ಯಂತ್ರಗಳು ಓದುವ ಮಾಹಿತಿ |
| | ಪುಸ್ತಕೋದ್ಯಮಿಗಳು | ಕೋಶದ ಗ್ರಂಥಸೂಚಿ |
| | ನಿಯತಕಾಲಿಕೆಗಳು..... ಇತ್ಯಾದಿ | |
| ಸೂಚೀಕರಣ | ಬೆರಳಚ್ಚಿನ ಸೂಚೀಕರಣ ಮುದ್ರಿತ ಸೂಚೀಕರಣ | ಯಂತ್ರಗಳು ಓದುವ ಕಂಪ್ಯೂಟರ್ ಸೂಚೀಕರಣ |

| | | |
|---|---|---|
| ಮೂಲ | ಮಾತಿನ ಮೂಲಕ ಬರವಣಿಗೆ | |
| | ಬೆರಳಚ್ಚಿನ ರೂಪ | |
| ಸಂಗ್ರಹಣೆ ಮಾಧ್ಯಮ | ಕಾರ್ಡ್, ಮುದ್ರಿತ ಕಾರ್ಡ್ | ಮ್ಯಾಗ್ನೆಟಿಕ್ ಡಿಸ್ಕ್‌ಗಳು ಇತ್ಯಾದಿ |
| | ಮೈಕ್ರೊ ಫಾರಂ | ಮಿಂಚೆಸ್ಟರ್ ಶೇಖರಣಾ ಮಾಧ್ಯಮ |
| ಮಾಹಿತಿ ಪಡೆಯುವಿಕೆ ಮತ್ತು | ಶೆಲ್ಫ್ ಬ್ರೌಸಿಂಗ್ ಸೂಚಿಯ | ವೈವಿಧ್ಯತೆ ಕಂಪ್ಯೂಟರ್ ಮಾಹಿತಿ |
| ಹುಡುಕುವಿಕೆ | ಮೂಲಕ ಗ್ರಂಥಗಳ ಪುನಃ ಪ್ರಾಪ್ತಿ | ಕೋಶಗಳ ಆನ್‌ಲೈನ್ ಬ್ರೌಸಿಂಗ್ |
| | | ವಿಷಯ ಪುನಃ ಪ್ರಾಪ್ತಿ |
| | | ಜ್ಞಾನದ ಪುನಃ ಪ್ರಾಪ್ತಿ |
| | | ಮಾಹಿತಿಯ ಪುನಃ ಪ್ರಾಪ್ತಿ |
| ಆಯ್ಕೆ ಸಮಿತಿ ಪ್ರಸರಣ ಸೇವೆ : | ಮ್ಯಾನ್ಯುಯಲ್ | ಆನ್‌ಲೈನ್ ಅಪರಿಮಿತ ಮಾಹಿತಿ |
| ಎಸ್.ಡಿ.ಆಯ್. ಮಾಹಿತಿ ಪ್ರವೇಶ | ನಿಯಮಿತ (ಸ್ಥಳೀಯ ಪ್ರಾದೇಶಿಕ) | ಪ್ರದೇಶ (ಪ್ರಾಪಂಚಿಕ), ಟೆಲಿ ಮಾಹಿತಿ |
| | | ಪ್ರವೇಶ ಎಲೆಕ್ಟ್ರಾನಿಕ್ ಮಾಹಿತಿ |
| | | ಪ್ರವೇಶ |
| ವರ್ಧನೆ | ಬೆರಳಚ್ಚು | ಎನ್‌ಸ್ಟಂಟ್ ಮಲ್ಟಿಪ್ಲಿಕೇಶನ್ |
| | ಮುದ್ರಣ | ಫ್ಯಾಸಿಮೈಲ್ ಉತ್ಪಾದನೆ |
| ಪ್ರಸರಣ | ವೈಯಕ್ತಿಕ ಪ್ರವಾಹ ಮಾತು | ಮಾನವನಿಂದ ಯಂತ್ರಕ್ಕೆ ಟೆಲೆಕ್ಸ್, |
| | (ಮನುಷ್ಯನಿಂದ ಮನುಷ್ಯನಿಗೆ) | ಸಿಟಿವಿ, ಈ ಮೇಲ್, ದೂರವಾಣಿ |
| | ಕಾಗದ ಅಂಚೆ ದೂರವಾಣಿ | ಪರಿಷತ್ತು : ಸಂಕಿರಣ ಬಾಹ್ಯಾಕಾಶ |
| | | ಪ್ರಸರಣ ಕಂಪ್ಯೂಟರ್ ನೆಟ್‌ವರ್ಕ್ |

೬.೨.೪ : ಅನುಕೂಲತೆಗಳು.

೬.೨.೪.೧ : ಸಮರ್ಥ ಮತ್ತು ಅತ್ಯಂತ ಸುಸಂಗತ ನಿರ್ವಾಹಕ ಸ್ವಯಂಚಾಲಿತ ಯಂತ್ರ.

೬.೨.೪.೨ : ಅತಿ ಅಗ್ಗದ ದರದಲ್ಲಿ ಮಾಹಿತಿ ಲಭ್ಯ.

೬.೨.೪.೩ : ಸಾಮಾಜಿಕ ಮತ್ತು ಭೌಗೋಳಿಕ ಅಂತರಗಳನ್ನು ಇದು ಇಂದು ಕಡಿಮೆಗೊಳಿಸಿದೆ

೬.೨.೪.೪ : ಇಂಟರ್‌ನೆಟ್ ಸೌಲಭ್ಯವು ಶಿಕ್ಷಣ ಮತ್ತು ಸಂಶೋಧನಾ ಕ್ಷೇತ್ರಗಳಿಗೆ ಸಲಹೆ, ಸಹಾಯ, ಸಂಪರ್ಕ, ಮಾರ್ಗದರ್ಶನ ನೀಡುವ ಸಂಪರ್ಕ ಕೊಂಡಿ.

೬.೨.೪.೫ : ಇಂಟರ್‌ನೆಟ್ ಸಂಪರ್ಕದ ಜಾಲ ಅಂದರೆ ಕಾಗದರಹಿತ ಜಗತ್ತು (Papers world) ಮತ್ತು ಸಂವಹನ ಸರಪಳಿ (Communication chain) ಆಗಿದೆ.

### ೬.೨.೪.೬ : ಇಂಟರ್‌ನೆಟ್ ಜಾಲದ ಮಾಧ್ಯಮ, ಜ್ಞಾನದ ಅಲೆಗಳನ್ನು ಜಗತ್ತಿನಾದ್ಯಂತ ಬಿತ್ತರಿಸುತ್ತದೆ.

ಈ ರೀತಿಯ ಮಾಹಿತಿ ಸಂಗ್ರಹವನ್ನು ಗ್ರಂಥಾಲಯಗಳಲ್ಲಿ ಬಳಸಿಕೊಳ್ಳುವವರ ಸಂಖ್ಯೆ ದಿನ ದಿನಕ್ಕೆ ಬೆಳೆಯುತ್ತಿದೆ. ಕಾಲೇಜುಗಳಿಗೆ, ಸಂಶೋಧನಾ ಕೇಂದ್ರಗಳಿಗೆ ಅಂತರ್ಜಾಲದ ಮೂಲಕ, ಸಂಪರ್ಕ ಸೇತುವೆಗಳ ಮೂಲಕ ನಡೆಯುತ್ತದೆ. ಇದಕ್ಕಾಗಿಯೇ ಭಾರತದ ಮಹಾನಗರಗಳಲ್ಲಿ ಒಂದಾದ ಕಲ್ಕತ್ತಾದಲ್ಲಿ CALIBNET ವ್ಯವಸ್ಥೆ ಇದ್ದು ಒಟ್ಟು ೩೮ ಕ್ಕೂ ಹೆಚ್ಚು ಗ್ರಂಥಾಲಯಗಳನ್ನು ಜೋಡಿಸುತ್ತಿದೆ. ಇದರಂತೆಯೇ ಕೈಗಾರಿಕಾ ಮತ್ತು ಸೇವಾ ಕ್ಷೇತ್ರಗಳಲ್ಲಿರುವವರ ಬಳಕೆಗಾಗಿ ಹೈದರಾಬಾದ್ ಮೂಲಕ ಸಿ.ಎಮ್.ಸಿ. (Computer Maintenance Corporation) ನವರು ಸ್ಥಾಪಿಸಿರುವ INDONET ಪ್ರಸ್ತುತ ದೆಹಲಿ, ಕಲ್ಕತ್ತಾ, ಮುಂಬೈ, ಚೆನ್ನೈ, ಬೆಂಗಳೂರು ನಗರಗಳಲ್ಲಿ ಸಂಪರ್ಕ ಇರಿಸಿಕೊಂಡಿದೆ.

ದೆಹಲಿ ಮೂಲದಿಂದ ಎಲ್ಲ ರಾಜ್ಯಗಳನ್ನು ಜಿಲ್ಲಾ ಕೇಂದ್ರಗಳನ್ನು INSAT ಮೂಲಕ ಮಾಹಿತಿ ಪಡೆಯಲು National Informatics Centre Network NICNET ಸ್ಥಾಪಿತವಾಗಿದೆ. ಮಾಹಿತಿ ಮತ್ತು ವಿಜ್ಞಾನ ವಿನಿಮಯಕ್ಕಾಗಿ UGC ಪ್ರಾಯೋಜಕತ್ವದಲ್ಲಿ INFLIBNET ಉನ್ನತ ಶಿಕ್ಷಣದ ಅನೇಕ ಸಂಸ್ಥೆಗಳನ್ನು ತನ್ನ ಜೊತೆ ಸಂಪರ್ಕ ಜಾಲಕ್ಕೆ ಸೇರಿಸಿಕೊಂಡಿದೆ. ವಿಶ್ವವಿದ್ಯಾಲಯಗಳಿಗೆ ಕಂಪ್ಯೂಟರ್ ನೆಟ್‌ವರ್ಕ್ ಮತ್ತು ಸಿಬ್ಬಂದಿಗಳಿಗೆ ಅನುದಾನ ನೀಡುತ್ತಿದೆ.

### ೬.೨.೫ : ಗ್ರಂಥಾಲಯವು ಮಾಹಿತಿ ಸೇವೆಗೆ ಪ್ರಮುಖ ಸ್ಥಳ

ಇಂಟರ್‌ನೆಟ್ ಈಗ ಗ್ರಂಥಾಲಯ ಮಾಹಿತಿ ಸೇವೆಯಲ್ಲಿ ಪ್ರಮುಖ ಪರಿಣಾಮವನ್ನು ಬೀರಿದೆ. ಇಂಟರ್‌ನೆಟ್ ಈಗ ಗ್ರಂಥಾಲಯದ ಮುಖ್ಯ ಕೆಲಸ ಕಾರ್ಯಗಳನ್ನು ಸರಳೀಕರಣಗೊಳಿಸಿದೆ. ಪುಸ್ತಕದ ಆಯ್ಕೆಯಿಂದ ಪ್ರಾರಂಭಿಸಿ ಸಂಪನ್ಮೂಲ ಸಂಗ್ರಹ ಮತ್ತು ಮಾಹಿತಿ ಸೇವೆಗಳ ಎಲ್ಲ ಪ್ರಕಾರಗಳಲ್ಲಿ ಸಿಬ್ಬಂದಿಯ ಸಮಯ, ಹಣ, ಶಕ್ತಿಯನ್ನು ಉಳಿತಾಯ ಮಾಡುತ್ತಿದೆ.

ಇಂಟರ್‌ನೆಟ್ ಸಂಪರ್ಕದಿಂದ ಪ್ರತಿನಿತ್ಯದ ಕೆಲಸಗಳಿಗೆ ಅದು ಯಾವ ರೀತಿ ನಮಗೆ ಉಪಯೋಗವಾಗುತ್ತದೆ ಎಂಬುದನ್ನು ಈಗ ನೋಡಬಹುದು.

## ೬.೨.೬. : ಗ್ರಂಥ ಸಂಪ್ರಾಪ್ತಿ (Acquisition)

ಇಂಟರ್‌ನೆಟ್ ಯುಗದಲ್ಲಿ ಈ-ಕಾಮರ್ಸ್ ಹೆಚ್ಚಿನ ಪ್ರಸಾರ ಪಡೆಯುತ್ತಿದೆ. ಗ್ರಂಥ ಸಂಪ್ರಾಪ್ತಿಗೆ ಸಂಬಂಧಿಸಿದ ಗ್ರಂಥಗಳ ಆಯ್ಕೆ, ಖರೀದಿಸುವಿಕೆ, ಹಣ ಪಾವತಿಸುವುದು ಇತ್ಯಾದಿ ಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸಬಹುದು. ಉದಾಹರಣೆಗೆ ಹೇಳಬೇಕೆಂದರೆ www.firstandsecond.com, www.indiatimes.com ಇತರ ಈ-ಬುಕ್ಸ್ ಸ್ಟೋರ್ಸ್‌ನ್ನು ಇಂಟರ್‌ನೆಟ್ ಮುಖಾಂತರ ಸಂಪರ್ಕಿಸಿ ಜ್ಞಾನಲೋಕಕ್ಕೆ ಲಗ್ಗೆ ಇಡಬಹುದು. ಜೊತೆಗೆ ನಮಗೆ ಗೊತ್ತೇ ಇರದ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಹೊಸ ಹೊಸ ಗ್ರಂಥಗಳನ್ನು ತಿಳಿದುಕೊಳ್ಳಬಹುದು. Search ಎಂಬ ಕಿಂಡಿಯಲ್ಲಿ ಈ-ಬುಕ್ಸ್ ಎಂದು ಭರ್ತಿ ಮಾಡಿದರೆ ಸಾಕು, ಲಕ್ಷಾಂತರ ಅಂತರ್ಜಾಲ ವಿಳಾಸಗಳು ಪತ್ತೆಯಾಗುವವು. ಈ ಪುಸ್ತಕದ ವ್ಯಾಪಾರಿಗಳು ಉಚಿತವಾಗಿ ಅವರ ಇತ್ತೀಚೆಗಿನ ಪ್ರಕಟಣೆಗಳ ವಾಙ್ಮಯ ದರ್ಶಕಗಳನ್ನು ಕಳುಹಿಸಿಕೊಡುತ್ತಾರೆ. ಹೀಗೆ ಇಂಟರ್‌ನೆಟ್‌ನ್ನು ಗ್ರಂಥ ಸಂಪ್ರಾಪ್ತಿಯಲ್ಲಿ ಬಳಸಿಕೊಳ್ಳಬಹುದು. ಇಲ್ಲಿ ಅಧ್ಯಾಪಕರ ಪಟ್ಟಿ ಪಡೆದು ಅದನ್ನು ತಕ್ಷಣವೆ ಇಂಟರ್‌ನೆಟ್ ಪೇಜ್‌ಗೆ ಸೇರಿಸಿದರೆ ಸಾಕು. ನಂತರ ಅದರಲ್ಲಿಯೇ ವರ್ಗೀಕರಣ, ಸೂಚೀಕರಣವು ನಮಗೆ ದಕ್ಕುತ್ತದೆ. ಹೀಗಾಗಿ ಸಿಬ್ಬಂದಿಯ ಅಪಾರ ಶ್ರಮ, ವೇಳೆ, ಶಕ್ತಿಯನ್ನು ಉಳಿಸಿ ಗ್ರಂಥ ಸಂಪ್ರಾಪ್ತಿ ಮಾಡಿಕೊಳ್ಳಬಹುದು. ಇನ್ನೊಂದು ಉದಾಹರಣೆ OCLC ಯ ನೇರ ಸಂಪರ್ಕದಿಂದ ಸೂಚೀಕರಣವು ಸಿದ್ಧ ಮಾದರಿ (Readymade) ಯಲ್ಲಿ ನಮಗೆ ಸಿಗುತ್ತವೆ.

ಹೀಗೆ ನಮಗೆ ಬೇಕಾದ ಹೊಚ್ಚ ಹೊಸ ಅಚ್ಚಾದ ಪುಸ್ತಕಗಳು ನಮಗೆ ಬೇಕಾದ ವಿಷಯದ ಪುಸ್ತಕಗಳು ಈ ಪಟ್ಟಿಯಲ್ಲಿರುತ್ತವೆ. ಈ-ಮೇಲ್ ಕಳಿಸಿದರೆ ಸಾಕು, ನಾವು ಅವುಗಳ ಉಪಯೋಗಕ್ಕೆ ತಯಾರಿಯಾಗಿರಬೇಕು. ನಾವು ಅದರ ಸದಸ್ಯರೆಂದು ಸ್ವೀಕರಿಸಿ ನಮಗೆ ಸೇವೆಯನ್ನು ನೀಡುತ್ತದೆ. ಇತ್ತೀಚೆಗಿನ ತಾಜಾ ಬೆಳವಣಿಗೆಗಳು ನಮಗೆ ಸಿಗುತ್ತವೆ.

## ೬.೨.೭ : ತಾಂತ್ರಿಕ ಪರಿಚಲನೆ (Technical Processing)

ನೇರ ಸಂಪರ್ಕದಿಂದ ಪುಸ್ತಕ ಸಂಪ್ರಾಪ್ತಿ, ಪರಿಚಲನೆಗಳು, ಸಿದ್ಧವಾದ ರೂಪ (Catalogue format) ಗಳಲ್ಲಿ ಸಿಗುವದರಿಂದ ನಮಗೆ ಬೇಕಾದ ಪುಸ್ತಕದ ವಿವರಗಳು OCLC ಯಲ್ಲಿ ದೊರೆಯುತ್ತವೆ. ಪ್ರಕಾಶಕರು ಪ್ರಕಾಶಿಸಿದ ಪಟ್ಟಿಗಳು ಸಿದ್ಧ ರೂಪಗಳಲ್ಲಿ ದೊರೆಯುವ ಪುಸ್ತಕ ಸಂಪ್ರಾಪ್ತಿಗೆ ಬೇಕಾಗುವ ಸಮಯವು ಕ್ಷಣಮಾತ್ರದಲ್ಲಿ

ನಿರ್ಧರಿಸಲ್ಪಡುತ್ತದೆ. ಇದು ಇಂಟರನೆಟ್‌ದಿಂದ ಈಗ ಸಾಧ್ಯವಾದ ಮಾಹಿತಿಗಳಲ್ಲಿ ಅತ್ಯಂತ ಪ್ರಮುಖವಾದದ್ದು. ಈ ಲಭ್ಯ ಮಾಹಿತಿಯಿಂದ ನಮಗೆ ಬೇಕಾದ ಮಾಹಿತಿ ಸಂಗ್ರಹ (Databases) ಗಳಿಂದ ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಚಲಿತವಿರುವ ಯಂತ್ರಚಾಲಿತ (ಓದುವ) ಗ್ರಂಥಸೂಚಿ ಪ್ರತಿರೂಪ (MARC) ವು ಬಹಳ ಅಚ್ಚುಕಟ್ಟು ಮತ್ತು ಯೋಜನಾಬದ್ಧವಾಗಿರುತ್ತವೆ. ವಿಶ್ವವ್ಯಾಪಿ ಮಾದರಿಯು ಇಂಟರ್‌ನೆಟ್‌ನಲ್ಲಿ ಸಿಗುವದರಿಂದ ಸಂಘಟನಾತ್ಮಕ (Organisation) ವ್ಯವಸ್ಥೆಯ ಕಾರ್ಯನಿರ್ವಹಣೆಯ ಭಾರ ಇರುವದಿಲ್ಲ. ಇದರ ಇನ್ನೊಂದು ಲಕ್ಷಣವೆಂದರೆ ವರ್ಗೀಕರಣ ಸಂಖ್ಯೆ (Classification Number) ಯು ಮುದ್ರಿತವಾಗಿರುತ್ತದೆ. ಇದರಿಂದ ಪುಸ್ತಕವನ್ನು ಶೆಲ್ಫಿನಲ್ಲಿ ಜೋಡಿಸಲು ಶ್ರಮ ಬೇಕಾಗುವುದಿಲ್ಲ. ತಕ್ಷಣವೇ ಆ ಜಾಗದಲ್ಲಿರಿಸಬಹುದು. ಇದರಿಂದ ಪುಸ್ತಕ ಪರಿಚಲನೆಯಲ್ಲಿ ದುಡ್ಡು, ಶ್ರಮ ಮತ್ತು ಸಮಯದ ಉಳಿತಾಯವಾಗುವುದು.

## ೬.೨.೮ : ಪೂರ್ವಾನ್ವಯ ಲಿಪೀಕರಣ (Retrospective Conversion)

ಮಾಹಿತಿ ಸಂಗ್ರಹ ತಯಾರಿಕೆಯು ಗ್ರಂಥಾಲಯ ಸ್ವಯಂ ಚಾಲನೆಗೆ ಪ್ರಮುಖ ಪ್ರಕ್ರಿಯೆಯಾಗಿದೆ. ಇದರ ಮೂಲವೇ ಈ ದತ್ತಾಂಶ ಪರಿಕರಗಳನ್ನು ನೇರ ಸಂಪರ್ಕಕ್ಕೆ ಬರುವಂತೆ ಗ್ರಂಥಾಲಯ ವ್ಯವಸ್ಥೆಯ ಮೂಲಕ ಇಲ್ಲಿಯ ಸಾಮಗ್ರಿಗಳನ್ನು ಲಿಪೀಪರಿಸುವುದು ಮುಖ್ಯವಾಗಿರುತ್ತದೆ. ಇದು ಬಹು ಸಂಕೀರ್ಣ ವಿಷಯವಾಗಿದ್ದು ಅನೇಕ ಸಮಸ್ಯೆಗಳನ್ನು ಹುಟ್ಟುಹಾಕುತ್ತದೆ. ಇದು ಗ್ರಂಥಾಲಯದ ೧) ಒಳ, ೨) ಹೊರಗಿನ ಸಮಸ್ಯೆಗಳಿಗೂ ಕಾರಣವಾಗಿದೆ. ಇಲ್ಲಿ ಎರಡು ಆಯ್ಕೆಗಳಿರುತ್ತವೆ.

ಒಳಗಿನ ಎಲ್ಲ ದತ್ತಾಂಶಗಳನ್ನು ಕಿಟಕಿಯಲ್ಲಿ ಅಳವಡಿಸುವದು ಮತ್ತು ಶ್ರೀಘ್ರ ಲಿಪಿಯಲ್ಲಿ ತಯಾರು ಮಾಡಿದ ಬರವಣಿಗೆ ತಪ್ಪುತಡೆಗಳಿಂದ ಕೂಡಿದ್ದು ಇದು ಸಮಯವನ್ನು ಹಿಡಿದಿಟ್ಟುಕೊಳ್ಳುತ್ತದೆ. ಮತ್ತು ಮಾಹಿತಿ ಪಡೆಯುವಲ್ಲಿ ಮತ್ತು ಹುಡುಕುವಿಕೆಯಲ್ಲಿ ಸಮಸ್ಯೆಗಳುಂಟಾಗುತ್ತವೆ. ಎಲ್ಲ ದತ್ತಾಂಶಗಳ ಪ್ರಕ್ರಿಯೆ ಇಂಗ್ಲೀಷಿನಲ್ಲಿರುತ್ತದೆಯಾದ್ದರಿಂದ ಸ್ವಯಂಚಾಲಿತಗಳಲ್ಲಿ ೭೦% ಸೇವೆ ನೇರ ಸಂಪರ್ಕದ LC / OCLC / MARC ಗಳಲ್ಲಿ ಇದೇನು ಕಠಿಣವಲ್ಲ. ಈಗಾಗಲೇ ಸಿಗುವ ದತ್ತಾಂಶಗಳಲ್ಲಿ ಇದು ಭರ್ತಿಯಾಗಿರುತ್ತದೆ. ಆದ್ದರಿಂದ ದತ್ತಾಂಶಗಳನ್ನು ಸ್ಥಳೀಯ ಭಾಷಾ ರೂಪದಲ್ಲಿ ತಯಾರಿಸಿ ಬಳಸಿಕೊಳ್ಳುವುದು ಅಗತ್ಯವೆನಿಸುತ್ತದೆ.

## ೬.೨.೯ : ಮಾಹಿತಿ ಸೇವೆಗಳು

## ೬.೨.೯. : ಸಂದರ್ಭ ಸೇವೆಗಳು

ಈಗ ಗ್ರಂಥಾಲಯ ನಾಲ್ಕು ಗೋಡೆಗಳ ನಡುವೆ ಇರುವ ಪುಸ್ತಕಗಳ ಗುಂಪು ಎಂದಿದ್ದು ಈ ನಾಲ್ಕು ಗೋಡೆಗಳ ಮಧ್ಯೆ ಇರುವ ಕಂಪ್ಯೂಟರ್ ಮತ್ತು ಅಂತರ್‌ಜಾಲ (Internet) ದಿಂದ ಇಡಿ ವಿಶ್ವವೇ ಒಂದು ಹಳ್ಳಿಯಾಗಿದೆ. ಈಗ ನಮ್ಮ ದೃಷ್ಟಿ ವಿಶ್ವವ್ಯಾಪಿಯಾಗಿದೆ. ಕಂಪ್ಯೂಟರ್ ಇಂಟರ್‌ನೆಟ್‌ನಲ್ಲಿ ಪುಸ್ತಕ ಕೊಳ್ಳಬಹುದು, ವ್ಯಾಪಾರ ಮಾಡಬಹುದು, ವಧು-ವರರ ಹೊಂದಾಣಿಕೆ ಮಾಡಿಕೊಳ್ಳಬಹುದಾಗಿದೆ. ನಾನಾ ವಿಷಯಗಳ ಮೇಲಿನ ಸಮಗ್ರ ಮಾಹಿತಿ ಇಂದು ಲಭ್ಯವಾಗಿದೆ. ಗ್ರಂಥಾಲಯದಲ್ಲಿಯ ನೇರ ಸಂಪರ್ಕದಿಂದ ಸಾಮುಗ್ರಿಗಳ ಬೆಳವಣಿಗೆ ಮತ್ತು ರೂಪರೇಷೆಗಳು ನಮಗೆ ಗೊತ್ತಾಗಿವೆ. ಇವುಗಳನ್ನು ಡಿಜೈನ್ ಮಾಡಿರುವ ಹೋಮ್‌ಪೇಜ್‌ಗಳಲ್ಲಿ ನಾವು ಕಾಣಬಹುದು.

ಈಗ ಮಾಹಿತಿ ಎನ್ನುವದು ತುದಿ ಬೆರಳಿನಲ್ಲಿದೆ. ವಿಶ್ವಕೋಶಗಳು, ಶಬ್ದಕೋಶಗಳು, ಕೈಪಿಡಿಗಳು, ವಾಙ್ಮಯ ದರ್ಶಕಗಳು, ನಕಾಶೆಗಳು, ವಾರ್ಷಿಕ ಪುಸ್ತಕಗಳು, ಡೈರೆಕ್ಟರಿಗಳು, ಏನೆಲ್ಲಾ ನಮಗೆ ಇಂಟರ್‌ನೆಟ್‌ನಲ್ಲಿ ಸಿಗುತ್ತವೆ. ಅದನ್ನು ನೋಡಲು ಬರುತ್ತದೆ! ಹೇಳಲು ಬಾರದು ಅಲ್ಲವೇ ?

## ೬.೨.೯.೧ : ತ್ವರಿತ ಸೇವೆ (Current Awareness Service)

ಸರಿಯಾದ ಮಾಹಿತಿ ಸರಿಯಾದ ಸಮಯಕ್ಕೆ ಸರಿಯಾದ ವ್ಯಕ್ತಿಗೆ ಸಿಗುತ್ತದೆ; ನಮಗೆ ಬೇಕಾದ ವಿಷಯದಲ್ಲಿ ಇದು ಉಪಯೋಗಿಸಿಕೊಳ್ಳುವವರಿಗೆ ವರದಾನವಾಗಿ ಪರಿಣಮಿಸಿದೆ. ಇದಕ್ಕೆ ಮಾಹಿತಿಯ ಆಯ್ಕೆಯ ಪ್ರಸರಣವೆನ್ನುತ್ತಾರೆ. ಇಂಟರ್‌ನೆಟ್ ಅತ್ಯಂತ ಸಕಾಲಿಕ ಇತ್ತೀಚೆಗಿನ ಹೊಚ್ಚ ಹೊಸ ಮಾಹಿತಿಯನ್ನು ತನ್ನ ಉಪಭೋಗಿಗಳಿಗೆ ನೀಡಿ ಧನ್ಯತೆಯನ್ನು ಪಡೆಯುತ್ತದೆ, ಅಲ್ಲದೆ ಈಗ ಅದು E-mail ಮುಖಾಂತರವು ಲಭ್ಯವಿದೆ.

**ಪರಿವಿಡಿ ಸೇವೆ (TOC) :** ವಿದ್ಯುನ್ಮಾನ ಪ್ರಕಾಶಕರು ಈಗ ತಮ್ಮ ಮಾರುಕಟ್ಟೆಯನ್ನು ವಿದ್ಯುನ್ಮಾನ ಪರಿಕರಗಳ ಮೂಲಕ ಪರಿವಿಡಿಯ ಸೇವೆಯನ್ನು ಒದಗಿಸುತ್ತಾರೆ. ಈಗ ೧೭,೦೦೦ ನಿಯತಕಾಲಿಕೆಗಳ ಪರಿವಿಡಿ ಸೇವೆ ೧೯೮೯ ರಲ್ಲಿ ವಿಜ್ಞಾನದ ಮೇಲೆ ಪ್ರಕಟವಾಗುವ ವಿಷಯಕ್ಕೆ ಸಂಬಂಧ ಪಡುತ್ತದೆ. ನಮಗೆ ಬೇಕಾದ ನಿಯತಕಾಲಿಕೆಗಳ ಲೇಖನಗಳ ಪೂರ್ತಿ ಪಠ್ಯವನ್ನು ನಾವು ಪಡೆಯಬಹುದಾಗಿದೆ. ಅತ್ಯಂತ ಕಡಿಮೆ ದರದಲ್ಲಿ ಈ ಸೇವೆಯನ್ನು ನಾವು ಪಡೆಯಬಹುದು.

## ೬.೨.೯.೨ : ಹಂಚಿಕೆ (Resource sharing)

ಸಾಮುಗ್ರಿ ಹಂಚಿಕೆ ನಮ್ಮಂತಹ ಹಿಂದುಳಿದ ದೇಶದಲ್ಲಿ ಸಮಸ್ಯೆಯಾದರೆ ಮುಂದುವರಿದ ದೇಶಗಳಲ್ಲಿ ಇದು ಸಮಸ್ಯೆಯಲ್ಲ. ಅಲ್ಲಿ ಅವರು ಸಹಕಾರ ತತ್ವದಡಿ ಎಲ್ಲ ಗ್ರಂಥಾಲಯಗಳ ಸೇವೆಯನ್ನು ಬಳಸಿಕೊಳುತ್ತಾರೆ.

ಇದರಿಂದ ಆಯಾ ದೇಶಗಳಲ್ಲಿರುವ ಗ್ರಂಥಾಲಯಗಳಲ್ಲಿ ಲಭ್ಯವಿರುವ ಸಮಗ್ರ ಮಾಹಿತಿ ಉಪಯೋಗ ಆ ದೇಶದ ಹಕ್ಕೆಂದು ಅವರು ತಿಳಿದಿದ್ದಾರೆ. ಇದು ಹಿಂದುಳಿದ ನಮ್ಮಂತಹ ದೇಶಗಳಲ್ಲಿ ಸಾಧ್ಯವಾಗಿಲ್ಲ. ಇದು ಮಿತವ್ಯಯದ್ದು ಕೂಡ. ಹಣವನ್ನು ಉಳಿಸುವ ಸಮಯವನ್ನು ಉಳಿಸುವ ಶಕ್ತಿಯನ್ನು ಉಳಿಸುವ ಸಾಮಗ್ರಿ ಕೂಡಾ; ಇಂಟರ್‌ನೆಟ್ ಆಗಿದೆ. ಇಂದು ಸಹಕಾರ ತತ್ವ ಎನ್ನುವದು ಗ್ರಂಥಾಲಯಗಳ ಐಕ್ಯತೆಯಲ್ಲಿ ಅಡಗಿದೆ. ಹೀಗೆ ಸಾಮಗ್ರಿ ಹಂಚಿಕೆಯಿಂದ ಮಾಹಿತಿ ಸೇವೆಯು ಸಮಗ್ರತೆಯನ್ನು ಪೂರ್ಣತ್ವವನ್ನು ಕಾಣುವ ದಿಕ್ಕಿನೆಡೆ ಚಲಿಸಬೇಕಾಗಿದೆ.

## ೬.೨.೧೧ : ಮಾಹಿತಿ ತಂತ್ರಜ್ಞಾನ ಮತ್ತು ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವೃತ್ತಿಗಳು

ಗ್ರಂಥಾಲಯಗಳೆಂದರೆ ಜ್ಞಾನದೇಗುಲ. ಶ್ರೀಸಾಮಾನ್ಯರಿಗೆ ಕಲಿಕೆಯ ವಿಶ್ವವಿದ್ಯಾಲಯಗಳೆಂದು ಪರಿಗಣಿಸಲಾಗಿದೆ. ಮಾಹಿತಿ ಪ್ರಸಾರದಲ್ಲಿ ಇವುಗಳ ಪಾತ್ರ, ಉಪಯೋಗ ಎಂದಿಗಿಂತಲೂ ಈಗ ಮಹತ್ವವನ್ನು ಪಡೆದುಕೊಂಡಿದೆ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ಈಗ ತೀವ್ರ ಬದಲಾವಣೆಗೊಳಪಟ್ಟಿದೆ. ತಂತ್ರಜ್ಞಾನದ ತೀವ್ರ ಬೆಳವಣಿಗೆಗಳಿಂದಾಗಿ ಆಸಕ್ತರ ಗಮನ ತನ್ನೆಡೆಗೆ ಸೆಳೆಯುತ್ತಿದೆ. ವಿದ್ಯಾರ್ಥಿಗಳಿಗೆ, ಉನ್ನತ ಶಿಕ್ಷಣ ಪಡೆಯುವವರಿಗೆ ಮಾಹಿತಿ ತಂತ್ರಜ್ಞಾನ ವಿಸ್ಮಯವನ್ನುಂಟು ಮಾಡಿದೆ. ಮಾಹಿತಿ ಈಗ ತುದಿ ಬೆರಳ ಮೇಲೆ ನಿಂತಿದೆ. ತಂತ್ರಾಂಶ ದಿನ ದಿನಕ್ಕೂ ಬೆಳವಣಿಗೆ ಸಾಧಿಸುತ್ತಿದೆ. ಮಾಹಿತಿ ತಂತ್ರಜ್ಞಾನ ಈಗ ಜಗತ್ತನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳ ಹತ್ತಿದೆ. ಈಗ ಇದಕ್ಕೆ ಸರಿಸಾಟಿಯಾದ ತಂತ್ರಜ್ಞಾನ ಜಗತ್ತಿನಲ್ಲಿ ಬೇರೊಂದಿಲ್ಲ ಎಂದು ಹೇಳಬಹುದು. ಉನ್ನತ ವರ್ಗದವರು ಜ್ಞಾನಾಂಕ್ಷಿಗಳು ಮಾಹಿತಿ ತಂತ್ರಜ್ಞಾನಕ್ಕೆ ಶರಣಾಗಿದ್ದಾರೆ. ಮಾಹಿತಿ ತಂತ್ರಜ್ಞಾನ ಪ್ರತಿಯೊಂದು ಕ್ಷೇತ್ರದಲ್ಲೂ ನುಗ್ಗುತ್ತಿದೆ. ಈಗ ಅದರ ಪ್ರಭಾವ ಮತ್ತು ಸೇವೆಗಳನ್ನು ಬಳಸಿಕೊಳ್ಳದ ಕ್ಷೇತ್ರಗಳೇ ಇಲ್ಲ. ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಷಯದಲ್ಲೀಗ ಉನ್ನತ ಸ್ಥಾನ ಪಡೆದುಕೊಂಡಿದೆ. ಅದರ ಕಾರ್ಯತಂತ್ರ ಮತ್ತು ನಿರ್ವಹಣೆಯನ್ನು ತನ್ನ ತೆಕ್ಕೆಗೆಳೆದುಕೊಂಡಿದೆ. ಇದು ಯಾವ ಮಟ್ಟಕ್ಕೆ ಹೋಗಿದೆಯೆಂದರೆ ಜನ ಈಗ ಸ್ವತಃ ಕಂಪ್ಯೂಟರ್ ಕೊಳ್ಳಲು ಮುಂದಾಗುತ್ತಿದ್ದಾರೆ. ವೈಯಕ್ತಿಕ ಕಂಪ್ಯೂಟರ್‌ಗಳನ್ನು ಹೊಂದುವವರ ಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತಾ ನಡೆದಿದೆ. ಈಗ ಕಂಪ್ಯೂಟರ್ ಕಲಿಕಾ ಕೇಂದ್ರಗಳು ಹಳ್ಳಿ ಹಳ್ಳಿಗೂ ಪಸರಿಸಹತ್ತಿವೆ. ನಮ್ಮ ಮಾಹಿತಿ ತಜ್ಞರು ಈಗ ಗ್ರಂಥಾಲಯ ಕ್ಷೇತ್ರದಲ್ಲಿ ನುಗ್ಗಿ ಅನೇಕ ಬದಲಾವಣೆಗಳನ್ನು ತರಲೆತ್ನಿಸುತ್ತಿದ್ದಾರೆ. ಈಗೀಗ ಮಾಹಿತಿ ತಂತ್ರಜ್ಞಾನವು ಒಂದು ವಿಜ್ಞಾನವಾಗಿ ಬೆಳೆಯುತ್ತಿದೆ. ಆದರೂ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗವೂ ಬೆಳೆಯಬೇಕಾದಷ್ಟು ಬೆಳೆಯಲಿಲ್ಲ. ಬಹಳಷ್ಟು ಗ್ರಂಥಾಲಯಗಳು ಮಾಹಿತಿ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲು ಹಿಂದೇಟು ಹಾಕುತ್ತಿವೆ. ನಿಜ ಸಂಗತಿಯೇನೆಂದರೆ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳದೆ ಬೇರೆ ದಾರಿಯೇ ಇಲ್ಲ. ಈಗಾಗಲೇ ತಂತ್ರಜ್ಞಾನವನ್ನು ಅಳವಡಿಸಿಕೊಂಡ ಗ್ರಂಥಾಲಯಗಳ

ಸೇವೆಗಳು ಮತ್ತು ಅವು ನೀಡುತ್ತಿರುವ ಹೊಚ್ಚ ಹೊಸ (Up dated) ಮಾಹಿತಿ ಕ್ಷೇತ್ರಗಳು ಇದಕ್ಕೆ ಉದಾಹರಣೆಯಾಗಿವೆ. ಕಾರ್ಯ ನಿರ್ವಹಣೆ ಮತ್ತು ಸಂಘಟನೆಯಲ್ಲಿ ತಂತ್ರಾಂಶವನ್ನು ಅಳವಡಿಸಿಕೊಂಡ ಗ್ರಂಥಾಲಯಗಳು ಈಗ ಮುಂದಿವೆ.

ಈಗ ಇಂಟರ್‌ನೆಟ್ ಉಪಯೋಗದಿಂದ ಮಾಹಿತಿಯನ್ನು ತೀವ್ರವಾಗಿ ಪಡೆಯುವದು ಪ್ರತಿಯೊಬ್ಬನ ಆದ್ಯ ಕರ್ತವ್ಯವಾಗಿದೆ. ಆದಾಗ್ಯೂ ನಮ್ಮ ದೇಶದಲ್ಲಿ ಈ-ಮೇಲ್ ಕೆಲವೇ ಕೆಲವರು ಉಪಯೋಗಿಸುತ್ತಿದ್ದಾರೆ. ೧೯೮೦ ರಿಂದೀಚೆಗೆ ಅದರ ಉಪಯೋಗ ಜಾಸ್ತಿಯಾಗಿದೆ. ಪಾಶ್ಚಾತ್ಯರಲ್ಲಿ ಅಂಚೆ-ಕಚೇರಿಗಳ ಉಪಯೋಗಕ್ಕಿಂತಲೂ ಈ-ಮೇಲ್‌ನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದಾರೆ. ಪಾಶ್ಚಾತ್ಯರು ಈಗ ಟಿವಿಗಳಂತೆ ಕಂಪ್ಯೂಟರನ್ನು ಕೊಳ್ಳುತ್ತಿದ್ದಾರೆ. ಅಲ್ಲೀಗ ಟಿವಿಗಳ ಮಾರಾಟ ಕಡಿಮೆಯಾಗಿದೆಯಂತೆ.[೪]

ಈಗ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ ಜ್ಞಾನವನ್ನು ಬದಲಾವಣೆಯ ಹಂತಕ್ಕೆ ತಂದು ನಿಲ್ಲಿಸುತ್ತಿದೆ. ಮಾಹಿತಿ ವಿಜ್ಞಾನ ವಿಶ್ವವನ್ನು ಆಳಲು ಶುರು ಮಾಡಿದೆ. ಯಶಸ್ಸು ಅನ್ನುವದು ಗ್ರಂಥಾಲಯ ಮತ್ತು ವಿಜ್ಞಾನವನ್ನು ಅವಲಂಬಿಸಿದೆ. ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಷಯಗಳು ಮಾಹಿತಿ ತಂತ್ರಜ್ಞಾನ ಎರಡು ವಿಷಯಗಳು ಒಂದಕ್ಕೊಂದು ಪೂರಕ ವಿಷಯಗಳಾಗಿ ಪರಿಗಣಿಸಲ್ಪಟ್ಟಿವೆ. ಇವೆರಡು ಈಗ ಪೈಪೋಟಿಯಲ್ಲಿದ್ದು ಮುಖ್ಯಸ್ಥ ಮತ್ತು ಸಂಗಾತಿಗಳಾಗಿ ಕೆಲಸ ಮಾಡಬೇಕಾಗಿದೆ. ಕೆಲವು ಜನ ನಾಯಕತ್ವದ ಜೊತೆಗೆ ಶಿಕ್ಷಣದಲ್ಲಿ ಮಹತ್ತರ ಬದಲಾವಣೆಗೆ ಕಾರಣವಾಗಬೇಕೆಂಬ ಅಪೇಕ್ಷೆಯುಳ್ಳವರು ಈ ಕ್ಷೇತ್ರದಲ್ಲೀಗ ಕಾಣುತ್ತಿದ್ದಾರೆ. ಈಗ PC ಗಳೊಂದಿಗೆ ತಂತ್ರಾಶ. ಯಂತ್ರಾಂಶ ಮತ್ತು ತಂತ್ರಜ್ಞಾನ ಬೆಳವಣಿಗೆಗಳು ಮಾಹಿತಿ ತಂತ್ರಜ್ಞಾನದೊಂದಿಗೆ ಪೈಪೋಟಿ ನಡೆಸಿವೆ.

## ೬.೨.೧೧ : ತಂತ್ರಜ್ಞಾನದ ಪಾತ್ರ (The Role of Technology)

ನಿಸ್ಸಂಶಯವಾಗಿ ಇಪ್ಪತ್ತನೆಯ ಶತಮಾನದ ಕೊಡುಗೆಗಳಲ್ಲಿ ಮುಖ್ಯವಾದದ್ದು ಎಂದರೆ ಅಂತರ್‌ಜಾಲ (Internet) ಸಂಶೋಧನೆ. ಇಂಟರ್‌ನೆಟ್‌ನ್ನು ಅಂತಾರಾಷ್ಟ್ರೀಯ ಸಾರ್ವಜನಿಕ ಡಿಜಿಟಲ್ ಗ್ರಂಥಾಲಯ ಎಂದು ಪರಿಗಣಿಸಲಾಗಿದೆ. ಜಗತ್ತಿನ ವಿಪುಲ ಮಾಹಿತಿಯೆಲ್ಲ ತನ್ನ ತುದಿಬೆರಳಲ್ಲಿಟ್ಟುಕೊಂಡು ಜಗತ್ತನ್ನಾಳಲು ಶಕ್ತವಾಗಿದೆ. ಇಂಟರ್‌ನೆಟ್ ಸಂಪರ್ಕ ಹೊಂದಿದವರೆಲ್ಲರೂ ಇದನ್ನು ಬಳಸಿಕೊಳ್ಳಬಹುದಾಗಿದೆ. ಸಾಮಾನ್ಯವಾಗಿ ಇಂಟರ್‌ನೆಟ್ ಬಳಕೆಯ ಅಂಕಿ-ಸಂಖ್ಯೆಗಳನ್ನು ನೋಡಿದಾಗ ನಮಗೆ ಗೋಚರವಾಗುವ ಸತ್ಯ ದಿಗ್ಭ್ರಮೆಯನ್ನುಂಟು ಮಾಡುತ್ತದೆ. ಇಂದು ಈ ಜಾಲವನ್ನು ಬಳಸಿಕೊಳ್ಳುವವರ ಸಂಖ್ಯೆ ದಿನೆ ದಿನೆ ಜಾಸ್ತಿಯಾಗತೊಡಗಿದೆ. ಇಂಟರ್‌ನೆಟ್ ಮುಖಾಂತರ

ಸಂವಹನ ಕ್ರಿಯೆ ಸರಳ ಮತ್ತು ವೇಗವಾಗಿದ್ದರ ಪರಿಣಾಮ ಜನರು ಇದನ್ನು ಹೆಚ್ಚಿಗೆ ಬಳಸಲು ಕಾರಣವಾಗಿರಬಹುದು. ಇ-ಮೇಲ್ ಕೂಡ ಅತ್ಯಂತ ವೇಗದಲ್ಲಿ ಬೆಳೆದು ತನ್ನ ಬಾಹುವನ್ನು ವಿಸ್ತರಿಸಿಕೊಂಡಿದೆ. ಇದು ಅನುಕೂಲಕರ ಮತ್ತು ಮಿತವ್ಯಯವನ್ನು ಸಾಧಿಸುವಂತಹದ್ದು. ಭೌಗೋಳಿಕ ಅಂತರವನ್ನು ಕಡಿಮೆಗೊಳಿಸಿ ಇಡಿ ಜಗತ್ತನ್ನು ಒಂದು ಹಳ್ಳಿಯನ್ನಾಗಿ ತಂತ್ರಜ್ಞಾನ ರೂಪಿಸಿದೆ. ಕೆಲವೇ ಕೆಲವು ಕ್ಷಣಗಳಲ್ಲಿ ನಾವು ಜಗತ್ತಿನ ಯಾವುದೇ ಮೂಲೆಯನ್ನು ಸಂಪರ್ಕಿಸಬಹುದು. ವಿದ್ಯುನ್ಮಾನ ಸಂಪರ್ಕವು ಇಂದು ಅತ್ಯಂತ ಜನಪ್ರಿಯವಾಗಲು ಕಾರಣಗಳು ಹೀಗಿವೆ. ನಿಖರತೆ, ವೇಗ, ಸಂಪನ್ಮೂಲಗಳ ಸಹಭಾಗಿತ್ವ, ಮಿತವ್ಯಯ, ದಕ್ಷತೆ, ಉತ್ತಮ ಸೇವೆ, ಸ್ಥಳಾವಕಾಶ, ಕಾರ್ಯಭಾರದ ಸಮರ್ಥ ನಿರ್ವಹಣೆಗಳು ಕಾರಣವಾಗಿವೆ.

ಮಾಹಿತಿ ಎನ್ನುವದು ಎಲ್ಲರ ಹಕ್ಕಾಗಿದೆ. ಮಾಹಿತಿಯ ನಮ್ಮ ನಿಲುವು ಒಲವುಗಳನ್ನು ನಿರ್ಧರಿಸುವ (Decision making factor) ಸಂಗತಿಯಾಗಿದೆ. ಎಲ್ಲ ಇಂಟರ್‌ನೆಟ್ ಮಾಹಿತಿಗಳು ಬೆಳವಣಿಗೆಯ ದಿಕ್ಕನ್ನು ತೋರಿಸುತ್ತವೆ. ಕ್ಷೇತ್ರದ ಗುಣಮಟ್ಟ ಈ ವ್ಯವಸ್ಥೆಯನ್ನು ಸಮರ್ಥವಾಗಿ ಬಳಸಿಕೊಳ್ಳುವದಾಗಿದೆ. ವಿದ್ಯಾರ್ಥಿಗಳಿಂದ ಹಿಡಿದು, ಎಲ್ಲರೂ ಈ ವ್ಯವಸ್ಥೆಗೆ ಒಳಪಡಬೇಕಾಗಿದೆ. ನಾವು ಯಾವುದೇ ಕಾರಣಕ್ಕೂ ಹಿಂದೆ ಸರಿಯುವ ಪ್ರಯತ್ನ ಮಾಡಬಾರದು. ಎಲ್ಲ ಸಾರ್ವಜನಿಕ ಕ್ಷೇತ್ರ, ಬ್ಯಾಂಕಿಂಗ್, ಕೈಗಾರಿಕೆಗಳು, ಉದ್ಯಮ, ಕಚೇರಿಗಳು ತಮ್ಮ ವೇಳೆಯನ್ನು ಪೋಲು ಮಾಡದೆ ತಂತ್ರಜ್ಞಾನವನ್ನು ಅಳವಡಿಸಿಕೊಂಡದ್ದಾದರೆ ನಾವು ಪ್ರಗತಿಯ ಕಡೆ ಮುಖ ಮಾಡಿದ್ದೇವೆ ಎಂದೇ ಅರ್ಥೈಸಿಕೊಳ್ಳಬಹುದು. ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ಕ್ಷೇತ್ರಗಳಿಗಂತೂ ಇದು ಆಧ್ಯತೆಯ ಕ್ಷೇತ್ರವಾಗಿದೆ. ನಮ್ಮ ಕ್ಷೇತ್ರದ ವಿಜ್ಞಾನಿಗಳು, ಪರಿಣಿತರು ಇದೊಂದು ಶಕ್ತಿಯುತ ಅಸ್ತ್ರವೆಂಬಂತೆ ಈ ಕ್ಷೇತ್ರವನ್ನು ಬಳಸಿಕೊಳ್ಳಬೇಕಾಗಿದೆ. ನಾವು ನಮ್ಮ ಕ್ಷೇತ್ರದಲ್ಲಿ ಅದ್ವಿತೀಯ ಸೇವೆ ಸಲ್ಲಿಸಬೇಕು, ಪ್ರಗತಿ ಸಾಧಿಸಬೇಕಾದರೆ ಈ ತಂತ್ರಾಂಶ (Software) ಮತ್ತು ತಂತ್ರಜ್ಞಾನ (Technology) ವನ್ನು ಅಳವಡಿಸಿಕೊಳ್ಳದೆ ಬೇರೆ ದಾರಿಯೇ ಇಲ್ಲ. ಇದು ಸೇವೆಯನ್ನು ಉತ್ತಮಗೊಳಿಸಿಕೊಳ್ಳುವ ಮಾರ್ಗದಲ್ಲಿ ಒಂದು ಮಹತ್ವದ ಸಾಧನೆ ಎನ್ನುವದನ್ನು ನಾವು ಅರಿತುಕೊಳ್ಳಬೇಕು. ಸಂಪನ್ಮೂಲ ಸಂಗ್ರಹಣೆಗೆ ಮತ್ತು ಜ್ಞಾನ ವಿಕಾಸಕ್ಕೆ ಇಂಟರ್‌ನೆಟ್ ಒಂದು ವೇದಿಕೆ ಆಗಿ ಕೆಲಸ ಮಾಡುತ್ತಿದೆ.

ಈ ತಂತ್ರಜ್ಞಾನವು ನಮ್ಮ ಗ್ರಂಥಾಲಯಗಳಿಗೆ ಹೊಸ ಆವಿಷ್ಕಾರಗಳನ್ನು ಪಡೆಯಲು, ಮಾಹಿತಿ ಪ್ರಸರಣ ಮಾಡುವದರಲ್ಲಿ ಸಾಧನವನ್ನಾಗಿ ಮಾಡಿ ತೋರಿಸಬಹುದಾಗಿದೆ. ಹೊಸ ತಂತ್ರಜ್ಞಾನದಿಂದ ನಮ್ಮ ಜ್ಞಾನದ ದಿಕ್ಕು ದಿಗಂತಗಳು ವಿಸ್ತಾರಕ್ಕೆ ಚಾಚಿಕೊಳ್ಳುತ್ತಿವೆ. ಮಾಹಿತಿ ತಂತ್ರಜ್ಞಾನ ಸಂಪನ್ಮೂಲ ಕ್ರೋಢೀಕರಣ (Resource Sharing) ದಲ್ಲಿ ಅತ್ಯಂತ ವೇಗವಾಗಿ ಬೆಳೆಯುತ್ತಿದೆ. ಅತ್ಯಂತ ವೇಗವಾಗಿ ಬೆಳೆಯುತ್ತಿರುವ ತಂತ್ರಜ್ಞಾನ ಪ್ರಗತಿಯ

ಧ್ಯೋತಕವೆನಿಸಿದೆ. ಅದೆಲ್ಲ ತೊಂದರೆಗಳನ್ನು ಮರೆತು ನಾವೀಗ ಈ ಕ್ಷೇತ್ರಕ್ಕೆ ಕಾಲಿಡಬೇಕಾಗಿದೆ. ನಮ್ಮ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ಕ್ಷೇತ್ರಕ್ಕೆ ಸದಾವಕಾಶವನ್ನು ಒದಗಿಸಿದೆ. ಅದನ್ನು ಸಮರ್ಥವಾಗಿ ನಿಭಾಯಿಸುವ ಕೆಲಸ ಈಗ ಸಾಧಿಸಬೇಕಾಗಿದೆ ಅಷ್ಟೆ.

ಯುಜಿಸಿ ಕೂಡ ಆಯ್ದ ಕಾಲೇಜುಗಳಿಗೆ ಮತ್ತು ವಿಶ್ವವಿದ್ಯಾಲಯಗಳಿಗೆ ಕಂಪ್ಯೂಟರ್, ಇಂಟರ್‌ನೆಟ್ ಜಾಲವನ್ನು ಅಳವಡಿಸಿಕೊಳ್ಳಲು ಸಾಕಷ್ಟು ಪ್ರೋತ್ಸಾಹ ಮತ್ತು ಅನುದಾನ ನೀಡುವುದನ್ನು ನಾವು ನೋಡುತ್ತಿದ್ದೇವೆ. ಪ್ರಾದೇಶಿಕ ಸರಕಾರಗಳು, ಸಮಿತಿಗಳು ಈಗ ಈ ಕ್ಷೇತ್ರಕ್ಕೆ ಧಾರಾಳವಾಗಿ ಹಣವನ್ನು ಖರ್ಚು ಮಾಡಲು ಮುಂದೆ ಬರುತ್ತಿವೆ. ಸದ್ಯ ಬಳಕೆ ಮತ್ತು ಸಾಧನೆ ಮಾತ್ರ ಉಳಿದಿರೋದು.

## ೬.೨.೧೧.೧ : ಪ್ರಾಕ್ಸಿ ಸರ್ವರ್ಸ್ (Proxy Servers)

ಇದು ಐಚ್ಛಿಕವಾಗಿದ್ದರೂ ಇದನ್ನು ಬಹು ಉದ್ದೇಶಗಳಿಗಾಗಿ ಉಪಯೋಗ ಮಾಡಬಹುದಾಗಿದೆ. ಆಸಕ್ತರಿಗೆ ಇಂಟರ್‌ನೆಟ್‌ನಲ್ಲಿ ಇದು ಮುಖ್ಯವಾಗಿದ್ದು ಬಳಕಾದಾರರಿಗೆ ಮಾಹಿತಿ ನೀಡುತ್ತದೆ. ಇಂಟರ್‌ನೆಟ್ ಬಳಕೆದಾರರಿಗೆ ಇದೊಂದು ಸವಾಲು ಮತ್ತು ಆವಶ್ಯಕ ಸೇವೆಗಳಲ್ಲಿ ಒಂದೆಂದು ನಿಶ್ಚಯಿಸಲಾಗಿದೆ. ಇಂಟರ್‌ನೆಟ್ ಇಲ್ಲದಿದ್ದಾಗ್ಯೂ ನಾವು ಪ್ರಾಕ್ಸಿ ಸರ್ವರನ್ನು ಬಳಸಬಹುದಾಗಿದೆ.

## ೬.೨.೧೧.೨ : ಎಚ್‌ಟಿಎಮ್‌ಎಲ್ (HTML)

ಅತ್ಯುಕ್ತಿ ಪಠ್ಯ ಬಹುಭಾಷಾ ಮಾಧ್ಯಮಗಳಲ್ಲಿ ಇದನ್ನು ಬಳಸಲಾಗಿದೆ. ನಮ್ಮ web site ನಲ್ಲಿ ನಾವು ಇದನ್ನು ಅಳವಡಿಸಿಕೊಳ್ಳಬಹುದಾಗಿದೆ. ಇದಲ್ಲದೆ ಬಹಳ ವರ್ಡ್ ಪ್ರೊಸೆಸರ್‌ಗಳನ್ನು, ಸ್ಪ್ರೆಡ್‌ಶೀಟ್‌ಗಳನ್ನು ಮತ್ತು ದತ್ತಾಂಶ (databases) ಗಳನ್ನು ಹೊರ ದೇಶಗಳಿಗೆ ರಫ್ತು ಮಾಡಬಹುದು. ನಮಗೆ ಬೇಕಾದ ಸಂದರ್ಭಗಳಲ್ಲಿ ಬೇಕಾದ ಭಾಷೆಗಳಲ್ಲಿ, ಬೇಕಾದ ಹಾಗೆ ರೂಪ-ರೇಷೆ ರಚನೆ ಮಾಡಿಕೊಳ್ಳಬಹುದಾಗಿದೆ.

## ೬.೨.೧೧.೩ : ಉತ್ಪಾದನಾ ಸಾಧನಗಳು (Productivity Tools)

ಹಂಚಿಕೆ ವ್ಯವಸ್ಥೆಯಲ್ಲಿ ನಮಗೆ ಬೇಡವಾದ ವಸ್ತು ಹೊರ ಕಳಿಸಬಹುದು. (We must also have a repository of certain utilities at our disposal). ವರ್ಡ್‌ಪ್ರೊಸೆಸರ್, ಸ್ಪ್ರೆಡ್‌ಶೀಟ, ಪ್ರಜೆಂಟೇಶನ್ ಪ್ಯಾಕೇಜ್, ದತ್ತಾಂಶಗಳನ್ನು ಸೀದಾ ನಮ್ಮ ಸ್ವಂತ ಇಂಟರ್‌ನೆಟ್‌ನಲ್ಲಿ ಬಳಸಿಕೊಳ್ಳಬಹುದು. ಅಥವಾ ಪ್ರಕಾಶಿಸಬಹುದು. ಈ

ಮೂರು ಕೋರೆಲ್ ಪರಫೆಕ್ಟ್ ಆಫೀಸ್ ೭ / ೮, ಲೋಟಸ್ ಸ್ಮಾರ್ಟ್ ಸೂಟ್ ೯೭, ಮತ್ತು ಮೈಕ್ರೋಸಾಫ್ಟ್ - ೯೭ ಈ ಎಲ್ಲವು ನಮ್ಮ ಸ್ವಂತ ಇಂಟರ್‌ನೆಟ್‌ನಲ್ಲಿ ದಾಖಲಿಸಿಕೊಳ್ಳಬಹುದು. ಅಲ್ಲದೆ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳುವದು ವೈಯಕ್ತಿಕ ಆಸಕ್ತಿ ಮತ್ತು ಬಳಕೆದಾರರನ್ನು ಅವಲಂಬಿಸಿದೆ.

### ೬.೨.೧೧.೪ : ಈ-ಮೇಲ್ –ಫ್ರಂಟ್ - ಎಂಡ್ಸ್

ಅನೇಕ ವಿಧಗಳಲ್ಲಿ ಸಿಗುತ್ತದೆ. ಇಲ್ಲಿ ಅತಿ ಗರಿಷ್ಠ ಶಕ್ತಿಯ ಮತ್ತು ಸ್ವತಂತ್ರವಾಗಿಯೂ ಯುಡೋರಾ ಲೈಟ್ (Eudora light) ಮತ್ತು ಪೆಗಾಸಸ್ (Pegasus) ಎಂಬ ಸಾಧನಗಳಿವೆ. ಇವುಗಳಿಗೆ ನಾವು ಈ-ಮೇಲ್ ಮುಖಾಂತರ ಮಾಹಿತಿ ಕಳಿಸಿದರೆ ಎಕ್ಸ್‌ಪ್ಲೋರರ್ ಮತ್ತು ನೆಟ್‌ಸ್ಕೇಪ್ ನೇವಿಗೇಟರ್ಸ್‌ಗಳಲ್ಲೂ ಲಭ್ಯ ಮಾಹಿತಿ ಸಿಗುತ್ತದೆ. ಇದು Microsoft - 97 ದ ಭಾಗ ಮತ್ತು ಫ್ರಂಟ್ ಈ-ಮೇಲ್‌ನ್ನು ದೊರಕಿಸುತ್ತದೆ.

### ೬.೨.೧೧.೫ : ವೈದ್ಯಕೀಯ ಕ್ಷೇತ್ರದಲ್ಲಿ ಇಂಟರ್‌ನೆಟ್ ಬಳಕೆ (Medical Database available in the Internet)

ಅತ್ಯಂತ ಬೆಳವಣಿಗೆಯ ಕ್ಷೇತ್ರದಲ್ಲಿ ಒಂದಾದ ವೈದ್ಯಕೀಯ ಕ್ಷೇತ್ರದಲ್ಲಿ ಇಂಟರ್‌ನೆಟ್ ಜಾಲವು ಮಹತ್ವದ ಪಾತ್ರಗಳನ್ನು ನಿರ್ವಹಿಸುತ್ತಿದೆ. ಮೆಡಲೈನ್ (MEDLINE), ಎಂಬೇಸ್ (EMBASE), ಬಯೋಸಿಸ್ (BIOSIS) ಮತ್ತು ಔಷಧೀಯ ತಂತ್ರಾಂಶಗಳಿಗೆ ಸಂಬಂಧಪಟ್ಟ ಉತ್ಪಾದನೆಗಳು ವೈದ್ಯಕೀಯಕ್ಕೆ ಅತ್ಯಂತ ಅವಶ್ಯವಾಗಿದ್ದು ವೈದ್ಯಕೀಯ ಪರಿಣಿತರು ಇವುಗಳನ್ನು ಸಮರ್ಥವಾಗಿ ಬಳಸಿಕೊಳ್ಳುತ್ತಿದ್ದಾರೆ.

### ೬.೨.೧೧.೬ : ಮೆಡಲೈನ್ (ಮೆಡಲಾರ್ಸ್ ಆನ್ ಲೈನ್)

ವೈದ್ಯಕೀಯ ವಿಜ್ಞಾನಕ್ಕೆ ಸಂಬಂಧಪಟ್ಟ ವಾಙ್ಮಯ ದರ್ಶಕವು ೩೯,೦೦೦ ಜೀವ ವೈದ್ಯಕೀಯ (Biomedical sciences) ಕ್ಷೇತ್ರದಲ್ಲಿ ನಿಯತಕಾಲಿಕೆಗಳು, ಜಗತ್ತಿನ ಎಪ್ಪತ್ತು ರಾಷ್ಟ್ರಗಳ ಮತ್ತು ಎಂಬತ್ತು ಮಿಲಿಯನ್ ರೆಕಾರ್ಡ್ಸ್‌ಗಳನ್ನು ಒಳಗೊಂಡಿದೆ. ಇದು ೧೯೬೬ ರಲ್ಲಿ ಅಂಕಿ-ಅಂಶಗಳ ಪ್ರಕಾರ, ಇವತ್ತು ೮೮% ರಷ್ಟು ಈ ಕ್ಷೇತ್ರ ಮಾಹಿತಿಯನ್ನು ಪಡೆದುಕೊಳ್ಳುತ್ತದೆ. ಅದೂ ಅಲ್ಲದೆ ಅದು ಅತೀ ವಿಶಿಷ್ಟ ಪತ್ರಿಕೆಗಳ Special list of journal and contents ಗಳನ್ನು ಅದು ಇಂಟರ್‌ನೆಟ್‌ನಲ್ಲಿ ಬಯಸುತ್ತಿದೆ. ಈಗ ಅದು ೬೫,೦೦೦ ಪತ್ರಿಕೆಗಳ ಶೀರ್ಷಿಕೆ ಮತ್ತು ಪರಿವಿಡಿಗಳನ್ನು ಇಂಟರ್‌ನೆಟ್‌ಗಳಲ್ಲಿ ಪಡೆಯುತ್ತಿದೆ ಎಂದರೆ ನಮಗದರ ಅಗಾಧತೆ ಅರ್ಥವಾದೀತು. ಹೋಮ್‌ಪೇಜ್‌ಗಳಾದ ಬಯೋಮೆಡ್‌ನೆಟ್, ಫಾರ್ ಇನ್‌ಫೋನೆಟ್ ಮತ್ತು ಪತ್ರಿಕೆ ಬ್ರಿಟಿಷ್ ಮೆಡಿಕಲ್ ಜರ್ನಲ್‌ನ್ನು ಅತ್ಯುಕ್ತಿ ಪಥ್ಯವಾದ ಪಬ್ ಮೆಡನಲ್ಲಿಯ ಹೋಮ್ ಪೇಜ್‌ಗಳಲ್ಲಿ ಕಾಣಬಹುದಾಗಿದೆ.

## ೬.೨.೧೧.೭ : ಎಂಬೇಸ್ (EMBASE)

ಇಂದು ವೈದ್ಯಕೀಯ ಶಾಸ್ತ್ರದ ಇತರೆ ವಿಭಾಗಗಳ ಮೇಲಿನ ವಿಷಯಗಳಾದ ಜೀವ ವೈದ್ಯಕೀಯ, ಔಷಧಿಗಳ ಕ್ಷೇತ್ರ, ಜೀವ ವೈವಿಧ್ಯ ಶಾಸ್ತ್ರ, ಜೀವ ರಸಾಯನ ಶಾಸ್ತ್ರ, ಔಷಧಿಗಳ ವಿವರಗಳು, ಮನುಷ್ಯ ವೈದ್ಯ ವಿಜ್ಞಾನ, ಫೋರ್ಸೆನಿಕ್, ಪೇಡಿಯಾಟ್ರಿಕ್ಸ್, ಡ್ರಗ್ ಥೆರಪಿ, ವೈದ್ಯಕೀಯ ಅರ್ಥಶಾಸ್ತ್ರ, ಮನಶಾಸ್ತ್ರ, ಸಾರ್ವಜನಿಕ ಆರೋಗ್ಯ, ವೈದ್ಯಕೀಯ ಮತ್ತು ತಾಂತ್ರಿಕ ವಿಜ್ಞಾನ, ವೈದ್ಯಕೀಯ ಪರಿಸರ ಮುಂತಾದ ವಿಷಯಗಳನ್ನು ಈ ಎಂಬೇಸ್ ಒಳಗೊಂಡಿರುತ್ತದೆ. ಇದಕ್ಕೆ ತಕ್ಕಂತೆ ವಾಙ್ಮಯ ದರ್ಶಕಗಳು, ವಿಷಯಸೂಚಿಗಳು, ರಾಸಾಯನಿಕ ಹೆಸರುಗಳು, ಔಷಧಿಗಳು, ಅದಕ್ಕೆ ಪರಿಹಾರಗಳು ಈ ಅಂತರ್‌ಜಾಲದಲ್ಲಿ ದೊರಕುತ್ತವೆ. ಇಲ್ಲಿ ಟಿಪ್ಪಣಿಗಳು, ಇತಿಹಾಸ, ಡಿಸ್ಕ್ರಿಪ್ಟ್ಸ್‌ಗಳು ದೊರಕುತ್ತವೆ. CAS ರಜಿಸ್ಟರ್ ಕೂಡಾ ಇಲ್ಲಿ ಇದ್ದು ಅದರಲ್ಲಿ ನೋಂದಾಯಿಸಿದರೆ ನಿಮಗೆ ಮಾಹಿತಿ ದೊರಕಬಹುದು. ೧೯೭೪ – ೭.೨೭.೧೯೫ ರೆಕಾರ್ಡ್ಸ್ (೭/೯೮) ಈಗ ೫,೦೦೦ – ೭,೦೦೦ ಪ್ರತಿ ವಾರಕ್ಕೆ ಇಷ್ಟು ರೆಕಾರ್ಡ್ಸ್‌ಗಳು ದಾಖಲಾಗುವಂತಹದ್ದು ವೈದ್ಯಕೀಯ ಶಾಸ್ತ್ರದಲ್ಲಿ ಅಂದರೆ ಬಳಕೆಯ ಪ್ರಮಾಣ ಎಷ್ಟಿದೆ ಎಂಬುದನ್ನು ಊಹಿಸಲು ಅಸಾಧ್ಯ.

## ೬.೨.೧೧.೮ : ಬಯೋಸಿಸ್ (BIOSIS)

೧೯೨೬ ರಿಂದಲೂ ವೈದ್ಯಕೀಯ ಶಾಸ್ತ್ರದಲ್ಲಿಯ ಸಾರಸಂಗ್ರಹವನ್ನು ಮತ್ತು ವಾಙ್ಮಯ ಸೂಚಿಯನ್ನು ಇದು ನೀಡುತ್ತದೆಯಲ್ಲದೆ ವಿಜ್ಞಾನಿಗಳಿಗೆ ಅಗಾಧವಾದ ಮಾಹಿತಿಯನ್ನು ನೀಡುತ್ತಿದೆ.

ಪ್ರತಿವರ್ಷ – ೫೫,೦೦೦ ಐಟೆಮ್‌ಗಳನ್ನು ನೀಡುತ್ತಿದೆ. ೧೩ ಮಿಲಿಯನ್ ಸೈಟೇಶನ್‌ಗಳನ್ನು; ೧೯೯೭ ರ ವರೆಗೆ ಇದ್ದ ಅಂಕಿ-ಅಂಶಗಳಿಂದ ಮಾಹಿತಿ ನೀಡಿದೆ.

– ಆರ್‌ಆರ್‌ಎಮ್ – ಬಯೋಲಾಜಿಕಲ್ ಅಬ್‌ಸ್ಟ್ರಾಕ್ಟ್

– ಬಿಎ – "

ಇವೆರಡು ವರದಿಗಳನ್ನು, ವಿಮರ್ಶಾತ್ಮಕ ಲೇಖನಗಳನ್ನು, ಸಂಪರ್ಕ ಸಭೆಗಳ ಸಾರ ಸಂಗ್ರಹ ರೂಪದ ವಿವರಗಳನ್ನು ನೀಡುತ್ತವೆ. ಇವು CD-ROM ಫಾರ್ಮಾಗಳಲ್ಲಿ ಕೂಡ ಲಭ್ಯವಿದೆ.

– ಬಯೋಸಿಸ್ ಪರವ್ಯೂ (Biosis Perview)

– ಫುಡ್ಸ್ ಇಂಟಲಿಜೆನ್ಸ್ (Foods Intelligense)

– ಟಾಕ್ಸ್‌ಲಾಯಿನ್ ಪ್ಲಸ್ (TOXLINE PLUS)

ಮುಂತಾದವುಗಳು ಸಿಡಿ ಗಳಲ್ಲಿ ಸಿಕ್ಕು ವೈದ್ಯಕೀಯ ಕ್ಷೇತ್ರದ ಫಾರ್ಮಾ ಇನ್‌ಫೋಸಿಟ್ ಕೂಡಾ ಸಮಗ್ರ ಪಠ್ಯ ಮಾಹಿತಿಯನ್ನು ನೀಡುವಂತಹ ಇಂಟರ್‌ನೆಟ್ ಪೇಜ್ ಕೂಡಾ ನಮಗೆ ಇಲ್ಲಿ ಸಿಗುತ್ತದೆ.

ಸಂಶೋಧನಾ ಸಾಮಗ್ರಿಗಳು, ಔಷಧಿಗಳು, ರೋಗಿಗಳು ಜಾತಕ, ಪರಿಹಾರ ಇತ್ಯಾದಿ ವಿಷಯಗಳನ್ನು ನಮ್ಮನ್ನು ಆ ಲೋಕಕ್ಕೆ ಒಯ್ದು ಹೊಸ ಹೊಸ ದಿಗಂತಗಳನ್ನು ಪರಿಚಯಿಸುತ್ತವೆ.

ಹೀಗೆ ವೈದ್ಯಕೀಯ ಶಾಸ್ತ್ರ ಅತ್ಯಂತ ವೇಗವಾಗಿ ಮಾಹಿತಿ ತಂತ್ರಜ್ಞಾನವನ್ನು ಬಳಸಿಕೊಂಡು ಪ್ರಗತಿ ಸಾಧಿಸಿದೆ.

## ೬.೨.೧೨ : ಗ್ರಂಥಸೂಚಿಗಳು, ಕೈಪಿಡಿಗಳು

ಕೈಪಿಡಿಗಳು, ಗ್ರಂಥಸೂಚಿಗಳು ನಮಗೀಗ ಇಂಟರ್‌ನೆಟ್‌ನಲ್ಲಿ ಲಭ್ಯವಿರುತ್ತವೆ. ಮಾಹಿತಿ ಸುದ್ದಿಗಳು, ಮೇಲಿಂಗ್ ಲಿಸ್ಟ್ಸ್, ಪತ್ರಿಕೆಗಳು, ಸುದ್ದಿಪತ್ರಗಳನ್ನು ನಾವೀಗ ಇಂಟರ್‌ನೆಟ್‌ನಲ್ಲಿ ನೋಡಬಹುದಾಗಿದೆ. ಆರೋಗ್ಯ ಕೈಪಿಡಿಗಳು, ಏಡ್ಸ್, ಸಕ್ಕರೆ ಮುಂತಾದ ರೋಗಗಳ ಬಗ್ಗೆ ಮಾಹಿತಿ ಇವುಗಳಲ್ಲಿರುತ್ತದೆ. ಉದಾ : CATMAN ಇನ್ಸ್‌ಡಾಕ್‌ನಲ್ಲಿದೆ. **(MEDCAT)** : ನ್ಯೂಯಾರ್ಕ್ ವಿಶ್ವವಿದ್ಯಾಲಯದ ಮೆಡ್‌ಕ್ಯಾಟ್ (MEDCAT) ಇದಕ್ಕೊಂದು ತಾಜಾ ಉದಾಹರಣೆ. ಇಲ್ಲಿ ಗ್ರಂಥಾಲಯ ಪುಸ್ತಕಗಳ ಸೂಚಿ, ಲೇಖಕ, ವಿಷಯ ಸೂಚಿ, ಮುಂತಾದವುಗಳನ್ನು MEDCAT ಗೇಟ್‌ವೇ ಯಲ್ಲಿ ನಮ್ಮ ಮಾಹಿತಿಗಳು ಸಿಗುತ್ತವೆ. ಇದು ಸೂಚಿಗಳನ್ನು ಮಾತ್ರ ನೀಡುತ್ತದೆ. ವಿದ್ಯುನ್ಮಾನ ಮಾಹಿತಿ ಕೋಶಗಳು ಮತ್ತು OPAC ಗಳ ಸಹಾಯದಿಂದ ಆಯ್ದ ಗ್ರಂಥಗಳ ಸೇವೆಗಳನ್ನು (೧) ಎಸ್.ಡಿ.ಐ. (೨) ಸಿ.ಎ.ಎಸ್. ಮತ್ತು (೩) ಐ.ಎಲ್.ಡಿ. ಗಳ ಮೂಲಕ ಸಂಶೋಧಕರು, ವಿದ್ಯಾರ್ಥಿಗಳಿಗೆ, ಸಿಬ್ಬಂದಿಗಳಿಗೆ ಕಡಿಮೆ ಸಮಯದಲ್ಲಿ ಸೇವೆಯನ್ನು ನೀಡಿ ಸಹಕರಿಸಬಹುದು.

## ೬.೨.೧೨.೧ : ಶಬ್ದಕೋಶಗಳು, ವಿಶ್ವಕೋಶಗಳು ಮತ್ತು ಮಾರ್ಗದರ್ಶಿಗಳು

ಅಸಂಖ್ಯಾತ ಸಂಖ್ಯೆಗಳಲ್ಲಿ ಶಬ್ದಕೋಶಗಳು, ವಿಶ್ವಕೋಶಗಳು ಮಾರ್ಗದರ್ಶಿಗಳು ನಮಗೆ ಇಂಟರ್‌ನೆಟ್‌ನಲ್ಲಿ ಲಭ್ಯವಿವೆ. ಅದು ಹೆಚ್ಚಾಗಿ ವೈದ್ಯಕೀಯ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯಗಳು ಮಾತ್ರ. ಇದಲ್ಲದೆ ನಾವು ಅವುಗಳ ಪೂರ್ಣ ಪಠ್ಯ ಪಾಠವನ್ನು ಪಡೆಯಬಹುದು. ಉದಾ : ನ್ಯಾಶನಲ್ ಕ್ಯಾನ್ಸರ್ ಇನ್‌ಸ್ಟಿಟ್ಯೂಟ್‌ನಿಂದ ಬೇಕಾದ ಎಲ್ಲ ಮಾಹಿತಿ ಪಡೆಯಬಹುದು. ಬ್ರಿಟಾನಿಯಾ ವಿಶ್ವಕೋಶ ಓದಲು www.britannica.com ಈ ವಿಳಾಸಕ್ಕೆ ಸಂಪರ್ಕಿಸಿದರೆ ಸಾಕು. ಕಂಪ್ಯೂಟರ್ ಪರದೆಯ ಮೇಲೆ ಬಹುಸಂಪುಟಗಳಲ್ಲಿ ದೊರೆಯತಕ್ಕಂತಹ ವಿಶ್ವಕೋಶವನ್ನು ಓದಬಹುದು.

ಶಬ್ದಕೋಶಗಳಿಗೆ http://www.insc.ernet/in/insdoc ಸೈಟ್ ವಿಜ್ಞಾನ ಶಬ್ದಕೋಶಗಳನ್ನು, ಪತ್ರಿಕೆಗಳನ್ನು ಒಳಗೊಂಡಿರುತ್ತದೆ.

### ೬.೨.೧೨.೨ : ದತ್ತಾಂಶಗಳು ಮತ್ತು ಪತ್ರಿಕೆಗಳ ನೇರ ಸಂಪರ್ಕ ಸೇವೆ (On line service)

ವರ್ಡ್‌ವೈಡ್ ವೆಬ್ (www) ಮುಖಾಂತರ ನಾವೀಗ ಪತ್ರಿಕೆಗಳನ್ನು ಕಂಪ್ಯೂಟರ್‌ನ ಇಂಟರ್‌ನೆಟ್‌ನಲ್ಲಿ ಓದಬಹುದು. ಈಗೀಗ ಇಂಗ್ಲೀಷ ಪತ್ರಿಕೆಗಳನ್ನು ಕೊಂಡರೆ ಜೊತೆಗೆ ಸಿಡಿ ಯು ನಮಗೆ ಲಭ್ಯವಾಗುತ್ತದೆ. ಇದು ಪ್ರಾದೇಶಿಕ ಭಾಷೆಗಳಲ್ಲಿ ಸಾಧ್ಯವಿಲ್ಲ. ಇದು ಸರಳ ಮತ್ತು ಸಾಧ್ಯವಾದ ವಿಷಯವಾಗಿದೆ. ಒಂದು ಕನ್ನಡ ಪತ್ರಿಕೆಯನ್ನು ನಾವು ಜಗತ್ತಿನ ಯಾವುದೇ ಮೂಲೆಯಲ್ಲಿ ಕುಳಿತು ಓದಬಹುದಾಗಿದೆ.

ಉದಾ : E.mail : editor@vsnl.com ನ್ನು ಇಂಟರ್‌ನೆಟ್‌ನ ವೆಬ್ ಪೇಜ್‌ನಲ್ಲಿ ತೆರೆದು ಓದಿದರೆ ನಮಗೆ ಸಂಯುಕ್ತ ಕರ್ನಾಟಕ ದಿನಪತ್ರಿಕೆ ಕಣ್ಣಿಗೆ ಕಾಣುತ್ತದೆ.

ಇದು ನಮಗೆ ಎರಡು ರೀತಿಯ ಕೆಲಸಗಳನ್ನು ಸರಳಗೊಳಿಸುತ್ತದೆ. ಒಂದು ಗ್ರಂಥದ ಸಮಗ್ರ ವಿವರ, ಎರಡನೆಯದಾಗಿ ನಮಗೆ ಸಂಬಂಧಿಸಿದ ಆಯ್ಕೆಯ ಕ್ಷೇತ್ರವನ್ನಷ್ಟೆ ಪ್ರತಿನಿಧಿಸುವದರಿಂದ ಉಳಿದ ಕ್ಷೇತ್ರಗಳ ಬಗ್ಗೆ ನಾವು ಗಮನವನ್ನು ನೀಡಬೇಕಾಗಿಲ್ಲ. ನಮಗೆ ಬೇಕಾದದ್ದನ್ನೆ ಇದು ನೀಡುತ್ತದೆ.

ಸಂಶೋಧಕರಿಗೆ ಅತ್ಯಂತ ಉಪಯುಕ್ತ ದಾಖಲೆ ಇಂದು ಕ್ಷಣಮಾತ್ರದಲ್ಲಿ ಸಿಗುತ್ತಿದೆ. ೧೯೯೮ - ೯೯ ರಿಂದ ಯುರೋಪ್ ದೇಶಗಳು ಆಪರೇಶನಲ್ ರಿಸರ್ಚ್ ಪತ್ರಿಕೆಗಳನ್ನು ವೆಬ್ ಮೇಲೆ ಪ್ರಕಟಿಸುತ್ತಿವೆ. ಉದಾ : www.elsevier.com/locate.orms ಇದರ ಮುದ್ರಿತ ಕಾಪಿ ಕೂಡಾ ಸಿಗುತ್ತದೆ. ಇದು ಇಂಡಿಯಾ ದೇಶದ ಗ್ರಂಥಾಲಯಗಳಲ್ಲಿ ೧೯೯೯ ಜುಲೈದಿಂದಲೇ ಸಿಗುತ್ತಿದೆ. ಈಗ ವಿದ್ಯುನ್ಮಾನ ಪತ್ರಿಕೆಗಳು - ಪುಸ್ತಕಗಳು ಸುದ್ದಿಯಲ್ಲಿವೆ. ನಮಗೆ ಗೊತ್ತಿದ್ದ ಹಾಗೆ ಕನ್ನಡ ಪತ್ರಿಕೆಗಳು ರೂ. ಒಂದು – ಐವತ್ತು ಪೈಸೆಗೆ ಒಂದು ಪ್ರತಿ, ಮೊದಲು ರೂ. ಎರಡು ಐವತ್ತು ಪೈಸೆಗಳಿದ್ದುದು, ಅಂದರೆ ಜಗತ್ತಿನ ಓಟದ ಜೊತೆಗೆ ಅವು ಸ್ಪರ್ಧಿಸಹತ್ತಿವೆ. ಓದುಗರು ಕಡಿಮೆಯಾಗುತ್ತಿದ್ದಾರೆ. ಇತ್ತೀಚೆಗೆ ತಾಂತ್ರಿಕ ವಿಷಯದ ಪತ್ರಿಕೆಗಳು ವೆಬ್‌ಸೈಟ್‌ಗಳಲ್ಲಿ ಮಾತ್ರ ಸಿಗುತ್ತಿವೆ. ಅವರು ಅಲ್ಲಿಯೇ ಪಬ್ಲಿಶ್ ಮಾಡಲು ಬಯಸಿದ್ದಾರೆ ಆಸಕ್ತರು itoms.bus.okstate.edu/iform/ . ಭೆಟ್ಟಿ ಕೊಡಬಹುದು, ಓದಬಹುದು, ಫುಲ್ ಟೆಕ್ಸ್ಟ್ ಪಡೆಯಬಹುದು. ಇದು ತಾಜಾ ಉದಾಹರಣೆ ಮಾತ್ರ.

### ೬.೨.೧೨.೩ : ಸಾಂಸ್ಥಿಕ ಗ್ರಂಥಾಲಯಗಳ ನೇರ ಸಂಪರ್ಕ (Institutional libraries on line)

ನಾವಿಂದು ಗ್ರಂಥಾಲಯಗಳಿಗೆ ಸಂಪರ್ಕಿಸಬೇಕಿಲ್ಲ. ಮನೆಗಳಲ್ಲಿಯೇ ಕೂತು ಕಂಪ್ಯೂಟರ್ ಇಂಟರ್‌ನೆಟ್ ಸಂಪರ್ಕದಿಂದ ನೇರ ಸಂಪರ್ಕ ಬಳಸಿ ನಿಯತಕಾಲಿಕೆಗಳನ್ನು, ಪತ್ರಿಕೆಗಳನ್ನು ಓದಹುದಾಗಿದೆ. ಸಂಶೋಧಕರು, ಶಿಕ್ಷಣ ಕ್ಷೇತ್ರದ ಬೆಳವಣಿಗೆಗಳನ್ನು ನಾವೀಗ ವೆಬ್‌ಸೈಟ್‌ಗಳ ಮುಖಾಂತರ ದೊರಕಿಸಿಕೊಳ್ಳಬೇಕಾಗಿದೆ. ಶಿಕ್ಷಣದ ಕ್ಷೇತ್ರದ ಅನೇಕ ಸಂಸ್ಥೆಗಳು ಇವತ್ತು ಗ್ರಂಥ ಸೂಚೀಕರಣಗಳನ್ನು, ಯಂತ್ರಾಂಶಗಳನ್ನು, ಪತ್ರಿಕೆಗಳನ್ನು, ಪರಿಚಯ ಪತ್ರಿಕೆ (Prospectus) ಗಳನ್ನು ಪ್ರಕಟಿಸುವದರ ಮೂಲಕ ತನ್ನ ಬೆಳವಣಿಗೆಯನ್ನು ಅದು ಜಗತ್ತಿಗೆ ತೋರಿಸುತ್ತಿದೆ. ಇದು ಬಹಳ ಬೆಲೆಯುಳ್ಳ, ವಿಶಾಲ ಮನೋಭೂಮಿಕೆಯನ್ನು ವಿಶೇಷವಾಗಿ ಪ್ರಕಟಿಸುತ್ತಿವೆ. ತಮ್ಮ ತಮ್ಮ ವೆಬ್ ಪೇಜ್‌ಗಳನ್ನು ಜಗತ್ತಿನಲ್ಲಿ ಅವು ಪಸರಿಸುತ್ತಾ ನಡೆದಿವೆ. ಬಹಳಷ್ಟು ಶೈಕ್ಷಣಿಕ ಸಂಸ್ಥೆಗಳು ಮತ್ತು ವ್ಯವಹಾರಿಕ ಶಾಲೆಗಳು (Business Schools) ತಮ್ಮ ಗ್ರಂಥಾಲಯಗಳನ್ನು ನೇರ ಸಂಪರ್ಕದಲ್ಲಿ ತೊಡಗಿಸಲು ಕಾತುರವಾಗಿವೆ. ಮತ್ತು ಅವುಗಳನ್ನು ನೇರ ಸಂಪರ್ಕದಲ್ಲಿ ತೊಡಗಿಸಿವೆ. ಆಸಕ್ತರು ಅವುಗಳನ್ನು ಗಮನಿಸಬಹುದಾಗಿದೆ.

1) Baker Library Site, Library.bhs.edu,

2) The London Business School Library, www.lbs.lon.ac.uk/library,

3) The Jackson Library at stanford University,
www.gsb.stanford.edu/service/library), .....ಇತ್ಯಾದಿ ಇತ್ಯಾದಿಗಳು.

ಹೀಗೆ ಗ್ರಂಥಾಲಯಗಳು ಸಾಂಸ್ಥಿಕವಾಗಿ ವೆಬ್‌ಪೇಜ್‌ನಲ್ಲಿ ನೇರ ಸಂಪರ್ಕದಿಂದ ಅನೇಕ ಲಾಭಗಳು ಇವೆ. ಕಲಿಯುವವರು, ಸಂಶೋಧನೆ ನಡೆಸುವವರು, ತಮಗೆ ಬೇಕಾದ ಕೋರ್ಸ್‌ಗಳನ್ನು ಆಯ್ಕೆ ಮಾಡಿಕೊಳ್ಳಬಹುದು.

### ೬.೨.೧೩ : ವಿದ್ಯುನ್ಮಾನ ಪತ್ರಿಕೆಗಳ ಅನುಕೂಲತೆಗಳು (Advantages of E-Journals)

ಜಗತ್ತಿನ ಬಹುಸಂಖ್ಯಾತ ಸಾಹಿತ್ಯವೆಲ್ಲ ಇತ್ತೀಚೆಗಿನ ಹೊಸ ಬೆಳವಣಿಗೆಗಳ ಸಾಧ್ಯತೆಗಳಿಂದ ಈಗ ವಿದ್ಯುನ್ಮಾನ ಮಾಧ್ಯಮದಲ್ಲಿ ಲಭ್ಯವಿದೆ. ಅದಕ್ಕೆ ಮಹತ್ವದ ಕಾರಣಗಳೆಂದರೆ : ಹಣ, ತಂತ್ರಜ್ಞಾನದ ಅನುಕೂಲತೆ ಮತ್ತು ವೇಗ / ನಿಖರತೆಗಳು ಇದನ್ನು ಸಾಧ್ಯವೆಂದು ತೋರಿಸಿವೆ. ಇತ್ತೀಚಿನ ದಿನಮಾನಗಳಲ್ಲಿ ಹಣದುಬ್ಬರವು ಏರುತ್ತಿರುವ ಬೆಲೆಗಳಿಂದಾಗಿ ಇಂತಹ ಸಾಹಸಕ್ಕೆ ಇನ್ನೊಂದು ಕಾರಣವೆಂದು ಕಾಣುತ್ತದೆ. ಇದು ವಿಶೇಷವಾಗಿ ವೈಜ್ಞಾನಿಕ ಪತ್ರಿಕೆಗಳ ವಿಷಯದಲ್ಲಿ ನಿಜವೂ ಇರಬಹುದೆನಿಸುತ್ತದೆ. ಇಲ್ಲಿ ಹಣ ಸಕಾರಣವಲ್ಲದಿದ್ದರೂ ಶಿಕ್ಷಣವೇತ್ತರು, ವಿದ್ವಾಂಸರು ವಿಶೇಷವಾಗಿ ಮಾಹಿತಿ ತಂತ್ರಜ್ಞರು ಮತ್ತು ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನದ ಪರಿಣತಿಗೆ ಉಚಿತವಾಗಿ ಸಿಗುವ ವಿದ್ಯುನ್ಮಾನ ಪ್ರಕಾಶನ ಈ ಕ್ಷೇತ್ರವನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿರಬಹುದೆಂದು ಊಹಿಸಲಾಗಿದೆ.

ಅತ್ಯಂತ ಕುತೂಹಲ ಮತ್ತು ಆಶ್ಚರ್ಯಕರವಾದ ಸಂಗತಿಯೆಂದರೆ ಅಚ್ಚಾದ ವಿದ್ವಾಂಸರ ಲೇಖನಗಳು ಈಗ ಈ ವಿದ್ಯುನ್ಮಾನ ಮಾಧ್ಯಮದಲ್ಲಿ ಸಂಗ್ರಹಿಸಲ್ಪಟ್ಟಿವೆ. ವಿದ್ಯುನ್ಮಾನ ಮಾಧ್ಯಮವನ್ನು ಆಧುನಿಕ ಸಂಗ್ರಹಾಲಯಗಳು ಮತ್ತು ಸಂವಹನದ ಸಾಧನಗಳೆಂದು ಕರೆದರೂ ಅತಿಶಯೋಕ್ತಿಯ ಮಾತುಗಳಲ್ಲ. ಇವು ಸರಳ ಮತ್ತು ಅನುಕೂಲ (Conventional) ಗಳಾಗಿ ಈ ಮಾಧ್ಯಮದಲ್ಲಿ ಪ್ರತಿಬಿಂಬಿಸಲಿವೆ. ವಿದ್ಯುನ್ಮಾನ ಪತ್ರಿಕೆಗಳಲ್ಲಿ ಪ್ರಕಟವಾಗುವ ಲೇಖನಗಳಿಗೆ ಅನೇಕ ಅನುಕೂಲತೆಗಳನ್ನು ಇಂದಿನ ಗ್ರಂಥಾಲಯಗಳು ಮತ್ತು ಸಂವಹನ ಕ್ರಿಯೆಗಳು ಅವನ್ನು ಒಂದಕ್ಕೊಂದು ಪೂರಕವಾಗಿ ಜೋಡಿಸಿ ವಿದ್ವಾಂಸರ, ಸಂಶೋಧಕರ ಅನುಕೂಲಕ್ಕೆ ತಕ್ಕಂತೆ ರೂಪಿಸಿ ಬಳಸಿಕೊಳ್ಳಬಹುದಾಗಿದೆ. ಅವುಗಳ ಅನುಕೂಲತೆಗಳು ಕೆಳಗಿನಂತಿವೆ.

**೬.೨.೧೩.೧ : ವೇಗ :** ವೇಗದಲ್ಲಿ ಅವು ಇತರ ಮಾಧ್ಯಮಗಳಿಂದ ಮುಂದೆ ಇವೆ. ಪ್ರತಿಯೊಂದು ಸಂಚಿಕೆಯ ಪ್ರಸರಣದಲ್ಲಿ ಅವು ನಿಖರತೆಯೊಂದಿಗೆ ಮುಂದಿವೆ. ಲೇಖಕ - ಓದುಗರ - ನಡುವಿನ ಕೊಂಡಿಗಳಾಗಿದ್ದು ನೇರ ಸಂಪರ್ಕವನ್ನು ಸಾಧಿಸಿವೆ.

**೬.೨.೧೩.೨ : ಹಂಚಿಕೆ :** ಇಡಿ ವಿಶ್ವದ ಮೂಲೆ ಮೂಲೆಗೆ ಇದರ ಹಂಚಿಕೆ ಸಾಧ್ಯವಾಗಿದ್ದು ಅವುಗಳು ಅತ್ಯುಕ್ತಿ ಪಠ್ಯಗಳಲ್ಲಿ ಈಗ ಲಭ್ಯತೆಯನ್ನು ಕಂಡಿವೆ. ಹುಡುಕಲು, ಸಮರ್ಥ ಸೈಟ್‌ಗಳನ್ನು ಅವು ಬಳಸಿಕೊಂಡಿವೆ.

**೬.೨.೧೩.೩ : ಹಿಂಪಡೆಯುವಿಕೆ :** ನಮಗೆ ಬೇಕೆಂದಾಗ ಬೇಕಾದ ವಿಷಯವನ್ನು ಇಲ್ಲಿ ಪಡೆದುಕೊಳ್ಳಬಹುದಾಗಿದೆ. ಎಲ್ಲ ವಿದ್ಯುನ್ಮಾನ ಪತ್ರಿಕೆಗಳು ಕೀವರ್ಡ್ಸ್‌ಗಳನ್ನು, ಲೇಖಕರ ಹುಡುಕಾಟ (Author Search) ಮತ್ತು ಸಾರಸಂಗ್ರಹ ಸೂಚಿಯನ್ನು ಅನುಲಕ್ಷಿಸಿ ಮಾಹಿತಿಯನ್ನು ಪಡೆಯುವದು ಮುಖ್ಯವಾಗಿದೆ.

**೬.೨.೧೩.೪ : ಮುದ್ರಣ / ಪಡೆಯುವಿಕೆ :** ವಿದ್ಯುನ್ಮಾನ ಪತ್ರಿಕೆಗಳು ಬೇಕೆಂದ ವಿಷಯವನ್ನು ನಾವು ಡೌನ್‌ಲೋಡ್ ಮುಖಾಂತರ ಅದರ ಪಠ್ಯವನ್ನು ಪಡೆಯುವದು, ಬೇಕೆಂದ ಲೇಖನಗಳನ್ನು ವರ್ಕ್ಸ್ ಸ್ಟೇಶನ್‌ಗಳ ಮುಖಾಂತರ ಸಂಪರ್ಕಿಸಬಹುದಾಗಿದೆ.

**೬.೨.೧೩.೫ : ಶೆಲ್ಪನಲ್ಲಿ ಹುಡುಕಾಟದ ಉಳಿತಾಯ (Saving Shelf Space) :** ಗ್ರಂಥಾಲಯಗಳ ಶೆಲ್ಫ್‌ಗಳಲ್ಲಿ ಪುಸ್ತಕ ಇಡುವ ಜಾಗದ ಕೊರತೆಯಿಂದಾಗಿ ಇಲ್ಲಿ ಜಾಗೆಯ ಉಳಿತಾಯವಾಗಿದೆ. ಹೀಗಾಗಿ ಇದು ಗ್ರಂಥಾಲಯಗಳಂತೆ ನಾವು ಶೆಲ್ಫ್ ಲಿಸ್ಟ್ ಆಧರಿಸಿ, ಇಲ್ಲಿ ಮಾಹಿತಿ ತಕ್ಷಣವೇ ನೇರವಾಗಿ ಸಿಗುವುದರಿಂದ ಅದರಿಂದ ದೊರಕುವ ಸೌಲಭ್ಯವನ್ನು ಗಣನೆಗೆ ತೆಗೆದುಕೊಳ್ಳಬಹುದು.

ಬಹುಮುಖಿ ಸಂವಹನ (Multiple access) : ಇವುಗಳನ್ನು ನಾವೀಗ ಸ್ಥಳೀಯ ಇಂಟರ್‌ನೆಟ್ ಮುಖಾಂತರವೂ (LAN) ಸಂಪರ್ಕಿಸಿ ಪಡೆದುಕೊಳ್ಳಬಹುದಾಗಿದೆ.

೬.೨.೧೩.೬ : **ಸಂಗ್ರಹ** : ಮುದ್ರಣವಾದ ಪುಸ್ತಕ, ಪತ್ರಿಕೆಗಳಿಗೆ ಸಂಗ್ರಹ ಮಾಡಲು ಸ್ಥಳ ಬೇಕು, ಶಕ್ತಿ ಮತ್ತು ಸಮಯ ಬೇಕು. ಇಲ್ಲಿ ಅದು ನಗಣ್ಯ.

೬.೨.೧೩.೭ : **ಮುದ್ರಣ ವೆಚ್ಚ** : ಮುದ್ರಣ ವೆಚ್ಚವೂ ಅತ್ಯಂತ ದುಬಾರಿಯ ಮತ್ತು ಪ್ರಸರಣವೂ ಕಠಿಣವೂ, ವೇಳೆಯನ್ನು ವ್ಯಯಿಸುವಂತಹದ್ದು ಆಗಿರುತ್ತದೆ. ಇಲ್ಲಿ ನೇರ ಸಂಪರ್ಕದ ಮುಖಾಂತರ ಮುದ್ರಣ ವೆಚ್ಚಕ್ಕಿಂತಲೂ ಕಡಿಮೆ ವೆಚ್ಚದಲ್ಲಿ ನಾವು ಮಾಹಿತಿಯನ್ನು ಪಡೆಯಬಹುದು.

೬.೨.೧೩.೮ : **ಮ್ಯೂಜಿಯಂ (Archiving)** : ಸಂಗ್ರಹಾಲಯಗಳಂತೆ ಇಲ್ಲಿ ಅತಿ ದೊಡ್ಡ ಕಟ್ಟಡಗಳು ಅನವಶ್ಯಕ ಕೆಲವೇ ಕೆಲವು ಮಿಲಿ ಮೀಟರುಗಳ ಸ್ಥಳ ಇದಕ್ಕೆ ಬೇಕಾಗುತ್ತದೆ. ಇದು ವೈಜ್ಞಾನಿಕವಾಗಿ ಅತ್ಯಂತ ಕಡಿಮೆ ಜಾಗೆಯಲ್ಲಿ ನಮಗೆ ಸಂಪರ್ಕ ಸಾಧಿಸಿ ತೋರಿಸುತ್ತದೆ.

೬.೨.೧೨.೯ : **ವ್ಯವಸ್ಥಾಪನೆ (Manageability)** : ಇದನ್ನು ಸಂಕೇತಗಳ ಮುಖಾಂತರ, ಚಿತ್ರಗಳ ಸಮೇತ, ನಾವು ಸಂಕಲನ ಮಾಡಿಕೊಳ್ಳಬಹುದು, ಟಿಪ್ಪಣಿ ಮಾಡಿಕೊಳ್ಳಬಹುದು. ಈ ಮುಖಾಂತರ ಸಂವಹನ ಸಂಪರ್ಕ ಅತೀ ಶೀಘ್ರದಲ್ಲಿ ಸಾಧ್ಯವಾಗುತ್ತದೆ.

## ೬.೨.೧೪ : OPACS : ತೆರೆದ ಪುಸ್ತಕ ಗ್ರಂಥಸೂಚಿ (Open Access Catalogues)

ನಾವು ಗ್ರಂಥಾಲಯಕ್ಕೆ ಕಾಲಿಟ್ಟರೆ ಮೊದಲು ನಾವು ಗ್ರಂಥಸೂಚೀಕರಣವನ್ನು ಗ್ರಂಥಾಲಯದಲ್ಲಿ ಜೋಡಿಸಿಟ್ಟ ಕಾರ್ಡುಗಳ, ರಾಶಿಯಲ್ಲಿ ಹುಡುಕಬೇಕಾಗಿತ್ತು. ಮಾಹಿತಿ ಹುಡುಕುವಿಕೆಗೆ ಬಹಳ ವೇಳೆಯನ್ನು ವ್ಯಯಿಸುವಂತಾಗಿತ್ತು. ಲೇಖಕ, ಶೀರ್ಷಿಕೆ, ಪ್ರಕಾಶಕ, ಇತ್ಯಾದಿ ಶೀರ್ಷಿಕೆಗಳಲ್ಲಿ ಅಥವಾ ಮಾಲೆಗಳ (Series) ಅಡಿಯಲ್ಲಿ ಪುಸ್ತಕಗಳನ್ನು ಹುಡುಕಬೇಕಾಗಿತ್ತು. ಇಲ್ಲಿ ಅದು ನಾವು ಗ್ರಂಥಾಲಯದಲ್ಲಿರುವ ಕಂಪ್ಯೂಟರ್ ಪರದೆಯ ಮೇಲೆ ನಮ್ಮ ಗ್ರಂಥಾಲಯವೊಂದೇ ಅಲ್ಲ. ವಿಶ್ವದ ಯಾವುದೇ ಮೂಲೆಯಲ್ಲಿರುವ ಗ್ರಂಥಗಳನ್ನು, ಶೀರ್ಷಿಕೆ, ಪರಿವಿಡಿ ಸೂಚಿಗಳನ್ನು ಕಂಪ್ಯೂಟರಿನಲ್ಲಿ ಹುಡುಕಬಹುದಾಗಿದೆ. ಇದು ಗ್ರಂಥಾಲಯಕ್ಕೆ ಹೋಗುವ ಎಲ್ಲರೂ ಕಂಪ್ಯೂಟರ್ ಉಪಯೋಗಿಸಿಕೊಂಡು ಕ್ಷಣಾರ್ಧದಲ್ಲಿಯೇ ನಮ್ಮ ಮಾಹಿತಿಯನ್ನು ನೇರ ಸಂಪರ್ಕದಲ್ಲಿ ಹುಡುಕಬಹುದಾಗಿದೆ. ಇವು ಮಾಹಿತಿಯ ಹೆದ್ದಾರಿಗಳೆಂದರೂ ತಪ್ಪಲ್ಲ. ಮಾಹಿತಿ ಹುಡುಕಾಟ, ಸ್ಥಳವನ್ನು ನಿರ್ಧರಿಸಿ ಮಾಹಿತಿ ಎಲ್ಲಿ

ಸಿಕ್ಕುತ್ತದೆ ಎಂಬುದನ್ನು ತಕ್ಷಣವೇ ನಿರ್ಧರಿಸಿ ಸೂಚಿಸುತ್ತದೆ. ಗ್ರಂಥಾಲಯಗಳ ಆವಶ್ಯಕತೆಯನ್ನು ಇದು ಎತ್ತಿ ತೋರಿಸುತ್ತದೆ.

OPAC ಗಳು ಎಲ್ಲ ವರ್ಗದವರ (ವಿದ್ವಾಂಸರು, ಸಂಶೋಧಕರು, ವಿದ್ಯಾರ್ಥಿಗಳ) ಉಪಯೋಗಕ್ಕಾಗಿ ಅಭಿವೃದ್ಧಿಪಡಿಸಿದ ಸಾಧನವಾಗಿದೆ. ಪುಸ್ತಕಗಳ ಇಡುವಿಕೆಯ ಸ್ಥಳವನ್ನು, ಬಳಕೆದಾರರಿಗೆ ಅದರ (ಸ್ಥಳದ) ಸೂಚನೆಯನ್ನು ನೀಡಿ ಅರ್ಧ ಸಿಬ್ಬಂದಿಯ ಕೆಲಸವನ್ನು ಕಡಿಮೆಗೊಳಿಸುತ್ತವೆ. ಉಪಯೋಗ ತಕ್ಕೊಳ್ಳುವವರು ಸೀದಾ ವಾಙ್ಮಯ ದರ್ಶಕವನ್ನು ಸಂದರ್ಶಿಸುವದರಿಂದ ವಾಙ್ಮಯ ದರ್ಶಕಗಳು ಅವರಿಗೆ ಸೂಚನೆಯನ್ನು ಒದಗಿಸುತ್ತವೆ. ವಾಙ್ಮಯ ದರ್ಶಕ ಸೂಚಿಗಳ / ಪಟ್ಟಿಗಳಿಂದ ಗ್ರಂಥದ ಲಭ್ಯತೆಯ ಬಗ್ಗೆ ಮಾಹಿತಿ ಸಿಗುತ್ತದೆ. ಈ ಎಲ್ಲ ಮಾಹಿತಿ ಸ್ಥಾವರಗಳು ಇಂಟರ್‌ನೆಟ್‌ನಲ್ಲಿ ಲಭ್ಯವಿರುತ್ತವೆ. ಇವುಗಳನ್ನು ವೆಬ್‌ಒಪೆಕ್ಸ್ / ಇಂಟರ್‌ನೆಟ್ ಒಪೆಕ್ಸ್ ಗಳೆಂದು ಕರೆಯುತ್ತಾರೆ.

| **ಒಪೆಕ್ಸ್ (OPACs)** | **ವೆಬ್ ಒಪೆಕ್ಸ್ (Web OPACs)** |
|---|---|
| ಇಲ್ಲಿ (ಸ್ಥಳೀಯ / ಅಂತರಜಾಲ), ಮಿತಿಯಲ್ಲಿ ಉಪಯೋಗಿಸಬಹುದಾಗಿದ್ದು ಒಬ್ಬ ವ್ಯಕ್ತಿ ಒಮ್ಮೆಗೆ ಸ್ಥಳೀಯವಾಗಿ ಉಪಯೋಗಿಸಬಹುದು. ಒಂದೇ ಗ್ರಂಥಾಲಯಕ್ಕೆ ಸೀಮಿತ. | ಇಲ್ಲಿ ವಿಶ್ವಮಟ್ಟದಲ್ಲಿ ಲಭ್ಯತೆ, ಬಹಳಷ್ಟು ಜನ ಒಮ್ಮೆಗೆ ಎಲ್ಲಿಯೋ ಕೂತು ಇಂಟರ್‌ನೆಟ್ ಜಾಲಾಡಬಹುದು. |
| ನಿಯಮಿತವಾದ ಪದ್ಧತಿಗಳಿಂದ ಉಪಯೋಗ. | ಅತ್ಯುಕ್ತಿ ಪಠ್ಯವನ್ನು ಅಳವಡಿಸಲಾಗಿದೆ. ಭೌಗೋಳಿಕ ಪರಿಮಿತಿ ಇಲ್ಲ. |
| ಪೂರ್ವನಿರ್ಧಾರಿತ ಮತ್ತು ಪೂರ್ವಾಗ್ರಹಗಳ ಪಠ್ಯಗಳನ್ನು ಮಾತ್ರ ಆ ಗ್ರಂಥಾಲಯಕ್ಕೆ (ಸ್ಥಳೀಯ) ಸೀಮಿತ. | ಇಡಿ ಐಚ್ಛಿಕವಾದ ವಿಷಯಗಳನ್ನು ಹುಡುಕಬಹುದು. |

## ೬.೨.೧೫ : ಅಮೇಝೂನ್.ಕಾಮ್ (Amazon.com)

ಅಮೇಝೂನ್.ಕಾಮ್, ವಿಶ್ವದ ಪುಸ್ತಕಗಳ ಮಾರುಕಟ್ಟೆಯು, ನೇರ ಸಂಪರ್ಕ (online) ದಿಂದ ಪುಸ್ತಕಗಳನ್ನು ಖರೀದಿಸಬಹುದು. ವಿಶ್ವದ ತುಂಬೆಲ್ಲ ಮಾರಾಟ ಮಾಡುವ ವ್ಯವಹಾರಿಕ ಸಂಸ್ಥೆಯಾಗಿದೆ. ೧೯೯೫ ಜುಲೈ ದಿಂದ ಕಂಪ್ಯೂಟರ್ ಜಾಲದಿಂದ ಅತ್ಯಂತ ಶೀಘ್ರವಾಗಿ, ಸರಳವಾಗಿ ಮಾರಾಟದಲ್ಲಿ ಪ್ರಗತಿ ಸಾಧಿಸಿದೆ. ಅಂದರೆ ಅದು ಪ್ರಾರಂಭವಾಗಿದ್ದು ೧೯೯೫ ನೇ ಜುಲೈ ತಿಂಗಳಲ್ಲಿ. ತನ್ನ ಉತ್ಪಾದನೆಯಲ್ಲಿ ಗಿರಾಕಿಗಳಿಗೆ ಅತಿ ವೇಗವಾಗಿ ನೇರ ಸಂಪರ್ಕದಲ್ಲಿ ಪುಸ್ತಕಗಳನ್ನು ಮಾರಾಟ ಮಾಡುತ್ತಿದೆ. ಇಲ್ಲಿ ನೇರವಾಗಿ ಪುಸ್ತಕ ಪಟ್ಟಿಯನ್ನು ತಜ್ಞರಿಂದ ಪಡೆದು

ವಿತರಿಸಲಾಗುತ್ತದೆ. ಹೆಚ್ಚಾಗಿ ಶೈಕ್ಷಣಿಕ ವರ್ಗದ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಅವರ ಆಸೆ ಆಕಾಂಕ್ಷೆಗಳನ್ನು ನೆರವೇರಿಸಲು ಸದಾ ಸಿದ್ಧತೆಯಲ್ಲಿದ್ದು ಸಂಶೋಧಕರ ಗಮನವನ್ನು ತನ್ನೆಡೆಗೆ ಆಕರ್ಷಿಸಿಕೊಂಡಿದೆ.

### ೬.೨.೧೫.೧ : ನಾವೆಲ್ಲಿದ್ದೇವೆ ?

ಅಮೇರಝಾನ್.ಕಾಮ್ ನಲ್ಲಿ ನಮಗೆ ಬೇಕಾದ ಪುಸ್ತಕವನ್ನು ನೇರ ಸಂಪರ್ಕ (on line) ದಲ್ಲಿ ಕೊಂಡುಕೊಳ್ಳಬಹುದಾಗಿದೆ. ಜಗತ್ತಿನ ಎರಡುನೂರಾ ಇಪ್ಪತ್ತು (೨೨೦) ದೇಶಗಳು ಈ ಸ್ಥಳ (site) ದಿಂದ ಶಾಪಿಂಗ್ ಮಾಡುತ್ತಿರುವದು ತುಂಬಾ ಅಭಿಮಾನದ ಸಂಗತಿಯಾಗಿದೆ. ಜಗತ್ತಿನಲ್ಲಿಯೇ ಅತಿ ಹೆಚ್ಚು ಪುಸ್ತಕ ಉತ್ಪಾದನೆಗಳನ್ನಲ್ಲದೆ ಉಚಿತ ವಿದ್ಯುನ್ಮಾನ (Electrons Greeting Card) ಗ್ರೀಟಿಂಗ್ ಕಾರ್ಡುಗಳನ್ನು, ಮಿಲಿಯನ್‌ಗಟ್ಟಲೇ ಪುಸ್ತಕಗಳನ್ನು, ಸುರುಳಿ (CDs) ಗಳನ್ನು, ವಿಡಿಯೋಗಳನ್ನು, (DVDs) ಗಳನ್ನು, ಗೊಂಬೆಗಳನ್ನು, ಆಟಿಕೆ ಸಾಮಾನುಗಳನ್ನು, ಕಂಪ್ಯೂಟರ್‌ಗಳನ್ನು ಮಾರುತ್ತದೆ. ಇದಲ್ಲದೆ ಅನೇಕ ದಿನಬಳಕೆಯ ಸಾಮಾನುಗಳನ್ನು ಅಮೇರಝಾನ್.ಕಾಮ್ ಮಾರುತ್ತಿರುವುದು ದಾಖಲೆಯನ್ನು ಸೃಷ್ಟಿಸಿದೆ.

### ೬.೨.೧೫.೨ : ನಮಗೇನು ಬೇಕು ?

ನಾವು ಅಮೇರಝಾನ್.ಕಾಮ್‌ನಲ್ಲಿ ವಾಙ್ಮಯ ದರ್ಶಕ (Catalogue of products) ಗಳನ್ನು, ನಾವು ಕೊಳ್ಳುವ ವಸ್ತುಗಳ ಸೂಚಿಗಳನ್ನು, ತನ್ನ ಖರೀದಿದಾರರಿಗೆ ಮತ್ತು ಪಾಲುದಾರರಿಗೆ ನೀಡುತ್ತದೆ. ವಾಙ್ಮಯ ದರ್ಶಕಗಳಿಂದ ನಾವು ಏನನ್ನು ಕೊಳ್ಳಬೇಕೆಂದು ನಿರ್ಧರಿಸಿಕೊಳ್ಳಬಹುದು.

- ಪುಸ್ತಕಗಳು, ಸಂಗೀತದ ಕ್ಯಾಸೆಟ್ಟುಗಳು, ವಿಡಿಯೋಗಳು ಮುಂತಾದ ವಸ್ತುಗಳ ಪಟ್ಟಿ ಇರುತ್ತದೆ. ಇವೆಲ್ಲವುಗಳಲ್ಲಿ ನಿಮ್ಮ ಆಯ್ಕೆಯ ಪಟ್ಟಿಯನ್ನು ನಾವು ದಿರ್ಧರಿಸಿಕೊಳ್ಳಬಹುದಾಗಿದೆ.
- ನಮಗೆ ಬೇಕಾದವುಗಳನ್ನು ನಾವು ಬ್ರೌಜ್ (Browse) ಮಾಡಿಕೊಳ್ಳಬಹುದು. ನೂರಾರು ವಸ್ತುಗಳ ಪಟ್ಟಿ ನೋಡಬಹುದಾಗಿದೆ. ದೃಶ್ಯ, ಶ್ರವ್ಯ, ಅಲ್ಲದೆ ನಾಣ್ಯಗಳ ಬಗ್ಗೆ ಇರುವ ಪುಸ್ತಕಗಳು, ಟೆಂಡರ್‌ಗಳು, ಅಂಚೆಚೀಟಿಗಳ ಸಂಗ್ರಹ, ಖರೀದಿ ಮತ್ತು ಟೆಂಡರ್‌ಗಳು, ಹೀಗೆ ಅತ್ಯವಶ್ಯಕವಾಗಿ ನಮಗೆ ಬೇಕಾಗಿರುವ ವಸ್ತುಗಳ ಪಟ್ಟಿಯನ್ನು ನಾವು ನೀಡಬಹುದು.
- ಆದ್ಯತೆಗನುಗುಣವಾಗಿ ನಮಗೆ ಬೇಕಾದ ಸಾಮಗ್ರಿಗಳ ಪಟ್ಟಿಯನ್ನು ನೇರ ಸಂಪರ್ಕಕ್ಕೆ ಜೋಡಿಸಿಕೊಳ್ಳಬಹುದು.
- ಇದಾದ ಮೇಲೆ ನಮಗೆ ಬೇಕಾದ ಸಾಮಗ್ರಿಗಳ ಪಟ್ಟಿಗೆ ಒಪ್ಪಿಗೆಯನ್ನು ಸೂಚಿಸಿ ಸಹಿ ದಾಖಲಿಸಿದರೆ ನಮ್ಮ ಆಯ್ಕೆಯ ಸಾಮಾನುಗಳನ್ನು ಖರೀದಿಸಲು ಅನುಮತಿ ಸಿಗುತ್ತದೆ.

- ೧.೨ ಮಿಲಿಯನ್ ಬ್ರಿಟೀಷ್ ಪುಸ್ತಕಗಳು, ಅಮೇಜಾನ್.ಕಾಮ್.ಯುಕೆಯಲ್ಲಿ ಪ್ರಿಂಟಾಗುತ್ತವೆ. ಇದರ ಜೊತೆಗೆ ೨,೫೦,೦೦೦ ಯು.ಎಸ್. ಶೀರ್ಷಿಕೆಗಳು, ೨೨,೦೦೦ ಸಿಡಿಗಳು, ೨೩,೦೦೦ VHS ಗಳು, ಮತ್ತು ಡಿವಿಡಿ ಶೀರ್ಷಿಕೆಗಳು ಸೇರಿವೆ. ಖರೀದಿದಾರರಿಗೆ ಟೆಂಡರ್ ಕರೆಯುತ್ತದೆ. ಅಮೇಝಾನ್.ಕಾಮ್ ಒಂದು ಮಿಲಿಯನ್‌ಗಿಂತ ಹೆಚ್ಚಿನ ಪುಸ್ತಕಗಳು, ಇದರಲ್ಲಿ ಅರ್ಧ ಅಮೆರಿಕೆಯ ಶೀರ್ಷಿಕೆಗಳು, ಜೊತೆಗೆ ೨,೦೦,೦೦೦ ಸಿಡಿ ಗಳು ಮತ್ತು ಡಿವಿಡಿ ಗಳು ವಿಡಿಯೋಗಳು (ಜರ್ಮನಿ ಸೇರಿದಂತೆ) ಸೇರಿವೆ.
- ಅಮೇಝಾನ್ ಕಾಮ್‌ನಲ್ಲಿ ವ್ಯಾಪಾರ ಆರಂಭಿಸಿ ಶ್ರೀಮಂತರು ಆಗಬಹುದು, ದುಡ್ಡನ್ನು ಗಳಿಸಬಹುದು. ನಮ್ಮ ಸ್ವಂತ ವೆಬ್‌ಸೈಟ್‌ನಲ್ಲಿ ಇದೆಲ್ಲವೂ ಸಾಧ್ಯವಿದೆ.

### ೬.೨.೧೫.೩ : ಅನುಕೂಲತೆಗಳು

- ತನ್ನ ವಸ್ತುಗಳಿಗೆ ವಾರಂಟಿ (ಗ್ಯಾರಂಟಿ) ನೀಡುತ್ತದೆ.
- ಇದು ದಿನದ ಇಪ್ಪತ್ನಾಲ್ಕು ತಾಸುಗಳ ಸೇವೆಯನ್ನು ನೀಡುತ್ತದೆ.
- Orders@amazon.com ಇದರ ಹೆಲ್ಪ್‌ಡಿಸ್ಕ್ ಇದಾಗಿದೆ.

### ೬.೨.೧೫.೪ : ಶಾಖೆಗಳು

- Internet Movie Database (www.imbd.com) ಇದು ಜಗತ್ತಿನ ೨,೫೦,೦೦೦ ಸಿನಿಮಾ ಚಿತ್ರಗಳು ಮತ್ತು ಹಾಡುಗಳ ಸಂಗ್ರಹದ ಜೊತೆಗೆ ನೇರ ಸಂಪರ್ಕದಲ್ಲಿ ಸಿನಿಮಾಗಳನ್ನು ಇಲ್ಲಿ ನೋಡಬಹುದು. ಈಗಾಗಲೇ ದಿನಾಂಕಗಳು ೧೯೯೧ ರಿಂದ ೨೦೦೫ ರ ವರೆಗೆ ನಿಗದಿಗೊಳಿಸಲ್ಪಟ್ಟಿವೆ.
- ಮುಖ್ಯ ಕಚೇರಿ (Head Quarter)

  P.O. Box 81226

  Seatle, Washington 98108 - 1226
- Amazon.com,Inc. ಇದೊಂದು ಸಾರ್ವಜನಿಕ ಟ್ರೇಡ್ ಕಂ.

  NASDAQ : AMZN

  http : //www.amazon.com/exec/obidos/snlost/misc/compan-info.htm

## ೬.೩ : ಮುಕ್ತಾಯ

ನಾವೀಗ ವೈಜ್ಞಾನಿಕ ಹಾಗೂ ತಾಂತ್ರಿಕ ಸಮೃದ್ಧಿಗಳ ಯುಗಾವತಾರಿಗಳು. ವಿದ್ಯುನ್ಮಾನ ಮಾಧ್ಯಮಗಳು ಈ ಅಪರಂಪಾರ ಪೃಥ್ವಿಯನ್ನು ಒಂದು ಪುಟ್ಟ ಹಳ್ಳಿ (Global Village) ಯನ್ನಾಗಿಸಿವೆ. ನಮ್ಮ ಗೋತ್ರವೀಗ

ಭೂಗೋತ್ರ. ನೋಬೆಲ್ ಪಾರಿತೋಷಕ ವಿಜೇತ ವಿಜ್ಞಾನಿ ಡಾ. ಆರ್ನೋಪೆಂಜಿಯಾಸ್ ಹೇಳುತ್ತಾರೆ : ಮುಂದಿನ ಇಪ್ಪತ್ತೈದು ವರ್ಷಗಳಲ್ಲಿ ಕಂಪ್ಯೂಟರ್‌ಗಳು ಅಂಚೆ ಬಿಲ್ಲಿಯ ಬೆಲೆಗೆ ದೊರಕುತ್ತವೆ. ನಮ್ಮ ಉಡುಗೆ ತೊಡುಗೆಗಳಷ್ಟೆ ಅವು ಎಲ್ಲ ದೈನಂದಿನ ಸಂಗಾತಿಗಳಾಗುತ್ತವೆ. ನಮ್ಮ ನಾಡಿನ ಶೈಕ್ಷಣಿಕ ರಂಗವನ್ನು ಈಗಾಗಲೇ ಅವು ಪ್ರವೇಶಿಸಿವೆ.

ಇಷ್ಟೇ ಅಲ್ಲ. ವಿಜ್ಞಾನಿಗಳು ಮತ್ತು ತಂತ್ರಜ್ಞಾನಿಗಳು ಕಣಿ ಹೇಳುತ್ತಿರುವುದಕ್ಕೆ ಮಿತಿಯೇ ಇಲ್ಲ. ಅವರೆನ್ನುತ್ತಾರೆ, ಈ ಶತಮಾನದ ಕೊನೆಗೆ ಬರವಣಿಗೆ ಎಂಬುದೇ ಇನ್ನಿಲ್ಲವಾಗುತ್ತದೆ. ಗ್ರಂಥಸಂತಾನವೇ ನಾಶವಾಗುತ್ತದೆ. ಕಾಂಪ್ಯಾಕ್ಟ ಡಿಸ್ಕಗಳ ಹಾವಳಿ ಹೆಚ್ಚಾಗುತ್ತದೆ. ಸಾಕ್ಷರತೆ ನಿರುಪಯುಕ್ತವಾಗುವ ಕಾಲ ಸನಿಹದಲ್ಲಿದೆ. ಬರಿ ವಾಕ್‌ದೃಶ್ಯಗಳ ದರ್ಬಾರಿನ ಯುಗ ಆರಂಭವಾಗಲಿದೆ. ಈಗಾಗಲೇ ಈ-ಮೇಲ್ ಪುಸ್ತಕ ಭಾರತ ಪೇಟೆಗೆ ಬಂದಿವೆಯಲ್ಲ ! [೫]

ವಿಶ್ವಮಾರುಕಟ್ಟೆಯಾಗಿದ್ದ ಅಮೆರಿಕಾ ಪೆಂಟಗಾನ್ ಮೇಲೆ ಬಾಂಬ್ ಸ್ಫೋಟದಿಂದ ನಾಶವಾದ ಕಟ್ಟಡದ ಅವಶೇಷಗಳನ್ನು ನೋಡಿದರೆ ದಿಗ್ಭ್ರಮೆಯೆನಿಸುತ್ತದೆ. ಮಾರುಕಟ್ಟೆಯಲ್ಲಿ ಅತ್ಯಂತ ಬೇಡಿಕೆಯಲ್ಲಿದ್ದ ಕಂಪ್ಯೂಟರ್ ವಿಜ್ಞಾನಿಗಳು, ತಂತ್ರಜ್ಞರು, ಕಂಪ್ಯೂಟರ್ ಕಲಿತ ವಿದ್ಯಾರ್ಥಿಗಳು ಈಗ ಕೆಲಸವಿಲ್ಲದೆ ಖಾಲಿ ತಿರುಗುತ್ತಿದ್ದಾರೆ, ಪರಿತಪಿಸುತ್ತಿದ್ದಾರೆ. ಉದ್ಯೋಗ ಸೃಷ್ಟಿಗಳಿಲ್ಲ. ಆರ್ಥಿಕ ಅನಾನುಕೂಲತೆ, ಬಡತನದ ರೇಖೆ (poverty line) ಗಳು ಉನ್ನತ ಮಟ್ಟಕ್ಕೆ ಏರಬೇಕಾಗಿದೆ. ಎಷ್ಟೋ ಜನ ಪರಿಣಿತರು ವಿದೇಶಗಳಿಂದ ಕೆಲಸವಿಲ್ಲದೆ ಮರಳಿ ಬಂದಿದ್ದಾರೆ.

ಇನ್ನೊಂದು ಸತ್ಯವೇನೆಂದರೆ ಪುಸ್ತಕಗಳ ಭರಾಟೆ ಇದ್ದೇ ಇದೆ. ಪ್ರಸಿದ್ಧ ವಿಜ್ಞಾನಿ ಹಾಫ್‌ಕಿನ್‌ರ ಪುಸ್ತಕ " The history of Time " ಜಗತ್ತಿನ ತುಂಬೆಲ್ಲಾ ಭರ್ಜರಿಯಾಗಿ ಮಾರಾಟವಾಗಿ ಆ ವಿಜ್ಞಾನಿಯನ್ನು ಶ್ರೀಮಂತನನ್ನಾಗಿಸಿತು. ವಿಜ್ಞಾನದ ಪುಸ್ತಕ Future Shock ನಂತರ ಪುಸ್ತಕ ಮಾರಾಟದಲ್ಲಿ ದಾಖಲೆಯನ್ನು ಸೃಷ್ಟಿಸಿತು. ಹಾಗೆಯೇ ಇಂಡಿಯಾದ ' The Suitable Boy '. ' The god of small things ' ಅರುಂಧತಿ ರಾಯ್ ಬರೆದ ಪುಸ್ತಕಗಳು ಕೂಡಾ ಆಕೆಯನ್ನು ಶ್ರೀಮಂತಳನ್ನಾಗಿಸಿದವು. ಇವೆಲ್ಲ ಮರೆಯಲಾಗದ ಘಟನೆಗಳು. ಪುಸ್ತಕ ಮುದ್ರಣ ಹೊಸ ಹೊಸ ತಂತ್ರ ವಿಜ್ಞಾನಗಳ ಮೂಲಕ ಆವಿಷ್ಕಾರಗಳನ್ನು ಪಡೆಯುತ್ತಾ ಓದುಗರನ್ನು ಆಕರ್ಷಿಸುತ್ತಿದೆ. ಪುಸ್ತಕ ಮೇಳಗಳಲ್ಲಿ, ಸಾಹಿತ್ಯ ಸಮ್ಮೇಳನಗಳಲ್ಲಿ ಪುಸ್ತಕಗಳ ಮಾರಾಟ ದಾಖಲೆಯ ನಿರ್ಮಾಣ ದಾಟುತ್ತಿದೆ. ಪ್ರಕಾಶಕರ ಊಹೆಯನ್ನು ಮೀರಿ ಮಾರಾಟವಾದದ್ದು ಉಂಟು.

ಕನ್ನಡದಲ್ಲಿ ತ. ರಾ. ಸು., ಅ. ನ. ಕೃ., ನಿರಂಜನರು, ಶಿವರಾಮ ಕಾರಂತರು ಇನ್ನೂ ಅನೇಕರು ಬರವಣಿಗೆಯನ್ನು ವೃತ್ತಿಯಾಗಿ ಸ್ವೀಕಾರ ಮಾಡಿ ಜೀವನ ನಡೆಸಿದ್ದಾರೆ. ಇಂಗ್ಲೀಷಿನಲ್ಲಿ ನಮ್ಮ ಭಾರತೀಯ ಸಂಜಾತರಾದ ಸಲ್ಮನ್ ರಶ್ದಿ, ಕನ್ನಡಿಗ ಆರ್. ಕೆ. ನಾರಾಯಣ, ಖುಷವಂತಸಿಂಗ್ ಪುಸ್ತಕಗಳನ್ನು ಬರೆದು ಜೀವಿಸಿ ಶ್ರೀಮಂತರಾಗಿ ಅನೇಕ ಸ್ಥಾನಮಾನಗಳನ್ನು ಪಡೆದಿದ್ದಾರೆ. ಇತ್ತೀಚೆಗೆ ಎಸ್. ಎಲ್. ಭೈರಪ್ಪ, ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಕೂಡಾ

ಬರೆದ ಪುಸ್ತಕಗಳು ಮಸಾಲೆ ದೋಸೆಗಳ ಹಾಗೆ ಖರ್ಚಾಗುತ್ತಿವೆ. ತೆಲುಗಿನ ಯಂಡಮೂರಿ ವಿರೇಂದ್ರನಾಥ ನೌಕರಿಗೆ ರಾಜೀನಾಮೆ ಇತ್ತು ಬರವಣಿಗೆಯ ವೃತ್ತಿಯನ್ನು ಸ್ವೀಕರಿಸಿದ್ದಾರೆ. ಇವರ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದವರೂ ಶ್ರೀಮಂತರಾಗಿದ್ದಾರೆ. ಹಾಗೆಯೆ ತಮಿಳು, ತೆಲುಗು, ಮರಾಠಿ, ಮಲೆಯಾಳಿ, ಹಿಂದಿಗಳಲ್ಲಿ ಲೇಖಕರಿದ್ದಾರೆ. ಇಂಗ್ಲಿಷ್ ಲೇಖಕರು ವಿಖ್ಯಾತರಾಗಿ ದುಡ್ಡು, ಪ್ರಚಾರ, ಸ್ಥಾನ-ಮಾನಗಳನ್ನು ಪಡೆದಿದ್ದಾರೆ. ಕೆಲವು ಲೇಖಕರು ಮುಂಗಡವನ್ನೂ ಪಡೆದಿರುತ್ತಾರೆ, ಅದು ಲೇಖಕರ ಮೇಲಿನ ವಿಶ್ವಾಸಾರ್ಹತೆಯನ್ನು ಸಾಬೀತುಪಡಿಸುತ್ತದೆ.

ಆದರೂ ಈ ವಿಜ್ಞಾನ ತಂತ್ರಜ್ಞಾನಗಳಿಗೆ ಅವುಗಳದೇ ಆದ ಮಿತಿ ಇದೆ. ತಾವೇನು ಸಾಧಿಸಬಲ್ಲೆವು ಎಂದು ಮಾತ್ರ ಹೇಳುವ, ನಾವೇನು ಮಾಡಬೇಕೆಂಬುದನ್ನು ಹೇಳಲಾರವು. ಪುಸ್ತಕದ ಓದು ಕೊಡುವ ಅನುಭವಗಳನ್ನೆಲ್ಲ ದೂರದರ್ಶನ, ಸಿನಿಮಾ, ಇಂಟರ್‌ನೆಟ್ ಕೊಡಲಾರವು. ಮುಂದೇನಾಗುತ್ತದೋ ಗೊತ್ತಿಲ್ಲ, ಆದರೆ ಸದ್ಯಕ್ಕಂತೂ ಇಷ್ಟು ನಿಜ, ಓದು ಅಂತರಿಕವಾಗಿ ಅರಳಿಸುತ್ತದೆ. ಮರು ಓದಿನಲ್ಲಿ ಹೊಸ ಅರ್ಥಗಳನ್ನು ಹುಟ್ಟಿಸುತ್ತದೆ. ದೂರದರ್ಶನವೆಂದರೆ ಯೋಜಿಸುವದಲ್ಲ; ಚಲಿಸುವ ಚಿತ್ರಗಳು ನಮ್ಮನ್ನು ಸಮ್ಮೋಹನಗೊಳಿಸುತ್ತವೆ ಅಷ್ಟೇ. ನಮ್ಮ ಅರಿವಿನ ಸಾಧನವಾಗಿ ಗ್ರಂಥದ ಪ್ರಾಮುಖ್ಯತೆ ಈಗಲೂ ಗಟ್ಟಿಯಾಗಿದೆ. ಆದರೆ ಈ ವಾದ ಕಂಪ್ಯೂಟರ್ ಹುಟ್ಟಿದಾಗಿನಿಂದಲೂ ನಡೆಯುತ್ತ ಬಂದಿದೆ. ನಡೆಯಬೇಕು. ಸೋಲು ಗೆಲುವುಗಳನ್ನು ನಿರ್ಧರಿಸಲಾಗದು. ವೈಜ್ಞಾನಿಕ ಶೋಧನೆಗಳು ನಡೆದಾಗೆಲ್ಲ ಈ ರೀತಿಯ ವಿಚಾರಗಳು ಹುಟ್ಟುತ್ತವೆಯಾದರೂ ನಾವದನ್ನು ನಿರ್ಧರಿಸಲು ಸಾಧ್ಯವಿಲ್ಲ. ಕಾಲಮಾನ ತಾನೇ ನಿರ್ಧರಿಸಿಕೊಳ್ಳುತ್ತದೆ. ಅಂತಹ ಶುಭ ಘಳಿಗೆಗಳನ್ನು ನಾವು ಕುತೂಹಲದಿಂದ ವೀಕ್ಷಿಸೋಣ !

### • ಅಡಿಟಿಪ್ಪಣಿಗಳು •

೧. ತಾತಾರಾವ್ ಟಿ. ಕೆ. ಮತ್ತು ಇತರರು : Internet as a emerging for information. Caliber _ 1999, p. 5

೨. *ibid* - pp. 5 - 6

೩. ಕೆಂಪರಾಜ ಟಿ. ಡಿ. : ಗ್ರಂಥಾಲಯ ಸೇವೆಯಲ್ಲಿ ಮಾಹಿತಿ ತಂತ್ರಜ್ಞಾನದ ಬಳಕೆ ಮತ್ತು ಮಾನವ ಸಂಪನ್ಮೂಲ ಅಭಿವೃದ್ಧಿ : ಗ್ರಂಥಾಲಯ ವಿಜ್ಞಾನ, ನವ್ಹೆಂಬರ್ ೨೦೦೧, ಸಂಪುಟ ೦೧, ಸಂಚಿಕೆ ೨, ಪುಟ ೫೧ - ೫೨

೪. GANESH G. and others : Academic libraries in internet era - pp. 28

೫. ಮುದೇನೂರ ಸಂಗಣ್ಣ : ಜಗತ್ತೆಂಬ ಹಳ್ಳಿಯ ಬದುಕು : ಸಂಕ್ರಮಣ ಸಂಪುಟ (೩೨), ಸಂಚಿಕೆ (೦೭), ಜನೇವರಿ - ಫೆಬ್ರುವರಿ ೨೦೦೨, ಪುಟ - ೪೩

# ಸಮಾರೋಪ

ಪ್ರತಿ ವರ್ಷ ಪ್ರಕಟವಾದ, ಪ್ರಕಟವಾಗುವ ಪುಸ್ತಕಗಳನ್ನು ಪಟ್ಟಿ ಮಾಡುವ ಅಥವಾ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸುವ ಪ್ರಾಥಮಿಕ ನೆಲೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ಡಾ. ಜಿ. ಎಸ್. ಶಿವರುದ್ರಪ್ಪ ಅವರ ಸಂಪಾದಕತ್ವದಲ್ಲಿ ೧೯೭೧ ರಿಂದ ೧೯೮೩ ರ ತನಕ ' ಸಾಹಿತ್ಯ ವಾರ್ಷಿಕ ' ನಡೆದು ಬಂದಿತು. ಇದು ಆಯಾ ವರ್ಷದ ಸಾಹಿತ್ಯಕೃತಿಗಳನ್ನು ಸಮೀಕ್ಷಿಸುವ ಸ್ವರೂಪದ್ದು. ಇದು ಸುಲಭವಾದ ಕಾರ್ಯವೇನಲ್ಲ. ಬಹುಸಂಖ್ಯೆಯಲ್ಲಿ ವರ್ಷ ವರ್ಷವೂ ಪ್ರಕಟವಾಗುವ ಸಾಹಿತ್ಯ, ವಿಜ್ಞಾನ, ವಾಣಿಜ್ಯ..... ಇತ್ಯಾದಿ ಪ್ರಕಟಿತ (ಸಮಗ್ರ) ಕೃತಿಗಳ ಜಾಡು ಹಿಡಿದು ಗುರುತಿಸುವುದು ಮೊದಲನೆಯ ಕಷ್ಟ. ಅವುಗಳನ್ನು ತೀರಾ ಮುಖಾಮುಖಿಯಾಗಿ ನಿಂತು ವಿಮರ್ಶಿಸಿ ಕೊಂಡುಕೊಳ್ಳಬೇಕೋ, ಪಟ್ಟಿ ಮಾಡಬೇಕೋ, ಪಟ್ಟಿಯಲ್ಲಿ ಸೇರಿಸಿಕೊಳ್ಳದೆ ಬಿಡಬೇಕೋ ಎನ್ನುವದು ಎರಡನೆಯ ಕಷ್ಟ. ಆದರೂ ಅಗತ್ಯವಾಗಿ ಮಾಡಬೇಕಾಗಿರುವ ಕಾರ್ಯ. ಅದರ ಉದ್ದೇಶ ಒಳ್ಳೆಯದು. ಪ್ರಯತ್ನ ಪ್ರಾಮಾಣಿಕವಾದದ್ದು. ನಾಳೆ, ಕನ್ನಡದಲ್ಲಿ ಯಾವುದೇ ಒಂದು ಸಾಹಿತ್ಯಪ್ರಕಾರವನ್ನು ಕುರಿತು ಕೆಲಸ ಮಾಡಲು ತೊಡಗುವವರಿಗೆ ಈ ಸಾಹಿತ್ಯ ವಾರ್ಷಿಕಗಳಿಂದಾಗುವ ಪ್ರಯೋಜನ ಅಷ್ಟಿಷ್ಟಲ್ಲ. ಯಾವ ಯಾವ ವರ್ಷದಲ್ಲಿ ಕನ್ನಡದಲ್ಲಿ ಏನೇನು ಕೃತಿಗಳು ಪ್ರಕಟವಾಗಿವೆ. ಸಾಹಿತ್ಯದ ಯಾವ ಯಾವ ಪ್ರಕಾರಗಳಲ್ಲಿ ಏನೇನು ಕೆಲಸ ನಡೆದಿದೆ. ಯಾವ ದೃಷ್ಟಿ ಧೋರಣೆಗಳು ಅವುಗಳ ಹಿನ್ನೆಲೆಗಿವೆ ಎಂಬುದು ನಾಳಿನ ವಿಮರ್ಶಕರಿಗೆ, ಸಂಶೋಧಕರಿಗೆ ಮೂಲಭೂತ ಸಾಮಗ್ರಿಯಾಗಿ ಇದರಿಂದ ಒದಗುತ್ತದೆ. ಹಾಗೆಯೇ ಪ್ರತಿಯೊಂದು ವರ್ಷದ ಸರಕಾರದ ಪ್ರಕಟಣೆಗಳು, ವರದಿಗಳು, ವಿವಿಧ ಕಾರ್ಯಚಟುವಟಿಕೆಯ ಪರಿಚಯ ಪುಸ್ತಕಗಳು, ಪ್ರಚಾರದ ಕರಪತ್ರಗಳು, ಸರಕಾರದ ಆದೇಶಗಳು, ನಿರ್ದೇಶನಗಳು ಪ್ರತಿಯೊಂದು ದಾಖಲೆಯು ವಿಮರ್ಶಾತ್ಮಕವಾಗಿ, ತೌಲನಿಕವಾಗಿ ಸಂಶೋಧಕರಿಗೆ ಮೂಲಭೂತ ಸಾಮಗ್ರಿಯಾಗಿರುತ್ತದೆ. ಅದರಂತೆ ಯಾವುದೇ ಸಂಸ್ಥೆ, ಘಟಕವು ಈ ರೀತಿಯ ದಾಖಲೆಗಳನ್ನು ಕಾಯ್ದುಕೊಂಡು ಸಂರಕ್ಷಿಸಿಕೊಂಡು ಬರುವದು ಭವಿಷ್ಯತ್ತಿನ ದೃಷ್ಟಿಯಿಂದ ಸಕಾಲಿಕವಾಗಿರುತ್ತದೆ. ಹಾಗೆಯೇ ಪ್ರತಿಯೊಂದು ವರ್ಷದ ಸಾಹಿತ್ಯಿಕ, ಸಾಮೂಹಿಕ, ಸರಕಾರಕ್ಕೆ ಸಂಬಂಧಪಟ್ಟ ಸಾಧನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವವರ ಪಾಲಿಗೆ, ಸಾಹಿತ್ಯ ಚರಿತ್ರೆಯ ಲೇಖಕನಿಗೆ ಇದೊಂದು ಋಣದ ಗಣಿಯಾಗುವುದರಲ್ಲಿ ಸಂದೇಹವಿಲ್ಲ. ಲೇಖಕರ, ಪ್ರಕಾಶಕರ, ವಿಮರ್ಶಕರ, ಪತ್ರಿಕೆಗಳ ಮತ್ತು ಗ್ರಂಥಭಂಡಾರದ ನಿರಂತರ ಸಹಕಾರದಿಂದ ಮಾತ್ರ ಇಂತಹ ಯೋಜನೆ ಯಶಸ್ವಿಯಾಗುವ ಸಾಧ್ಯತೆಗಳಿವೆ.

ಇಂತಹ ದಾಖಲೆಗಳು ಬಹುಶಃ ನಮ್ಮ ಸಂಸ್ಕೃತಿಯ ಕೋಶಗಳಾಗುವ ಸಾಧ್ಯತೆ ಇದೆ. ಇವುಗಳಲ್ಲಿ ನಮ್ಮ ಪೂರ್ವಜರ ಜ್ಞಾನ, ವಿಜ್ಞಾನ, ಶಾಸ್ತ್ರ, ಧರ್ಮಗಳ ಪಾಕ ಮಡುಗಟ್ಟಿ ನಿಂತಿದೆ. ಅವುಗಳಿಂದ ನಮ್ಮ ಪುರಾತನ ಸಂಸ್ಕೃತಿಯ ಕೋಶಗಳಾದ ಇವುಗಳಲ್ಲಿ ನಮ್ಮ ಪೂರ್ವಜರ ಜ್ಞಾನ, ವಿಜ್ಞಾನ, ಶಾಸ್ತ್ರ, ಧರ್ಮಗಳ ಪಾಕ ಮಡುಗಟ್ಟಿ ನಿಂತಿದೆ. ಅವುಗಳಿಂದ ನಮ್ಮ ಪುರಾತನ ಸಂಸ್ಕೃತಿಯ ಸೊಬಗು, ಶ್ರೀಮಂತಿಕೆ, ನಮ್ಮವರ ಪ್ರತಿಭೆ, ಪಾಂಡಿತ್ಯ, ವಿಚಾರ, ವೈಭವ, ಆಚಾರ, ಶೀಲ, ಸಂಪ್ರದಾಯ, ಸಭ್ಯತೆ, ನೀತಿ, ನಿರ್ಮಲತೆಗಳು ಸುವ್ಯಕ್ತವಾಗುತ್ತವೆ. ಇತಿಹಾಸ, ಸಾಹಿತ್ಯ ಕಲೆಗಳ ಪರಿಚಯದೊಂದಿಗೆ ಅವರ ಜೀವನ ಕ್ರಮ, ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಸ್ಥಿತಿಗತಿಗಳು ಗೊತ್ತಾಗುತ್ತವೆ. ಕಾರಣ ಈ ಅಮೂಲ್ಯ ನಿಧಿ ಹಿಂದಿನಂತೆ ಇಂದು, ಮುಂದಿನ ಯುಗಗಳಿಗೂ ಅತ್ಯವಶ್ಯವಾಗಿದ್ದು, ನಮ್ಮ ಬಾಳಪಥದ ಜ್ಞಾನ ಜ್ಯೋತಿಯಾಗಿ ಮುನ್ನಡೆಸಿಕೊಂಡು ಹೋಗಲು ಕಾರಣವಾಗಿ, ಜೀವನದ ಮಾರ್ಗದರ್ಶಕ ಸೂತ್ರವಾಗಿ ನಿಂತಿದೆ.

ಹಸ್ತಪ್ರತಿಸೂಚಿಗಳು, ಗ್ರಂಥಸೂಚಿಗಳು, ಕೈಪಿಡಿಗಳು, ಡೈರೆಕ್ಟರಿಗಳು, ದಿನವಹಿಗಳಿಂದ ನಾವು ಪಡೆದ ಲಾಭ ಅಷ್ಟಿಷ್ಟಲ್ಲ. ಅದನ್ನು ಹೀಗೆ ಸಂಗ್ರಹಿಸಬಹುದು :

೧. ವಿವಿಧ ಧರ್ಮ - ಮನೋಧರ್ಮದ ಕವಿಗಳಿಂದ ರಚಿತವಾದ ವಿವಿಧ ಪ್ರಕಾರ, ವಿವಿಧ ವಸ್ತುಗಳ ಕಾವ್ಯಗಳನ್ನು ಕೊಟ್ಟಿದ್ದು.
೨. ನಮ್ಮ ನಾಡಿನ ಇತಿಹಾಸವನ್ನು ರಚಿಸಲು ಐತಿಹಾಸಿಕ ಸಂಗತಿಗಳನ್ನು ಒದಗಿಸುವುದು.
೩. ನಮ್ಮ ಜನರ ರೀತಿ - ನೀತಿ, ಆಚಾರ - ವಿಚಾರ, ಶೀಲ - ಸಂಪ್ರದಾಯ, ಕಲೆಗಳ ದರ್ಶನ ಮೂಡಿಸಿದುದು.
೪. ನಮ್ಮ ಸಂಸ್ಕೃತಿಯ ಘನತೆ, ಗೌರವ ಕೀರ್ತಿಗಳನ್ನು ಪ್ರಕಟಿಸಿದುದು.
೫. ಸಾಹಿತ್ಯದ ಆಳ - ಅಗಲ, ಎತ್ತರ - ಬಿತ್ತರ, ಸತ್ವ - ಸೌಂದರ್ಯಗಳನ್ನು ಸಾಹಿತ್ಯ ಪ್ರಪಂಚಕ್ಕೆ ಎತ್ತಿ ತೋರಿಸುವುದು.
೬. ತತ್ವ - ಸಿದ್ಧಾಂತ - ಸಂಪ್ರದಾಯಗಳ ಉನ್ನತಿ ವೈಜ್ಞಾನಿಕ ಪ್ರಗತಿಯ ಬೆಳವಣಿಗೆಗಳಿಗೆ ವಿಶ್ವಮಾನ್ಯತೆಗಳನ್ನು ಪ್ರಕಟಪಡಿಸುವುದು; ಇದರಿಂದ ಕಳಚಿಹೋದ ಅನೇಕ ಕೊಂಡಿಗಳನ್ನು ಕಂಡುಕೊಳ್ಳುವದು.

ಎಲ್ಲಾ ಪ್ರಕಾರದ ಗ್ರಂಥಗಳ ರಾಶಿಗಳನ್ನು ಕಲೆಹಾಕಿ ಪ್ರಕಟಿತ ಅಪ್ರಕಟಿತ ಕೃತಿಗಳನ್ನು ಪತ್ತೆ ಹಚ್ಚಿ ಪ್ರಕಟಿಸಿದರೆ ಇಡೀ ಕನ್ನಡ ಸಾಹಿತ್ಯದ ಸಮಗ್ರ ಚಿತ್ರ ಮೂಡಿ, ಅದರ ಹಿರಿಮೆ ಗರಿಮೆಗಳನ್ನು ಗುರುತಿಸಲು; ವಿಶ್ವಸಾಹಿತ್ಯದಲ್ಲಿ ಅದರ ಸ್ಥಾನಮಾನ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಗ್ರಂಥಸೂಚಿಗಳು ಮೂಲ ಆಕರಗಳಾಗಿ ಸಂಶೋಧನೆಗೆ ನೆರವಾಗಬಲ್ಲವು. ಕೈಪಿಡಿಯಾಗಬಲ್ಲವು. ಸ್ಥಳೀಯ ಚರಿತ್ರೆ ನಿಜಸ್ಥಿತಿಯಲ್ಲಿ ಅನಾವರಣಗೊಳ್ಳಬೇಕಾದರೆ ಆಕರಗಳ ಸರ್ವೇಕ್ಷಣೆ, ಸಂಗ್ರಹ, ಪ್ರಕಟಣೆ ಅತಿ ಮುಖ್ಯವಾಗಿ ಆಗಬೇಕಾದ ಕಾರ್ಯವೇ ಸರಿ. ಹೀಗೆ ಒಂದು

ಜನಾಂಗದ, ನಾಡಿನ ಸಮಗ್ರ ಅಧ್ಯಯನವನ್ನು ವಸ್ತುನಿಷ್ಠವಾಗಿ ಕಟ್ಟಿಕೊಡುತ್ತವೆ. ಆಳವಾದ ಅಧ್ಯಯನ ಮಾಹಿತಿ ಸಂಗ್ರಹಗಳು ಸಂಶೋಧನೆಗೆ ಪುಷ್ಟಿ ಕೊಡುತ್ತವೆ.

ಈಗ ಕನ್ನಡದಲ್ಲಿ ವರುಷ ಒಂದಕ್ಕೆ ೨೦೦೦ ಕ್ಕೂ ಮಿಕ್ಕಿ ಪುಸ್ತಕಗಳು ಪ್ರಕಟಗೊಳ್ಳುತ್ತವೆ. ಪುಸ್ತಕ ಸೂಚೀಕರಣ ಮತ್ತು ಗ್ರಂಥಸೂಚಿಗಳನ್ನು ಪ್ರಕಟಿಸುವುದು ಸರಕಾರಕ್ಕೇನು ಅಸಾಧ್ಯವಾದುದಲ್ಲ. ಪುಸ್ತಕವಿಲ್ಲದಿದ್ದರೆ ಹೋಗಲಿ ಅದರ ವಾಙ್ಮಯದರ್ಶಕ ವಿವರಗಳನ್ನಾದರೂ ತಿಳಿಸುವ ಸೌಜನ್ಯತೆಯನ್ನು ಪ್ರಕಾಶಕರು, ಲೇಖಕರು ತೋರುತ್ತಿಲ್ಲ. ಆದ್ದರಿಂದ ವಿಶ್ವವಿದ್ಯಾಲಯಗಳು, ಅಕಾಡೆಮಿಗಳು, ಪುಸ್ತಕ ಪ್ರಾಧಿಕಾರಗಳು ಒಂದು ಸಂಸ್ಥೆಯನ್ನು ಕೇಂದ್ರವಾಗಿಟ್ಟುಕೊಂಡು ಪ್ರಕಟವಾದ ಪುಸ್ತಕಗಳ ಪಟ್ಟಿಯನ್ನು ಪ್ರಕಟಿಸಲು ಮತ್ತು ಕನಿಷ್ಠ ಎರಡು ಪ್ರತಿಗಳನ್ನು ಖರೀದಿಸಲು ಅನುವು ಮಾಡಿಕೊಡಬೇಕು. ಕನ್ನಡ ಪುಸ್ತಕಗಳ ಒಂದೊಂದು ಪ್ರತಿಯನ್ನು ಕೊಂಡು ಅವು ಪ್ರಕಟಗೊಂಡ ಕೂಡಲೇ ಖರೀದಿಸಿ ಸೂಚೀಕರಿಸಬೇಕು. ಕನಿಷ್ಠ ಒಂದು ವರ್ಷಕ್ಕೊಮ್ಮೆಯಾದರೂ ಪುಸ್ತಕಗಳ ಗ್ರಂಥಸೂಚಿ ಪ್ರಕಟಿಸಬೇಕು. ಆಗ ಮಾತ್ರ ಕನ್ನಡ ಪುಸ್ತಕ ಸೂಚಿ ಕಾರ್ಯ ಸಮಗ್ರವಾಗಬಲ್ಲದು. ಇದರಿಂದ ಗ್ರಂಥಸೂಚಿ ರಚನೆಗೂ ವಿವರಗಳು ಸಿಕ್ಕು ಕನ್ನಡ ಸಂದರ್ಭ ಸಾಹಿತ್ಯ ಶ್ರೀಮಂತವಾಗುತ್ತದೆ.

ಈ ಯೋಜನೆಯನ್ನು ಸರ್. ಎ. ಗ್ರ್ಯಾಂಟ್ ಅವರು ೧೮೬೫ ರಲ್ಲಿ ಮುಂಬಯಿ ಸರಕಾರದಲ್ಲಿ ಮಂಡಿಸಿ ಸರಕಾರದ ಆದೇಶವನ್ನು ಪಡೆದಿದ್ದರು. ಮುಂಬಯಿ ಪ್ರಾಂತದಿಂದ ಈ ತರದ ಕೆಲಸಗಳು ಆಗಲೇ ಆಗಿದ್ದವು. ಕನ್ನಡದಲ್ಲಿ ಸರಕಾರ ಇಂತಹುದೆ ಯೋಜನೆಗೆ ಈಗ ಮೂರ್ತಸ್ವರೂಪ ನೀಡಲು ಹೊರಟಿದೆ. ಪುಸ್ತಕಗಳ ಮುದ್ರಣದಲ್ಲಿ ಪುನರಾವರ್ತನೆ ಆಗದಂತೆ ಸಮನ್ವಯ ಸಾಧಿಸಲು ರಾಜ್ಯ ಸರಕಾರವು, ಕನ್ನಡ ಸಂಸ್ಕೃತಿ ಸಚಿವರ ಅಧ್ಯಕ್ಷತೆಯಲ್ಲಿ ಸಮನ್ವಯ ಸಮಿತಿಯನ್ನು ರಚಿಸಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ : ವಿವಿಧ ಅಕಾಡೆಮಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಪುಸ್ತಕ ಪ್ರಾಧಿಕಾರ ಹಾಗೂ ವಿವಿಧ ವಿಶ್ವವಿದ್ಯಾಲಯಗಳ ನಡುವಣ ಪುಸ್ತಕ ಪ್ರಕಟಣೆ ಮತ್ತು ಮಾರಾಟ ವಿಷಯದಲ್ಲಿ ಸಮನ್ವಯ ಸಾಧಿಸುವುದು ಈ ಸಮಿತಿಯ ಹೊಣೆ.

ಗ್ರಂಥಸೂಚಿ ಹಾಗೂ ಪ್ರಕಟಣೆಯಲ್ಲಿ ಸಮನ್ವಯ ಸಾಧನೆಗೆ ಖಾಸಗಿ ಪ್ರಕಾಶಕರ ನೆರವು ಪಡೆಯುವ ಉದ್ದೇಶದಿಂದ ೨೦೦೨ ಆಗಸ್ಟ್ ತಿಂಗಳು ಬೆಂಗಳೂರಿನಲ್ಲಿ ನಡೆಯುವ ಸಮಾವೇಶದಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಪ್ರಕಾಶಕರ ಸಮಾವೇಶ ನಡೆಯಲಿದೆ. ಕನ್ನಡ ಪುಸ್ತಕ ಪ್ರಕಟಣೆ ಮತ್ತು ಗ್ರಂಥಸೂಚಿ ಕೆಲಸಗಳಿಗೆ ಇದು ನಾಂದಿಯಾಗಬಹುದು. ಪ್ರಾಧಿಕಾರ ಹೊರತರುವ ಎಲ್ಲ ಪುಸ್ತಕಗಳ ಮಾಹಿತಿಯನ್ನು ಸಾರ್ವಜನಿಕರಿಗೆ ಒದಗಿಸಲು ಪ್ರತಿ ತಿಂಗಳು ಗ್ರಂಥಸೂಚಿ ಸಂಚಿಕೆ ಪ್ರಕಟಿಸುವುದು. ಈ ಮಾಹಿತಿಯನ್ನು ವೆಬ್ ಸೈಟಿನಲ್ಲಿ ದಾಖಲಿಸಬೇಕು. ಜಿಲ್ಲಾ ಗ್ರಂಥಾಲಯಗಳಲ್ಲಿಯೇ ಪ್ರಕಾಶಕರು ತಮ್ಮ ಪುಸ್ತಕಗಳ ನೋಂದಣಿ ಮಾಡುವ ವ್ಯವಸ್ಥೆ ಜಾರಿಗೆ ತಂದಿರುವುದು ತುಂಬ ಸಂತೋಷದ ವಿಷಯವೇ ಸರಿ.

ಈ ಯೋಜನೆಗೆ ಬೇಗ ರೂಪರೇಷೆಗಳು ತಯಾರಾಗಬೇಕು. ನಂತರ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ತಜ್ಞರೊಡನೆ ಗ್ರಂಥಸೂಚಿ ತಯಾರಿಸಲು ಸಲಹೆ ಸೂಚನೆಗಳನ್ನು ಪಡೆಯಬೇಕು. ಇಂತಹ ಯೋಜನೆ ಎಂದೋ ತಯಾರಾಗಬೇಕಿತ್ತು. ಅದೀಗ ತಯಾರಾಗುವ ಶುಭ ಘಳಿಗೆ ಕೂಡಿ ಬಂದಿದೆ. ಈ ಫಲಪ್ರದ ಯೋಜನೆ ಬೇಗ ಜಾರಿಯಾಗಲಿ ಎಂದು ಆಶಿಸೋಣ. ಈ ಯೋಜನೆಯಿಂದ

೧. ಮುದ್ರಣಗೊಂಡ ವರ್ಷದ ದಾಖಲೆಗಳನ್ನು ಸೂಚೀಕರಿಸುವುದು.

೨. ಪತ್ರಿಕೆಗಳಲ್ಲಿ ಬರುವ ಲೇಖನಗಳು ಮತ್ತು ಅವುಗಳನ್ನು ಮುದ್ರಿಸುವ ಪತ್ರಿಕೆಗಳ ಸಂಪಾದಕರಾಗಲಿ ಆಯಾ ಲೇಖನಗಳ ಸಂಗ್ರಹ ರೂಪ ಅಥವಾ ಸಾರರೂಪ (Abstract) ಗಳನ್ನು ಪ್ರಕಟಿಸುವದಿಲ್ಲ. ಇದರಿಂದ ಹಲವು ತೊಂದರೆಗಳು ಉಂಟಾಗಿವೆ. ಸಂಶೋಧನೆ ಮತ್ತು ವಿಮರ್ಶೆಯಲ್ಲಿ ತೊಡಗುವವನಿಗೆ ತನಗೆ ತಿಳಿದಿರುವ ಅರಿಯದಿರುವ ವಿಷಯವನ್ನು ಕುರಿತು ಏನೇನು ಬರಹ ಬಂದಿದೆ ಎಂಬುದನ್ನು ಕಂಡುಕೊಳ್ಳಲು ಲೇಖನಸೂಚಿಗಳು ಸಿಗಬಹುದಾದರೂ, ಲೇಖನಗಳೇ ಸಿಗುವ ಸಾಧ್ಯತೆಗಳು ಕಡಿಮೆ. ಏಕೆಂದರೆ ಕನ್ನಡದಲ್ಲಿ ಪ್ರಕಟವಾದ ಅಧ್ಯಯನ ಸಾಮಗ್ರಿಯನ್ನು ಸಂಗ್ರಹಿಸುವ ಯಾವ ವ್ಯವಸ್ಥೆಯೂ ಸಮಗ್ರವಾಗಿ ರೂಪಗೊಂಡಿಲ್ಲ. ಹೊಸ ಪುಸ್ತಕಗಳ ಪ್ರಕಟಣೆ ಕುರಿತು ಓದುಗರಿಗೆ ವಿಪುಲ ಮಾಹಿತಿಗಳು ವಿವಿಧ ಕನ್ನಡ ದಿನಪತ್ರಿಕೆಗಳಲ್ಲಿನ ಸಾದರ ಸ್ವೀಕಾರ ವಿಭಾಗಗಳು; ವಿಮರ್ಶೆಗಳು, ವಾರಪತ್ರಿಕೆಗಳಾದ ಸುಧಾ, ತರಂಗ, ಕರ್ಮವೀರ; ಮಯೂರ, ಮಲ್ಲಿಗೆ, ಕಸ್ತೂರಿ ಮಾಸಿಕಗಳು; ವಿವಿಧ ನಿಯತಕಾಲಿಕೆಗಳು, ವಿಶ್ವವಿದ್ಯಾಲಯ ನಿಯತಕಾಲಿಕೆ, ಸಂಕ್ರಮಣ, ರುಜುವಾತು, ಸಂವಾದ, ಅನ್ವೇಷಣೆ, ಸಂಕಲನ ಸಾಹಿತ್ಯಿಕ ಪತ್ರಿಕೆಗಳು; ಪ್ರಕಟಣೆಗಳು ವಿವಿಧ ರೀತಿಗಳಲ್ಲಿ ಬರುತ್ತಿವೆ. ಹಿಂದೆ ಮೈಸೂರಿನಿಂದ ' ಗ್ರಂಥಲೋಕ ' ಹದಿನೈದು ವರುಷಗಳ ಅವಧಿ ಪ್ರಕಟವಾಗಿ ನಿಂತಿತು. ಈಗ ಹಂಪಿ ಕನ್ನಡ ವಿಶ್ವವಿದ್ಯಾಲಯವು ಅದೇ ಮಾದರಿಯಲ್ಲಿ ' ಪುಸ್ತಕ ಮಾಹಿತಿ ' ಯನ್ನು ತರುತ್ತಿದೆ. ಗ್ರಂಥಾಲಯ, ಓದುಗರು, ಪ್ರಕಾಶಕರು, ಮಾರಾಟಗಾರರು ಪ್ರಯೋಜನ ಪಡೆದುಕೊಳ್ಳಬಹುದಾದರೂ ಸಮಗ್ರ ಗ್ರಂಥಸೂಚಿ ಎನ್ನುವುದು ಇನ್ನೂ ಮರೀಚಿಕೆಯಾಗಿದೆ.

ಗ್ರಂಥಸೂಚಿಗಳನ್ನು ನಿರ್ಮಾಣ ಮಾಡುವದು ಇಂದು ವಿದ್ವತ್ತು, ತಾಳ್ಮೆ, ಪರಿಶ್ರಮ, ಹಠಮಾರಿತನದ ಕಾರ್ಯವಾಗಿದೆ. ಸಾಹಿತಿ, ಸಂಶೋಧಕ, ವಿಜ್ಞಾನಿ, ತಜ್ಞರು, ಉದ್ಯಮಿಗಳು ಕೂಡಿ ಮಾಡುವ ' ಕೂಡಲ ಸಂಗಮ ' ಕ್ಷೇತ್ರವಾಗಿದೆ. ತಜ್ಞತೆಯನ್ನು ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನದಲ್ಲಿಯ ಸೂಚೀಕರಣ ಮತ್ತು ಗ್ರಂಥಸೂಚಿ ಶಾಸ್ತ್ರಗಳ ಅಧ್ಯಯನವೂ ತರಬೇತಿಯೂ ಬೇಕೇ ಬೇಕು. ಹೀಗಾಗಿ ಗ್ರಂಥಸೂಚಿ ರಚನೆ ಬಹುಮುಖಿ (multidimensional); ಅಂತರ್‌ಶಿಸ್ತೀಯ (interdesciplinary) ವೈಜ್ಞಾನಿಕ ಅಧ್ಯಯನವಾಗಿದೆ. ತರಬೇತಿ ಇದ್ದರೂ ಕೂಡ ಆಗಾಗ ಹೊಸ ಬದಲಾವಣೆಗಳು ಈ ರೀತಿಯ ಶಿಸ್ತನ್ನು ಚೌಕಟ್ಟನ್ನು ಬಯಸುತ್ತವೆ. ಇಲ್ಲದಿದ್ದರೆ

ಗ್ರಂಥಸೂಚಿಗಳು ಶಿಸ್ತುಬದ್ಧವಾಗಿರುವುದಿಲ್ಲ. ಪರಿವಿಡಿ, ನಿರ್ದೇಶಿಗಳು, ವಿಷಯ ನಿರ್ದೇಶಿಗಳು, ಲೇಖನ ನಿರ್ದೇಶಿಗಳು, ಪದಸೂಚಿಗಳು, ಅಭ್ಯಾಸ ಸೂಚಿಗಳು ಕೆಲವು ಗ್ರಂಥಸೂಚಿಗಳಲ್ಲಿ ಕಂಡುಬರುವುದಿಲ್ಲ. ಇವೆಲ್ಲ ವಿಷಯಗಳು ಲವಲವಿಕೆಯಿಂದ ಮೈದುಂಬಿದ ಗ್ರಂಥಸೂಚಿಗಳು ಅಧ್ಯಯನಕಾರರಿಗೆ ಮೂಲ ಆಕರಗಳಾಗಬಲ್ಲವು.

ಗ್ರಂಥಾಲಯ ಮತ್ತು ಓದುಗರಿಗೆ ಎದುರಾಗುವ ಸಮಸ್ಯೆಯೆಂದರೆ ಪ್ರಕಟವಾದ ಪುಸ್ತಕ ದೊರೆಯದಿರುವುದು. ಒಬ್ಬ ವ್ಯಾಪಕ ಓದುಗರ ಹೇಳಿಕೆಯ ಪ್ರಕಾರ ೧/೩ ನೆಯ ಭಾಗದ ಪುಸ್ತಕಗಳು ಓದುಗರ ಗಮನಕ್ಕೆ ಬರುವದಿಲ್ಲವಂತೆ. ನಮ್ಮ ದೈನಂದಿನ ಪತ್ರಿಕೆಗಳಲ್ಲಿ ನೂರಾರು ಬಗೆಯ ಆಕರ್ಷಕ ಜಾಹೀರಾತುಗಳಿರುತ್ತವೆ. ಅಲ್ಲಿ ಪುಸ್ತಕದ ಜಾಹೀರಾತು ಕಂಡುಬರುವುದೇ ಅಪರೂಪ. ವಾರಕ್ಕೊಮ್ಮೆ ಬರುವ ಸಾದರ ಸ್ವೀಕಾರ ಪಟ್ಟಿಯೇ ಆಸಕ್ತರಿಗೆ ಪುಸ್ತಕದ ಜಾಹೀರಾತು, ಇದಕ್ಕೂ ಒಂದು ಪ್ರತಿಯನ್ನು ಎಷ್ಟೋ ಪ್ರಕಾಶಕರು ಕಳಿಸುವುದೇ ಇಲ್ಲ. ಪತ್ರಿಕೆಗಳಿಗೆ ಸುದ್ದಿ ಮತ್ತು ವಿವರಗಳನ್ನು ಕೊಡಲೂ ಇಷ್ಟವಿಲ್ಲದಷ್ಟು ಸೋಮಾರಿತನ ಅನೇಕರಿಗೆ. ಪರಿಸ್ಥಿತಿ ಹೀಗಿರಬೇಕಾದರೆ, ಓದುಗ ಅಪೇಕ್ಷಿಸಿದ ಪುಸ್ತಕ ಹೇಗೆ ತಾನೆ ದೊರೆಯುತ್ತದೆ.

ಗ್ರಂಥಗಳು ಇಂದಿಗೂ ಬುದ್ಧಿವಂತರ ಸೊತ್ತಾಗಿ ಉಳಿದಿವೆಯೇ ಹೊರತು ಸಾಮಾನ್ಯ ಜನರ ಉಪಕರಣಗಳಾಗಿಲ್ಲ. ಇದಕ್ಕೆ ನಿರಕ್ಷರತೆ ಒಂದು ಕಾರಣವಾದರೆ ಗ್ರಂಥಗಳ ವಿರಳತೆ ಮತ್ತೊಂದು ಕಾರಣ. ಗ್ರಂಥಸೂಚಿ ಬರಹಗಳು, ಪ್ರಕಟಣೆಗಳು ಇಂದು ಅನಾಕರ್ಷಕ ಕ್ಷೇತ್ರಗಳಾಗಿವೆ. ಸೃಜನಶೀಲ ಸಾಹಿತ್ಯ, ಸಂಶೋಧನೆ, ಅನುವಾದ ಕ್ಷೇತ್ರಗಳಂತೆ ಪ್ರಸಿದ್ಧಿ ಪ್ರಚಾರದಿಂದ ದೂರ ಉಳಿದಿದೆ.

ಗ್ರಂಥಸೂಚಿ ರಚನೆಗಳಿಗೆ ಗ್ರಂಥಾಲಯ ಮಾಹಿತಿ ತಜ್ಞರೇ ಯಾಕಾಗಬೇಕೆಂದರೆ ಓದುಗರ ಮನಸ್ಸನ್ನು ಇವರು ಬಲ್ಲವರಾಗಿರುತ್ತಾರೆ. ಇಂಥ ಸಂದರ್ಭಗಳಲ್ಲೆಲ್ಲ ಲೇಖಕ ಓದುಗನ ಬಯಕೆ ಭರವಸೆಗಳನ್ನು ಹುಸಿಗೊಳಿಸುವುದಿಲ್ಲ. ಓದುಗನ ಮನಸ್ಸನ್ನು ಅರಿತವರಾಗಿ ಅವನಿಗೇನು ಬೇಕು ಬೇಡಗಳನ್ನು ಗ್ರಂಥಾಲಯ ತಜ್ಞರು ತಕ್ಷಣವೇ ನಿರ್ಣಯಿಸಬಲ್ಲರು. ಈ ಸೇವೆಯಲ್ಲಿ ಅವರಷ್ಟು ನಿರ್ಣಾಯಕ ನಿರ್ಧಾರವನ್ನು ಬೇರೆಯವರು ತೆಗೆದುಕೊಳ್ಳಲು ಸಾಧ್ಯವೇ ಇಲ್ಲ. ಹೀಗಾಗಿ ಮಾಹಿತಿ ಸೇವೆಯಲ್ಲಿ ಈ ತಜ್ಞರ ಪಾಲು ಉನ್ನತ ಶ್ರೇಣಿಯಲ್ಲಿದೆ. ಇದಕ್ಕೆ ಈ ತಜ್ಞರು ಪಡೆದಿರುವ ಶಿಕ್ಷಣ, ತರಬೇತಿ, ವ್ಯಕ್ತಿತ್ವ ಮತ್ತು ಅನುಭವಗಳು ಸಕಾರಣವಾಗಿವೆ. ಈ ಎಲ್ಲ ಅರ್ಹತೆಗಳಿಂದ ಕೂಡಿದ ತಜ್ಞರ ಗ್ರಂಥಸೂಚಿಗಳು ಬೆಲೆಯುಳ್ಳವಾಗಿರುತ್ತವೆಯಲ್ಲದೆ ಸಮಗ್ರತೆಯನ್ನು ಕಾಯ್ದುಕೊಂಡಿರುತ್ತವೆ, ಗುಣಗ್ರಾಹಿಯನ್ನು ಹೊಂದಿರುತ್ತವೆ. ಅನುಭವಕ್ಕೆ ತನ್ನದೆ ಆದ ತೂಕ ಇರುತ್ತದೆ. ಅದಕ್ಕೆ ಉತ್ತಮ ಶಿಕ್ಷಣವೂ ಕಾರಣವಾಗಿರುತ್ತದೆ. ಗ್ರಂಥಸೂಚಿ ರಚನೆಗಳು ಗ್ರಂಥಪಾಲಕರ ಮತ್ತು ತಜ್ಞರ ಅವಶ್ಯಕ ರಚನೆಗಳೇ ಆಗಿವೆ. ಹಂಗೇರಿ ದೇಶದಲ್ಲಿ ಒಂದು ಜಾನಪದ ಕಥೆ ಇನ್ನೂ ಪ್ರಚಲಿತವಿದೆ. ಅದರ ಸಾರಾಂಶ ಇಷ್ಟೆ :

ಯಾವನೊಬ್ಬ ಮನುಷ್ಯ ತನ್ನ ಜೀವನ ಸಾರ್ಥಕ ಮಾಡಿಕೊಳ್ಳಬೇಕಾದರೆ ಒಬ್ಬ ಒಳ್ಳೆಯ ಮಗನನ್ನು ಪಡೆಯಬೇಕು. ಅಥವಾ ನೂರು ಫಲವೃಕ್ಷಗಳನ್ನು ನೆಟ್ಟು ಬೆಳೆಸಬೇಕು. ಅಥವಾ ಒಂದು ಶ್ರೇಷ್ಠ ಗ್ರಂಥವನ್ನು ರಚಿಸಬೇಕು. ಹಾಗೆಯೇ ಒಬ್ಬ ಗ್ರಂಥಪಾಲಕ ತನ್ನ ಜೀವಿತಾವಧಿಯಲ್ಲಿ ಒಂದು ಗ್ರಂಥಸೂಚಿ ರಚನೆ ಕಾರ್ಯ ಮಾಡಿದಾಗ ಸೇವೆಯಲ್ಲಿ ಧನ್ಯತೆಯನ್ನು ಪಡೆಯಬಹುದು. ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿಯವರು ಹೇಳುವಂತೆ " ಕನ್ನಡ ಪುಸ್ತಕಗಳ ' ಸಮಗ್ರ ಸೂಚಿ ' ಯನ್ನು ನಿರ್ಮಾಣ ಮಾಡುವ ಕಾಲ ಈಗ ಒದಗಿ ಬಂದಿದೆ. ಅಂಗೈ ಮೇಲೆ ಒಂದು ಕೃತಿಯ ಸಮಸ್ತ ಪ್ರತಿಗಳ ಬಗ್ಗೆ ತಿಳಿವಳಿಕೆ ಮಾಡಿಕೊಡುವುದೆ ಈ ಸಮಗ್ರ ಸೂಚಿಯ ಮುಖ್ಯ ಗುರಿಯಾಗಿರುತ್ತದೆ. ಈ ಗುರಿಯನ್ನು ಮುಟ್ಟಬೇಕಾದರೆ ಒಂದು ಭಾಷೆಯಲ್ಲಿ ಸಿಗುವ ಎಲ್ಲ ಪುಸ್ತಕಗಳ ವಿವರಣಾತ್ಮಕ ಸೂಚಿಗಳು ಮೊದಲು ಪ್ರಕಟವಾಗಬೇಕಾಗುತ್ತದೆ " ಎಂದಿದ್ದಾರೆ.

ನ್ಯಾಶನಲ್ ಬುಕ್ ಟ್ರಸ್ಟಿ ಸದಸ್ಯರಾದ ಪ್ರೊ. ಪಿ. ಎನ್. ಕೌಲಾ ಅವರು ರಾಷ್ಟ್ರೀಯ ಪುಸ್ತಕ ಮ್ಯೂಜಿಯಂ ಹೆಸರಿನಲ್ಲಿ ಭಾರತದಲ್ಲಿ ಪುಸ್ತಕಗಳ ಸಂಗ್ರಹವನ್ನು ತರಲು ಡಿಸೆಂಬರ್ ೨೦೦೧ ರಲ್ಲಿ ಕೇಂದ್ರ ಸರಕಾರಕ್ಕೆ ಮನವಿ ಸಲ್ಲಿಸಿ ಯಶಸ್ವಿಯಾಗಿ ಈ ಯೋಜನೆಗಾಗಿದ್ದಾರೆ. ಈಗಾಗಲೇ ಸರಕಾರ ೨೬ ಲಕ್ಷ ರೂಪಾಯಿಗಳನ್ನು ಮಂಜೂರು ನೀಡಿ ಹಸಿರು ನಿಶಾನೆ ತೋರಿಸಿದೆ. ಅದರಂತೆ ಕರ್ನಾಟಕ ಸರಕಾರವು ಜೂನ್ ೨೮, ೨೦೦೨ ರಂದು ಕನ್ನಡ ಸಂಸ್ಕೃತಿ ಸಚಿವರ ಅಧ್ಯಕ್ಷತೆಯಲ್ಲಿ ಸಮನ್ವಯ ಸಮಿತಿ ರಚಿಸಿದೆ. ವೆಬ್‌ಸೈಟ್ ಮತ್ತು ಗ್ರಂಥಸೂಚಿ ತರಲು ನಿರ್ಧರಿಸಿದೆ. ಜಾಗತಿಕ ಮಟ್ಟದಲ್ಲಿ amazon.com ನಲ್ಲಿ ವಿಶ್ವ ಪುಸ್ತಕಗಳ ಮಾರುಕಟ್ಟೆಯಲ್ಲಿ ನಮಗೆ ಬೇಕಾದ ಪುಸ್ತಕ ಕೊಳ್ಳಬಹುದಲ್ಲದೇ ಗ್ರಂಥಸೂಚಿಯೂ ಸಿಗುತ್ತದೆ. ಭಾರತದಲ್ಲಿ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ INFLIBNET, ರಾಷ್ಟ್ರಮಟ್ಟದಲ್ಲಿ ಪೆಂಗ್ವಿನ್ ಕಂ. ಬಿಝಿನೆಸ್ ಇಂಡಿಯಾ. ನ್ಯಾಶನಲ್ ಬುಕ್‌ಟ್ರಸ್ಟ್, INSDOC, NICNET, protocol : //www.insc/ernet/in/insdoc, htt : //www.insc/ernet/in/insdoc

ಈ ಮುಂತಾದವುಗಳು ವಿಜ್ಞಾನ ಪುಸ್ತಕಗಳು, ನಿಯತಕಾಲಿಕೆಗಳು, ಶಬ್ದಕೋಶಗಳು, ವಿಶ್ವಕೋಶಗಳ ಬಗೆಗೆ ಮಾಹಿತಿ ನೀಡುತ್ತವೆ. ಹೀಗೆ ನೇರಸಂಪರ್ಕ (on line facility) ದಲ್ಲಿ ನಾವು ಮಾಹಿತಿಯನ್ನು ಪಡೆಯಬಹುದು. ಅನೇಕ ವೆಬ್‌ಸೈಟ್‌ಗಳು ನಿರ್ಮಾಣವಾಗಿ ನಮಗೆ ಬೇಕೆಂದ ಮಾಹಿತಿ ಯಾವುದೇ (ಹಗಲು / ರಾತ್ರಿ) ಕ್ಷಣದಲ್ಲಿ ಪಡೆಯಬಹುದು. ಅಂಗೈಯಲ್ಲಿ ಆಕಾಶ, ತುದಿಬೆರಳಿನಲ್ಲಿ ಮಾಹಿತಿ ಸಂಪರ್ಕಗಳಿದ್ದು ರಾಷ್ಟ್ರೀಯ ಗ್ರಂಥಸೂಚಿ ಮತ್ತು ರಾಜ್ಯಮಟ್ಟದ ಗ್ರಂಥಸೂಚಿಗಳು ನಿರ್ಮಾಣವಾಗಿಲ್ಲ, ಮಾಹಿತಿ ತಂತ್ರಜ್ಞಾನ ಇಷ್ಟೆಲ್ಲ ಬೆಳೆದರೂ ಭಾರತ ದೇಶಕ್ಕೊಂದು ರಾಷ್ಟ್ರೀಯ ಗ್ರಂಥಸೂಚಿ, ಪ್ರಾದೇಶಿಕ ಗ್ರಂಥಸೂಚಿಗಳು ಇನ್ನೂ ರಚನೆಯಾಗದಿರುವುದು

ವಿಷಾದವೆನಿಸುತ್ತದೆ. ಆದಷ್ಟು ತೀವ್ರ ಈ ಪ್ರಯತ್ನಗಳಾದರೆ ಸಮಗ್ರ ಪುಸ್ತಕ ಮಾಹಿತಿ ಸಂಶೋಧಕರಿಗೆ / ಆಸಕ್ತರಿಗೆ ಮೂಲ ಆಕರಗಳಾಗುತ್ತವೆ.

ಹುಟ್ಟು ಕತೆಗಾರರಾಗಿದ್ದ ಎ. ಕೆ. ರಾಮಾನುಜನ್ ಹೇಳುತ್ತಿದ್ದ ಕತೆ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತಿದೆ. ರಾಮಾನುಜನ್ ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ. ಅವರೊಬ್ಬ ದೇಶೀಯ ಚಿಂತಕರು, ದಾರ್ಶನಿಕರು ಆಗಿದ್ದರು. ಕತೆ ಹೀಗಿದೆ– ಮುದುಕಿಯೊಬ್ಬಳು ಬೀದಿ ದೀಪದ ಕೆಳಗೆ ಏನೋ ಹುಡುಕುತ್ತಿದ್ದಳಂತೆ. ದಾರಿಹೋಕರು ಕೇಳಿದರು. ಏನು ಹುಡುಕ್ತಿದೀ ಅಂತ. ತನ್ನ ಗುಡಿಸಲಿನ ಒಳಗೆ ಕಳೆದು ಹೋದ ಸೂಜಿಯೊಂದನ್ನು ಹುಡುಕ್ತಾ ಇದೀನಿ ಅಂದಳು ಮುದುಕಿ. ಸೂಜಿ ಅಲ್ಲಿ ಕಳೆದು ಹೋಗಿದ್ರೆ ಇಲ್ಲಿ ಯಾಕೆ ಅದನ್ನ ಹುಡುಕ್ತಿದಿ ಅಂತ ಕೇಳಿದರು ದಾರಿಹೋಕರು. ಗುಡಿಸಲಿನ ಒಳಗೆ ಕತ್ತಲೋ ಕತ್ತಲು; ಅದಕ್ಕೆ ಇಲ್ಲಿ, ಬೀದಿ ದೀಪದ ಕೆಳಗೆ ಹುಡುಕ್ತಾ ಇದ್ದೀನಿ ಅಂದಳು ಮುದುಕಿ.

ಅದಕ್ಕೆ "ಅರಿವೇ ಗುರು" ಅಥವಾ ಬೆಳಕೆಂಬ ಸಂಕೇತ ಇದೆಯಲ್ಲ. ಇಂಥ ಒಂದು ಸಂಕೇತವೇ "ಗ್ರಂಥಸೂಚಿಗಳು". ನಮ್ಮಲ್ಲಿ ಎಲ್ಲ ಇದೆ. ಇದ್ದುದನ್ನು ಬೆಳಕಿನಡಿಯಲ್ಲಿ ಸಮಗ್ರವಾಗಿ ನೋಡುವುದಕ್ಕೆ ಒಂದು ಮೈಲುಗಲ್ಲು. ದಿಕ್ಸೂಚಿ ಎಂದರೂ ನಡೆದೀತು. ಇಂಥ ಒಂದು ಸಮಗ್ರ ಸಂಶೋಧನೆಯ ನೆಲೆ, ಹುಡುಕಾಟ ಈಗ ಕನ್ನಡ ಸಂದರ್ಭ ಸಾಹಿತ್ಯಕ್ಕೆ ಸಾಧ್ಯವಾಗಬೇಕು.

## ಪರಾಮರ್ಶನ ಗ್ರಂಥಗಳು : ಕನ್ನಡ


೧. ಅಸುಂಡಿ ಎ. ವೈ. : ಕನ್ನಡದಲ್ಲಿ ಸಂದರ್ಭ ಗ್ರಂಥಗಳು : ಸಮಗ್ರ ಸಮೀಕ್ಷೆ ಮತ್ತು ವಿವರಣಾತ್ಮಕ ಸೂಚಿ, ಬೆಂಗಳೂರು, ಎನ್. ಎ. ಪ್ರಕಾಶನ, ೭೭, ೩ ನೇ ಮುಖ್ಯ ರಸ್ತೆ, ಪ್ರಶಾಂತನಗರ, ೧೯೯೨

೨. ಅಬ್ದುಲ್ ಹಸನ್ : ಭಾರತದಲ್ಲಿ ಪುಸ್ತಕಗಳ ಬೆಳವಣಿಗೆ : ಕೆಲವು ಮುಖಗಳು, ಮೈಸೂರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೯೫

೩. ಆನಂದರಾವು ಎನ್., ಮತ್ತು ಅಸುಂಡಿ ಎ. ವೈ : ಕನ್ನಡ ಭಾಷೆಯಲ್ಲಿ ಸಂದರ್ಭ ಗ್ರಂಥಗಳು (ಇಂಗ್ಲೀಷಿನಲ್ಲಿದೆ), ಕಲಕತ್ತಾ, ಭಾರತೀಯ ವಿಶಿಷ್ಟ ಗ್ರಂಥಾಲಯ ಮತ್ತು ಮಾಹಿತಿ ಕೇಂದ್ರಗಳ ಸಂಘದ ೯ ನೇ ಸಮ್ಮೇಳನ, ೧೯೭೨, ಪುಟ ೩೫ - ೪೭

೪. ಉಮಾಪತಿ ಕೆ. ಎಸ್. : ಏನು ? ಎಲ್ಲಿ, ರಂಜನ್ ಪ್ರಕಾಶನ, ಬೆಂಗಳೂರು, ೧೯೮೧

೫. ಉಮಾಪತಿ ಕೆ. ಎಸ್. : ಪುಸ್ತಕ ದರ್ಶಿನಿ, ರಂಜನ್ ಪ್ರಕಾಶನ, ಬೆಂಗಳೂರು, ೧೯೮೨

೬. ಕರಿಸಿದ್ದಪ್ಪ ಸಿ. ಆರ್. : ಕನ್ನಡ ಸಂದರ್ಭ ಗ್ರಂಥಗಳು, ಕರ್ನಾಟಕ ಗ್ರಂಥಾಲಯ, ಸಂ. ೨೦, ಸಂಚಿಕೆ ೧ - ೨, ಜನೇವರಿ - ಜೂನ್, ೧೯೮೯

೭. ಕರಿಸಿದ್ದಪ್ಪ ಸಿ. ಆರ್. : ಕ್ರಿ. ಶ. ೧೮೦೦ ರಿಂದೀಚೆ ಪ್ರಕಟವಾದ ಕನ್ನಡ ಸಂದರ್ಭ ಗ್ರಂಥಗಳು : ಒಂದು ತಾಂತ್ರಿಕ ಅಧ್ಯಯನ, ಪಿಎಚ್.ಡಿ. ಪ್ರಬಂಧ, ಗುಲಬರ್ಗಾ, ಗುಲಬರ್ಗಾ ವಿಶ್ವವಿದ್ಯಾಲಯ, ೧೯೮೩ (ಅಪ್ರಕಟಿತ)

೮. ಕಲಬುರ್ಗಿ ಎಂ. ಎಂ. : ಕನ್ನಡ ಸಂಶೋಧನಾ ಶಾಸ್ತ್ರ, ಧಾರವಾಡ, ಸೌಜನ್ಯ ಪ್ರಕಾಶನ, ೧೯೯೨

೯. ಕಲಬುರ್ಗಿ ಎಂ. ಎಂ. : ಕನ್ನಡ ಹಸ್ತಪ್ರತಿ ಶಾಸ್ತ್ರ, ಬೆಂಗಳೂರು, ಸ್ನೇಹ ಪ್ರಕಾಶನ, ೧೯೯೩

೧೦. ಕೃಷ್ಣ ಭಟ್ ಹೆರಂಜೆ : ಸಂ. : ಸಂಶೋಧನ ಪ್ರಜ್ಞೆ, ಉಡುಪಿ, ರಾಷ್ಟ್ರಕವಿ ಗೋವಿಂದ ಪೈ, ಸಂಶೋಧನ ಕೇಂದ್ರ, ೧೯೯೫

೧೧. ಕರ್ನಾಟಕ ವಿಶ್ವವಿದ್ಯಾಲಯ : (ವಿಶೇಷೋಪನ್ಯಾಸಗಳು) : ಕರ್ನಾಟಕದಲ್ಲಿ ಸಾರ್ವಜನಿಕ ಗ್ರಂಥಾಲಯ ಅಂದು - ಇಂದು, ಪ್ರಸಾರಾಂಗ, ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, ೧೯೯೮

೧೨. ಕರ್ನಾಟಕ ವಾರ್ಷಿಕ ವರದಿ : ಸಾರ್ವಜನಿಕ ಗ್ರಂಥಾಲಯಗಳು, ಬೆಂಗಳೂರು, ಕರ್ನಾಟಕ ಸರ್ಕಾರ, ೧೯೯೦ - ೯೧

೧೩. ಗುಂಜಾಳ ಎಸ್. ಆರ್. : ವಿಶ್ವವಿದ್ಯಾಲಯಗಳಲ್ಲಿ ವೀರಶೈವ ಶೋಧನೆ, ಲೋಣಿ (ಬಿ. ಕೆ.) ೧೯೯೯

೧೪. ಗುಂಜಾಳ ಎಸ್. ಆರ್. : ವಿಶ್ವವಿದ್ಯಾಲಯಗಳಲ್ಲಿ ವೀರಶೈವ ಸಂಶೋಧನೆ, ಲೋಣಿ (ಬಿ. ಕೆ.) ಇಂಡಿ, ಬಿಜಾಪುರ ಜಿಲ್ಲೆ, ೧೯೯೯

೧೫. ಗೋಥೋಸ್ಕರ ವಿ. ಬಿ. : ದಿ ರಾಯಲ್ ಏಶಿಯಾಟಿಕ್ ಸೊಸೈಟಿ, ಮುಂಬಯಿ ಶಾಖೆಯ ಜನರಲ್ ಕ್ಯಾಟಲಾಗ್. ಭಾಗ - ೨, ಮುಂಬಯಿ, ಸಂಪಾದಕರು, ೧೯೧೭

೧೬. ಚಿದಾನಂದಮೂರ್ತಿ : ಸಂಶೋಧನೆ, ಬೆಂಗಳೂರು, ಕ.ಸಾ.ಪ., ೧೯೮೪

೧೭. ಚಿದಾನಂದಮೂರ್ತಿ ಎಂ. : ಸಂಶೋಧನೆ, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, ೧೯೮೪

೧೮. ದೇಶಪಾಂಡೆ ಕೆ. ಎಸ್. : ಗ್ರಂಥಾಲಯ ಒಂದು ಅಧ್ಯಯನ, ಮೈಸೂರು, ಅಪರ್ಣ ಪ್ರಕಾಶನ, ೧೯೭೯

೧೯. ದೇಶಪಾಂಡೆ ಕೆ. ಎಸ್. : ಭಾರತದಲ್ಲಿ ಗ್ರಂಥಾಲಯ ಪ್ರಸಾರ, ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, ೧೯೫೬

೨೦. ದೇವೀರಪ್ಪ ಎಚ್. : ಕನ್ನಡ ಹಸ್ತಪ್ರತಿಗಳ ಇತಿಹಾಸ, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, ೧೯೭೭

೨೧. ದೇ. ಜ. ಗೌ. ಸಂ. : ಗ್ರಂಥಾಮೃತ, ಬೆಂಗಳೂರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ೧೯೯೦

೨೨. ನರಸಣ್ಣ ಎಚ್. : ಮುದ್ರಣ ಸಮೀಕ್ಷೆ, ಪ್ರಸಾರಾಂಗ, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೦

೨೩. ನರಸಿಂಹಾಚಾರ್ ಆರ್. : ಕರ್ನಾಟಕ ಕವಿಚರಿತೆ, ಮೈಸೂರು, ಮೂರು ಸಂಪುಟಗಳು, ಮೈಸೂರು ವಿಶ್ವವಿದ್ಯಾಲಯ, ೧೯೬೩

೨೪. ನಾಗಯ್ಯ ಜೆ. ಎಂ. : ಸಂದರ್ಭ ಸಾಹಿತ್ಯ, ಕಲಬುರ್ಗಿ, ವಿಜಯ ವಿಕ್ರಮ ಪ್ರಕಾಶನ, ೧೯೯೦

೨೫. ನಾಯಕ ಹಾ. ಮಾ : ಬಾಗಿನ, ಮೈಸೂರು, ಮಹಾರಾಜಾ ಕಾಲೇಜು, ೧೯೫೪

೨೬. ನಾಯಕ ಹಾ. ಮಾ : ಸಂಭ್ರಮ, ಬೆಂಗಳೂರು, ಸುವಿದ್ಯಾ ಪ್ರಕಾಶನ, ೧೯೯೧

೨೭. ನಾಯಕ ಹಾ. ಮಾ : ಸಂಪುಟ, ಮೈಸೂರು, ಅಪರ್ಣ ಪ್ರಕಾಶನ, ೧೯೮೦

೨೮. ನಾಯಕ ಹಾ. ಮಾ : ಸಂಪ್ರತಿ, ಐ.ಬಿ.ಎಚ್., ಬೆಂಗಳೂರು, ಪ್ರಕಾಶನ, ೧೯೮೮

೨೯. ನಾಯಕ ಹಾ. ಮಾ : ಸಲ್ಲಾಪ, ಸುರುತಿ ಪ್ರಕಾಶಕನ, ಸರಸ್ವತಿಪುರಂ, ಮೈಸೂರು, ೧೯೭೨

೩೦. ನಾಯಕ ಹಾ. ಮಾ : ಗ್ರಂಥಲೋಕದ ಸುತ್ತಮುತ್ತ, ಮೈಸೂರು, ಶಾರದಾ ಮಂದಿರ, ೧೯೮೪

೩೧. ನಾಯಕ ಹಾ. ಮಾ : ಸಂವಾದ, ಮೈಸೂರು, ಉಷಾ ಸಾಹಿತ್ಯಮಾಲೆ, ೧೯೭೮

೩೨. ನಾಯಕ ಹಾ. ಮಾ. : ಆಧುನಿಕ ಕನ್ನಡ ಬರಹಗಾರರು, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೮೩

೩೩. ಪ್ರಭುಶಂಕರ : ಕನ್ನಡ ಗ್ರಂಥಸೂಚಿ, ಸಂ. ೧, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೧

೩೪. ಬಾರನೆಟ್ : ಬ್ರಿಟಿಶ್ ಮ್ಯೂಜಿಯಂ ಗ್ರಂಥಾಲಯದಲ್ಲಿರುವ ಕನ್ನಡ, ಬಡಗ ಮತ್ತು ಕೊಡಗು ಗ್ರಂಥಗಳ ಸೂಚಿ, ಲಂಡನ್ ಬ್ರಿಟಿಶ್ ಮ್ಯೂಜಿಯಂ, ೧೯೧೦

೩೫. ಬಾರನೆಟ್ ಎಲ್. ಡಿ. : ಬ್ರಿಟಿಶ್ ಲಾಯಬ್ರರಿಯಲ್ಲಿ ಕನ್ನಡ ಗ್ರಂಥಗಳ ಪುರವಣಿ, ಸಂ. ಅಲ್ಬರ್ಟನ್ ಗೌರ್, ಲಂಡನ್, ಬ್ರಿಟಿಶ್ ಲಾಯಬ್ರರಿ, ೧೯೮೫

೩೬. ಮಲ್ಲೇಶಪ್ಪ ಟಿ. ಮತ್ತು ಹೊಸಮನಿ ಬಿ. ಬಿ. : ಗ್ರಂಥಾಲಯ ರಜತದೀಪ್ತಿ, ಬೆಂಗಳೂರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ೧೯೯೪

೩೭. ಮಾಲಗತ್ತಿ ಅರವಿಂದ : ಸಂ. : ಕನ್ನಡ ಗ್ರಂಥೋದ್ಯಮ, ಮೈಸೂರು, ಪ್ರ. ಮೈ. ವಿ. ವಿ., ೧೯೯೭

೩೮. ಮುಗಳಿ ರಂ. ಶ್ರೀ : ಕನ್ನಡ ಸಾಹಿತ್ಯ ಚರಿತ್ರೆ, ನವ ದೆಹಲಿ, ಕೇಂದ್ರ ಸಾಹಿತ್ಯ ಅಕಾಡೆಮಿ, ೧೯೫೩

೩೯. ರಂಗನಾಥನ್ ಎಸ್. ಆರ್. : ಗ್ರಂಥಾಲಯ ವಿಕಾಸ ಯೋಜನೆಯ ಭಾರತದ ಒಕ್ಕೂಟ ಹಾಗೂ ಇತರ ರಾಜ್ಯಗಳ ಗ್ರಂಥಾಲಯ ಮಸೂದೆಗಳನ್ನೊಳಗೊಂಡಿರುವ ೩೦ ವರ್ಷಗಳ ಕಾರ್ಯಕ್ರಮ, ದೆಹಲಿ, ದೆಹಲಿ ವಿಶ್ವವಿದ್ಯಾಲಯ, ೧೯೫೦

೪೦. ರಂಗನಾಥನ್ ಎಸ್. ಆರ್. : ಗ್ರಂಥಾಲಯ ವಿಜ್ಞಾನದ ಪಂಚಸೂತ್ರಗಳು : ಕನ್ನಡ ಅನುವಾದ : ಗುಂಜಾಳ (ಎಸ್. ಆರ್.) ಮತ್ತು ಬ್ಯಾಡಗಿ ಟಿ. ಎಲ್., ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, ಪ್ರಸಾರಾಂಗ, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೦

೪೧. ರಾಘವನ್, ಕೆ. ಎಸ್ : ಮಾನವಿಕ ಕರ್ನಾಟಕ, ಸಂ. ೫, ಸಂಖ್ಯೆ, ೧, ೧೯೭೨

೪೨. ರೂಗಿ ಎಸ್. ಎಂ. : ಮಾಹಿತಿ ಮೂಲಗಳು : ಆಯ್ದ ಕನ್ನಡ ಗ್ರಂಥಗಳ ಸಂಕ್ಷಿಪ್ತ ಪರಿಚಯ, ಅನಿಗೋಳ, ಬೈಲಹೊಂಗಲ (ತಾ.), ಬೆಳಗಾಂವ ಜಿ., ೧೯೮೯

೪೩. ವೆಂಕಟಾಚಲ ಶಾಸ್ತ್ರಿ ಟಿ. ವಿ. ಮತ್ತು ಲೀಲಾ ಸುಬ್ರಮಣ್ಯಂ ಪಿ. ಆರ್. : ಕರ್ನಾಟಕದ ಅಧ್ಯಯನ ಗ್ರಂಥಸೂಚಿ, ೩ ಸಂ. ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೨

೪೪. ಸಂಗಮ ಎಸ್. ಎಲ್. : ಸಂದರ್ಭ ಸೇವೆ, ಗುಲಬರ್ಗಾ, ನಿರ್ಮಲ ಪ್ರಕಾಶನ, ೧೯೮೬

೪೫. ಸಂಗಮ ಎಸ್. ಎಲ್. : ಸೂಚೀಕರಣ, ಗುಲಬರ್ಗಾ, ನಿರ್ಮಲ ಪ್ರಕಾಶನ, ೧೯೮೬

೪೬. ಸಣ್ಣಯ್ಯ ಬಿ. ಎಸ್. : ಗ್ರಂಥ ಸಂರಕ್ಷಣೆ, ಪ್ರಸಾರಾಂಗ, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೦

೪೭. ಸದಾಶಿವಮೂರ್ತಿ ಪಿ., ಸಂ. : ಪ್ರೊ. ಎಸ್. ಆರ್. ಗುಂಜಾಳ : ಗೌರವ ಗ್ರಂಥ, ಬೆಂಗಳೂರು, ಪ್ರೊ. ಎಸ್. ಆರ್. ಗುಂಜಾಳ ಅಭಿನಂದನ ಸಮಿತಿ, ೧೯೯೨

೪೮. ಸವದತ್ತಿಮಠ ಸಂಗಮೇಶ : ಕನ್ನಡ ಸಂಶೋಧನ ಕೈಪಿಡಿ, ಕಲಬುರ್ಗಿ, ೧೯೯೫

೪೯. ಸಾಂಗಲಿ ವೆಂಕಟೇಶ : ಸಿರಿಗನ್ನಡ ಗ್ರಂಥಕರ್ತರ ಚರಿತ್ರೆ ಕೋಶ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೬೦, ಎರಡನೇ ಮುದ್ರಣ, ೧೯೯೯, ಬೆಂಗಳೂರು, ಕನ್ನಡ ಪುಸ್ತಕ ಪ್ರಾಧಿಕಾರ

೫೦. ಸೀತಾರಾಮಯ್ಯ ಎಂ. ವಿ. ಮತ್ತು ಶೇಷಶಾಸ್ತ್ರಿ ಆರ್. : ಮಣಿಹ ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ, ಬೆಂಗಳೂರು, ಬಿ. ಎಂ. ಶ್ರೀ ಪ್ರತಿಷ್ಠಾನ, ೧೯೮೨

೫೧. ಸುಬ್ರಹ್ಮಣ್ಯ ಟಿ. ವಿ. : ಗ್ರಂಥಸೂಚಿಯ ರಚನೆ, ಪ್ರಸಾರಾಂಗ, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೦

೫೨. ಶಿರೂರು ಬಿ. ವಿ. : ಸಂಶೋಧನ ಸ್ವರೂಪ, ಹುಬ್ಬಳ್ಳಿ, ಅನ್ನಪೂರ್ಣಾ ಪ್ರಕಾಶನ, ೨೦೦೦

೫೩. ಶಿವಣ್ಣ ಎಸ್. : ವೀರಶೈವ ಹಸ್ತಪ್ರತಿ ಸೂಚಿಗಳು, ಡಂಬಳ - ಗದಗ, ಗದಗ ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ೧೯೯೪

೫೪. ಶಿವಣ್ಣ ಎಸ್. : ವಚನಸಾಹಿತ್ಯದ ಪ್ರಾಚೀನ ಆಕರಕೋಶ, ಡಂಬಳ - ಗದಗ, . ಗದಗ ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ೧೯೯೧

## English Books :

1. British Standards Institution : Recommendation for the preparation of Indexes for books, periodicals and other publications, London, 1964
2. Chakraborti M. L. : Bibliography (In Theory Practice), Caltutta, The world press private Ltd., 1971).
3. Collson, Robert L. : Abstract and Abstracting Services Sant Barbara, California, American Bibliographical Centre, Clio Press, 1971, p. 3
4. Encyclopaedia Britannica, Chicago, Encyclopaedia Britannica Incorporation, 1971, Vol. 11, p. 825 - 827
5. Encyclopaedia of Library and Information Science, Ed. by Kent et.al., Newyork, Marcell Dekkar, 1973, Vol. II, p. 286 - 290
6. Gardey P. K. : Problems of Indian National Bibliography, New Delhi, Indian Book Industry, New V. 2, May 1990
7. Girija Kukar and Krishankumar : Bibliograpy, Vikas Publishing House, New Dehli, 1979
8. Gidwani N. N. and Navalani, Corp. Eds. : A Guide to Reference Materials on India, 2 volumes, Sarswati Publications, 1974
9. Gidwani N. N. and Nava*ani N. : A Guide to Reference Materials in India, Varanasi, 2 C, Sarswati Publication, 1974
10. India, Education (Ministry of), Advisory Committee for Libraries, Report 1958, Delhi
11. Keshavan B. S. : Documentation in India, Indian National Scientific Documentation Centre, New Delhi, 1968
12. Katre S. M. : Introduction to Indian Textual Criticism, Calcutta, World Press Pvt. Ltd., 1941
13. Maizell, Robert E. et.al. Abstracting Scientific and Technical Literature : Newyork : wiley Interscience.
14. Madras Education Department : Kanarese Equivalents of English Terms, New Delhi, 8 V, Boot Press, K1933
15. Ramaiah L. S. and Kanakacharry M and Eds. : Documentation and Bibliographic Control of the Humanities in India, New Delhi, Aditya Prakashan, 1992
16. Ranganathan S. R. : Reference Service and Bibliography, Madras Library Association, 1940
17. Sharma H. D. et.al. : Indian Reference Sources, Varanasi, 2nd Ed., 2 V, Indian Bibliographic Centre, 1974, 1988
18. University Grants Commission India, Report for the year 1986 - 1987
19. Venkateppaiah V. : Indian Library Legislation, Vol. II, State Library Bills and Acts, (articles), New Delhi, Daya Publishing House, Pp. 106, 1990

**ವಿಶ್ವಕೋಶಗಳ, ಶಬ್ದಕೋಶಗಳು :**

. ಕನ್ನಡ ವಿಶ್ವಕೋಶ, ಸಂ. ೬, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೬೯

. ಕನ್ನಡ ವಿಷಯ ವಿಶ್ವಕೋಶ, ಕರ್ನಾಟಕ ಸಂಪುಟ, ಪ್ರಸಾರಾಂಗ, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೯

. ಕಾರಂತ ಶಿವರಾಮ : ಸಿರಿಗನ್ನಡ ಅರ್ಥಕೋಶ, ಬೆಂಗಳೂರು, ಸಪ್ನಾ ಬುಕ್ ಹೌಸ್, ೧೯೯೦

. ಕಿಟ್ಟೆಲ್ ಎಫ್. : ಕನ್ನಡ ಇಂಗ್ಲೀಷ ನಿಘಂಟು, ಸಂ. ಎಂ. ಮರಿಯಪ್ಪ ಭಟ್, ಮದ್ರಾಸ್ ವಿಶ್ವವಿದ್ಯಾಲಯ, ಬಾಶೆಲ್ ಮಿಶನ್, ೧೯೭೨

. ಕುಪ್ಪುಸ್ವಾಮಿ ಬಿ. : ಕನ್ನಡ ಪದಪಟ್ಟಿ : (A Thesaurus in Kannada) ಮೈಸೂರು, ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ೧೯೪೭

. ಗುಂಜಾಳ ಎಸ್. ಆರ್. ಮತ್ತು ಸಂಗಮ ಎಸ್. ಎಲ್ : ಇಂಗ್ಲೀಷ - ಕನ್ನಡ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ಪಾರಿಭಾಷಿಕ ಶಬ್ದಕೋಶ : ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ ಪ್ರಕಾಶನ, ೧೯೮೬

. ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, ೧೯೬೮

. ಭರದ್ವಾಜ : ಸ್ಟ್ಯಾಂಡರ್ಡ್ ಡಕ್ಷನರಿ, ಗದಗ, ಬಿ. ಜಿ. ಸಂಕೇಶ್ವರ ಪ್ರಕಾಶನ, ೨೦೦೦

. ರೀವ ವಿಲಿಯಂ : ಇಂಗ್ಲೀಷ ಕನ್ನಡ ನಿಘಂಟು : ಮದ್ರಾಸ್, ಕಾಲೇಜು ಪ್ರೆಸ್, ೧೮೨೪

. Encyclopeadea Britanica (Willium Benton Publisher), 1969

. Oxford University : New Standard Encycclopeadea Oxford, Oxford University, 1972

. Unmol Publications : Encyclopeadic Dictionaries of Library Science, New Delhi, Vol. 1, Unmol Publications, 1989

**ನಿಯತಕಾಲಿಕೆಗಳು, ಪತ್ರಿಕೆಗಳು :**

. ಪ್ರಬುದ್ಧ ಕರ್ನಾಟಕ : ಮೈಸೂರು ವಿಶ್ವವಿದ್ಯಾಲಯ, ಮೈಸೂರು

. ಮಾನವಿಕ : ಮೈಸೂರು ವಿಶ್ವವಿದ್ಯಾಲಯ, ಮೈಸೂರು

. ಕರ್ನಾಟಕ ಭಾರತಿ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

. ಸಾಧನೆ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

. ಕನ್ನಡ ಅಧ್ಯಯನ : ಕನ್ನಡ ವಿಶ್ವವಿದ್ಯಾಲಯ, ಹಂಪಿ

. ಪುಸ್ತಕ ಮಾಹಿತಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ

. ಗ್ರಂಥಲೋಕ : ಸರಸ್ವತಿಪುರಂ, ಕಾಂತರಾಜ ರಸ್ತೆ, ಮೈಸೂರು

. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

. ಲೋಚನ : ಬಿ. ಎಂ. ಶ್ರೀ. ಪ್ರತಿಷ್ಠಾನ, ಬೆಂಗಳೂರು

. ಸಂಶೋಧನಾ ಮಾರ್ಗ : ಗುಲಬರ್ಗಾ

. ಸಮಾಜ ವಿಜ್ಞಾನ ಲೇಖಕ ದರ್ಶಕ : ಹೈದರಾಬಾದ್

. ಗ್ರಂಥಾಲಯ ವಿಜ್ಞಾನ : ಬೆಂಗಳೂರು

. ಕರ್ನಾಟಕ ಗ್ರಂಥಾಲಯ : ಧಾರವಾಡ

. ಕಸ್ತೂರಿ :

. Library- Today : Hyderabad

. Indian Antiquiry : Bombay

## ಅನುಬಂಧ – 1

### ಪ್ರಮುಖ ಘಟನಾವಳಿಗಳು

1955 ಭಾರತದ ರಾಷ್ಟ್ರೀಯ ಗ್ರಂಥಸೂಚಿ ಕುರಿತು ಸಲಹಾ ಸಮಿತಿಯ ನೇಮಕ.

1957 ಪ್ರಾಯೋಗಿಕ ಸಂಚಿಕೆಗಳ ಪ್ರಕಟಣೆ.

1958 ಪ್ರಥಮ ಸಂಚಿಕೆಯ (ತ್ರೈಮಾಸಿಕ, ಅಕ್ಟೋಬರ್ – ಡಿಸೆಂಬರ್ 1957) ಪ್ರಕಟಣೆ.

1959 ಪ್ರಥಮ ವಾರ್ಷಿಕ ಸಂಪುಟ (1958)ದ ಪ್ರಕಟಣೆ.

1963 ಸಂಸ್ಕೃತ ಭಾಷೆಯ ಪಂಚವಾರ್ಷಿಕ (1958-62) ಸೂಚಿಯ ಪ್ರಕಟಣೆ.

1964 ಪ್ರಕಟಣಾ ಅವಧಿ ತ್ರೈಮಾಸಿದಿಂದ ಮಾಸಿಕವಾಗಿ ಬದಲಾವಣೆ.

1969 ವಿಷಯ ಶೀರ್ಷಿಕೆಗಳ ಸೂಚಿ ಪ್ರಕಟಣೆ.

1970 ಪಂಚವಾರ್ಷಿಕ (1958-62) ಸಂಚಿತ ಸೂಚಿ ಪ್ರಕಟಣೆ.

1972 ಸಂಸ್ಕೃತಭಾಷೆಯ ಎರಡನೆ ಪಂಚವಾರ್ಷಿಕ (1963-67) ಸೂಚಿ ಪ್ರಕಟಣೆ.

1973 ಗ್ರಂಥಸೂಚಿಯಲ್ಲಿನ ಸಾಮಾನ್ಯ ಪ್ರಕಟಣೆ ಹಾಗೂ ಸರ್ಕಾರಿ ಪ್ರಕಟಣೆ ವಿಭಾಗಗಳ ವಿಲೀನ.

1974 ಲೇಖಕ ಹಾಗೂ ಶೀರ್ಷಿಕೆ ಸೂಚಿಯಿಂದ ವಿಷಯ ಸೂಚಿಯ ಬೇರ್ಪಡೆ.

1981 ತಮಿಳು ಗ್ರಂಥಸೂಚಿಯ ಏಳು ವರ್ಷದ (1968-74) ಸಂಚಿತ ಸಂಪುಟದ (ಭಾಗ1) ಪ್ರಕಟಣೆ.

1983 ಸಂಸ್ಕೃತ ಭಾಷೆಯ ಹತ್ತು ವರ್ಷದ (1968-77) ಸೂಚಿ ಪ್ರಕಟಣೆ. ಮಲಯಾಳಂ ಭಾಷೆಯ ಹತ್ತುವರ್ಷದ (1971-80) ಸೂಚಿ ಪ್ರಕಟಣೆ. ಅಸ್ಸಾಮಿ, ಬಂಗಾಲಿ ಮತ್ತು ಒರಿಯಾ ಭಾಷೆಯ ಹತ್ತು ವರ್ಷಗಳ ಸೂಚಿಗಳ ಪ್ರಕಟಣೆಗೆ ಚಾಲನೆ ನೀಡಿಕೆ.

1984 ಭಾರತದ ರಾಷ್ಟ್ರೀಯ ಗ್ರಂಥಸೂಚಿಯ ಮಾಸಿಕ ಸಂಚಿಕೆಗಳ ಪ್ರಕಟಣೆಯ ಪುನರುಜ್ಜೀವನ. ಒರಿಯಾ ಗ್ರಂಥಸೂಚಿಯ 1979-80ರ ಸಂಪುಟ ಪ್ರಕಟಣೆ. ತಮಿಳು ಗ್ರಂಥ ಸೂಚಿಯ ಏಳುವರ್ಷದ (1968-74) ಸಂಚಿತ ಸಂಪುಟದ 3ನೆಯ ಭಾಗದ ಪ್ರಕಟಣೆ.

1985 ಬಂಗಾಲಿ ಭಾಷೆಯ 1979-81ರ ಸಂಪುಟ ಪ್ರಕಟಣೆ ಹಾಗೂ ಅಸ್ಸಾಮಿ ಭಾಷೆಯ 1962-70ರ ಸಂಪುಟದ ಪ್ರಕಟಣೆ. ಭಾರತೀಯ ಗ್ರಂಥಸೂಚಿಗಳ ಗ್ರಂಥಸೂಚಿ (1961-80) ಯ ಪ್ರಕಟಣೆ.

1987 ಉರ್ದುಭಾಷೆಯ ಎರಡು ವರ್ಷದ (1986-87) ಸಂಚಿತ ಸೂಚಿ ಪ್ರಕಟಣೆ.

1988 ಗ್ರಂಥಸೂಚಿಗೆ "ಎ ಎ ಸಿ ಆರ್ II (AACR II) ಅಳವಡಿಕೆ ಹಾಗೂ ಡ್ಯೂಯಿ ದಶಾಂಶ ಪದ್ಧತಿ ವರ್ಗೀಕರಣದ 13ನೇ ಆವೃತ್ತಿಯ ಬಳಕೆ.
ಉರ್ದು ಭಾಷೆಯ ಮೂರು ವರ್ಷಗಳ (1983-85) ಸಂಚಿತ ಸೂಚಿಯ ಪ್ರಕಟಣೆ.

1983 ಉರ್ದುಭಾಷೆಯ ಎರಡು ವರ್ಷ (1986-87)ದ ಸಂಚಿತ ಸೂಚಿಯ ಪ್ರಕಟಣೆ.

1990 ಹಿಂದಿ ಭಾಷೆಯ ವಾರ್ಷಿಕ (1988) ಗ್ರಂಥಸೂಚಿ ಪ್ರಕಟಣೆ
ಮಲಯಾಳಂ ಭಾಷೆಯ ವಾರ್ಷಿಕ (1989) ಗ್ರಂಥಸೂಚಿ ಪ್ರಕಟಣೆ
ತೆಲುಗು ಭಾಷೆಯ ನಾಲ್ಕು ವರ್ಷಗಳ (1980-83) ಸಂಚಿತ ಗ್ರಂಥಸೂಚಿ ಪ್ರಕಟಣೆ.

1991 ತಮಿಳು ಭಾಷೆಯ ಎರಡು ವರ್ಷದ (1987-88) ಸಂಚಿತ ಗ್ರಂಥಸೂಚಿ ಪ್ರಕಟಣೆ.

1992 ಉರ್ದುಭಾಷೆಯ ಮೂರು ವರ್ಷಗಳ (1988-90) ಸಂಚಿತ ಸೂಚಿ ಪ್ರಕಟಣೆ.

# ಅನುಬಂಧ – 2

## ಮುದ್ರಣ ಕಾಲಾವಧಿ ವಿವರಗಳು

| ವರ್ಷ | ಅವಧಿ | ಮುದ್ರಕರು |
|---|---|---|
| 1958-1963 | ತ್ರೈಮಾಸಿಕ | ಭಾರತ ಸರ್ಕಾರದ ಮುದ್ರಣಾಲಯ |
| 1964-1967 | ಮಾಸಿಕ | ಭಾರತ ಸರ್ಕಾರದ ಮುದ್ರಣಾಲಯ |
| 1968-1970 | ಮಾಸಿಕ | ಪ್ರಕಟಣೆ ಸ್ಥಗಿತ |
| 1971-1974 | ಮಾಸಿಕ | ಜಾಬ್ & ಆರ್ಟ್ |
| 1975 | ಮಾಸಿಕ | ಪ್ರೋಗ್ರೆಸಿವ್ |
| 1976 | ಮಾಸಿಕ | ಭಾರತ ಸರ್ಕಾರದ ಮುದ್ರಣಾಲಯ |
| 1977 | ಮಾಸಿಕ | ಭಾರತ ಸರ್ಕಾರದ ಮುದ್ರಣಾಲಯ |
| 1984 | ಮಾಸಿಕ | ಭಾರತ ಸರ್ಕಾರದ ಮುದ್ರಣಾಲಯ |
| 1985 | ಮಾಸಿಕ | ಹೆಡ್‌ವೇ |
| 1986 | ಮಾಸಿಕ | ಗ್ರಂಥಾಲಯ |
| 1987 | ಮಾಸಿಕ | ಗ್ರಂಥಾಲಯ |
| 1988 | ಮಾಸಿಕ | ಭಾರತ ಸರ್ಕಾರದ ಮುದ್ರಣಾಲಯ |
| 1989 | ಮಾಸಿಕ | ಗ್ರಂಥಾಲಯ |
| 1990 | ಮಾಸಿಕ | ಗ್ರಂಥಾಲಯ |

ವಾರ್ಷಿಕ ಸಂಪುಟಗಳು

| ವರ್ಷ | ಮುದ್ರಕರು (ವರ್ಗೀಕೃತ ವಿಭಾಗ) | ಮುದ್ರಕರು (ಸೂಚಿ ವಿಭಾಗ) |
|---|---|---|
| 1958-1961 | ಈಗಲ್ ಲಿಥೊ | ಭಾರತ ಸರ್ಕಾರದ ಮುದ್ರಣಾಲಯ (ನಾಸಿಕ) |
| 1962-1964 | ಹೆಡ್‌ವೆ ಲಿಥೋ | ಭಾರ ಸರ್ಕಾರದ ಮುದ್ರಣಾಲಯ (ನಾಸಿಕ) |
| 1965-1966 | ಹೆಡ್‌ವೆ ಲಿಥೋ | ಟೀಚರ್ಸ್ ಬುಕ್‌ಸ್ಟಾಲ್ |
| 1967-1970 | (ಪ್ರಕಟಣೆ ಸ್ಥಗಿತ) | |
| 1971 | ಎಸ್.ಆಂತೂಲ್ | ಜಾಬ್ & ಆರ್ಟ್ |
| 1972 | ಯೂನಿವರ್ಸಲ್ ಲಿಥೊ | ಜಾಬ್ & ಆರ್ಟ್ |
| 1973 | ಯೂನಿವರ್ಸಲ್ ಲಿಥೊ | ಪ್ರೋಗ್ರೆಸಿವ್ ಪ್ರಿಂಟರ್ಸ್ |
| 1974-1977 | ಭಾರತ ಸರ್ಕಾರದ ಮುದ್ರಣಾಲಯ | ಭಾರತ ಸರ್ಕಾರದ ಮುದ್ರಣಾಲಯ |
| 1978 | -"- | -"- |
| 1979 | -"- | -"- |
| 1980-81 | -"- | -"- |
| 1982-83 | -"- | -"- |
| 1984 | -"- | -"- |
| 1958-1962 (ಸೂಚಿಯ ಪಂಚವಾರ್ಷಿಕ ಸಂಚಿತ ಸಂಪುಟ) | -"- | -"- |

## ಅನುಬಂಧ – 3

### ಗ್ರಂಥಸೂಚಿಯ ಭಾಷಾ ಆವೃತಿಗಳ ಮುದ್ರಣ ವಿವರಗಳು

| ಭಾಷೆ | ಪ್ರಕಾಶಕರು | ಪ್ರಕಟಿತ ಸಂಪುಟಗಳು |
|---|---|---|
| ಅಸ್ಸಾಮಿ | ರಾಜ್ಯಕೇಂದ್ರ ಗ್ರಂಥಾಲಯ | 1959, 1960, 1961,<br>1962-1970 (ಕೇಂದ್ರ ಸಂದರ್ಭ ಗ್ರಂಥಾಲಯ) |
| ಬಂಗಾಲಿ | ಪಶ್ಚಿಮ ಬಂಗಾಳ ಸರ್ಕಾರ | 1958 - ಮಾರ್ಚ್ 1965.<br>1979-1981 (ಕೇಂದ್ರ ಸಂದರ್ಭ ಗ್ರಂಥಾಲಯ) |
| ಗುಜರಾತಿ | ಗುಜರಾತ್ ಸರ್ಕಾರ | 1958-1961; 1962-1971 (ಹತ್ತು ವರ್ಷದ ಸಂಚಿತ ಸೂಚಿ)<br>(ಅಚ್ಚಿನಲ್ಲಿ) |
| ಹಿಂದಿ | ಉತ್ತರ ಪ್ರದೇಶ ಸರ್ಕಾರ | 1958-1988 (1989ರ ಸಂಪುಟ ಅಚ್ಚಿನಲ್ಲಿ) |
| ಕನ್ನಡ | ಕರ್ನಾಟಕ ಸರ್ಕಾರ | 1958-1972 |
| ಮಲಯಾಳಂ | ಕೇರಳ ಸರ್ಕಾರ | 1958-1989 (ಎರಡು ಹತ್ತು ವರ್ಷದ 1981-1990<br>ಸಂಚಿತ ಸೂಚಿ ಸೇರಿ) |
| ಮರಾಠಿ | ಮಹಾರಾಷ್ಟ್ರ ಸರ್ಕಾರ | 1958-1970 |
| ಒರಿಯ | ಒರಿಸ್ಸಾ ಸಾಹಿತ್ಯ ಅಕಾಡೆಮಿ | 1958-1963<br>1979-1980 (ಕೇಂದ್ರ ಸಂದರ್ಭ ಗ್ರಂಥಾಲಯ) |
| ಪಂಜಾಬಿ | ಪಂಜಾಬ್ ಸರ್ಕಾರ | 1958-1962, 1971-1974 |
| ಸಂಸ್ಕೃತ | ಕೇಂದ್ರ ಸಂದರ್ಭ ಗ್ರಂಥಾಲಯ | 1958-1962; 1963-1967; 1968-1977 |
| ತಮಿಳು | ತಮಿಳುನಾಡು ಸರ್ಕಾರ | 1958-1974; 1984-1986,<br>1987-1988 (ಕೇಂದ್ರ ಸಂದರ್ಭ ಗ್ರಂಥಾಲಯ) |
| ತೆಲುಗು | ಆಂಧ್ರಪ್ರದೇಶ ಸರ್ಕಾರ | 1958-1974; 1980-1983 |
| ಉರ್ದು | ಉತ್ತರ ಪ್ರದೇಶ ಸರ್ಕಾರ | 1958-1965; 1981-1982; 1983-1985; 1986-1987<br>(1989-1990 ಅಚ್ಚಿನಲ್ಲಿ) |

## ಅನುಬಂಧ – 4

### 1958-1991ರ ಅವಧಿಯಲ್ಲಿ ಭಾರತದ ರಾಷ್ಟ್ರೀಯ ಗ್ರಂಥಸೂಚಿಯಲ್ಲಿ ಅಳವಡಿಸಲ್ಪಟ್ಟಿರುವ ಗ್ರಂಥಗಳ ಭಾಷಾವಾರು ಅಂಕಿ ಅಂಶಗಳು

(ಒಟ್ಟು 3,52,195 ಪುಸ್ತಕಗಳು)

| ಭಾಷೆ | ಪ್ರಕಟನೆಗಳ ಸಂಖ್ಯೆ |
|---|---|
| ಅಸ್ಸಾಮಿ | 5,956 |
| ಬಂಗಾಲಿ | 31,448 |
| ಇಂಗ್ಲಿಷ್ | 1,10,638 |
| ಗುಜರಾತಿ | 16,160 |
| ಹಿಂದಿ | 54,307 |
| ಕನ್ನಡ | '13,122 |
| ಮಲಯಾಳಂ | 20,320 |
| ಮರಾಠಿ | 27,872 |
| ಒರಿಯ | 8,162 |
| ಪಂಜಾಬಿ | 7,618 |
| ಸಂಸ್ಕೃತ | 3,872 |
| ತಮಿಳು | 29,500 |
| ತೆಲುಗು | 16,221 |
| ಉರ್ದು | 6,699 |

## ಅನುಬಂಧ – 5

ರಾಷ್ಟ್ರೀಯ ಗ್ರಂಥಸೂಚಿಯಲ್ಲಿ 1958ರಿಂದ 1982ರವರೆಗೆ ದಾಖಲಾಗಿರುವ ಗ್ರಂಥಗಳ ವಿಷಯಾನುಸಾರ ತಪ್ಸೀಲು

| ವಿಷಯಗಳ ಗುಂಪು | ಇಂಗ್ಲಿಷ್ ಭಾಷೆಗಳ ಗ್ರಂಥಗಳ ಸಂಖ್ಯೆ | ಶೇಕಡಾವಾರು | ಇತರ ಭಾಷೆಗಳ ಗ್ರಂಥಗಳ ಸಂಖ್ಯೆ | ಶೇಕಡಾವಾರು | ಒಟ್ಟು |
|---|---|---|---|---|---|
| ಸಾಮಾನ್ಯ ಗ್ರಂಥಗಳು | 2,328 | 2.7 | 3,916 | 2.1 | 6.244 |
| ತತ್ವಶಾಸ್ತ್ರ | 2,413 | 2.8 | 6,002 | 3.2 | 8,415 |
| ಧರ್ಮ | 3,276 | 3.8 | 13,913 | 7.5 | 7,189 |
| ಸಮಾಜ ವಿಜ್ಞಾನಗಳು | 44,138 | 51.2 | 19.393 | 10.5 | 63,531 |
| ಭಾಷಾಶಾಸ್ತ್ರ | 2,585 | 3.0 | 5,830 | 3.1 | 8,415 |
| ಶುದ್ಧ ವಿಜ್ಞಾನಗಳು | 5,948 | 6.9 | 7,625 | 4.1 | 13,573 |
| ಅನ್ವಯಿಕ ವಿಜ್ಞಾನಗಳು | 12,852 | 14.9 | 9,146 | 4.9 | 21,998 |
| ಲಲಿತ ಕಲೆಗಳು ಕ್ರೀಡೆಗಳು ಇತ್ಯಾದಿ | 1,552 | 1.8 | 4,692 | 2.5 | 6,244 |
| ಸಾಹಿತ್ಯ | 4,395 | 5.1 | 95,260 | 51.3 | 99,655 |
| ಇತಿಹಾಸ, ಭೂಗೋಳ ಜೀವನ ಚರಿತೆ. | 6,722 | 7.8 | 19,881 | 10.8 | 26,603 |
| ಒಟ್ಟು | 86,209 | 100.0 | 1,85.658 | 100.0 | 2,71,867 |